# ಶಿವಾನುಭವ

೬ನೆ

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.

*

೧೯೫೪
ಜನೇವರಿ ಫೇಬ್ರುವರಿ



# ವಿಷಯಾನುಕ್ರಮಣಿಕೆ



# ೧. ಲಿಂಗತತ್ವ.

(ಬರೆದವರುಃ— ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ [ಇಂಡಿ] )



ಪರಶಿವನಿಂದ ಜಗವು ಹೇಗೆ ಹೇಗೆ ಹೊರಗೆ ಬಂದಿದೆ ಮತ್ತು ಹೊರಗೆ ಬಂದ ನಾವು ಹೇಗೆ ಹೇಗೆ ಒಂದರೊಳಗೊಂದು ಲೀನಗೊಳಿಸಿ ಪರಶಿವನಾಗಬೇಕೆಂದು ಈ ಲಿಂಗವು ಸೂಚಿಸುತ್ತದೆ. ಮೊದಲು ಪೆಂಡಿಕೆ ಎಂಬ ,ಪರಾತ್ಪರ ಶಿವನು ಅಂದರೆ ಮಹಾಕಾರಣನು. ಪರಶಿವನು ಅಖಂಡ ಪರಿಪೂರ್ಣಸ್ವಂ, ಅಕ್ಷರ ಅವ್ಯಯ ಅವ್ಯಕ್ತ ಗುಣಾತೀತ ನಿರಂಜನ ನಿಷ್ಕ್ರಿಯ ಮೊದಲಾದ ಗುಣಗಳಿಂದ ಒಪ್ಪುವನು. ಈ ಪತಶಿವನಿಂದ ಪೆಂಡಿಕೆಯಿಂದ ಮಹಾಕಾರಣದಿಂದ, ಕಾರಣ ಜಗವೆಂಬ ಸತ್ ಚಿತ್-ಆನಂದವೆಂದ ತ್ರಿಕೋಣವು, ಅಂದರೆ ಪರಾಪ್ರಕೃತಿ ಎಂಬ ಚಿತ್‌ಶಕ್ತಿಯು ಹೊರಗೆ ಬಂದಳು. ಇವಳೇ ಪರಶಿವನಿಗಾಗಿ ಲೀಲೆಯಾಡುವ ಇಷ್ಟವೆನಿಸಿರುವಳು. ಇವಳೇ ಆದಿ ಶಕ್ತಿಪಾರ್ವತಿಯು. ಇವಳು ಕ್ರಿಯಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಆದಿ

ಶಕ್ತಿ, ಪರಾಶಕ್ತಿ, ಚಿತ್‌ಶಕ್ತಿ, ನಿರಾಲಂಬಶಕ್ತಿ, ನಿಭ್ರಾಂತಶಕ್ತಿ, ನಿರವಯ ಶಕ್ತಿ, ಹೀಗೆ ಒಂಭತ್ತು ಶಕ್ತಿಗಳ ಮೊತ್ತವು ಈ ಆದಿಶಕ್ತಿ ಪಾರ್ವತಿ ಪರಾಪ್ರಕೃತಿ ಅಥವಾ ಚಿತ್‌ಪ್ರಕೃತಿಯು ಆಗಿದ್ದಾಳೆ. ಇದರಿಂದ ಸೂಕ್ಷ್ಮ ಪ್ರಕೃತಿ (ಸೂಕ್ಷ್ಮಜಗವು) ಇದು ಇಂದ್ರಿಯಗಳಿಗೆ ಅಗೋಚರ. ಇದು ಮನಸ್ಸಿಗೆ ಹೊಳೆಯುವದು. ಸ್ವಪ್ನದಲ್ಲಿ ಇದರ ಪ್ರಜ್ಞೆ ಬರುವದು. ಇದೇ ಅರುಹಿನ ಸೃಷ್ಟಿ ಎನಿಸುವದು. ಇದು ಸತ್-ಚಿತ್-ಆನಂದ ಎಂಬ ತ್ರಿಕೋಣವನ್ನು (ಪರಾಪ್ರಕೃತಿಯನ್ನು) ಮಹಾಕಾರಣ ಜಗವನ್ನು ಮತ್ತು ಸ್ಥೂಲ ಜಗವಾದ ಸತ್ವ-ರಜ-ತಮುಗಳ ತ್ರಿಕೋಣವನ್ನು ಅಂದರೆ ಅಪರಾಪ್ರಕೃತಿಯನ್ನು ಕೂಡಿಸುವ ಸೇತುವೆ ಆಗಿರುವದು. ಸತ್-ಚಿತ್-ಆನಂದ ತ್ರಿಕೋಣ ಅಂದರೆ ಪರಾಪ್ರಕೃತಿ-ಚಿತ್‌ಶಕ್ತಿ ಪಾರ್ವತಿಯು, ಕಾರಣ ಜಗವೆನಿಸುವದು. ಸರ್ವವೂ ಇಲ್ಲಿ ಶಾಶ್ವತವಾಗಿರುವದು. ಆದರೆ ಒಂದು ರೂಪದಿಂದ ಮತ್ತೊಂದು ರೂಪಕ್ಕೆ ಅಥವಾ ಒಂದು ಪೂರ್ಣತೆಯಿಂದ ಮತ್ತೊಂದು ಪೂರ್ಣತೆಗೆ ಮಾತ್ರ ಹೋಗಬಲ್ಲದು. ಅಂದರೆ ನಾಮ ರೂಪಗಳನ್ನು ಬದಲಿಸುವದು. ಇಲ್ಲಿ ಎಲ್ಲವೂ ಸುಷುಪ್ತಾವಸ್ಥೆಯಲ್ಲಿರುವದು. ಈ ಕಾರಣ ಜಗದ ಅಂದರೆ ಆದಿಶಕ್ತಿ ಚಿಚ್ಚಶಕ್ತಿಯ ಜ್ಞಾನವೇ ಯೋಗ ಶಾಸ್ತ್ರವೆನಿಸುವದು. ಇದೇ ವಿಜ್ಞಾನಮಯ ಜಗವೆನಿಸುವದು. ಇದರಿಂದಲೇ ಸೂಕ್ಷ್ಮ ಮನಬುದ್ಧಿಯ ಜಗವು ಹುಟ್ಟಿರುವದು. ಇದೇ ತರ್ಕಕಲ್ಪನೆ ಸ್ಮೃತಿ ಅನುಮಾನಗಳಿಂದ ಆದ ಸೂಕ್ಷ್ಮಜಗವೆನಿಸುವದು. ಈ ಸೂಕ್ಷ್ಮ ಜಗವನ್ನು ಉಚ್ಚತರ ಬುದ್ಧಿಯಿಂದ ಅರಿಯಬಹುದು. ಅದಕ್ಕಂತೆ ಇದಕ್ಕೆ ಅರುಹಿನ ಸೃಷ್ಟಿ ಎನ್ನುವರು. ಇದರ ಜ್ಞಾನವೇ ತತ್ವಶಾಸ್ತ್ರವೆನಿಸಿದೆ. ಇದರಲ್ಲಿ ಸೂಕ್ಷ್ಮ ಪಂಚಭೂತಗಳು ಸೂಕ್ಷ್ಮ ತನ್ಮಾತ್ರಯಗಳು ಸೂಕ್ಷ್ಮ ಇಂದ್ರಿಯಗಳು ಸೂಕ್ಷ್ಮ ಕರಣಗಳು ಸೂಕ್ಷ್ಮ ಪ್ರಾಣಗಳು ಕೂಡಿ ಅರುಹಿನ ಜಗ ಅಥವಾ ಸೂಕ್ಷ್ಮ ಜಗವು ಆಗಿದೆ. ಆದರೆ ಈ ಸೂಕ್ಷ್ಮ ಜಗದಿಂದ ಅರುಹಿನ ಜಗದಿಂದ ಸ್ಥೂಲ ಜಗವು ಸತ್ವ-ರಜ-ತಮುಗಳು ತ್ರಿಕೋಣವು (ಜಗವು) ಅಪರ ಪ್ರಕೃತಿಯು ಹುಟ್ಟಿರುವದು. ಈ ಸೂಕ್ಷ್ಮ ಜಗವು (ಅರುಹಿನ ಸೃಷ್ಟಿಯು) ಈ ಎರಡೂ ತ್ರಿಕೋಣಗಳನ್ನು ಕೂಡಿಸುವದು. ಈ ಸ್ಥೂಲ ಜಗವು ಅಥವಾ ಪ್ರಕೃತಿಯು ಮಾಯೆ ಎನಿಸುವಳು. ಇದರ ಜ್ಞಾನವೇ ಭೌತಶಾಸ್ತ್ರಗಳಾಗುವ ಇದೇ ನಮಗೆ ಒದಗಿದ ಅನಿಷ್ಟವು. ನಾವು ಈ ಅನಿಷ್ಟ (ಮಾಯೆ) ದಿಂದ ಅರುಹಿನ ಜಗಕೆ, ಅರುಹಿನ ಜಗದಿಂದ ಇಷ್ಟಕ್ಕೇ ಪರಾಪ್ರಕೃತಿ ಚಿತ್‌ಶಕ್ತಿಗೆ)

ಹೋಗಬೇಕಾಗಿದೆ. ಆ ಇಷ್ಟದಿಂದ ಸಹಜವಾಗಿ ಪರಾತ್ಪರ ಪರಶಿವನಲ್ಲಿ ಅಂದರೆ ಪೆಂಡಿಕೆಯಲ್ಲಿ ಲೀನವಾಗುವವು. ಆಗ ಲಿಂಗೈಕ್ಯರಾದಂತೆ ಅಂದರೆ ಅಂಗಲಿಂಗ ಸಮರಸವಾದಂತೆ ಆಗುವದು. ಲಿಂಗ ಅಂದರೆ ಪೆಂಡಿಕೆ, ಅಂಗವೆಂದರೆ ಕಾರಣ-ಸೂಕ್ಷ್ಮ-ಸ್ಥೂಲಗಳಲ್ಲಿ ಆಳವಡಿಸುವದು: ಲಿಂಗೈಕ್ಯ ವೆನಿಸುವದು. ಲಿಂಗೈಕ್ಯವೆಂದರೆ ಶರೀರ ಬಿಡುವಲ್ಲಿ ಸಾಯುವದು ಅಲ್ಲಿ ಈಗ ಬಹುತರ ಸಾಯುವದಕ್ಕೆ ಲಿಂಗೈಕ್ಯವೆಂದು ಅನ್ನುವ ರೂಢಿಯಾಗಿದೆ. ಲಿಂಗ ಐಕ್ಯ= ಲಿಂಗದಲ್ಲಿ ಬೇರೆ ಸಮರಸವಾಗಿ ಅಂದರೆ ಲಿಂಗ-ಅಂಗಗಳು ಬೆರೆತು ಸಮರಸವಾಗುವದು. ಅದೇ ಲಿಂಗಾಂಗಸಮರಸವೆನಿಸುವದು. ಸತ್ತರೆ ಸ್ವರ್ಗ ವಾಸಿ ಶಿವಾಧೀನನಾದನೆಂದು ಹೇಳಬಹುದು. ಲಿಂಗದಿಂದ ಜಗಬಂದಂತೆ, ಮನು ಷ್ಯನೂ ಲಿಂಗದಿಂದಲೇ ಹೊರಗೆಬಂದಿದ್ದಾನೆ. ಪುನಃ ಆ ಲಿಂಗದಲ್ಲಿಬೆರೆಯುವದು, ಸಮರಸವಾಗುವದು ಹೇಗೆ? ಎಂದು; ಇಳಿದುಬರುವ ಹಾಗೂ ಏರಿ ಹೋಗುವ ರೀತಿಗಳನ್ನು ಈ ಲಿಂಗವು ತೋರಿಸುವದು. ಅದರಿಂದ, ಇದಕ್ಕೆ ಇಷ್ಟ ಲಿಂಗವೆಂದು ಹೆಸರು. ಈ ಲಿಂಗವು ಅನಿಷ್ಟದಿಂದ ಇಷ್ಟಕ್ಕೆ, ಕರೆದುಕೊಂಡು ಹೋಗುವದು. ಶಿವಶಕ್ತಿಯರನ್ನು ಕೂಡಿಸುವದು. ಲಿಂಗ-ಅಂಗಗಳನ್ನು ಕೂಡಿ ಸುವದು. ಪ್ರಕೃತಿ ಪುರುಷರನ್ನು ಕೂಡಿಸುವದು. ಪರಾಪ್ರಕೃತಿ ಅಪ ರಾಪ್ರಕೃತಿಗಳನ್ನು ಕೂಡಿಸುವದು. ಸ್ಥೂಲ, ಸೂಕ್ಷ್ಮ,ಕಾರಣ, ಮಹಾಕಾರಣ ಗಳನ್ನು ಕೂಡಿಸುವದು. ಅಂದರೆ ಅನಿಷ್ಟಗಳನ್ನೆಲ್ಲ ತೊಡೆದು ಹಾಕಿ ಇಷ್ಟ ಲಿಂಗಗಳನ್ನು ಮಾನವನಿಗೆ ತಂದುಕೊಡುವದು ಅದಕ್ಕೆ ಇಷ್ಟಲಿಂಗವೆಂದು ಸಂಬೋಧಿಸಿದ್ದಾರೆ. ತನ್ನ-ಅನ್ಯರ-ಎಲ್ಲರ, ಅನಿಷ್ಟಗಳನ್ನು ಹೊಡೆದೊಡಿಸುವ ಗುರುತಿಗಾಗಿ ಈ ಇಷ್ಟಲಿಂಗವನ್ನು ಧಾರಣಮಾಡಿದ್ದಾರೆ ವೀರಶೈವರು. ಜಗ ತ್ತಿನಲ್ಲಿ ಇವರೇ ಇಷ್ಟಲಿಂಗಧರಿಸಿದ್ದಾರೆ. ಉಳಿದವರು ಏನೂ ಧರಿಸಿಲ್ಲ. ತಮ್ಮ ದೇವರನ್ನು ವೀರಶೈವರ ಹೊರತು ಯಾರೂ ಧರಿಸಿಲ್ಲ. ಮನೆಯಲ್ಲಿ ಗುಡಿ ಯಲ್ಲಿ ಮಸೂತಿಯಲ್ಲಿ ಚರ್ಚಿನಲ್ಲಿ ಇಟ್ಟಿರುವರು. ಇದರಿಂದ ದೇವರಿಗೂ ಇವರಿಗೂ ಅವೀರಶೈವರಷ್ಟು ಸಂಬಂಧವಾಗುವದಿಲ್ಲೆಂದು ಹೇಳಿದರೆ ತಪ್ಪಾಗ ಲಾರದು. ಈ ಲಿಂಗವನ್ನು ಸರ್ವ ಜಗತ್ತಿನ ಜನರು ಧರಿಸಿದರೆ ಒಳಿತಲ್ಲವೇ ವಿಚಾರಿಸಿರಿ. ಇದರಲ್ಲಿ ಯಾವ ಜಾತಿ ಧರ್ಮಗಳ ಗೊಂದಲವಿಲ್ಲ; ಎಲ್ಲರಿಗೂ ಧರಿಸುವ ಅಧಿಕಾರವಿದೆ. ವಿಚಾರಿಸಿ ನೋಡಿ ಮೇಲಿನ ವಿವರಣೆಯನ್ನು ಅರಿತು ಇಷ್ಟಲಿಂಗವನ್ನು ಸಕಲರೂ ಧರಿಸಿರಿ, ಅಂದರಾಯಿತು ಎಲ್ಲರಿಗೂ ಒಳಿತೇ ಆಗುವದು.

ಈ ಇಷ್ಟದಿಂದ ತನ್ನ ಅನಿಷ್ಟಗಳನ್ನು ಹೊರಗೆಹಾಕಿ ಒಳ್ಳೆಯವನಾಗಿ ಎರಡನೆಯವರ ಅನಿಷ್ಟಗಳನ್ನು ಹೊಡೆದೋಡಿಸಿ ಅವರನ್ನು ಒಳ್ಳೆಯವರನ್ನಾಗಿ ಮಾಡುವದೇ ಈ ಇಷ್ಟಲಿಂಗದ ಉದ್ದೇಶವಾಗಿರುವದು. ತಾನು ಗುಣಿಯಾಗಿ ಅನ್ಯರಿಗೆ ಗುಣಿಗಳನ್ನಾಗಿ ಮಾಡುವದು. ಇಷ್ಟ ಅಂದರೆ ಪೂಜೆ. ಅದಕ್ಕೆ ಪೂಜೆಗೆ ಯೋಗ್ಯವಾದದ್ದೇ ಈ ಇಷ್ಟಲಿಂಗವೆಂದು ಹೇಳಬಹುದು. ಈ ಇಷ್ಟಲಿಂಗವನ್ನು ಪೂಜಿಸಿ ತನ್ನಲ್ಲಿಯ ಸಕಲ ಗುಣಗಳನ್ನು ಪೂಜಿಮಾಡುವದು ಅಂದರೆ ಇಲ್ಲಿ ಮಾಡುವದು ಎಂದು ಅರ್ಥವಿರುವದು. ನೀರಿನಿಂದ ತೊಳೆಯುವದು, ಅಂತರಬಾಹ್ಯ ಹೊಲಸನ್ನು ಇಲ್ಲಿ ಮಾಡುವದು. ಭಸ್ಮವನ್ನು ಲೇಪಿಸುವದು. ಕೆಡುಕಾದುದನ್ನು ಸುಟ್ಟು ಇಲ್ಲಿ ಮಾಡಿ ಒಳ್ಳೇದನ್ನು ಉಳಿಸುವದು; ಧೂಪಹಾಕುವದು. ಅಗ್ನಿಯಲ್ಲಿ ಸುಟ್ಟು ಒಳ್ಳೇ ಸುವಾಸವನ್ನು ಹೊರಡಿಸುವದು; ಗಂಧಲೇಪದ—ಕೊರಡನ್ನು ತಿಕ್ಕಿ ತಿಕ್ಕಿ ಸಣ್ಣ ಗಂಧ ಮಾಡಿ ಹಚ್ಚಿ ಸುವಾಸ ತಂಪುಗಳನ್ನು ಮಾಡುವದು; ದೀಪಹಚ್ಚುವದು. ಎಣ್ಣೆ, ಬತ್ತಿಗಳನ್ನು ಸುಟ್ಟು ಪ್ರಕಾಶವನ್ನು ಹೊರಡಿಸುವದು; ಗಂಟೆ ಬಾರಿಸುವದು—ಬಾಹ್ಯಸಪ್ಪಳವನ್ನು ಇಲ್ಲಿ ಮಾಡುವದು. ಅಕ್ಷತಾರೋಪಣ—ನಾಶವಾಗುವದನ್ನು ಬಿಟ್ಟು ನಾಶವಾಗಲಾರದುದನ್ನು ಹೊಂದುವದು ಹೀಗೆ ಅನಿಷ್ಟಗಳನ್ನೆಲ್ಲ ಪೂಜಿಮಾಡಿ ಅಂದರೆ ಇಲ್ಲಿಮಾಡಿ ಇಷ್ಟಗಳನ್ನು ಹೊಂದಲೋಸುಗ ಈ ಇಷ್ಟಲಿಂಗದ ಪೂಜೆಯಾಗಿರುವದು. ಅವಕ್ಕೆ ಸದಾ ಅನಿಷ್ಟಗಳ ಕೂಡ ಹೋರಾಡುವದೇ ಇಷ್ಟಲಿಂಗದ ಪೂಜೆಯಾಗಿರುವದು. ಅದರ ಜೊತೆಗೆ ಮನದಲ್ಲಿ ನೆನಹು ಹೃದಯದಲ್ಲಿ ಪ್ರೀತಿ, ಮನದಲ್ಲಿ ನಾಮಾಮೃತ, ನಯನದಲ್ಲಿ ಮೂರುತಿ, ಕರ್ಣದಲ್ಲಿ ಕೀರುತಿಗಳು ಲಿಂಗದ ಬಗೆಗೆ ಸದಾ ಇರಬೇಕು. ಅಂದರೆ ಅನಿಷ್ಟಗಳ ಕೂಡ ಹೊರಾಡಲು ಆನಂದ ಮಹಾನಂದವಾಗುವದು. ಆಗ ಮಾತ್ರ ಅನಿಷ್ಟಗಳು ಹೋಗಿ ಇಷ್ಟಗಳು ಉಳಿಯುವವು. ಅಂದರೆ ನಾವು ಇಷ್ಟಲಿಂಗ ಪೂಜೆಯನ್ನು ಚನ್ನಾಗಿ ಮಾಡಿದಂತೆ ಆಗುವದು.

ಇಷ್ಟಲಿಂಗವನ್ನು ಯಾವಾಗಲೂ ಅಂಗದಮೇಲೆ ಧರಿಸಬೇಕೆಂದು ವಿಧಿಸಲಾಗಿದೆ. ಕಂಕುಳ, ರಟ್ಟೆ, ತಲೆ, ಎದೆ, ಕರ, ಗಂಟಲು ಹೀಗೆ ಇಷ್ಟಲಿಂಗವನ್ನು ಆರು ಸ್ಥಾನಗಳಲ್ಲಿ ಧರಿಸಬಹುದು. ಲಿಂಗ ಧರಿಸಿದವನೇ ಭಕ್ತ, ಲಿಂಗಬಿಟ್ಟವನೇ ಭವಿ, ಎಂದು ಹೇಳಿದ್ದಾರೆ. ಇದರ ಅರ್ಥವು ಬರೇ ಅಂಗದ ಮೇಲೆ ಲಿಂಗ ಕಟ್ಟಿದರೆ ಅಲ್ಲ. ಆ ಲಿಂಗವನ್ನು ಧಾರಣಮಾಬೇಕು ಅಂದರೆ

ಆ ಲಿಂಗವನ್ನು ಸದಾಹೃದಯ ಸಿಂಹಾಸನದಲ್ಲಿ ನೆಲಿಸಿ ಸ್ಮರಿಸಬೇಕು. ಅಂದರೆ ಧಾರಣಮಾಡಿದಂತೆ ಆಯಿತು. ಆಗ ಇವನು ಲಿಂಗಭಕ್ತನಾದ. ಬರೇ ಶರೀರದ ಮೇಲೆ ಧರಿಸಿ ಅದರ ನೆನಹವೇ ಇಲ್ಲವಾದರೆ ಅವನು ನಿಜವಾಗಿ ಭವಿಯೇ ಸರಿ. ಅದಕ್ಕೆ ಅಂಗದ ಮೇಲೆ ಲಿಂಗವಿದ್ದರೆ ತೀರಲಿಲ್ಲ. ಅಂಗದ ಮೇಲಿನ ಲಿಂಗವನ್ನು ಹೃದಯದಲ್ಲಿ ನೆಲಿಸುವಂತೆ ಮಾಡಬೇಕು.

ಮೇಲೆ ಇಷ್ಟಲಿಂಗದ ಆಕಾರವನ್ನು ಹೇಳಿವೆ. ಮೇಲೆ ಪೆಂಡಿಕೆ, ಅದರ ಕೆಳಗೆ ಮತ್ತೊಂದು ಸಮಭುಜತ್ರಿಕೋಣವನ್ನು ಕೆಳಗೆ ಮಾಡಿದ್ದು ಅದರ ಕೆಳಗೆ ಮತ್ತೊಂದು ಸಮಭುಜತ್ರಿಕೋಣ ಶಿರಕೋಣವನ್ನು ಮೇಲೆ ಮಾಡಿ, ಮೇಲಿನ ಶಿರಕೋಣಕ್ಕೆ ಶಿರೋಬಿಂದುಗಳು ಕೂಡಿರಬೇಕು.

ಮೊದಲು ಪೆಂಡಿಕೆ ಅದರ ಕೆಳಗ ಗೋಳಕು, ಅದರ ಕೆಳಗೆ ಪೀಠ, ಹೀಗೆ ಇಷ್ಟಲಿಂಗದ ಆಕಾರವಿರುವದು. ಪೆಂಡಿಕೆ =ಪರಶಿವ, ಮಹಾಕಾರಣ ಜಗತ್ತು. ಗೋಳಕು =ಚಿಚ್ಛಕ್ತಿ ; ಪರಶಕ್ತಿ; ಇಷ್ಟಲೋಕ ಪರಾಪ್ರಕೃತಿ; ವಿದ್ಯ; ಸತ್—ಚಿತ್—ಆನಂದ ಮಯಲೋಕು; ಕಾರಣಜಗತ್ತು. ಗೋಳಕ= ಪೀಠಗಳನ್ನು ;ಕೂಡಿಸುವ ಬಿಂದುವು= ಸೂಕ್ಷ್ಮ ಜಗತ್ತು; ವಿಜ್ಞಾನ ಮಯಲೋಕ, ಅರುವಿನ ಜಗತ್ತು, ಮನೋಮಯಲೋಕ ಪೀಠ= ಅಪರಾ ಪ್ರಕೃತಿ; ಸತ್ವ ರಜ ತಮ ಪ್ರಕೃತಿ, ಸ್ಥೂಲಜಗತ್ತು; ಮಾಯಾಲೋಕ, ಅನಿಷ್ಟ ಜಗತ್ತು, ಅವಿದ್ಯ ಎಂದು ಆಗುವದು. ಇದರ ವಿಸ್ತೃತ ವಿವರಣೆ ಯನ್ನು ಮೇಲೆ ನೋಡಿರಿ- ಪೆಂಡಿಕೆಯು ಪರಾತ್ಪರ ವಸ್ತುವನ್ನು ಸೂಚಿ ಸುವದು. ಅದು ಜಡವೂ ಅಲ್ಲ ಚೇತನವೂ ಅಲ್ಲ, ಸಾಕಾರವೂ ಅಲ್ಲ, ನಿರಾ ಕಾರವೂ ಅಲ್ಲ. ಆದ್ದರಿಂದ ಮೇಲಿನ ಇಷ್ಟ (ತ್ರಿಕೋಣ) ದಿಂದ ಕೆಳಗಿನ ಅನಿಷ್ಟ (ತ್ರಿಕೋಣ) ವನ್ನು ಜಯಿಸಿ ಎಲ್ಲಕ್ಕೂ ಮೇಲಿನ ಪರಾತ್ಪರವನ್ನು ಅನುಭವಿಸಬೇಕು. ಇಷ್ಟದಲ್ಲಿ ಇಷ್ಟ ಪ್ರಾಣ ಭಾವಲಿಂಗಳ ಜ್ಞಾನವಾಗುತ್ತದೆ.

ಕಾಯ ಶುದ್ಧಿಗಾಗಿ ಈ ಇಷ್ಟಲಿಂಗ ಮನದ ಶುದ್ಧಿಗಾಗಿ ಪ್ರಾಣಲಿಂಗ ಭಾವ ನಿರ್ಭಾವವಾಗಲು ಭಾವಲಿಂಗ ಸಂಬಂಧಿಸಿರುವವು. ಅಂದರೆ ಸ್ಥೂಲ ಶರೀರದ ಶುದ್ಧಿಗಾಗಿ ಇಷ್ಟಲಿಂಗಪೂಜೆ, ಸೂಕ್ಷ್ಮ ಶರೀರ (ಮನ) ದ ಶುದ್ಧಿಗೆ, ಪ್ರಾಣಲಿಂಗ ಪೂಜೆ, ಕಾರಣ ಶರೀರ (ಸತ್-ಚಿತ್-ಆನಂದ) ಪಡೆಯಲು ಭಾವಲಿಂಗ ಪೂಜೆ ಬೇಕು. ಭಕ್ತಮಹೇಶಸ್ಥಲಗಳು ಇಷ್ಟಲಿಂಗಕ್ಕೂ, ಪ್ರಸಾದಿ ಪ್ರಾಣಲಿಂಗಿಸ್ಥಲಗಳು ಪ್ರಾಣಲಿಂಗಕ್ಕೂ, ಶರಣ ಐಕ್ಯಸ್ಥಲಗಳು ಭಾವಲಿಂ

ಗಕ್ಕೊ ಸಂಬಂಧಿಸಿರುವವು. ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಒಂದಕ್ಕೊಂದು ಸಂಬಂಧವಾದವುಗಳೇ ಇರುವವು. ಇವುಗಳನ್ನು ವಿಂಗಡಿಸಲಿಕ್ಕೆ ಬರುವದಿಲ್ಲ- ಪ್ರಾಣಲಿಂಗ ಭಾವಲಿಂಗಗಳ ಪ್ರತೀಕವೇ - ಇಷ್ಟಲಿಂಗವಿರುವದು ಈ ಇಷ್ಟಲಿಂಗವನ್ನು ತನುವಿನ ಮೇಲೆ ಧರಿಸಿದರೆ ತೀರಲಿಲ್ಲ. ಅದನ್ನು ಮನದಲ್ಲಿಯು ಧರಿಸಬೇಕು. ಅಲ್ಲದೆ ಭಾವದಲ್ಲಿಯೂ ನೆಲೆಗೊಳಿಸಬೇಕು. ಇಲ್ಲದಿದ್ದರೆ ಇದೊಂದು ಕವಣೆಗಲ್ಲಾಗಿ ಬಿಡುವದು. ಮನ ಭಾವಗಳಲ್ಲಿ ಈ ಇಷ್ಟಲಿಂಗವನ್ನು ಧಾರಣಮಾಡದಿದ್ದರೆ ಸೂಳೆಯಂತೆ ಆಗುವದು. ಸೂಳೆಯು ಪರಪುರುಷನನ್ನು ತನ್ನ ತನುವಿಗೆ ಮಾತ್ರ ಮುಟ್ಟಿಸಿಕೊಳ್ಳುವಳು. ಮನಸ್ಸಿನಲ್ಲಿ ಅವನನ್ನು ಅಪ್ಪಿರುವದಿಲ್ಲ. ಮನಸ್ಸಿನಲ್ಲಿ ಧನವನ್ನು ಅಪ್ಪಿರುವಳು. ಅಂದಮೇಲೆ ಅವಳ ಭಾವದಲ್ಲಿ, ಪ್ರೀತಿಯಲ್ಲಿ ಅವನು ಇರುವದೇ ಇಲ್ಲ. ಹೀಗಾಗಬಾರದು. ತನುಮನ ಭಾವಗಳಲ್ಲಿ ಲಿಂಗವನ್ನು ಸ್ಥಾಪಿಸಬೇಕು. ಅಂದರೆ ಸರ್ವಾಂಗದ ಒಳಹೊರಗೂ ಲಿಂಗಚೈತನ್ಯ ಲಿಂಗಕಳೆಗಳು ಸಂತತ ಪ್ರಕಾಶಿಸುತ್ತಿರಬೇಕು. ಅಂದರೆ ಲಿಂಗ ಧರಿಸುವದು ಸಾರ್ಥಕವಾಗುವದು. ಇಲ್ಲವಾದರೆ ನಿರರ್ಥಕವಾಗುವದರಲ್ಲಿ ಸಂದೇಹವೇ ಇಲ್ಲ. ಸದಾಚಾರ ಸದ್ವಿಚಾರ ಸತ್‌ಪ್ರೀತಿಗಳಿಂದ ನಡೆದು ಪಡೆದು ಬಾಳುವದು ಎಂದು ಇವಕ್ಕೆ ಗೂಢಾರ್ಥವಿರುವದು.

ಪರಾತ್ಪರ ಪರಶಿವನ ಜಗತ್ತಿನ ಕಲ್ಯಾಣಕ್ಕಾಗಿ ಶಿವಶಕ್ತಿ ರೂಪದಿಂದ ಲಿಂಗೋದ್ಭವನಾಗಿದ್ದಾನೆಂದು ಪೂರ್ವದ ದ್ರಾವಿಡರು ಹೇಳುವದು ಸತ್ಯವಿದೆ. ಈ ವಿಶ್ವಬ್ರಹ್ಮಾಂಡವೇ ಒಂದು ಮಹಾಲಿಂಗದಾಕಾರವಿರುವದು. ಜಗತ್ತಿನ ಕಲ್ಯಾಣಕ್ಕಾಗಿ ಶಿವ ಶಕ್ತಿಯರು ರೂಪ ತಾಳಿದ್ದಾರೆ. ಅದಕ್ಕೆ ಲಿಂಗವು ಒಳ್ಳೇ ಶಿವಶಕ್ತಿಯರ ಉತ್ತಮ ಗೂಡು ಆಗಿದೆ. ಲಿಂಗವು ನಿರಾಕಾರ ಶಿವಶಕ್ತಿಯರು ಸಾಕಾರ ಅಲ್ಲದೆ ಸ್ವಯಂಭೂ ಎಂಬುದನ್ನು ಸೂಚಿಸುತ್ತದೆ. ವೀರಶೈವರ ಒಳ್ಳೇ ವೈಶಿಷ್ಟ್ಯಪೂರ್ಣ ಗುರುತಾದ ಈ ಇಷ್ಟಲಿಂಗ ಪೂಜೆಯಲ್ಲಿ ಇದು ವ್ಯಕ್ತವಾಗುತ್ತದೆ. ಶಿವಶಕ್ತಿಯರು ಈ ನಮ್ಮ ಶರೀರದಲ್ಲಿಯೇ ಇದ್ದಾರೆಂದು ಈ ಇಷ್ಟಲಿಂಗವು ತಿಳಿಸುವದು. ಅದಕ್ಕೆ ಲಿಂಗ ಪೂಜಿಕರು ತಮ್ಮ ದೇಹವನ್ನು ದೇವಾಲಯವನ್ನು ಮಾಡಲೇಬೇಕು. ಅಂದರೆ ಒಳ್ಳೇ ಸದಾಚಾರ ಸಂಪನ್ನನಾಗಬೇಕು. ಅಂದರೆ ಮಹಾಕಾಯವೆನಿಸಬೇಕು. ಆಂದರೆ ಲಿಂಗದ ಸಕಲ ಗುಣಗಳು ಅಂಗದಲ್ಲಿ ಅಂದರೆ ಜೀವಿದಲ್ಲಿ ಅಲ್ಲದೆ ಕಾಯದಲ್ಲಿ ಸಹ ಬರಬೇಕು. ಜೀವದಲ್ಲಿ ಬಂದಿದೆ ಎಂಬುದಕ್ಕೆ ಕಾಯದಲ್ಲಿ ಬಂದಿರುವದೇ

ಪ್ರತ್ಯಕ್ಷ ಪ್ರಮಾಣವಿರುವದು. ಅಂಗವೆಂದರೆ ಜೀವವೂ ಹೌದು. ಅಂಗವೆಂದರೆ ಕಾಯವೂ ಹೌದು. ಜೀವದ ಜಂಜಡ ಜಾಡ್ಯವು ಹೋದರೆ ಕಾಯದ ಗುಣಗಳು ಹೋಗಿ ಮಹಾಕಾಯವಾಗುವದು. ಆಗ ಲಿಂಗಗುಣಗಳು ಕಾಯದಲ್ಲಿಯೂ ಸಹ ಬರುವವು. ಅಂದರೆ ಲಿಂಗಕ್ಕೆ, ಅಗ್ನಿ ಸುಡದು, ಗಾಳಿ ಹಾರಿಸದು, ಛಳಿ ನಡುಗಿಸದು, ಗುಂಡು ಹಾರಿಸದು, ಕತ್ತಿ ಕಡಿಯದು, ಬಡಿಗಿ ಬಡಿಯದು, ನೀರು ಮುಳುಗಿಸದು, ಬಿಸಿಲು ಒಣಗಿಸದು, ಮುಳ್ಳು ಚುಚ್ಚದು, ಈ ಲಿಂಗದ ಗುಣಗಳೆಲ್ಲ ಶರೀರದಲ್ಲಿ ಸಹ ಬರಬೇಕು. ಹೀಗಾದಾಗ ಲಿಂಗಾಂಗಸಮರಸವಾಯಿತೆಂದು ಹೇಳಬಹುದು. ಇದೇ ಇಷ್ಟಲಿಂಗ ಧರಿಸುವದರ ರಹಸ್ಯವಾಗುವದು. ಲಿಂಗವು—ಅರಳಿಸುವ ಅಡಗಿಸುವ ಸಾಮರ್ಥ್ಯವುಳ್ಳ ಮಾಯಾಶಕ್ತಿಗೆ ಆದಾರಭೂತವಾದ ತತ್ವವು. ಲಿಂಗವು ಶುದ್ಧವಾದ ಅರುಹಿನ ಕುರುಹು ಆಗಿದೆ.

ನಾಸಿಕದಲ್ಲಿ ಆಚಾರಲಿಂಗ, ನಾಲಿಗೆಯಲ್ಲಿ ಗುರುಲಿಂಗ, ನೇತ್ರಗಳಲ್ಲಿ ಶಿವಲಿಂಗ, ಚರ್ಮದಲ್ಲಿ ಜಂಗಮಲಿಂಗ, ಶ್ರೋತ್ರದಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗಗಳನ್ನು ಕಾಣಬೇಕು. ಅಂದರೆ ಈ ಇಂದ್ರಿಯಗಳಿಗೆ ಬಾಹ್ಯ ವಸ್ತುಗಳು ತಗಲಿದಾಗ ಮಾತ್ರ ಅವುಗಳ ಜ್ಞಾನವಾಗುತ್ತದೆ. ಇಷ್ಟಕ್ಕೆ ಅಲ್ಲ ಆಯಾಲಿಂಗಗಳು ಇದ್ದಂತೆ ಆಗಲಿಲ್ಲ. ಆಯಾವಸ್ತುಗಳು ಇಲ್ಲದಿದ್ದರೂ ಅವುಗಳ ಜ್ಞಾನವು ಅಲ್ಲಿ ತಾನೇ ಆಗಬೇಕು. ಹೂವುಗಳಿಲ್ಲದೆ ನಾಶಿಕಕ್ಕೆ ಸುಗಂಧದ ಸುವಾಸ ಹತ್ತಬೇಕು. ಸಕ್ಕರೆಯನ್ನು ತಿನ್ನದೆ ನಾಲಿಗೆಯು ಸುರುಚಿ ಸವಿಯಾಗಬೇಕು. ಪ್ರತ್ಯಕ್ಷ ಮೂರ್ತಿ ಇರದೆ ಕಣ್ಣಿಗೆ ಸುರೂಪಗಳು ಕಾಣಬೇಕು. ಯಾವದನ್ನು ತಟ್ಟದೆ ಮುಟ್ಟದೆ ಸುಸ್ಪರ್ಶದ ಜ್ಞಾನವು ಆಗಬೇಕು. ಯಾವ ವಾದ್ಯ ಬಾರಿಸದೆ ಸುಮಧುರ ವಾದ್ಯಗಳ ಧ್ವನಿಯನ್ನು ಕೇಳಬೇಕು. ಹೃದಯದಲ್ಲಿ ಅನುಭವದ ಅರುಹು ಸದಾ ಇರಬೇಕು. ಅಂದರೆ ಆಯಾಸ್ಥಾನಗಳಲ್ಲಿ ಆಯಾಲಿಂಗಗಳನ್ನು ಸ್ಥಾಪಿಸಿದಂತೆ ಯಾಯಿತು. ಈ ಇಷ್ಟಲಿಂಗದ ಪೂಜೆಯಿಂದ ಪ್ರಾಣಲಿಂಗ ಭಾವಲಿಂಗಗಳ ಪೂಜೆ ಮಾಡುವ ಉದ್ದೇಶ ರಹಸ್ಯವೇ ಇದಾಗಿರುವದು. ಅದಕ್ಕಾಗಿಯೇ ಸತ್ಕ್ರಿಯೆಯೇ ಲಿಂಗ, ಸುಜ್ಞಾನವೇ ಜಂಗಮವೆಂದು ನಮ್ಮವರು ಹೇಳಿದ್ದರ ತಾತ್ಪರ್ಯವಿದಾಗಿದೆ. ಬರೇ ಲಿಂಗ ಧರಿಸಿದರೆ ಲಿಂಗದ ಕಳೆ ಗೊತ್ತಿಲ್ಲೆಂದು ಹೇಳಬೇಕು. ಅದಕ್ಕೆ ಇಷ್ಟಲಿಂಗದ ಪೂಜೆಯು ಅರುಹಿನಿಂದ ಶಿವಧ್ಯಾನದೊಡನೆ ಮಾಡುವ ಸತ್ಕ್ರಿಯಾಚರಣೆಯೆಂದು ಹೇಳಬೇಕು. ಕೇವಲ ಅರಿವೇ

ಲಿಂಗವಲ್ಲ. ಇದು ಗೊಡ್ಡ ವೇದಾಂತವಾಗುವದು. ಕೇವಲ ಕುರುಹೇ ಲಿಂಗ ವಲ್ಲ. ಇದು ಮಡ್ಡ ಸಿದ್ಧಾಂತವಾಗುವದು. ಇವೆರಡೂ ವೀರಶೈವರವಲ್ಲ. ಅದಕ್ಕೆ ಅರುವಿನಿಂದ ಶಿವಧ್ಯಾನದೊಡನೆಮಾಡುವ ಸತ್ಕ್ರಿಯೆಯೇ ಲಿಂಗವೆಂಬುದನ್ನು ನಾವು ಮರೆಯಕೂಡದು.

## ಆಚಾರಲಿಂಗ.

ಇಷ್ಟಲಿಂಗದಲ್ಲಿ ಆಚಾರಲಿಂಗ, ಗುರುಲಿಂಗಗಳಿರುವವು. ಅಂದರೆ ಒಳ್ಳೇ ಸದಾಚಾರ ಸತ್ಕ್ರಿಯಗಳನ್ನು ಸ್ವಾರ್ಥತ್ಯಾಗ ಮಾಡಿ ಸಕಲ ಇಂದ್ರಿಯಗ ಳಿಂದ ಪರರಿಗೆ ಕೇಡಾಗದೆ ಹಿತವಾಗುವಂತೆ ಸದಾ ಶಿವಧ್ಯಾನದೊಂದಿಗೆ ಮಾಡಬೇಕು. ಇದೇ ಆಚಾರಲಿಂಗ ಪೂಜೆಯಾಗುವದು. ಇದು ನಾಶಿಕ ದಲ್ಲಿ ಇರುವದು. ನಾಶಿಕವು ಇಡೀ ಶರೀರಕ್ಕೆ ಪ್ರಾಣವಾಯುವನ್ನು ಕೊಟ್ಟು ಒಳಗಿನ್ಯ ಹೊಲಸು ಹವೆಯನ್ನು ಹೊರಗೆಹಾಕುವದು. ಈ ಆಚಾರಲಿಂಗ ಪೂಜೆಯಿಂದ ಪ್ರಾಣವಾಯುವಿನ ಮುಖಾಂತರ ಆತರದ ಶುದ್ಧಿಯಾಗು ವದು. ಅಂತರಂಗ ಶುದ್ಧಿಗೆ ಸತ್ಕ್ರಿಯೆದ ವಿಚಾರಗಳು ಅವಶ್ಯ ಬೇಕೇಬೇಕೆಂದು ಹೇಳಿದಂತೆ ಆಯಿತು. ಅಂದರೆ ಇಷ್ಟಲಿಂಗದ ಒಂದು ಭಾಗವಾದ ಆಚಾರ ಲಿಂಗಪೂಜೆಯಾಯಿತು. ಆಗ ಕ್ರಿಯಾಶಕ್ತಿಯ ಅರಿವೆಯಾಗಿ ಅದರ ಮಹತ್ವ ತಿಳಿಯುವದು. ಲಿಂಗದ ಮೇಲೆ ಬರೆ ನೀರು ಪತ್ರಿ ವಿಭೂತಿಗಳನ್ನು ಹಾಕ ದರೆ ತೀರಲಿಲ್ಲೆಂದು ಹೇಳಿದಂತೆ ಆಗುವದು. ಇವುಗಳು ಬೇಕು. ಮೇಲೆ ಹೇಳಿದ ಸತ್ಕ್ರಿಯೆಗಳೂ ಬೇಕೆಂದು ಹೇಳಿದಂತೆ ಆಗುವದು. ಆಗ ಶ್ರದ್ಧೆ ಯುಳ್ಳ ಭಕ್ತನಾದಂತೆ ಆಯಿತು. ಇಷ್ಟಾದಾಗ ಇವರ ಚಿತ್ತವು ಶುದ್ಧಿಯಾ ಗುವದು. ಸಂಸಾರ ನಿವೃತ್ತಿಯಾಗುವದು.

## ಗುರುಲಿಂಗ.

ಆಚಾರಲಿಂಗದ ಪೂಜೆಯ ಕೂಡ ಗುರುಲಿಂಗದ ಪೂಜೆಯನ್ನೂ ಮಾಡಬೇಕು. ಗುರುಲಿಂಗ ಎಂದರೆ ಜ್ಞಾನಲಿಂಗ ಅಂದರೆ ಜ್ಞಾನೋಪದೇಶ ಹೊಂದಿ ಪಾರಮಾರ್ಥದ ಜ್ಞಾನವನ್ನು ಪಡೆಯಬೇಕು. ಗುರುಲಿಂಗವು ನಾಲಿಗೆಯಲ್ಲಿ ಇರುವದು. ಜ್ಞಾನಪಡೆದ ಗುರುತಿಗಾಗಿ ನಾಲಿಗೆಯಿಂದ ಜ್ಞಾನದ ಮಾತಾಡುವನು. ವಿನಯ ನಮ್ರತೆಗಳು ತಲೆದೋರುವವು. ನಾಡಿಗೆ ಇಂಥ ನಾಲಿಗೆಯಿಂದ ಒಳ್ಳೇದಾಗುವದು. ಇದರಿಂದ ಜನರಲ್ಲಿ ಪ್ರತಿಷ್ಠಾ ಬರುವದು. ಇವನ ಬುದ್ಧಿ ಶುದ್ಧಿಯಾಗುವದು. ಆಗ ಇವನು ನಿಷ್ಠಾವಂತ ಮಹೇಶನೆನಿಸುವನು.

## ಶಿವಲಿಂಗ.

ಪ್ರಾಣಲಿಂಗದಲ್ಲಿ ಶಿವಲಿಂಗ ಹಾಗೂ ಚರಲಿಂಗವೆಂದು ಎರಡು ಭಾಗಗಳಿವೆ. ಭಕ್ತಿಯಿಂದ ಆಚಾರಲಿಂಗ ಗುರುಲಿಂಗಗಳನ್ನು ಮೇಲಿನಂತೆ ಪೂಜಿಸುವದರಿಂದ ಮುಂದೆ ಅವನು ಶಿವಲಿಂಗವನ್ನು ಪೂಜಿಸಲು ಯೋಗ್ಯನಾಗುವನು. ಅಂದರೆ ಲೋಕದ ಸಕಲ ಜೀವಿಗಳಿಗೆ ಕಲ್ಯಾಣ ಮಾಡುವವನಾಗುವನು. ಇದನ್ನು ಬರೇ ಇಚ್ಛಾಶಕ್ತಿ ಮಾತ್ರದಿಂದ ಸಾಧಿಸುವನು. ಪರಮಾತ್ಮನಲ್ಲಿ ಅವಧಾನ ಭಕ್ತಿ ಎಂದರೆ ಸದಾ ಏಕಲಕ್ಷವನ್ನು ಇಟ್ಟಿರುವನು. ಪಾರಮಾರ್ಥ ವಿದ್ಯೆಯು ಪೂರ್ಣವಾದಂತೆ ಆಯಿತು. ಇದು ಈ ಶಿವಲಿಂಗವು ನೇತ್ರದಲ್ಲಿ ಇರುವದು. ಕೃಪಾದೃಷ್ಟಿಯಿಂದ ನೋಡಿದರೆ ಜನರ ಕಲ್ಯಾಣವಾಗುವದು. ನೇತ್ರವು ಶರೀರದ ಕನ್ನಡಿಯಂತೆ ಇರುವದು. ಒಳಗಿನ ತ್ಯಾಗ ವೈರಾಗ್ಯ ಜ್ಞಾನ ವಿದ್ಯೆಗಳನ್ನು ಸ್ಪಷ್ಟಪಡಿಸುವದು. ಇವನು ಪ್ರಸಾದಿ ಎನಿಸುವನು. ಕಾಯಕ ಮಾಡಿ ಗಳಿಸಿದ್ದನ್ನೆಲ್ಲ ಅಂದರೆ ಅದರ ಫಲವನ್ನು ಪರಹಿತಕ್ಕೆ ಕೊಟ್ಟು ಉಳಿದ ಅತಿ ಅಲ್ಪದರಲ್ಲಿಯೇ ಉಪಜೀವಿಸುವನು. ಹೆಚ್ಚಿಗೆ ಗಳಿಸಿ ಸಂಗ್ರಹಿಸನು. ನಾಳಿಗೆ ನಾಡದು ಬೇಕೆಂದು ಎಂದೂ ಮನಸ್ಸಿನಲ್ಲಿ ಸ್ವಲ್ಪವೂ ಕುದಿಯನು. ಇಷ್ಟಾದರೆ ಅವನು ಶಿವಲಿಂಗ ಪೂಜಕನಾದನು.

## ಪ್ರಾಣಲಿಂಗ.

ಶಿವಲಿಂಗ ಪೂಜಿಸುವ ಕಾಲದಲ್ಲಿ ಅವನು ಚರಲಿಂಗ (ಜಂಗಮಲಿಂಗ) ವನ್ನು ಪೂಜಿಸುವನು. ಅಂದರೆ ಸರ್ವವ್ಯಾಪಿಯಾದ ಪ್ರೀತಿಯನ್ನು ಸರ್ವ ಪ್ರಾಣಿಮಾತ್ರದ ಮೇಲೆ ಮಾಡಲು ಹತ್ತುವನು. ಇದೇ ಚರಲಿಂಗಪೂಜೆ ಎನಿಸುವದು. ಇಲ್ಲಿ ಆದಿ ಶಕ್ತಿಯ ಅನುಭವ ಆಗುವದರಿಂದ ಜಗವನ್ನೇ ಸಮಾನದೃಷ್ಟಿಯಿಂದ ಪ್ರೀತಿಸುವನು ಭೇದವಡಗುವನು. ಉಚ್ಚ ನೀಚ ಶ್ರೇಷ್ಠ ಕನಿಷ್ಠ ಮೇಲು ಕೀಳೆಂಬ ಯಾವತ್ತೂ ಭೇದಗಳಡಗಿ ತಾಯಿಯಂತೆ ಎಲ್ಲರನ್ನೂ ಸಮಾನಾಗಿ ಪ್ರೀತಿಸುವನು. ಅಂದರೆ ಇವನು ಪ್ರಾಣಲಿಂಗಿಯಾದಂತೆ ಆಯಿತು. ಆಗ ಲಿಂಗಪ್ರಾಣಿ ಆದನು. ಅಂದರೆ ತಾನೇ ಶಿವನೆಂದು ಅನುಭವವಾಗುವದು. ಶಾಂತಿಯು ಸ್ವಾಭಾವಿಕ ಇವನಲ್ಲಿ ನೆಲಿಸುವದು. ಈ ಲಿಂಗವು ಚರ್ಮದಲ್ಲಿ ಇರುವದು. ಅಂದರೆ ಮುಟ್ಟದಿದ್ದರೂ ಎಲ್ಲದರ ಜ್ಞಾನವಾಗುವದು. ಎಲ್ಲವೂ ಒಂದೇ ಎನಿಸುವದು. ಮನಸ್ಸು ಆಗ ಒಳ್ಳೇ ಪರಿಪೂರ್ಣಶುದ್ಧಿ ಪಡೆದು ಸುಮನವಾಗುವದು. ಪ್ರಾಣಲಿಂಗಿಯ ಸ್ಥಲವನ್ನು ಇವನು ಹತ್ತಿದಂತೆ ಆಯಿತು.

## ಪ್ರಸಾದಲಿಂಗ.

ಭಾವಲಿಂಗದಲ್ಲಿ ಪ್ರಸಾದಲಿಂಗ ಮಹಾಲಿಂಗಗಳೆಂದು ಎರಡು ಪ್ರಕಾರಗಳು. ಪ್ರಸಾದಲಿಂಗವೆಂದರೆ ನಿಷ್ಕಾಮವಾಗಿ ಅಲ್ಪ ಭೋಗವನ್ನು ಉಂಡ ಉಪವಾಸಿಯಂತೆ ಬಳಸಿಬ್ರಹ್ಮಚಾರಿಯಂತೆ ಭೋಗಿಸಿ ಎಲ್ಲರಿಗೂ ಶಿವಾನುಭವವನ್ನು ಬೋಧಿಸುತ್ತ ಇರುವನು. ಒಂದಿಲ್ಲೊಂದು ಕಾಯಕ ಮಾಡುತ್ತ ಅನ್ಯರಿಗೆ ಆದರ್ಶವಾಗಿ ಬಾಳುವನು. ಈಗ ಅವನು ಮುಟ್ಟಿದ್ದು ತಟ್ಟಿದ್ದು ಹೇಳಿದ್ದು ನುಡಿದದ್ದು ಎಲ್ಲವೂ ಪ್ರಸಾದವಾಗಿ ಪವಿತ್ರವಾಗಿ ಇರುವದು. ಗಳಿಸಿದ್ದನ್ನೆಲ್ಲ ಪರರಿಗೆ ಕೊಟ್ಟು ಪ್ರಸಾದ ರೂಪದಿಂದ ಉಳಿದ ಅತ್ಯಲ್ಪವನ್ನು ಉಪಯೋಗಿಸಿ ಸಾದಾ ಜೀವನ ಉದಾತ್ತವಿಚಾರದವನಾಗಿರುವದೇ ಪ್ರಸಾದ ಲಿಂಗಪೂಜೆ ಎನಿಸುವದು. ಆಗ ಇವನು ಶರಣನಾದಂತೆ ಆಯಿತು. ಇವನಲ್ಲಿ ಪರಾಶಕ್ತಿ ಪ್ರಕಟವಾಗಿ ಸದಾ ಆನಂದದಿಂದಲೇ ಇರುವನು. ಸುಖ, ದುಃಖ, ಲಾಭ, ಹಾನಿ, ಹೆಂಟೆ, ಬಂಗಾರ, ಹೊಲೆಯ, ಬ್ರಾಹ್ಮಣ, ನಾಯಿ, ಹುಲಿ, ಇವುಗಳಲ್ಲಿ ಏನೂ ಭೇದಕಾಣುವದಿಲ್ಲ. ಸಮಬುದ್ಧಿಯ ಉಚ್ಚಸ್ಥಿತಿ ಬರುವದು. ಆಗ ಇವನಿಗೆ ಒಳ್ಳೇ ಸುಜ್ಞಾನ ಬರುವದು. ಸುಶಬ್ದಗಳು ಇವನಿಂದ ಸದಾ ಹೊರಬೀಳುವವು. ಶಾಂತಾತೀತ ಗುಣ ಬರುವದು. ಈ ಲಿಂಗವು ಕಿವಿಯಲ್ಲಿ ಇರುವದು. ಆಗ ಅನೇಕ ತರದ ಜಗದ ಸುದ್ದಿಗಳು ಕಿವಿಯಲ್ಲಿ ಕೇಳುವವು.

## ಮಹಾಲಿಂಗ.

ಮಹಾಲಿಂಗ ಪೂಜೆಯು ಆಗ ಪ್ರಾರಂಭವಾಗುವದು. ಚಿತ್‌ಶಕ್ತಿಯ ಅನುಭವ ಆಗಿ ಪರಮಾತ್ಮನಲ್ಲಿ ಸಮರಸವಾಗಿರುವ ಅನುಭವವಾಗುವದು. ಆಗ ಸಕಲದರಲ್ಲಿ ಒಳ್ಳೇ ಸುತೃಪ್ತಿಯುಂಟಾಗಿ ಶಾಂತ್ಯತೀತವನ್ನು ದಾಟಿ ಮುಂದೆ ಹೋಗುವನು. ಹೃದಯವು ಅತಿ ಪವಿತ್ರ ಶುದ್ಧ ಶಾಂತ ಆದಾಗ ಈ ಮಹಾಲಿಂಗವು ಪ್ರಕಟವಾಗುವದು. ಹೃದಯಕಮಲವನ್ನು ಸಂಪೂರ್ಣ ಅರಳಿಸುವದೇ ಮಹಾಲಿಂಗಪೂಜೆ ಎನಿಸುವದು. ಆಗ ಎಲ್ಲ ಭಾವಗಳು ಒಳ್ಳೇ ಸದ್ಭಾವಗಳಾಗಿ ಬಿಡುವವು. ಅಂತರಾತ್ಮನಲ್ಲಿ ಸದಾ ಮನ ಬುದ್ಧಿ ಚಿತ್ತ ಭಾವಗಳು ಒಂದಾಗುತ್ತಿರುವದು ಅನುಭವವಾಗುವದು. ಇದೇ ಜೀವನ್ಮುಕ್ತಿಯ ಉಚ್ಚಸ್ಥಿತಿ. ಇದನ್ನು ಪಡೆದವನೇ ಐಕ್ಯನೆಂದೆನಿಸುವನು. ಆಗ ಬಾಹ್ಯಕ್ರಿಯೆ

ಪೂಜೆಗಳಲ್ಲಿ ನಿಂತು ಸದಾ ಮಹಾಲಿಂಗವೇ ಗೋಚರಿಸುವದು. ಐಕ್ಯನ ಸ್ಥಿತಿಯು ಪ್ರಾಪ್ತವಾಗುವದು. ಲಿಂಗದ ವಿವರಣೆ ಇದೊಂದು ಬಗೆಯದಾರುವದು.

ಕುಂಡಲಿನಿಯು ಮೊದಲು ತನ್ನ ಕೆಳಮುಖವನ್ನು ಮೇಲು ಮುಖವನ್ನು ಮಾಡಿ ತನ್ನ ಪತಿಯಾದ ಸಹಸ್ರಾರದಲ್ಲಿಯ ಶಿವನನ್ನು ನೋಡಹತ್ತಲು ಮನುಷ್ಯನು ಶರೀರ ಶುದ್ಧಿಯಾಗಿ ನಿರ್ವಿಷಯಿಯಾಗಿ ಸತ್ಕರ್ಮಗಳನ್ನು ಮಾಡಹತ್ತುವನು. ಆಗ ಆಧಾರದಲ್ಲಿ .ಕುಂಡಲಿನಿ ಬಂದು ಆಚಾರ ಲಿಂಗ ಪೂಜೆಯಾಗುವದು.

ಮುಂದೆ ಅದೇ ಕುಂಡಲಿನಿಯು ಸ್ವಾಧಿಷ್ಠಾನದಲ್ಲಿ ಸಾವಧಾನದಿ ಏರಿ ಬಂದರೆ ಸುಜ್ಞಾನವು ಪ್ರಾರಂಭವಾಗುವದು. ಅಂದರೆ ಈ ಚಕ್ರದಲ್ಲಿ ಗುರು ಲಿಂಗ ಪೂಜೆಯಾಗುವದು. ಕೆಲವು ದಿನ ಕುಂಡಲಿನಿಯು ಇಲ್ಲೇ ಇರುತ್ತಿರಲು ಸುಜ್ಞಾನ್ ಬೆಳೆಯಹತ್ತುವದು, ಕಾಮವಾಸನೆ ಹೋಗುವದು.

ಅದೇ ಕುಂಡಲಿನಿಯು ಮಣಿಪೂರದಲ್ಲಿ ಹೆಚ್ಚಿನ ಸಾಧನೆಗಳ ಮೂಲಕ ಬರುವದು. ಆಗ ಅಲ್ಲಿ ಶಿವಲಿಂಗ ಪೂಜೆ ನಡೆಯುವದು. ಅಂದರೆ ಪರರ ಸೇವೆ ಮಾಡಿ ಪರರಿಗೆ ಕಲ್ಯಾಣ ಮಾಡುವ ಬುದ್ಧಿ ಬರುವದು. ಸಕಲ ಭೋಗಗಳಲ್ಲಿ ತಿರಸ್ಕಾರ ಹುಟ್ಟಿ ಅವುಗಳನ್ನು ಬಿಡುವನು. ಗಳಿಸಿದ್ದನ್ನು ಪರರಿಗೆ ಕೊಟ್ಟು ಪ್ರಸಾದ ರೂಪದಿಂದ ಅಲ್ಪವನ್ನೇ ಉಪಯೋಗಿಸುವನು.

ಅದೇ ಕುಂಡಲಿನಿಯು ಪುನಃ ಹೆಚ್ಚಿನ ಸಾಧನದಿಂದ ಅನಾಹತಕ್ಕೆ ಏರಿ ಬರುವದು. ಆಗ ಎಲ್ಲವನ್ನೂ ಸಮಾಧಾನ ದೃಷ್ಟಿಯಿಂದ ಪ್ರೀತಿಸಹತ್ತುವನು. ತಾನೇ ದೇವರೆಂಬ ಅನುಭವವಾಗುವದು. "ಶಿವೋಽಹಂ" ತತ್ತ್ವ ಅಳವಡುವದು. ಆಗ ಇಲ್ಲಿ ಚರಲಿಂಗ (ಜಂಗಮಲಿಂಗ) ದ ಪೂಜೆ ನಡೆಯುವದು.

ಮುಂದೆ ಹೆಚ್ಚಿನ ಸಾಧನೆಯಿಂದ ಅಲ್ಲಿಯ ಕುಂಡಲಿನಿಯು ವಿಶುದ್ಧಕ್ಕೆ ಏರಿ ಬರುವದು. ಆಗ ಪ್ರಸಾದ ಲಿಂಗದ ಅನುಭವವಾಗುವದು. ಉಂಡ ಉಪವಾಸಿ ಬಳಿಸಿ ಬ್ರಹ್ಮಚಾರಿಯಂತೆ ಇರಹತ್ತುವನು. ಅಂದರೆ ಶರಣನಾಗುವನು. ಎಲ್ಲವನ್ನೂ ಎಲ್ಲರನ್ನೂ ದೇವರೇ ಎಂದು ಕಾಣುವ ಅನುಭವವಾಗುವದು. ದೇವಮಯವಾಗುವದು. ಇಲ್ಲಿ ಸದಾ ಪ್ರಸಾದಲಿಂಗದ ಪೂಜೆ ನಡೆಯುವದು.

ಮುಂದಿನ ಸಾಧನೆಯಿಂದ ಆ ಕುಂಡಲಿನಿಯು ಆಜ್ಞೇಯ ಚಕ್ರಕ್ಕೆ ಏರಿಬರಲು ಮಹಾಲಿಂಗದ ಅನುಭವವಾಗುವದು. ಆಗ ಸದಾ ಆಗಾಗ ನಿರ್ವಿಕಲ್ಪ ಸಮಾಧಿಗಳಾಗುವವು. ಜೀವನ್ಮುಕ್ತನೆನಿಸುವನು. ಇಲ್ಲಿ ಸದಾ ಮಹಾಲಿಂಗ ಗೋಚರವಾಗಿ ಅದರ ಪೂಜೆ ನಡೆಯುವದು.

ಮುಂದೆ ಆ ಕುಂಡಲಿನಿಯು ಸಹಸ್ರಾರಕ್ಕೆ ಹೋಗಿ ಶಿವನೊಡನೆ ಸಮರಸವಾಗಲು ಯಾವ ತೊಂದರೆಯಾಗುವದಿಲ್ಲ. ಆಗ ಲಿಂಗಾಂಗ ಸಮರಸ ಆದಂತೆ ಆಯಿತು. ಆಗ ಮಹಾ ಆನಂದ ಮಹಾಶಾಂತಿ ನಿಗೂಢ ಶಾಂತಿ ನೆಲಿಸುವದು. ಇಲ್ಲಿ ಶಿವ ಪಾರ್ವತಿ (ಕುಂಡಲಿನಿ) ಕೂಡಿದರೆ ಶಿವಯೋಗವಾಯಿತು. ಇಲ್ಲಿ ನಿಃಕಲಲಿಂಗವಾಯಿತು. ಮುಂದೆ ಶಿಖಾಚಕ್ರದಲ್ಲಿ ನಿರಂಜನ ಲಿಂಗ ಸಂಬಂಧವಾಗುವದು. ಆ ಬಳಿಕ ಶಿಖಾಚಕ್ರದಲ್ಲಿ ನಿಃಶೂನ್ಯ ಲಿಂಗ ಸಂಬಂಧವಾಗುವದು. ಈ ಎರಡು ಚಕ್ರಗಳಗುಂಟ ಆನಂದ ಹರಿದು ಬಂದು ಈಡಾಪಿಂಗಳಗುಂಟ ಬಂದು ಪಾದಗಳ ಹೆಬ್ಬೆರಳಿನತನಕ ಬರುವದು. ಇದಕ್ಕೆ ಶಕ್ತಿಪಾತವೆನ್ನುವರು.

ಈ ಪ್ರಕಾರ ಕುಂಡಲಿನಿಯು ಚಕ್ರದಗುಂಟ ಏರ ಹತ್ತಲು ಆಯಾ ಚಕ್ರದಲ್ಲಿ ಮೇಲೆ ಕಾಣಿಸಿದ ಅನುಭವಗಳಾಗುವವು. ಅಲ್ಲದೆ ಅದಕ್ಕೆ ತಕ್ಕಂತೆ ಸರಿಯಾದ ಗುಣಗಳೂ ಕ್ರಿಯೆಗಳೂ ಮನುಷ್ಯನಲ್ಲಿ ಬರುವವು. ಅದರಂತೆ ಆಯಾ ಚಕ್ರದಲ್ಲಿ ಆಯಾ ಶಕ್ತಿಗಳ ಕಾರ್ಯಗಳು ನಡೆಯುತ್ತ ಅವುಗಳ ಅನುಭವವಾಗುವದು. ಅದರಂತೆ ಭಕ್ತಿಯಲ್ಲಿಯೂ ತರತಮಗಳುಂಟಾಗುವವು. ಹೀಗೆ ಲಿಂಗಗಳಲ್ಲಿ ಬೇರೆ ಬೇರೆ ಅರ್ಥಗಳಿರುವದನ್ನು ವಾಚಕರು ಗಮನಿಸಬೇಕು. ಯಾವ ಲಿಂಗವನ್ನು ಪೂಜಿಸುತ್ತಿರುವನೆಂಬುದಕ್ಕೆ ಬಾಹ್ಯ ಕ್ರಿಯೆ ಆಚರಣೆ ನಡೆನುಡಿ ವಿಚಾರ ಆಚಾರ ಮೊದಲಾದವುಗಳೇ ಸಾಕ್ಷಿಯಾಗಿರುವವು. ಇಷ್ಟಲಿಂಗ ಪೂಜಕನು ಏನು ಮಾಡಬೇಕು ? ಪ್ರಾಣಲಿಂಗ ಪೂಜಕನು ಏನು ಮಾಡಬೇಕು ? ಭಾವಲಿಂಗ ಪೂಜಕನು ಏನು ಮಾಡಬೇಕು ? ಇವರೆಲ್ಲರ ಅಂತರಂಗ ಬಹಿರಂಗದ ಆಚಾರವಿಚಾರಗಳನ್ನು ಮೇಲೆ ಸ್ಪಷ್ಟವಾಗಿ ಹೇಳಲಾಗಿದೆ. ವೀರಶೈವರು ಇದನ್ನು ತಿಳಿದು ವರ್ತಿಸಬೇಕು ಡಂಭಾಚಾರದ ಪೂಜೆಯಿಂದ ಏನೂ ಪ್ರಯೋಜನವಿಲ್ಲ ಎಂದು ಅನಿಸುವದು.

ಮೇಲಿನ ವಿವರಣೆಯು ಇದಕ್ಕೂ ಹೆಚ್ಚಿಗೆ ತಿಳಿಯುವದಕ್ಕೆ ಒಂದು ಕೋಷ್ಟಕ ರೂಪದಿಂದ ವಿವರಿಸುವೆವು. ಅದಕ್ಕೆ ನವವಿಧ ಸಕೀಲಗಳೆಂದು ಹೆಸರು. ಇನ್ನೊಂದು ಪ್ರಕಾರದ ಲಿಂಗತತ್ವದ ವಿವರಣೆಯುಃ—

## ನವವಿಧಲಿಂಗದ ಸಕೀಲಗಳು.

| ಕ್ರ. ಸಂ. | ಚಕ್ರ ೧ | ಗಣಂಗಳು ೨ | ಲಿಂಗ ೩ | ಶಕ್ತಿ ೪ | ಭಕ್ತಿ ೫ | ಹಸ್ತ ೬ | ಮುಖ ೭ | ಪದಾರ್ಥ ೮ | ಕಲೆ ೯ | ಲಿಂಗದ ಅರ್ಥಗಳು. |
|---|---|---|---|---|---|---|---|---|---|---|
| ೧ | ಆಧಾರ ಚಕ್ರ | ಭಕ್ತನು | ಆಚಾರ ಲಿಂಗ | ಕ್ರಿಯಾ ಶಕ್ತಿ | ಶ್ರದ್ಧಾ | ಸುಚಿತ್ತ | ಮೂಗು | ಸುಗಂಧ | ನಿವೃತ್ತಿ | ಭಕ್ತಿಯಿಂದ ಶಿವಧ್ಯಾನದೊಂದಿಗೆ ಸತ್ಕ್ರಿಯಾಚರಣೆಗಳು |
| ೨ | ಸ್ವಾಧಿಷ್ಠಾನ ಚಕ್ರ | ಮಹೇಶನು | ಗುರು ಲಿಂಗ | ಜ್ಞಾನ ಶಕ್ತಿ | ನಿಷ್ಠಾ | ಸುಬುದ್ಧಿ | ನಾಲಿಗೆ | ಸುರಸ | ಪ್ರತಿಷ್ಠಾ | ಸುಜ್ಞಾನೋಪದೇಶ ಭಕ್ತಿ ಜ್ಞಾನಗಳ ಸಮನ್ವಯದ ಆಚರಣೆ |
| ೩ | ಮಣಿಪೂರ ಚಕ್ರ | ಪ್ರಸಾದಿಯು | ಶಿವಲಿಂಗ | ಇಚ್ಛಾ ಶಕ್ತಿ | ಅವಧಾನ (ಏಕ ಲಕ್ಷ | ನಿರಹಂಕಾರ | ಕಣ್ಣು | ಸುರೂಪ | ವಿದ್ಯಾ | ಭಕ್ತಿ–ಜ್ಞಾನ-ಕ್ರಿಯಗಳ ಸಮನ್ವಯ ಪೂರ್ಣ ಯೋಗಾಚರಣೆ |
| ೪ | ಅನಾಹತ ಚಕ್ರ | ಪ್ರಾಣಲಿಂಗಿಯು | ಚರ (ಜಂಗಮ ಲಿಂಗ | ಆದಿಶಕ್ತಿ | ಅನುಭಾವ | ಸುಮನ | ಚರ್ಮ | ಸುಸ್ಪರ್ಶ | ಶಾಂತಿ | ಸಮಭಾವದಿಂದ ಸಕಲ ಪ್ರಾಣಿಗಳನ್ನು ಪ್ರೀತಿಸಿ ಭಕ್ತಿ-ಜ್ಞಾನ ಕ್ರಿಯೆಗಳ ಆಚರಣೆ |
| ೫ | ವಿಶುದ್ಧಿ ಚಕ್ರ | ಶರಣನು | ಪ್ರಸಾದ ಲಿಂಗ | ಪರಾಶಕ್ತಿ | ಆನಂದ | ಸುಜ್ಞಾನ | ಶ್ರೋತ್ರ | ಸುಶಬ್ದ | ಶಾಂತ್ಯತೀತ | ಸಕಲವನ್ನು ಪರರಿಗಾಗಿ ಕೊಟ್ಟು ಉಳಿದ ಅಲ್ಪದರಲ್ಲಿಯೇ. ಸಂತೃಪ್ತನಾಗುವ ಆಚರಣೆ ಭಕ್ತಿ. ಜ್ಞಾ- ಕ್ರಿಯಗಳಿರಬೇಕು. |

| | | | | | | | | | | |
|---|---|---|---|---|---|---|---|---|---|---|
| ೬ | ಆಜ್ಞೇಯ ಚಕ್ರ | ಐಕ್ಯನು | ಮಹಾ ಲಿಂಗ | ಚಿತ್‌ಶಕ್ತಿ | ಸಮರಸ | ಸದ್ಭಾವ | ಹೃದಯ | ಪಂಚೇಂದ್ರಿಯ ಸುತೃಪ್ತಿ | ಶಾಂತ್ಯತೀತೋತ್ತರ | ಸಕಲ ಇಂದ್ರಿಯಗಳಲ್ಲಿ ಲಿಂಗದ ಕಳೆ ಗುಣಗಳನ್ನು ಶರೀರದಲ್ಲಿ ಅಳವಡಿಸುವ ಆಚರಣೆ |
| ೭ | ಶಿವಚಕ್ರ ಸಹಸ್ರಾರ | ನಿಷ್ಕಲಂಕನು | ನಿಃಕಲ ಲಿಂಗ | ಅನುಪಮ ಶಕ್ತಿ | ಪರಿಪೂರ್ಣ ಭಕ್ತಿ | ನಿರ್ನಾಮ | ಬ್ರಹ್ಮರಂಧ್ರ | ಪರಮಾನಂದ | ಅನಾದಿ | ಪೂರ್ಣ ಲಿಂಗಾಂಗ ಸಮರಸ ಸದಾ ಆನಂದದ ಆಚರಣೆ ಜ್ಞಾನೋಪದೇಶ |
| ೮ | ಶಿಖಾ ಚಕ್ರ | ನಿಶೂನ್ಯನು | ನಿಃಶೂನ್ಯ ಲಿಂಗ | ನಿರ್ಭಾವ ಶಕ್ತಿ | ಅಪ್ರಮಾಣ ಭಕ್ತಿ | ನಿಷ್ಕಳಂಕ | ಉನ್ಮನಿ | ಪರಿಪೂರ್ಣ | ನಿರ್ನಾಮಯ | ಪರಿಪೂರ್ಣ ಆನಂದ |
| ೯ | ಪಶ್ಚಿಮ ಚಕ್ರ | ನಿರಂಜನನು | ನಿರಂಜನ ಲಿಂಗ | ನಿರವಯ ಶಕ್ತಿ | ನಿರವಯ ಭಕ್ತಿ | ನಿರಾಳ | ಪಶ್ಚಿಮ | ಅವಿರಳ | ಅನಿರ್ವಾಚ್ಯ | ಅವಿರಳ ಅನಿರ್ವಚನೀಯ ಆನಂದ |

ಹಿಂದೆ ನವವಿಧ ಸಕೀಲಗಳನ್ನು ಒಂಭತ್ತು ಲಿಂಗಗಳಿಗೆ ಸಂಬಂಧಿಸಿ ತಿಳಿಸಿದ್ದಾಯಿತು. ಈ ಲಿಂಗಗಳು ಆಯಾಯ ಜ್ಞಾನೇಂದ್ರಿಯಗಳಲ್ಲಿ ನೆಲಿಸಿದ್ದರ ಗುರುತನ್ನು ವಿಚಾರಿಸುವೆವು. (೧) ಆಚಾರಲಿಂಗ ನಾಶಿಕದಲ್ಲಿ ನೆಲೆಗೊಂಡರೆ ಬಾಹ್ಯ ವಿಷಯಗಳ ಗಂಧ ಮರೆಯಬೇಕು. ಲಿಂಗದ ಸದ್ವಾಸನೆಯು ಹೆಚ್ಚಬೇಕು. ಅಂದರೆ ವಿಷಯಗಳ ಸಂಪರ್ಕವಿಲ್ಲದೆ ಸುಗಂಧವು ನಾಶಿಕಕ್ಕೆ ಹತ್ತಬೇಕು. (೨) ಗುರುಲಿಂಗವು ನಾಲಿಗೆಯಲ್ಲಿ ನೆಲೆಗೊಂಡರೆ ಬಾಹ್ಯವಿಷಯ. ರಸಗಳನ್ನು ಮರೆಯಬೇಕು. ಲಿಂಗದ ಮಹಿಮೆಯನ್ನೇ ಸದಾ ಕೊಂಡಾಡುವದೇ ಅದಕ್ಕೆ ಸುರಸವಾಗಬೇಕು.' ಅಂದರೆ ಪದಾರ್ಥಗಳನ್ನು ಸೇವಿಸದೆ ನಾಲಿಗೆಯು ಸುರುಚಿಯನ್ನು ಅನುಭವಿಸಬೇಕು. (೩) ಶಿವಲಿಂಗವು ನೇತ್ರಗಳಲ್ಲಿ ನೆಲೆಗೊಂಡರೆ ಬಾಹ್ಯ ರೂಪು ಬಣ್ಣಗಳ ಮರೆಯಬೇಕು. ಲಿಂಗದ ರೂಪು ಬಣ್ಣಗಳೇ ನೇತ್ರದಲ್ಲಿ ಕಾಣಬೇಕು. ಅಂದರೆ ಬಾಹ್ಯ ಪದಾರ್ಥಗಳನ್ನು ನೋಡದಿದ್ದರೂ ನೇತ್ರಗಳಲ್ಲಿ ಲಿಂಗದ ಪ್ರಕಾಶ ದಿವ್ಯ ದೃಶ್ಯಗಳು ಕಾಣುವಂತಾಗಬೇಕು. (೪) ಜಂಗಮ ಲಿಂಗವು ಚರ್ಮದಲ್ಲಿ ನೆಲೆಗೊಂಡರೆ ಬಾಹ್ಯ ವಿಷಯ ಸ್ಪರ್ಶಗಳನ್ನು ಮರೆಯಬೇಕು. ಸದಾಲಿಂಗದ ಸುಖಸುಸ್ಪರ್ಶವು ಹತ್ತಬೇಕು. ಯಾವ ಬಾಹ್ಯ ವಸ್ತುಗಳನ್ನು ಮುಟ್ಟದೆ ದೇವನ ಸುಸ್ಪರ್ಶಹತ್ತುವ ಅನುಭವವಾಗಬೇಕು. (೫) ಪ್ರಸಾದಲಿಂಗ ಕಿವಿಯಲ್ಲಿ ನೆಲೆಗೊಂಡರೆ ಬಾಹ್ಯ ಶಬ್ದಗಳನ್ನು ಮರೆಯಬೇಕು. ಬರೇ ಲಿಂಗದ ಮಹಿಮೆಯ ಧ್ವನಿಯೇ ಕಿವಿಯಲ್ಲಿ ಕೇಳಬೇಕು. (೬) ಮಹಾಲಿಂಗವು ಮನದಲ್ಲಿ ನೆಲೆಗೊಂಡರೆ ಬಾಹ್ಯ ವಿಷಯಗಳ ಪರಿಣಾಮಗಳನ್ನು ಮನಮರೆತಿರಬೇಕು. ಆದರೆ ಲಿಂಗದ ಪರಿಣಾಮಗಳನ್ನೇ ಅದು ಅನುಭವಿಸಬೇಕು. ಹಾಗಾದರೆ ಲಿಂಗತತ್ವವು ಸಕಲ ಶರೀರದಲ್ಲಿ ನೆಲಗೊಂಡು ಸರ್ವಾಂಗಲಿಂಗಿಯಾದಂತೆ ಆಯಿತು.

(೧) ಸುಚಿತ್ತಕ್ಕೆ ಆಚಾರಲಿಂಗ, (೨) ಸುಬುದ್ಧಿಗೆ ಗುರುಲಿಂಗ, (೩) ಸಾತ್ವಿಕ ಅಹಂಕಾರಕ್ಕೆ ಶಿವಲಿಂಗ (೪) ಸುಮನಕ್ಕೆ ಜಂಗಮಲಿಂಗ (೫) ಜ್ಞಾನಕ್ಕೆ ಪ್ರಸಾದಲಿಂಗ (೬) ಭಾವಕ್ಕೆ ಮಹಾಲಿಂಗ. (೧) ಚಿತ್ತ ಬುದ್ಧಿಗಳು ಶುದ್ಧಿಯಾದರೆ ಇಷ್ಟಲಿಂಗವಾಗುವದು. (೨) ಅಹಂಕಾರ ಮನಗಳು ಶುದ್ಧಿಯಾದರೆ ಪ್ರಾಣಲಿಂಗ (೩) ಜ್ಞಾನ ಭಾವಗಳು ಶುದ್ಧಿಯಾಗಿ ಪರಿಪೂರ್ಣವಾದರೆ ಭಾವಲಿಂಗ.

ಶಿವನ ಸಂಕಲ್ಪದಿಂದ ಲಿಂಗ ಹುಟ್ಟಿತು ( ಆತ್ಮ ). ಶಿವನೇ ತಾನೆಂಬ ಭಾವ ಹುಟ್ಟಲು ಲಿಂಗಕ್ಕೆ ಭಾವವೆಂದು ಹೆಸರಾಯಿತು. ಲಿಂಗ ಆಕಾಶದಲ್ಲಿ ಕೂಡಿ ಜ್ಞಾನವಾಯಿತು. ಲಿಂಗ ವಾಯುವಿನಲ್ಲಿ ಕೂಡಿ ಅಹಂಕಾರವಾಯಿತು. ಲಿಂಗ ತೇಜಸ್ಸು ಕೂಡಿ ಮನವಾಯಿತು. ಲಿಂಗ ಅಪ್ಪುವಿನಲ್ಲಿ ಕೂಡಿ ಬುದ್ಧಿಯಾಯಿತು. ಲಿಂಗ ಪೃಥ್ವಿಯಲ್ಲಿ ಕೂಡಿ ಚಿತ್ತೆನಿಸಿತು. ಈ ಪ್ರಕಾರ ಲಿಂಗ ತತ್ವವು ಪಂಚಭೂತಗಳಲ್ಲಿ ಕೂಡಿಕೊಂಡು ಪಂಚ ಕರಣಗಳಾದವು. ಅಂದರೆ ಈ ಲಿಂಗವು ಎಲ್ಲ ಕಡೆಗೂ ಅಣುರೇಣುಗಳಲ್ಲಿ ಸಹ ಸೇರಿಕೊಂಡಿದೆ ಎಂದು ತಿಳಿಯುವದು. ಇದರ ಮೇಲಿಂದ ಲಿಂಗ ತತ್ವವು ಎಷ್ಟು ವ್ಯಾಪಕ ಪರಿಪೂರ್ಣವೆಂದು ಕಲ್ಪನೆಬರುವದು. ಅದಕ್ಕಾಗಿಯೇ ಎಲ್ಲ ಭೂತಗಳನ್ನೂ ಕರಣಗಳನ್ನೂ ಇಂದ್ರಿಯಗಳನ್ನೂ ಕೂಡಿಕೊಂಡ ಈ ಶರೀರವನ್ನು ಯೋಗ್ಯ ಸಾಧನೆಯಿಂದ ಸರ್ವಾಂಗಲಿಂಗಿಯನ್ನಾಗಿ ಮಾಡಲಿಕ್ಕೆ ಬರುವದೆಂದು ಸಹಜ ತಿಳಿಯುವದು.

ಆದಿಯಲ್ಲಿ ಪರಶಿವನು "ಓಂ" ಕಾರ ಲಿಂಗರೂಪದಿಂದ ಪ್ರಕಟನಾದನು. ಆಗ ಅದರಲ್ಲಿಯ ಅ ಕಾರವೇ ನಾದ, ಉ ಕಾರವೇ ಬಿಂದು, ಮ ಕಾರವೇ ಕಳೆಯಾಯಿತು. ನಾದವೇ ಪ್ರಾಣ (ನಾಮ) ಬಿಂದುವೇ ಶರೀರ (ರೂಪ) ಕಳೆಯೇ ಮನ (ಕ್ರಿಯೆ) ಗಳಾದವು. ಈ ಪ್ರಕಾರ ನಾಮ ರೂಪ ಕ್ರಿಯೆಯಿಂದ ಮನುಷ್ಯನಾದನು. ಶರೀರದಲ್ಲಿ (ಬಿಂದು) ಭಕ್ತಿ; ಪ್ರಾಣ (ನಾದ) ದಲ್ಲಿ ಜ್ಞಾನ; ಮನ (ಕಳೆ) ದಲ್ಲಿ ವೈರಾಗ್ಯಗಳು, ನೆಲೆಗೊಂಡರೆ ನಾದದಲ್ಲಿ ಗುರುಲಿಂಗ, ಬಿಂದುವಿನಲ್ಲಿ ಆಚಾರಲಿಂಗ, ಕಳೆಯಲ್ಲಿ ಶಿವಲಿಂಗಗಳಾಗುವವು. ಮುಂದೆ ಆಚಾರದಿಂದ ಪರಿಶುದ್ಧವಾದ ಶರೀರವು ಬಿಂದು (ರೂಪು) ಜಂಗಮಲಿಂಗ, ಗುರುಮಂತ್ರದಿಂದ ಪರಿಶುದ್ಧವಾದ ಪ್ರಾಣ ನಾದ (ನಾಮ) ವು ಪ್ರಸಾದಲಿಂಗ, ಶಿವಧ್ಯಾನದಿಂದ ಪರಿಶುದ್ಧವಾದ ಮನವು ಕಳೆ (ಕ್ರಿಯೆ) ಮಹಾಲಿಂಗ ಹೀಗೆ ಆರು ಲಿಂಗಗಳು ರೂಪುಗೊಳ್ಳುವವು. ಈ ಪ್ರಕಾರ ಶರೀರವು ಜಂಗಮದಿಂದ ಪ್ರಾಣವು ಗುರುವಿನಿಂದ ಮನವು ಲಿಂಗದಿಂದ ಪರಿಶುದ್ಧವಾಗುವವು. ಈ ಪ್ರಕಾರ ಆರು ಲಿಂಗಗಳ ವಿವರಣೆ ಹಾಗೂ ಉತ್ಪತ್ತಿಗಳಿರುವವೆಂದು ಶರಣರು ಕಂಡು ಹಿಡಿದು ಅನುಭವಿಸಿ ನೋಡಿದ್ದಾರೆ. ಮೇಲಿನ ಎಲ್ಲ ವಿವರಣೆಗಳನ್ನು ನೋಡಿದರೆ ಲಿಂಗತತ್ವವು ಎಂಥ ಮಹತ್ವದ್ದಿರುವದೆಂದು ತಿಳಿಯುವದು.

---

# ಬಸವೇಶ್ವರರೂ, ರಾಜಕಾರಣವೂ.

ಲೇಖಕರು:— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ. ಹಲಗೂರು.

ಭಾರತದಲ್ಲಿ ಆಗಾಗ್ಗೆ ಸಂಕ್ರಮಣ ಬರುವುದು ರೂಢಿಯೇ ಸರಿಯು. ಕ್ರಿ. ಶ. ಹನ್ನೆರಡನೆ ಶತಮಾನದಲ್ಲಿ ಇಲ್ಲದ ಸಲ್ಲದ ಕಷ್ಟಕೋಟಲೆಗಳು ಜನತೆಯನ್ನು ಆವರಿಸಿಕೊಂಡವು. ಜೀವದ ಜೀವದುಸಿರಾದ ಧರ್ಮವನ್ನು ಜನರಿಗೆ ತಿಳಿಯುವ ರೀತಿಯಲ್ಲಿ ಸರಳವಾಗಿ ತಾಯಿನುಡಿಯಲ್ಲಿಯೇ ಬೋಧಿಸಿದವರು ಇರಲಿಲ್ಲ. ಆದಕಾರಣ ಧರ್ಮದ ನಿಜಸ್ವರೂಪ ಏನು ಎಂಬುದು ಗೊತ್ತಾಗಲಿಲ್ಲ. ಧರ್ಮ ಹಾಗೂ ಸಾಹಿತ್ಯವು ಬರೀ ಗಂಡಸರ ಸೊತ್ತು ಆಗಿ ಮುಕ್ತಿಮಾರ್ಗಕ್ಕೆ ಅವಕಾಶವೇ ಇರಲಿಲ್ಲ. ಮುಂದೆ ಹೋದವರು ಮುಂದೆ, ಹಿಂದೆ ನಿಂತವರು ಹಿಂದೆ ಆಗಿ ಜನತೆಯ ಜೀವನವು ಸಮತೂಕದಲ್ಲಿ ಇಲ್ಲದೆ ಅವ್ಯವಸ್ಥೆಯಿಂದ ಕೂಡಿತ್ತು. ಭಗವಂತನ ಮಕ್ಕಳು ನಾವು ಎಂಬ ಅರಿವೇ ಇಲ್ಲದೆ ಮೇಲು ಕೀಳನ್ನು ಸೃಷ್ಟಿಸಿ ಅದರ ಅವಾಂತರದಲ್ಲಿ ಸುಖಶಾಂತಿಯು ತೇಲಿ ಹೋಗಿತ್ತು. ಒಂದಲ್ಲ ಒಂದು ವಿಧದಲ್ಲಿ ಕರ್ನಾಟಕದಲ್ಲಿ ಕ್ರಾಂತಿಗೆ ಅವಕಾಶಕೊಡುವ ಕಾರ್ಯಗಳು ಕೂಡಿಕೊಂಡಿದ್ದವು. ಬೆಳೆದ ಕಳೆಯನ್ನು ಕಿತ್ತು ಬೆಳೆಯನ್ನು ಹಸನುಮಾಡುವ ಹುಟ್ಟು ಬೇಸಾಯಗಾರರು ಜನಿಸಿ ಕಾರ್ಯಮಾಡುವ ಸಂದರ್ಭವು ಒದಗಿತೋ ಏನೋ? ಅಧ್ಯಾತ್ಮದ ನೆಲೆವೀಡಾದ ನಮ್ಮ ನಾಡಿನಲ್ಲಿ ಕಾಲದಿಂದ ಕಾಲಕ್ಕೆ ಒಬ್ಬರಲ್ಲಿ ಒಬ್ಬ ವಿಭೂತಿ ಮಹಾತ್ಮರು ಅವತರಿಸಿ ಕತ್ತಲಲ್ಲಿ ಬೆಳಕು ತೋರಿ, ನಮಗೆ ಮೇಲ್ಪಂಕ್ತಿ ಹಾಕಿದ್ದಾರೆ. ಆವರ್ಗದಲ್ಲಿ ಕ್ರಾಂತಿಕಾರರಾಗಿ, ಸಮಾಜ ಸುಧಾರಕರಾಗಿ, ಸಾಹಿತಿಗಳಾಗಿ, ವಿಭೂತಿಯಾಗಿ, ಅನುಭಾವಿಯಾಗಿ, ರಾಜಕಾರಣಿಯಾಗಿ ಬಸವೇಶ್ವರರು ಜನಿಸಿ ಅಗ್ರಗಣ್ಯರಾಗಿದ್ದಾರೆ.

ಯಾವ ನಾಡಿನಲ್ಲಿಯೇ ಆಗಲಿ, ಜನಾಂಗದಲ್ಲಿಯೇ ಆಗಲಿ ಆಗಾಗ್ಗೆ ತಲೆದೋರಬಹುದಾದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ವಾಙ್ಮಯಾತ್ಮಕ ಬದಲಾವಣೆಗಳೂ, ಧರ್ಮಜಿಜ್ಞಾಸೆಗಳೂ ಬಹುಮಟ್ಟಿಗೆ ಆಯಾಯಕಾಲದ ರಾಜಕೀಯ ಸನ್ನಿವೇಶಗಳನ್ನು ಅನುಸರಿಸಿರುತ್ತವೆ. ಈ ಸರ್ವಕ್ಷೇತ್ರಗಳಲ್ಲಿಯೂ ರಾಜಕೀಯ ಪರಿಸ್ಥಿತಿಯು ತನ್ನ ಪ್ರಭಾವವನ್ನು ಬೀರು

ತ್ತದೆ ಎಂಬುದು ನಿರ್ವಿವಾದವಾಗಿದೆ. ರಾಜಕಾಲಸ್ಯ ಕಾರಣಂ ಎಂಬ ನುಡಿ ಯಲ್ಲಿ ಸತ್ಯವಿಲ್ಲದೆ ಇಲ್ಲ. ಹನ್ನೆರನೆಯ ಶತಮಾನದಲ್ಲಿ ಬಸವೇಶ್ವರರು ತಮ್ಮ ಪ್ರಭಾವದಿಂದ ನಡೆಯಿಸಿದ ಧಾರ್ಮಿಕ ಕ್ರಾಂತಿಗೆ ಅಂದಿನ ರಾಜಕೀಯ ಪರಿಸ್ಥಿತಿಯು ಬಹುತರವಾಗಿ ಸಹಾಯವಾಗಿರಬೇಕು. ಬಸವೇಶ್ವರರ ಕಾಲ ದಲ್ಲಿದ್ದ ರಾಜಕೀಯ ಸ್ಥಿತಿಗತಿಯು ಇವರಿಗೆ ಕೇವಲ ಕಾರ್ಯಕ್ಷೇತ್ರವಾಗಿ ದ್ದಿತಾದರೂ ಇವರು ಅಂದು ಧಾರ್ಮಿಕ ಕ್ರಾಂತಿಯನ್ನು ಯಶಸ್ವಿಯಾಗಿ ನಡೆಯಿಸಿರಬೇಕಾದರೆ ಅಂದಿನ ಕ್ಷೇತ್ರವು ಹಿಂದಿನಿಂದಲೂ ಕಾಲಕಾಲಕ್ಕೆ ಹದ ವಾಗುತ್ತಾ ಬಂದಿರಬೇಕು. ಗಂಗರು ಕಾಂತಿಗುಂದಿ, ಪತನವಾಗಿ, ಕದಂಬ ಪಲ್ಲವರು ಕೆಡೆಬಿದ್ದು ಕಲ್ಯಾಣದ ಚಾಲುಕ್ಯರು ಹತ್ತನೆ ಶತಮಾನದಲ್ಲಿ ಗರಿ ಗಟ್ಟುತ್ತಿದ್ದರು. ಹನ್ನೊಂದನೆ ಶತಮಾನದಲ್ಲಿ ಅಭ್ಯುದಯಿಗಳಾಗಿದ್ದ ಚಾಲು ಕ್ಯರಲ್ಲಿ ಜಗಳವು ಜನಿಸಿ, ಪುನಃ ಕಾದಾಟವು ಮೈಹಾಕಿತು- ನಿರ್ವೀರ್ಯ ನಾಗಿದ್ದ ಮೂರನೆಯ ತೈಲಪರಾಜನಲ್ಲಿ ಬಿಜ್ಜಳನು ಒಬ್ಬ ಮಾಂಡಲಿಕ ಅರಸನಾಗಿದ್ದು ಚಾಲುಕ್ಯರ ಆಸರೆಯಲ್ಲಿ ಇದ್ದನು. ಕೊಲ್ಲಾಪುರ, ಕಾಕತೀ ಯಾದಿ ಅರಸರ ಸಹಾಯದಿಂದ ಬಿಜ್ಜನು ತೈಲಪನನ್ನು ಪದಚ್ಯುತನನ್ನಾಗಿ ಮಾಡಿ ತಾನೇ ಸ್ವತಂತ್ರನಾದನು. ಕಲ್ಯಾಣವನ್ನು ತ್ಯಜಿಸಿ ತೈಲಪನು ಬನ ವಾಸಿಗೆ ಹೊರಡುವಾಗ ಕಾಕತೀಯರು ಆತನ ಮೇಲೆ ಕದನಹೂಡಿ ಕೊಂದು ಹಾಕಿದರು. ಕ್ರಿ. ಶ. ೧೧೬೩ ರಲ್ಲಿ ಚಾಲುಕ್ಯ ಮನೆತನವು ಮುರಿದುಬಿದ್ದಿತು. ಕಲಚೂರ್ಯ ವಂಶದ ಬಿಜ್ಜಳನೇ ಅರಸಾದನು. ಬಿಜ್ಜಳನಲ್ಲಿಯೇ ಬಸವೇ ಶ್ವರರು ಮಂತ್ರಿಯಾಗಿದ್ದರು.

ಭಕ್ತಿಭಾಂಡಾರಿ, ಅನುಭಾವಿಶರಣ, ದಾಸೋಹಪ್ರಭು, ಸಾಹಿತ್ಯ ಕೃಷಿ ಗಾರ ಆದಂತೆಯೇ ಉತ್ತಮ ರಾಜಕಾರಣಿಯು ಬಸವೇಶ್ವರರು. ಇಂದಿನ ರಾಜಕಾರಣಕ್ಕೆ ಇದನ್ನು ಹೋಲಿಸದೆ ಸೂಕ್ಷ್ಮ ರೀತಿಯಲ್ಲಿ ನೋಡಬೇ ಕಾಗಿದೆ. ಧರ್ಮೋರಕ್ಷತಿ ರಕ್ಷತಃ ಎಂಬ ತತ್ವವನ್ನು ಚಾಚೂ ತಪ್ಪದೆ ಬಸ ವೇಶ್ವರರು ಪಾಲಿಸಿದ್ದಾರೆ. ಇಂದಿನ ರಾಜಕಾರಣಿಗಳಂತೆ ತಮ್ಮ ಸ್ಥಾನ ಭದ್ರತೆಗೆ ಹೆಚ್ಚಿಗೆ ಗಮನವನ್ನು ಕೊಟ್ಟವರಲ್ಲ. ಇವರಲ್ಲಿ ಗಾಂಧೀಜಿಯ ಅಹಿಂಸಾವಾದದ ಮೂಲತತ್ವವು ಅಡಗಿರುವುದನ್ನೂ, ಮಾರ್ಕ್ಸ್ ಕ್ರಾಂತಿವಾ ದದ ಬೀಜಾಂಕುರವಿರುವುದನ್ನೂ, ಲಿಂಕನ ಮತ್ತು ರೂಸೋ ಮೊದಲಾ ದವರ ಪ್ರಜಾಸತ್ತಾತ್ಮಕವಾದಿಗಳ ಸೂಕ್ಷ್ಮ ರೂಪವಿರುವುದನ್ನೂ ಧರ್ಮದ

ಮುಖವಾಡವು ವ್ಯಕ್ತಪಡಿಸುತ್ತದೆ. ಬಸವೇಶ್ವರರು ಐತಿಹಾಸಿಕ ಪುರುಷರು ಎಂಬುದನ್ನು ಮನಗಂಡರೆ ಇವರ ರಾಜಕಾರಣವು ಸ್ಪಷ್ಟವಾಗುತ್ತದೆ. ಬಸವೇಶ್ವರರು ಬದುಕಿದ್ದ ಸಮಯದಲ್ಲಿ ಇವರು ಮಹಾಪುರುಷರಾಗಲು ಬೇಕಾದ ಸನ್ನಿವೇಶಗಳು ಇದ್ದವು. ಶ್ರೇಷ್ಠ ಕುಲಜರಾದ ಬಸವೇಶ್ವರರು ವೇದಾಗಮಗಳ ಸಾರಸಂಪತ್ತನ್ನು ಗ್ರಹಿಸಿಕೊಂಡಿದ್ದುದೂ ಅಲ್ಲದೆ ರಾಜಕೀಯದಲ್ಲಿ ಸಚಿವ ಸ್ಥಾನವನ್ನು ಪಡೆದಿದ್ದರು. ವಿದ್ಯೆ, ಅಧಿಕಾರಗಳ ಜೊತೆಗೆ ಸಾಂಸ್ಕೃತಿಕ ಸಂಪತ್ತೂ ಇವರಲ್ಲಿ ತುಂಬಿದ್ದಿತು. ತತ್ಫಲವಾಗಿ ಇವರು ಅಂದಿನ ಸಾಮಾಜಿಕ ಕ್ಷೇತ್ರದ ಮೇಲೆ ತಮ್ಮ ವೈಯಕ್ತಿಕ ಪ್ರಭಾವವನ್ನು ಪರಿಣಾಮಕಾರಿಯಾಗಿ ಬೀರುವಸ್ಥಾನದಲ್ಲಿದ್ದರು.

ಬಸವೇಶ್ವರರ ಕಾಲದ ರಾಜಕೀಯ ಪರಿಸ್ಥಿತಿಯು ಇವರ ಧಾರ್ಮಿಕ ಕ್ರಾಂತಿಗೆ ನೆರವಾಯಿತು. ಬಹಳ ಹಿಂದೆಯೇ ಪ್ರಚಾರಕ್ಕೆ ಬಂದಿದ್ದ ಅದ್ವೈತವೂ, ಆಗ ತಾನೇ ಪ್ರಚಾರಕ್ಕೆ ಬಂದಿದ್ದ ವಿಶಿಷ್ಟಾದ್ವೈತವೂ ಜನರಿಗೆ ಹಿಡಿಸಲಿಲ್ಲ. ಜೈನ ಧರ್ಮವು ತೊಟ್ಟು ಕಳಚಿದ ಹಣ್ಣಿನಂತೆ ಕೆಳಗೆ ಬೀಳುತ್ತಿತ್ತು. ಉತ್ತರ ಭಾರತದಿಂದ ಬಂದ ಶೈವ ಧರ್ಮವೂ, ತಮಿಳುನಾಡಿನಿಂದ ಬಂದ ಶೈವ ಧರ್ಮವೂ ಕರ್ನಾಟಕಕ್ಕೆ ಪ್ರವೇಶಿಸಿ ಒಂದು ಶತಮಾನದ ಹಿಂದೆಯೇ ಪರಸ್ಪರ ಸೇರ್ಪಡೆಯಾಗಲು ಹವಣಿಸುತ್ತಿದ್ದವು. ತತ್ಫಲವಾಗಿ ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಗೊಂದಲುಗಳು ಗೊಂಚಲುಗಳಾಗಿ ಬೀಳುಬಿಟ್ಟವು. ಕುಂದು ಕೊರತೆಗಳೂ, ಲೋಪದೋಷಗಳಲ್ಲಿ ಸಮಾಜವನ್ನು ಪ್ರವೇಶಿಸಿ ಸ್ವಾತಂತ್ರ್ಯ ಚಲನೆಗೂ, ವೃದ್ಧಿವಿಕಾಸಕ್ಕೂ ಆತಂಕವನ್ನುಂಟುಮಾಡಿದ್ದವು. ಯೋಗ್ಯವಾದ ಹಾದಿಯಲ್ಲಿ ತಮ್ಮ ಅಭಿರುಚಿಯನ್ನು ಅನುಸರಿಸಿ ತಮ್ಮನ್ನು ನಡೆಯಿಸುವ ಮುಂದಾಳುಗಳನ್ನು ಜನತೆಯು ಕಾತರದಿಂದ ಕಾದಿದ್ದಿತು. ಮಂತ್ರಿಯಾಗಿದ್ದರೂ ಶಾಸ್ತ್ರಪಾರಂಗತರಾದ ಬಸವೇಶ್ವರರಿಗೆ ಆ ಯುಗದ ವಿದ್ಯಮಾನಗಳು ಮನಸ್ಸಿಗೆ ಹಿಡಿದವು. ಬಸವೇಶ್ವರರು ಅಂದಿನ ಸಮಾಜದ ಅಭಿರುಚಿಯನ್ನು ಅರಿತು ನೂತನ ಹಾದಿಯನ್ನು ಜನತೆಗೆ ತೋರಿಸಿದರು. ಆಧ್ಯಾತ್ಮಿಕ ಸಿದ್ಧಾಂತಿಯಾಗಿ ಧರ್ಮವನ್ನು ಹದಗೊಳಿಸಿ ಜನತೆಯನ್ನು ಧರ್ಮಜೀವಿಗಳಾಗಿ ಬಸವೇಶ್ವರರು ಮಾಡಿದರು. ಸ್ವಭಾವಜನ್ಯವಾದ ಸಂಸ್ಕೃತಿಯನ್ನು ಪುಟಕ್ಕಿಟ್ಟ ಚಿನ್ನದಂತಾಗಿ ಪ್ರಕಾಶಿಸಬೇಕಾದರೆ, ಅಂತಶ್ಶುದ್ಧಿಯು ಹೊರಹೊಮ್ಮಿ ಆತ್ಮತೇಜಸ್ಸು ಆವಿರ್ಭ

ವಿಸಬೇಕಾದರೆ ಹೊರಜಗತ್ತಿನಲ್ಲಿ ಅಂಕುರಿಸಬಹುದಾದ ಘಟನೆಗಳು ಬಹಳ ಮಟ್ಟಿಗೆ ಕಾರಣವಾಗಿರುತ್ತವೆ. ಆಗಾಗಿನ ರಾಜಕೀಯ ಪರಿವರ್ತನೆಗಳು ಸಮಾಜದ ಶಾಂತಿಗೆ ಎಡೆಯನ್ನು ನೀಡದೆನೆ ಇರಲಿಲ್ಲ.

ಬಸವೇಶ್ವರರು ಲಕ್ಷದಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ಆಸರೆಯನ್ನು ಕೊಟ್ಟಿದ್ದರು. ಈ ಜಂಗಮರು ಬರಿಯ ಹೊಟ್ಟೆಬಾಕರಾಗಿರ ಲಿಲ್ಲ, ಧರ್ಮಪ್ರಚಾರ ಮಾಡುವ ಪಾದ್ರಿ *Missionary* ಗಳಾಗಿದ್ದರು. ಭಕ್ತರಲ್ಲಿನ ಆಚಾರ ವಿಚಾರಗಳನ್ನು ಇವರು ಅರಿತುಕೊಂಡು ಬಂದು ಬಸವೇ ಶ್ವರರಿಗೆ ವರದಿ ಮಾಡುತ್ತಿದ್ದರು. ಕೆಲವರು ಚಿತ್ರಗುಪ್ತರು *Deteetives* ಇವರಲ್ಲಿ ಇದ್ದರು. ಇವರು ವೇಷವನ್ನು ಬದಲಾಯಿಸಿಕೊಂಡು ಯಾವುದಾ ದರೊಂದು ಗ್ರಾಮಕ್ಕೆ ಹೋಗಿ ಅಲ್ಲಿನ ಚಾವಡಿಯಲ್ಲಾಗಲೀ ದೇವಸ್ಥಾನದ ಲ್ಲಾಗಲೀ ಹಾದಿಹೋಕರಂತೆ ವಿರಮಿಸಿ ಸಾಮಾನ್ಯರ ಮೂಲಕೇಣವಾಗಿ ಯಾರ ಅನುಷ್ಠಾನವು ಎಂತಿರುವುವೆಂದು ಅರಿತುಕೊಂಡು ಅವನ್ನು ಅವ್ಯಕ್ತ ವಾಗಿ ಅವಲೋಕಿಸಿ ಬಂದು ಬಸವೇಶ್ವರರಿಗೆ ವರದಿ ಮಾಡುತ್ತಿದ್ದರು. ಅನಂತರ ಬಸವೇಶ್ವರರು ಬೋಧಕರನ್ನು ಅಲ್ಲಿಗೆ ಕಳುಹಿಸಿ ಜನರನ್ನು ತಿದ್ದಿಸಿ ಲಿಂಗ ವಂತರನ್ನಾಗಿ ಮಾಡುತ್ತಿದ್ದರು. ಆ ಜಂಗಮರು ಕೇವಲ ಭೋಧಾ ಗುರು ಗಳಾಗಿ ಇರುತ್ತಿದ್ದರೇ ಹೊರತು ಕಾಡುವ ಬೇಡುವ ಜಂಗಮರಾಗಿದ್ದಿರು ತ್ತಿರಲಿಲ್ಲ. ಕೆಟ್ಟಭಕ್ತರ ಅನಾಚಾರವನ್ನು ಅದುಮಲು ಹೊಡುವ ಸತ್ಯಾ ಗ್ರಹವೇ 'ಕಾಯಕ'ವಾಗಿ ಪರಿಣಮಿಸಿತು. ಬಸವೇಶ್ವರರ ರಾಜಕೀಯದಲ್ಲಿ ಜಂಗಮರಿಗೂ ಜಾಗವಿದ್ದಿತು.

ಲೌಕಿಕ ಪಾರಮಾರ್ಥಿಕ ಎರಡನ್ನೂ ಸಮರಸವಾಗಿ ಬಸವೇಶ್ವರರು ನಡೆಯಿಸಬೇಕಾಯಿತು. ಮಂತ್ರಿಪದವಿಯಲ್ಲಿಗೆ ಬಸವೇಶ್ವರರು ಹೋಗದೆ ಬಸವೇಶ್ವರರಲ್ಲಿಗೆ ಮಂತ್ರಿಪದವಿಯು ಬಂದಿತು. ಇಂದಿನ ರಾಜಕೀಯ ಪಟುವಿ ನಂತೆ ರಾಜಕೀಯ ತಂತ್ರವೆಂಬ ಅಶ್ವಾರೂಢರಾಗಿ ಸ್ವಾರ್ಥಸಾಧನೆಯ ಸಾರ ಥಿಯಾಗಿ ಕೋಮುವಾರ ಕೋತಿಯ ಕುಣಿತದಿಂದ ಜನತೆಯನ್ನು ಆಕರ್ಷಿಸಿ ಚುನಾವಣೆಗೆ ಬಸವೇಶ್ವರರು ನಿಲ್ಲಲಿಲ್ಲ. ಸತ್ಯಸಂಧತೆಯನ್ನೇ ವಾಹನವ ನ್ನಾಗಿ ಮಾಡಿಕೊಂಡು ನಿರಾಶೆ ನಿಷ್ಕಾಪಟ್ಯದ ಮೂಲಕ ನಿಂತಲ್ಲಿಯೇ ಅಡಳಿತ ಚತುರನಾಗಿ ಕಾರ್ಯಭಾರವನ್ನು ವಹಿಸಿದ ಕಾರಣವೇ ಬಸವೇಶ್ವರ ರಿದ್ದಲ್ಲಿಗೆ ತಾನೇತಾನಾಗಿ ಹುಡುಕಿಕೊಂಡು ಮಂತ್ರಿಪದವಿಯು ಬಂದಿತು.

ರಾಜ್ಯಗಳ ಉಳಿವು ಅಳಿವು ಧರ್ಮಾಧರ್ಮದಿಂದಲೇ ಎಂಬುದು ಬಸವೇಶ್ವರರಿಗೆ ಮನವರಿಕೆಯಾಯಿತು. ಹನ್ನೆರಡನೆ ಶತಮಾನದಲ್ಲಿ ಧಾರ್ಮಿಕ ಭಾವನೆಯು ಜನತೆಯಲ್ಲಿ ಝೇಂಕರಿಸಲು ಅನುವು ದೊರಕಿತ್ತು. ತತ್ಫಲವಾಗಿ ಜನತೆಯು ಧರ್ಮಕ್ಕಾಗಿ ಜೀವ ಬಲಿದಾನಕ್ಕೂ ಸಿದ್ಧವಾಗಿತ್ತು. ಈ ಬಗೆಯ ಪರ್ವಕಾಲದಲ್ಲಿ ಬಸವೇಶ್ವರರು ಧರ್ಮವನ್ನು ತ್ಯಜಿಸದೆ ರಾಜಕೀಯವನ್ನು ಬಿಡದೆ ಅಂದು ಸಮತಾವಾದ ಸಮಾಜ ರಚನೆಗೆ ಕೈಹಾಕಿದರು. ಇದಕಾಗಿ ಇವರು ಆರು ಅಂಶದ ಕಾರ್ಯಕ್ರಮಗಳನ್ನು ಕೈಗೊಂಡಿದ್ದರು. ಪ್ರಜೆಗಳು ಉದ್ಯೋಗ ತತ್ಪರರಾಗುವ ರೀತಿಯನ್ನು ಹದಗೊಳಿಸಿ, ಧನಿಕ ದರಿದ್ರರ ಅಂತರವನ್ನು ಅಳಿಸುವ ರಾಜ್ಯಾಡಳಿತವನ್ನು ವ್ಯವಸ್ಥೆಗೊಳಿಸಿ, ದೇಶೀಯ ಧೋರಣೆಯಲ್ಲಿ ಎತ್ತಿದ ಕೈ ಇವರು. ಅಂದಿನ ಜನಮನದ ಭಾಷೆ ಕನ್ನಡದಲ್ಲಿಯೇ ಪ್ರಚಾರ ನಡೆಯಿಸಿದರು. ಶಿಕ್ಷಣ ಪ್ರಸಾರ, ಮಹಿಳಾ ಪ್ರಗತಿ, ಅಸ್ಪೃಶ್ಯೋದ್ಧಾರ, ನಿರುದ್ಯೋಗ ನಿವಾರಣೆ, ಬೇಸಾಯೋನ್ನತಿ, ಆರ್ಥಿಕ ಸರ್ವಸಮಾನತೆ ಮುಂತಾದವುಗಳ ಮೂಲಕ ರಾಜ್ಯವ್ಯವಸ್ಥೆಯನ್ನು ಸುಬಂಧುರವಾಗಿ ಇವರು ಇರಿಸಿದರು. ನ್ಯಾಯಪರರೂ, ಧರ್ಮನಿರತರೂ, ಪರಸ್ಪರ ಸ್ನೇಹಮಯಿಗಳೂ, ಧರ್ಮಜೀವಿಗಳೂ, ಸುಖಿಗಳೂ ಆಗಿ ಪ್ರಜೆಗಳು ಬಾಳಬೇಕೆಂಬುದೇ ಇವರ ಹೆಬ್ಬಯಕೆಯು. ದೇವರು, ಗುರುಗಳು, ಹಿರಿಯರು, ವೃದ್ಧರು ಇವರಲ್ಲಿ ಜನರು ಭಕ್ತಿ ನಮ್ರತೆಯಿಂದ ನಡೆದುಕೊಳ್ಳಲು ತಾವೇ ಮೇಲ್ಪಂಕ್ತಿಯಾಗಿ ನಡೆದರು. ಅಧಿಕಾರಿಗಳನ್ನು ನಿಯಮಿಸುವಾಗ ಆಯಾಯ ಅಧಿಕಾರಿಗಳಿಗೆ ಅನುಗುಣವಾಗಿ ಬೇಕಾಗುವ ಬುದ್ಧಿಶಕ್ತಿಯಿರುವಂತಹವರನ್ನೇ ಆರಿಸುತ್ತಿದ್ದರು. ಉತ್ಪತ್ತಿಗಿಂತ ಖರ್ಚು ಯಾವಾಗಲೂ ಕಡಿಮೆಯಿರುವಂತೆ ಏರ್ಪಾಡು ಇತ್ತು. ಅವಶ್ಯಕವಾದ ದಾನಧರ್ಮಗಳಿಗೆ ಎಡೆಯಿತ್ತು. ರಾಜ್ಯದಲ್ಲಿ ಸರ್ವತೋಮುಖವಾಗಿ ಸೌಖ್ಯವು ನೆಲೆಗೊಳ್ಳುವಂತೆ ಮಾಡಿದರು. ಧರ್ಮಕ್ಕೆ ಅವಿರುದ್ಧವಾಗಿ ಅರ್ಥವನ್ನು ಗಳಸುವಂತೆಯೂ, ಧರ್ಮಕ್ಕಾಗಿ ಅರ್ಥವನ್ನು ಕೆಡಿಸಿಕೊಳ್ಳದಂತೆಯೂ ಧರ್ಮಾರ್ಥಗಳಿಗೆ ಅವಿರೋಧವಾಗಿ ಕಾಮವನ್ನು ರೂಪಿಸಿಕೊಳ್ಳುವಂತೆಯೂ ವ್ಯವಸ್ಥೆಯಿತ್ತು. ಸಕಲಪ್ರಜೆಗಳೂ ಧರ್ಮನಿಷ್ಠರಾಗಿ ಸತ್ಯಶೀಲರಾಗಿ ತಮ್ಮ ತಮ್ಮ ಕರ್ಮಗಳಲ್ಲಿ ಪ್ರವೃತ್ತರಾಗಿ ಅವರಿಂದಲೇ ತೃಪ್ತಿಪಡುತ್ತ ಸ್ನೇಹಮಯವಾದ ಜೀವನವನ್ನು ನಡೆಯಿಸುತ್ತಿದ್ದರು. ಅಂದು ಆರ್ಥಿಕ ಸಮಾನತೆಯನ್ನು ಕಲ್ಪಿಸಿಕೊಟ್ಟರು. ಯಾರೂ ಸಹ ಧನವನ್ನು ಸಂಗ್ರಹಿಸಿ ಇಡುವ ದಾಸೋಹ ಕಾರ್ಯವನ್ನು ನಡೆಯಿಸಲೇಬೇಕೆಂದು ನಿರ್ದೇಶಿಸಿದರು.

ತತ್ಫಲವಾಗಿ ಯಾರೂ ನಿಜಧನವನ್ನು ಕೂಡಿಸಿಟ್ಟು ಹಣಗಾರನಾಗಬೇಕೆಂಬ ದುರಾಶೆಗೆ ಒಳಪಡುವುದು ತಪ್ಪಿತು. ತಿರುಕರ ಮೂಲೋತ್ಪಾಟನೆಕ್ಕಾಗಿ ಬಂಕತಿರೆ ಕಾನೂನನ್ನೂ ಸ್ವಯಂ ಸೇವಾದಳದ ನಿರ್ಮಾಣಕ್ಕಾಗಿ ಬಿಟ್ಟಿತೊಟ್ಟಿಣ ಕಾಯಿದೆಯನ್ನೂ ಬಸವೇಶ್ವರರು ಜಾರಿಗೆ ತಂದರು. ಕವಣೆ ಎಂಬ ತೆರಿಗೆಯನ್ನು ವಿಧಿಸಿದ್ದರು. ದಾಸೋಹ ಭಾವನೆಯ ಕಲ್ಪನೆಯು ನಿರುದ್ಯೋಗ ನಿವಾರಣೆಯಾಗಿ ಪ್ರತಿಯೊಬ್ಬರೂ ತಮ್ಮ ತಮ್ಮ ಶಕ್ತಿಗನುಗುಣವಾಗಿ ಕಾಯಕವನ್ನು ಕೈಗೊಳ್ಳಬೇಕೆಂಬ ಇವರ ಯೋಜನೆಯು ರಾಷ್ಟ್ರದಲ್ಲಿ ಸುಭದ್ರ ಸರಕಾರ ಸ್ಥಾಪನೆಗೆ ಸಹಕಾರಿಯಾಯಿತು. ಮಾದಕ ದ್ರವ್ಯ ನಿರ್ಮೂಲಕ್ಕಾಗಿ ಉಂಡಿಗೆ ಎಂಬ ವಿಶೇಷ ಸುಂಕವನ್ನೂ, ಬೀಳು ಭೂಮಿಗಳನ್ನು ಹದಗೊಳಿಸಿ ಬೇಸಾಯ ಯೋಗ್ಯವಾಗಲು ದಂತ ಎಂಬ ತೆರಿಗೆಯನ್ನೂ ಜಾರಿಗೆ ತಂದಿದ್ದರು. ವನಮೃಗಗಳ ಉಪಟಳ ಪರಿಹಾರಕ್ಕೆ ಕಳವಲಿಕ್ಕೆ ಎಂಬ ಸುಂಕವನ್ನು ವಿಧಿಸಿದ್ದರು. ಸಕಲರೂ ಕಾಯಕ ಶೀಲರಾಗಿ ಧಾರ್ಮಿಕ ಹಾದಿಯಲ್ಲಿ ಸಾಗುತ್ತ ತೃಪ್ತ ಜೀವನವನ್ನು ನಡೆಯಿಸುತ್ತಿದ್ದರು. ಬಸವೇಶ್ವರರ ರಾಜಕೀಯವು ಮಾನವನನ್ನು ಮಹಾದೇವನನ್ನಾಗಿ ಮಾಡುವಂತಿತ್ತು.

---

# ಬಸವಣ್ಣನವರು
# ಭಾರತದ ಮಹಾಭಾಗ್ಯ ವಸ್ತು !

(ಹಿಂದಿನ ಸಂಚಿಕೆಯಿಂದ)

(ಲೇಖಕರು:— ಶ್ರೀ ಸ್ವಾಮಿ ದಯಾನಂದ ದೇವರು, ಬಿ. ಎ., ಯರನಾಳ.)



### ಕಿಂಕುರ್ವಾಣ ಭಾವ.

ಕಿರಿಯೆನ್ನುವದು ಜಗತ್ತಿನಲ್ಲಿ ಬಹು ಬಲಿಷ್ಠವಾದುದೆಂದು ಹೇಳುವರು. ಏಕಂದರೆ ಹುಲ್ಲುಕಡ್ಡಿ ತೀರ ಚಿಕ್ಕದಿದ್ದು ಎಲ್ಲರಿಗೂ ಬಾಗುತ್ತದೆ. ಅದೇ ಎತ್ತರವಾಗಿ, ಉಬ್ಬಿ ಬೆಳೆದ ಗಿಡಮರಗಳು ಯಾರಿಗೂ ಬಾಗಲಾರವು. ಆದರೆ ಅದೇ ಬಿರುಗಾಳಿಯು ಹೊಡೆತಕ್ಕೆ ಬೇರುಸಹಿತ ಕೀಳುವವು. ಆದರೆ ಹುಲ್ಲು ಕಡ್ಡಿ ಬೇರು ಕೀಳಲಾರದು. ಅದರಂತೆ ಈ ಜಾಗತಿಕ ವ್ಯವಹಾರದ ಕೊಚ್ಚಿಗೆ ಯಾವನು ವಿನಯಪೂರ್ಣನಾಗಿ, ಕಿರಿಯನಾಗಿ ಬಾಳುತ್ತಾನೆಯೋ ಆತನಿಗೆ ಅದು ಏನೂ ತೊಂದರೆಯೀಯದು. ಯಾವನು ಶ್ರೇಷ್ಠನೆಂದಿಸಿಕೊಳ್ಳುವನೋ ದುರ್ಮದದಿಂದ ಬದುಕುವನೋ ಆತನು ಈ ಸಂಸಾರದ ಹೊಡೆತದ ಬುಡ ಮೇಲಾಗಿ ಬೀಳುವನು. ಅದಕ್ಕಾಗಿ ಶರಣರು 'ಹಿರಿಯನಲ್ತು ಕಿರಿಯಾಗಿ ಬಾಳ್ವಿಂ' ಎಂದರು. ಅವರು ಕಿರಿಯತನದಲ್ಲಿ ಹೆಚ್ಚಿನ ಪಾತ್ರವನ್ನು ತೋರಿಸಿದ್ದಾರೆ. ಆ ಪಾತ್ರವನ್ನು ಮೀರಿ ಇನ್ನಾವ ಪಾತ್ರವೂ ಸಿದ್ಧವಾಗಿಲ್ಲ.

"ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ
ಎನ್ನ ಮನ ಸಾಕ್ಷಿ, ನಿಮ್ಮ ಪಾದಸಾಕ್ಷಿ ಎನಗಿದೆ
ದಿಬ್ಯ ಕೂಡಲಸಂಗಮದೇವಾ.

ಬಸವಣ್ಣನವರ ಮಾತಿದು ಅವರಿಗೆ ದಿವ್ಯವಾದ ಸ್ಥಾನ ಕಿರಿಯತನ. ಈ ಕಿರಿಯ ಸ್ಥಾನಕ್ಕೆ ಅವರ ಮನಸ್ಸು ಕೂಡಲ ಸಂಗಮನ ಪಾದವನ್ನು ಸಾಕ್ಷಿಯನ್ನಿತ್ತಿದ್ದಾರೆ. ಅವರಿಗಿಂತ ಕಿರಿಯರು ಯಾರಿಲ್ಲವೆಂದು ಹೇಳಿದ್ದಾರೆ. ಈ ಮಾತಿನಲ್ಲಿ ಅವರು ಎಷ್ಟು ವಿನಯವನ್ನು ತೋರಿಸುತ್ತಿದ್ದರೆಂಬುದಕ್ಕೆ

ಸಾಕ್ಷಿಯಾಗಿದೆ. ಈ ವಿನಯ ಭಾವವು ಈಗ ಅವಶ್ಯವಾಗಿದೆ. ಮಂತ್ರಿಸ್ಥಾನ ದಲ್ಲಿದ್ದವರು ಈಗಿದನ್ನು ಕಲಿಯಬೇಕಾದ ಮಾತು. ಬಸವಣ್ಣನವರು ಸ್ವಸಾಮರ್ಥ್ಯ, ಬುದ್ಧಿಯ ಬಲದಿಂದ ಚಾಲುಕ್ಯ ಸಿಂಹಾಸನದ ಮುಖ್ಯ ಪ್ರಧಾನ ಪದವಿಯನ್ನು ಪಡೆದರು. ಅದೂ ಪರಧರ್ಮದ ಆಡಳಿತದಲ್ಲಿ. ಆದರೆ ಅವರ 'ವಿನಯ' ಭಾವವು ಯಾರನ್ನು ತಾನೇ ನಡುಗಿಸಿಲ್ಲ? 'ಶರಣರಿಗೆ ಮರು ಹೊಕ್ಕನಲ್ಲದೆ ಮತ್ತಾವಂಗೆ' ಎನ್ನುವ ಅವರ ವಿಧಿಯು ಮತ್ತಿಷ್ಟು ಪುಟಿಯುವದು. ಬಾಗಿದ ಬೆನ್ನಿಗೆ ಚಪ್ಪರಿಸುವರೂ ಉಂಟು. ಅಲ್ಲದೆ ಬಾಗಿದ ಬೆನ್ನಿನ ಮೇಲೆ ಕುಳಿತು ಕುದುರೆಯಾಟ ಆಡುವರೂ ಉಂಟು. ಆದರೆ ಇಂದಿನ ಕಾಲದಲ್ಲಿ 'ಕುದುರೆಯಾಟ' ಆಡುವ ಜನ ಬಹಳವಿದೆ. ಅದು ಮರೆಯಬೇಕು. ಅಣ್ಣನೆಂದು ಹೇಳಿಕೊಳ್ಳುವವರು ತಮ್ಮನಾಗಿ ನಡೆಯಲೇಬೇಕು. ಜೀವನದ ಪರಾಮರ್ಶತೆಗೆ. 'ವಿನಯವು ಭೂಷಣದ ಪರುಷಮಣಿಯಾಗಿದೆ' ಈ ಜೀವನದಲ್ಲಿ ವಿನಯವು 'ಕೈಂಕರ್ಯ ಭಾವದಿಂದ ಅವರು ಶರಣರಾಗಬಲ್ಲರು. ಕಿಂಕುರ್ವಾಣ ಭಾವದಲ್ಲಿ ಇಲ್ಲದವನು. ಶರಣನಾಗಲಾರನೆಂದು ಪ್ರತಿಪಾದಿಸಿದರು. ಅದಕ್ಕಾಗಿ ಷಟ್‌ಸ್ಥಲಗಳಲ್ಲಿ 'ಭಕ್ತಸ್ಥಲ' ವೆಂದೂ ಮೊದಲಾಗಿ, ಪಂಚಾಚಾರಗಳಲ್ಲಿ ಭೃತ್ಯಾಚಾರವೆಂದೂ ಸೇರಿಸಿದರು. ಶರಣರಿಗೆ ಕಿಂಕುರ್ವಾಣ ಭಾವದಿಂದ ಬಗ್ಗಿದಷ್ಟು ಮತ್ತಾವುದರಿಂದ ಬಾಗುವದಿಲ್ಲವೆಂದು ಅನೇಕ ಕಥೆಗಳು ಸಾಕ್ಷಿಯಾಗಿವೆ. ಹೀಗೆ ಶರಣರಲ್ಲಿ ಕೈಂಕರ್ಯಭಾವ ಮನೆಯಾಗಿ ಪರಿಣಮಿಸಿದೆ. ಹೀಗಿರುವ ಶರಣರು 'ಗರ್ವಿಷ್ಠ'ರೆಂದು ಈ ಹಿಂದೆದೆಲ್ಲಿ ಪತ್ರಿಕೆಯು ಸಾರಿತ್ತು. ಅದಕ್ಕೆ ಶರಣರ ಕಿಂಕುರ್ವಾಣಭಾವದ ಉದಾಹರಣೆಗೆ ಏನುತ್ತರವೀಯುವದು ?

## ಅಂಜೆ! ಅಂಜುವೆ.

ಭಯ ಮತ್ತು ನಿರ್ಭಯ ಇವೆರಡೂ ಜಗತ್ತಿನಲ್ಲಿ ಹುಟ್ಟುಗುಣವಾಗಿ ಪರಿಣಮಿಸುವೆ. ಇವೇ ಸ್ಥಾನ ಪಲ್ಲಟವಾದಾಗ ಕಟುಕ ಮತ್ತು 'ಹೇಡಿ' ಎಂದಾಗುತ್ತವೆಂಬುದನ್ನೂ ಗಮನಿಸತಕ್ಕದ್ದು. ಅದಕ್ಕಾಗಿ ಶರಣರು ಈ ಸಮಸ್ಯೆಯನ್ನು ಬಗೆಹರಿಸಿದ್ದರೆ ಯಾವುದಕ್ಕಾಗಿ ನಾವು ಅಂಜಬೇಕು. ಯಾವುದಕ್ಕಾಗಿ ನಾವು ಅಂಜಬಾರದು ಎಂಬುದನ್ನು ಹೇಳಿ 'ಕಟುಕ ಪಕ್ಕ' ಸ್ಥಾನಗಳಿಗೆ ವಿರೋಧರಾಗಿದ್ದಾರೆ. ಆದಕ್ಕಾಗಿ ಅವರು ಯಾವುದಕ್ಕಾಗಿ ಅಂಜುತ್ತಾರೆ ಯಾವುದಕ್ಕಾಗಿ ಅಂಜುವದಿಲ್ಲ ನೋಡಿ !

ಹರಿವ ಹಾವಿಗಂಜೆ ಉರಿವ ನಾಲಿಗಗಂಜೆ
ಸುರಗಿಯ ಮೊನೆಗಂಜೆ ಒಂದಕ್ಕಂಜುವೆ ನೊಂದಕ್ಕಳುಕುವೆ
ಪರಸ್ತ್ರೀ ಪರಧನ ಭುಜಗಂಗಂಜುವೆ । ಮುನ್ನಂಜ-
ದ ರಾವಣನೇ ವಿಧಿಗೊಳಗಾದ ಅಂಜುವೆನಯ್ಯ ಕೂಡಲಸಂಗಮದೇವಾ.

ಬಸವಣ್ಣನವರು ಹೇಗೆ ಸಾರಿದ್ದಾರೆ ನೋಡಿ. ಅವರ ಅಂಜುಬುರಕು ನಮಗೆಲ್ಲ ಸೋಜಿಗದ ಮಾತೆ? ಹರಿದಾಡುವಂತಹ ಹಾವನ್ನು ಹಿಡಿದು ತೋರಿಸುವಂತಹ ಧೈರ್ಯವದೆಯಂತೆ. ಪರಸ್ತ್ರೀಯರ ಮುಖದ ನೆಲಳು ಕೂಡ ನೋಡಲು ಅಂಜಿಕೆ ಬರುವಂತೆ ಶೂಲಕ್ಕೇರುವದಕ್ಕೆ ಅಂಜಲಾರರು ಆದರೆ ಎರಡನೆಯವರ ಹಣದ ನೆನಪು ಕೂಡಾ ಬೇಡವಂತೆ! ನೋಡಿ ಈ ಭಾವ ಪಾತ್ರವನ್ನು ಮರುಗಿಸಲೇ ಬೇಕು. ಇದನ್ನೇ ತಿಳಿಯಬೇಕೆನ್ನುತ್ತಾರೆ ಶರಣರು. ಜಗತ್ತಿನಲ್ಲಿ ಪ್ರತಿಯೊಂದು ವಸ್ತುವಿದೆ. ಅದರ ಪೂರ್ವಾಪರ ವಿಚಾರವನ್ನು ಅರುಗಿಸಿಕೊಂಡು, ಸಿಹಿ ಕಹಿ, ಫಲಾಫಲಗಳನ್ನು ಪ್ರತ್ಯಕ್ಷಿಸಿಕೊಂಡು ಅದರ ಉಪಯೋಗಮಾಡಿಕೊಳ್ಳಬೇಕೆನ್ನುತ್ತಾರೆ. ಪ್ರತಿಯೊಂದು ವಸ್ತು ಜಗತ್ತಿನಲ್ಲಿ ತನ್ನ ಉಪಯೋಗವನ್ನು ನಿರ್ದೇಶಿಸುತ್ತದೆ. ಹೆಣ್ಣು ಮಣ್ಣು ಹೊನ್ನುಗಳು ಜಗತ್ತಿನಲ್ಲಿ ಅವೇ ಆಧಾರವಾಗಿವೆ. ಹೆಣ್ಣಿಲ್ಲದೆ ಹುಟ್ಟಿಲ್ಲ, ಮಣ್ಣಿಲ್ಲದೆ ಮನೆಯಿಲ್ಲ, ಹೊನ್ನಿಲ್ಲದೆ ಉಣ್ಣಲು ಇಲ್ಲ. ಮಾನವನು ತಾಯಿಯಿಂದ ಜನಿಸಬೇಕಾಗುತ್ತದೆ. ಮಣ್ಣಿನ ಭೂಮಿಯ ಮೇಲೆ ಮನೆಕಟ್ಟಬೇಕಾಗುತ್ತದೆ. ಭೂಮಿಯಿಂದ ಹೊರಟ (ಹೊನ್ನಿನಿಂದ ದೊರಕಿದ) ಪದಾರ್ಥಗಳಿಂದ ತನ್ನ ಜೀವನ ಸಾಗಿಸಬೇಕಾಗುತ್ತದೆ. ಹೀಗೆ ಮಾನವ ಮತ್ತು ಮಾನವೇತರ ಪ್ರಾಣಿಗಳ ಹುಟ್ಟಿನಿಂದ ಸಾವಿನ ವರೆಗೆ ಈ ಮೂರು ವಸ್ತುಗಳನ್ನು ಅವಲಂಬಿಸಬೇಕಾಗುತ್ತದೆ. ಅದಕ್ಕಾಗಿ ಅರವಿಂದರು ಕೂಡ "ಸಂಪತ್ತು ಪಾಪಗಳ ಮೂಲವೆಂದು ಹಲವರು ವಾದಿಸಬಹುದು. ಆದರೆ ಜಗತ್ತಿನಲ್ಲಿ ಶಕ್ತಿಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಸುಡುವದೆಂದು ಬೆಂಕಿಯನ್ನು, ಮುಳುಗಿಸುವದೆಂದು ನೀರನ್ನು, ತ್ಯಜಿಸುವ ವಿಚಾರವನ್ನು ಯಾರೂ ಮಾಡುವದಿಲ್ಲ. ಯಾವದೇ ಶಕ್ತಿಯ ಗುಣವನ್ನು ನಾವು ಅದನ್ನು ಬಳಸುವ ಉದ್ದೇಶವೇ ನಿರ್ಧರಿಸುತ್ತೇವೆ" ಎಂದಿದ್ದಾರೆ. ಹೀಗೆ ಜಗತ್ತಿನಲ್ಲಿ ಪರಸ್ತ್ರೀಯರನ್ನು ಮಹಾದೇವಿಯೆಂದರೆ ತಪ್ಪೇನಿಲ್ಲ. ಅದೇ ರೀತಿಯಾಗಿ ಬೆಳೆವ ಭೂಮಿ ತನ್ನದಲ್ಲ. ಈಶನದು ಎಂಬ ಭಾವನಿಟ್ಟು ನಡೆದರೆ ಯಾವ ದೋಷ ತಗಲವದು. ಅದೇ

ಸ್ಥಿತಿಯೇ ಬೇರೆಯಾಗಕೂಡದು. ಪರಸ್ತ್ರೀಯರನ್ನು ಕಾಮವಾಸನೆಗೆ ಹೋಲಿಸಿದರೆ ಅಲ್ಲಿ ನಿರ್ಧಾರ ತಪ್ಪಿ ದೋಷಪೂರಿತನಾಗಿ ಕಟುಕನಾಗುವನು. ಹೀಗೆ ವಸ್ತುವಿನ ಆಶೆ ತೋಷಗಳ ನಿರ್ಧಾರದಲ್ಲಿ ಅವನು ದೋಷದಿಂದ ಪೂರಿತನಾಗುವನು. ಇದರಿಂದ ಆತನ ಜೀವನದ ದಾರ್ಢ್ಯವು ಅಳಿಯುವದಿಲ್ಲ. ಅಂತೆಯೆ ಅವರು ಉಪಯೋಗಿಸುವಲ್ಲಿ ಜಾಣತನ ಉಪಯೋಗಿಸಬೇಕೆಂದು ಹೇಳಿದ್ದಾರೆ. ಇದರಂತೆ ಶರಣರು ಅಸತ್ಯ ಅನ್ಯಾಯಕ್ಕೆ ಹೆದರುವದಿಲ್ಲ. ಅವರು ನ್ಯಾಯ, ಸತ್ಯ, ಧರ್ಮಕ್ಕೆ ಯಾವಾಗಲೂ ಬೆನ್ನು ಕೊಟ್ಟವರು. ಅವುಗಳ ರಕ್ಷಣೆಗೆ ತಮ್ಮ ಪ್ರಾಣವನ್ನಾದರೂ ತೆತ್ತುವರು. ಈ ಪ್ರಕಾರ, ಸತ್ಯ, ಶಾಂತಿ, ಅಹಿಂಸೆ ಸಮೇತವಾದ ಧರ್ಮದ ರಕ್ಷಣೆಗಾಗಿ 'ಗಣಾಚಾರ' ವೃತ್ತಿಯನ್ನೇ ಮಾಡಿದರು. ಅವರು ಶರಣರ, ಧರ್ಮಿಗಳ ರಕ್ಷಣೆಯಲ್ಲಿ ಅವರು ತೋರುವ ತ್ಯಾಗಮಯ, ಅಪ್ರೇಮಶಕ್ತಿ ಅಗಾಧವಾದುದು! ಅವರು ನ್ಯಾಯ ತೋರುವಲ್ಲಿ ಹೀಗೆ ನಿರರ್ಗಳ ಪಾತ್ರಧಾರಿಗಳಾಗಿದ್ದಾರೆ ನೋಡಿ!

(ಮುಂದುವರೆಯುವದು.)

# ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ.

(ಬರೆದವರು;— ಶ್ರೀ ಶಿವಾನಂದಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ—ತಾ. ಇಂಡಿ)

## ೧. ವೀರಶೈವ ಧರ್ಮದ ಸನಾತನತ್ವ.

ಭಾರತದಲ್ಲಿ ದ್ರಾವಿಡ ಸಂಸ್ಕೃತಿಯು ಒಳ್ಳೇ ಪುರಾತನದ್ದೂ ಒಳ್ಳೇ ಶ್ರೇಷ್ಠವಾಡದ್ದೂ ಅಲ್ಲದೆ ಒಳ್ಳೇ ಪರಿಪೂರ್ಣವಾದದ್ದೂ ಇತ್ತೆಂದು ಅನೇಕ ವಿದ್ವಾಂಸರು ಈಗ ಕಂಡುಹಿಡಿದಿದ್ದಾರೆ. ಈ ದ್ರಾವಿಡರಿಗೆ ಶಿವಶಕ್ತಿಯರೇ ಅಧಿದೇವತೆಗಳಾಗಿದ್ದರು. ಈ ಶಿವ-ಶಕ್ತಿಯರ ಗುರುತಾದ ಲಿಂಗವನ್ನೇ ಅವರು ಪೂಜಿಸುತ್ತಿದ್ದರು. ಇವರಲ್ಲಿ ಶಾಖಾಹಾರಿ ಮಾಂಸಾಹಾರಿಗಳೆಂದು ಎರಡೇ ಜಾತಿಗಳಿದ್ದವು. ಮಾಂಸಾಹಾರಿಗಳು ಈ ಶಕ್ತಿಯನ್ನು ದುರ್ಗಿ, ಚಂಡಿ, ಕಾಳಿ, ಲಕ್ಷ್ಮಿ ಎಂದು ಪೂಜಿಸಿ ಕುರಿ. ಕೋಣ, ಕೋಳಿಗಳನ್ನು ಬಲಿ ಕೊಡುತ್ತಿದ್ದರು. ಆದರೆ ಉಳಿವಕಾಲದಲ್ಲಿ ಲಿಂಗವನ್ನು ಪೂಜಿಸುತ್ತಿದ್ದರು. ಇವರಲ್ಲಿ ವೇದದಂತೆ ಜಾತಿಗಳಾಗಲಿ ಯಜ್ಞ ಯಾಗ ಹೋಮ ಹವನಗಳಾಗಲಿ ಇರಲಿಲ್ಲ. ಇವರು ಸ್ಥಾವರಲಿಂಗಗಳನ್ನೇ ಹೆಚ್ಚಾಗಿ ಪೂಜಿಸುತ್ತಿದ್ದರು. ಅಲ್ಲದೆ ಇಷ್ಟಲಿಂಗ ಧರಿಸಿದ ಜಾತಿಯೂ ಕೂಡ ಆಗ ಉಳಿದ ಯಾವ ದೇವರ ಹೆಸರುಗಳೂ ಕೂಡ ಗೊತ್ತಿರಲಿಲ್ಲಿ. ಇಡೀ ಭಾರತದಲ್ಲಿ ಲಿಂಗ ಪೂಜೆ ನಡೆಯುತ್ತಿತ್ತು. ೧೨ ಜ್ಯೋತಿರ್ಲಿಂಗಗಳೂ ಕೂಡ ಪ್ರಸಿದ್ಧ ಇರುವವು. ಅಲ್ಲದೇ ಎಲ್ಲಕಡೆಗೆ ಅನೇಕಾನೇಕ ಶಿವಾಲಯುಗಳಿರುವವು. ಹರಪ್ಪಾ ಮಹೊಂಜದಾರ್ (ಸಿಂಧೂನದಿ ಕೊಳ್ಳ) ಚಂದ್ರವಳ್ಳಿ (ಚಿತ್ರದುರ್ಗದ ನೆರೆಯಲ್ಲಿ) ಮೊವಲಾದ ಕಡೆಗಳಲ್ಲಿ ಭೂಗರ್ಭದೊಳಗೆ ೫೦೦೦ ವರ್ಷಗಳ ಹಿಂಡಿನ ಅವಶೇಷಗಳು ಅನೇಕ ದೊರೆತಿರುವವು. ಇವೆಲ್ಲ ದ್ರಾವಿಡ ಸಂಸ್ಕೃತಿಗೆ ಸಂಬಂಧಿಸಿರುವವು. ಲಿಂಗ ನಂದಿ ಮೊದಲಾದ ಮೂರ್ತಿಗಳು ದೊರೆತಿವೆ. ಅಲ್ಲದೆ ಕಂಥೆ ಕೂಡ್ರಿಸಿದ ಇಷ್ಟಲಿಂಗಗಳೂ ಕೂಡ ದೊರೆತಿವೆ. ಇದರ ಮೇಲಿಂದ ವೀರಶೈವ ಧರ್ಮವು ವೇದ ಪೂರ್ವದ್ದೆಂದು ಹೇಳಬಹುದು. ಜಗತ್ತಿನಲ್ಲಿ ಕೊರಳೊಳಗೆ ಲಿಂಗವನ್ನು ಕಟ್ಟಿಕೊಳ್ಳುವ ಧರ್ಮ, ಈ ವೀರಶೈವರ ಹೊರತು ಬೇರಾವುದೂ ಇಲ್ಲವೇ ಇಲ್ಲ. ವೀರಶೈವರು ದ್ರಾವಿಡ ಸಂಸ್ಕೃತಿಯವರೇ ಆಗಿದ್ದಾರೆ.

ವೀರಶೈವಕ್ಕೆ ಆಗಮಗಳೇ ಮೂಲ ಗ್ರಂಥಗಳು. ಇವು ವೇದಕ್ಕಿಂತಲೂ ಮೊದಲಿನವಾಗಿವೆ. ಯಾಕಂದರೆ ವೇದಗಳಲ್ಲಿ ಆಗಮಗಳ ಖಂಡನೆ ಇರುವದು. ಅದಕ್ಕೆ ಅನಾದಿ ವೀರಶೈವವೆನ್ನುವರು. ಈಗಿನ ವೇದಗಳಲ್ಲಿ ಹೇಳಲಾದ ಸಾಂಖ್ಯಯೋಗ, ದರ್ಶನಗಳು ಆಗಮದೊಳಗಿಂದ ಎತ್ತಿ ಬರೆಯಲಾಗಿದೆ ಎಂದು ಹೇಳುವರು.

ಶೈವವು ಭಾರತದಲ್ಲಿ ಮೊದಲು ಅವತರಿಸಿತು. ಇವರಲ್ಲಿ ಕಾಳಾಮುಖಿ ಪಾಶುಪತಿ ಲಕುಲಿ ಮೊದಲಾದ ಭೇದಗಳುಂಟು. ಇವರಲ್ಲಿ ಪಾಶುಪತಿಗಳೇ ರೂಪಾಂತರ ಹೊಂದಿ ವೀರಶೈವವಾಗಿದೆ ಎಂದು ಹೇಳಬಹುದು. ಪಾಶುಪತಿಯನ್ನು ಅವರು ಪೂಜಿಸುತ್ತಿದ್ದರು. ಶಿವ–ನಂದಿಗಳು ಇವರಿಂದ ಬಂದವು. ಶೈವವೆಂದರೆ ಶಿವಪೂಜೆ, ಭಸ್ಮ ರುದ್ರಾಕ್ಷಿ ಧಾರಣೆ, ಪಂಚಾಕ್ಷರಿ ಜಪ, ಶಿವ ಪಾದೋದಕ ಪ್ರಸಾದಸೇವನೆ ಶಿವಸ್ಥಾವರಾರ್ಚನೆ, ಶಿವೇತರ ದೇವತಾ ಪರಿತ್ಯಾಗ, ಶಿವಕ್ಷೇತ್ರಗಮನಗಳಿರುವವು. ಇನ್ನು ವೀರಶೈವರೆಂದರೆ—ವರ್ಣಾದ್ವ, ಪಾದಾಧ್ವ, ಭುವನಾದ್ವ, ಮಂತ್ರಾದ್ವ, ಕಲಾದ್ವ, ತತ್ವಾದ್ವಗಳಿಂದ ಪರಿಶುದ್ಧವಾಗಿ ಅಷ್ಟಾವರಣದ ಪ್ರಕಾರವಾಗಿ ನಡೆದು ಪಂಚಾಚಾರಗಳನ್ನು ಪಾಲಿಸಿ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಷಟ್‌ಸ್ಥಲಗಳಂತೆ ನಡೆದು ಅಂಗದ ಮೇಲೆ ಲಿಂಗ ಧರಿಸಿ ಇರುವವನೇ ವೀರಶೈವನೆಂದು ಸಾಮಾನ್ಯವಾಗಿ ಹೇಳಬಹುದು. ಈ ವೀರಶೈವ ಸಿದ್ಧಾಂತದಲ್ಲಿ ಕೆಲವು ಪಾರಿಭಾಷಿಕ ಪದಗಳಿರುವವು. ಆ ಪದಗಳು ವೇದಗಳಲ್ಲಿಯೂ ಕೂಡ ಬಂದಿರುವವು. ಅವು ಯಾವವೆಂದರೆ— ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಲಿಂಗಸ್ಥಲ, ಜಂಗಮ, ಲಿಂಗಿನ್, ಪ್ರಾಣಲಿಂಗಿನ್, ಲಿಂಗಾಂಗೀ, ಲಿಂಗೈಕ್ಯ ವೀರಶೈವ, ವೀರಮಾಹೇಶ್ವರ, ಲಿಂಗಧಾರಣ, ದೇಶಿಕ– ಶಿವಲಿಂಗಧ್ಧವ, ಅತ್ಯಾಶ್ರಯೀ, ಶಿವಯೋಗೀ, ಪರಮಶೈವ, ಶಿವಾನುಭವಿ, ಮಹಾವಶುಪತ, ಶಿವಸಂಗ ಇತ್ಯಾದಿ ಇನ್ನೂ ಅಸಂಖ್ಯ ಪದಗಳು ವೈದಿಕ ಗ್ರಂಥಗಳಲ್ಲಿ ಇರುವವು. ಉಪನಿಷತ್ತು, ಸ್ಮೃತಿ, ಪುರಾಣ, ಶಾಂಕರಸಂಹಿತಾ ಮೊದಲಾದವುಗಳಲ್ಲಿ ಇಂಥ ಪದಗಳು ಬಂದಿರುವದರಿಂದ ವೀರಶೈವವು ವೇದಗಳಿಗಿಂತಲೂ ಪೂರ್ವದಲ್ಲಿಯೇ ಇತ್ತೆಂದು ಧಾರಳವಾಗಿ ಹೇಳಬಹುದು. ಸ್ಮೃತಿಗಳಲ್ಲಿ ಲಿಂಗಧಾರಣ ವಿಚಾರವನ್ನು ಹೇಳಿದ್ದಾರೆ.

ವೀರಶೈವರು ಶೈವಸಿದ್ಧಾಂತದ ಭಾಷ್ಯಕಾರರಾದ ಶ್ರೀಕಂಠರನ್ನು ಗೌರವಿಸುತ್ತಾರೆ. ಇವರು ಶಂಕರಾಚಾರ್ಯರ ಸಮಕಾಲೀನರು. ನೀಲಕಂಠರು

ದೇರಶೈವ ಮತಕ್ಕೆ ಶಕ್ತಿವಿಶಿಷ್ಟಾದ್ವೈತ ಎಂದು ಕರೆದು ನೀಲಕಂಠ ಭಾಷ್ಯ ವನ್ನು ರಚಿಸಿದ್ದಾರೆ. ಇವನೂ ಆಗಿನಕಾಲದವನೇ ಸರಿ. ಇದರಿಂದ ವೀರ ಶೈವವು ಪ್ರಾಚೀನಕಾಲದ್ದೇ ಹೊರತು ಈಚಿಗಿನದಲ್ಲಿಯದೆಂದು ಧಾರಳವಾಗಿ ಹೇಳಬಹದು.

ಭಾರತದ ವಾಯುವ್ಯ ದಿಕ್ಕಿನಿಂದ ಆರ್ಯರೆಂಬ ಜನಾಂಗವು ಭಾರತದಲ್ಲಿ ಬಂದು ದ್ರಾವಿಡರನ್ನು ಗೆದ್ದು, ತಮ್ಮ ಸಂಸ್ಕೃತಿಯನ್ನು ಬೆಳಿಸಹತ್ತಿದರು. ಅನೇಕರು ಅವರಿಗೆ ಶರಣು ಹೋದರು ಆದರೆ ವೀರಶೈವರು ಮಾತ್ರ ತಮ್ಮ ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದರು. ಇವರ ಜನಸಂಖ್ಯೆಯು ಮಾತ್ರ ಬಹಳ ಕಡಿಮೆಯಾಯಿತು. ಇವರು ಮೊದಲಿನಿಂದಲೂ ಆರ್ಯರ ಸಂಸ್ಕೃ ತಿಗಳಾದ ಯಜ್ಞ, ಯಾಗ, ಹೋಮ, ಹಸುವ, ವರ್ಣ, ಜಾತಿಗಳ ಕೂಡ ಹೋರಾಡಿ ಜೀವನಸಾಗಿಸುತ್ತಿದ್ದರು. ಆ ಯುದ್ಧವು ೧೨ ನೇ ಶತಮಾನದಲ್ಲಿ ಬಸವಾದಿ ಪ್ರಮಥರು ವಿಶಾಲವಾಗಿ ವ್ಯಾಪಕವಾಗಿ ನಡಿಸಿ ಬಹಳೇ ಜಯ ಶೀಲರಾದರು. ಈ ಆರ್ಯರ ಮಹಾಪುರುಷನಾದ ಅಗಸ್ತ್ಯ ಋಷಿಯು ದಕ್ಷಿಣ ಭಾರತಕ್ಕೆ ಮೊದಲು ಬಂದವನು. ನಾಶಿಕ, ವಾತಾಪಿಪುರ (ಬಾದಾಮಿ) ಐಹೊಳೆ, ಬಾಳೆಹೊನ್ನೂರ (ರಂಭಾಪುರಿ) ಇವುಗಳ ಮೇಲಿಂದ ತಮಿಳ ನಾಡಿಗೆ ಹೋಗಿ ಮುಂದೆ ಜಾವಾದ ಕಡೆಗೆ ಹೋಗಿದ್ದನು. ಜಾವಾದಲ್ಲಿ ಇವನ ಮೂರ್ತಿ ಇರುವದು. ಕ್ರಿ. ಪೂ. ೭೬೦ ರಲ್ಲಿ ಶಿಲಾಶಾಸನ ಬರೆದಿ ದಾರೆ. ಈ ಅಗಸ್ತ್ಯ ಋಷಿಯು ಈಗ ೨೮೦೦ ವರ್ಷಗಳ ಹಿಂದೆ ದಕ್ಷಿಣ ಭಾರತಕ್ಕೆ ಬಂದಿಪ್ಪನೆಂದು ಗೊತ್ತಾಗುವದು ಆಗ ಈತನು ಶ್ರೀ ರೇಣುಕಾ ಚಾರ್ಯರಿಂದ ವೀರಶೈವ ದೀಕ್ಷೆಯನ್ನು ಹೊಂದಿದನೆಂದು ಉಲ್ಲೇಖವಿರು ವದು. ಈ ಋಷಿಯು ವಾತಾಪಿಪುರದಲ್ಲಿ ವಾತಾಪಿರಾಕ್ಷಸನನ್ನೂ ಐಹೊಳೆ ಯಲ್ಲಿ ಇಲ್ವಲನೆಂಬ ರಾಕ್ಷಸನನ್ನು ಕೊಂದನೆಂದು ಇತಿಹಾಸವು ಹೇಳುವದು. ಬಾಳೆಹೊನ್ನೂರಲ್ಲಿ (ಮೈಸೂರ) ರೇಣುಕ ಅಗಸ್ತ್ಯರ ಆಶ್ರಮಗಳು ಈಗಲೂ ಇರುವವು. ನೀಲಗಿರಿಯ ಒಂದು ಶಿಖರಕ್ಕೆ **ಅಗಸ್ತ್ಯಮಲಾಯಿ** ಎಂದು ಹೆಸರಿರುವದು. ಅಂದರೆ ಅಗಸ್ತ್ಯನಕಿಂತ ಮೊದಲೇ ವೀರಶೈವವು ಇತ್ತೆಂದು ಧಾರಾಳವಾಗಿ ಹೇಳಬಹುದು.

ಹನುಮಂತ ದೇವರು ವೀರಭದ್ರನಿಂದ ಇಷ್ಟಲಿಂಗವನ್ನು ಪಡೆದನೆಂದು ಪುರಾಣಗಳಲ್ಲಿ ಇದೆ. ಶಿವನ ಆತ್ಮ ಲಿಂಗದ ಕುರುಹಾದ ಇಷ್ಟಲಿಂಗವನ್ನು

ರಾವಣನು ತಕ್ಕೊಂಡು ಹೋಗುವಾಗ ಗೋಕರ್ಣದಲ್ಲಿ ಉಳಿಯಿತೆಂಬ ಕಥೆಯನ್ನು ಸಕಲರೂ ಅರಿತ ವಿಷಯವಾಗಿದೆ.

ಪಾಂಡವರ ಅಶ್ವಮೇಧ ಯಜ್ಞಕ್ಕೆ ಬಂದವರಲ್ಲಿ ಎಷ್ಟೋ ಜನರು ಲಿಂಗಧಾರಿಗಳಿದ್ದರೆಂದು ಮಹಾಭಾರತದಲ್ಲಿ ಹೇಳಿದೆ.

ಕ್ರಿ. ಶ. ೧ನೇ ಶತಮಾನದಿಂದ ಇತ್ತೀಚಿಗೆ ಪ್ರಸಿದ್ಧರಾದ ೬೩ ಜನ ಪುರಾತನರು ಪ್ರಸಿದ್ಧರಾಗಿದ್ದಾರೆ. ಅವರಲ್ಲಿ ಕೆಲವರು ವೀರಶೈವರೂ ಕೂಡ ಇದ್ದರು. ಬಸವನಕಿಂತ ನಿಜಗುಣಶಿವಯೋಗಿಗಳು ಮೊದಲಿನವರೆಂದು ಅವರ ಗ್ರಂಥಗಳ ಮೇಲಿಂದ ಕಂಡುಬರುವದು. ಇವರಿಬ್ಬರು ೬೩ ಜನರಿಗೆ ಆದ್ಯರು ಪುರಾಯಿತರು ಎಂದು ಹೇಳಿದ್ದರಿಂದ ಅವರೆಲ್ಲರೂ ಹಿಂದಿನಿಂದ ವೀರಶೈವ ದೀಕ್ಷೆ ಪಡೆದಿರಬೇಕೆಂದು ಹೇಳಲಡ್ಡಿ ಇಲ್ಲ.

ಕ್ರಿ. ಶ. ೬ನೇ ಶತಮಾನದ ಕಾಂಚಿಯ ಪಲ್ಲವ ಅರಸರು ಲಿಂಗಧಾರಿಗಳಾಗಿದ್ದರೆಂದು ತಿಳಿದುಬಂದಿದೆ. ಆ ಕಾಲಕ್ಕೆ ಸಾಲುವಕುಪ್ಪ, ಮಾಮಲ್ಲಪುರ, ತ್ರಿಚಿನಾಪಲ್ಲಿ, ಕಾಂಚಿ, ವಾಯಿಲೂರುಗಳಲ್ಲಿಯೂ ಶಿಲಾಶಾಸನಗಳಿಂದ ಆಗ ವೀರಶೈವರು ಪ್ರಬಲರಿದ್ದರೆಂದು ಹೇಳಲಿಕ್ಕೆ ಅಭ್ಯಂತರವಿಲ್ಲ.

ಬಸವನಗಿಂತ ಮೊದಲಿಗನಾದ ರೇವಣಸಿದ್ಧನು ವೀರಶೈವವನ್ನು ಪ್ರಸಾರ ಮಾಡಿದ ಸಂಗತಿಯಂತೂ ಪ್ರಸಿದ್ಧವದೆ.

ರಸೇಶ್ವರಲಿಂಗವೆಂದು ಪಾರಜವನ್ನು ಗಟ್ಟಿಗೊಳಿಸಿ ಲಿಂಗದಂತೆ ಮಾಡಿ ಬಹು ಪುರಾತನ ಕಾಲದಲ್ಲಿ ಧರಿಸಿ ಪೂಜಿಸುತ್ತಿದ್ದರೆಂದು ಆಧಾರಗಳುಂಟು. ಅದರಿಂದ ಅಸಾಧ್ಯ ರೋಗರುಜೆಗಳು ಹೋಗಿ ಸುಖಶಾಂತಿಗಳು ಲಭಿಸುತ್ತಿದ್ದವೆಂದು ಹೇಳಲಾಗಿದೆ. ಇದೂ ಕೂಡ ವೇದಗಳಿಗಿಂತ ಪೂರ್ವದಲ್ಲಿ ಇತ್ತು.

ಅಲ್ಲಮಪ್ರಭುವಿಗೆ ಅನಿಮಿಷಯ್ಯನು ಗುರುವಾಗಿ ಲಿಂಗೋಪದೇಶ ಮಾಡಿದ್ದರಿಂದ ಅವನು ವೀರಶೈವನು. ಇದರಿಂದ ವೀರಶೈವವು ಬಸವನಿಗಿಂತ ಮೊದಲೆಂದು ಹೇಳಬಹುದು.

ದೇವರದಾಸಿಮಯ್ಯನು ಚಂದ್ರಗುಂಡ ದೇಶಿಕೇಂದ್ರರಿಂದ ಲಿಂಗಪಡಕೊಂಡು ವೀರಶೈವನಾದನು. ಅದಕ್ಕೆ-ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ ಆತನ (ಶಿಷ್ಯನ) ಸರ್ವಾಂಗವೆಲ್ಲ ಲಿಂಗಕಾಣಾ ರಾಮನಾಥಾ'' ಎಂದು ಹಾಡಿದ್ದಾನೆ. ಇದರಿಂದಲೂ ಬಸವನಿಗಿಂತ ವೀರಶೈವವು ಮೊದಲಿನದೆಂದೇ ಸಿದ್ಧವಾಗುವದು.

ವೀರಶೈವವು ಹೊಸದಾಗಿ ಸ್ಥಾಪಿತವಾದ ಬೌದ್ಧ ಧರ್ಮದ ಗಾಳಿಗೆ ತುತ್ತಾದಾಗ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ಬರೆದಿರುವರೆಂದು ಹೇಳಬಹುದು.ಯಾಕಂದರೆ ಸಿದ್ಧಾಂತ ಶಿಖಾಮಣಿಯ ೧ ನೇ ಪರಿಚ್ಛೇದದಲ್ಲಿ ೨೩ ನೇ ಶ್ಲೋಕದಲ್ಲಿ ಬೌದ್ಧ ಮೊದಲಾದ ಧರ್ಮಗಳ ಪ್ರತಿಕೂಲ ಸಿದ್ಧಾಂತಗಳೆಂಬ ಮಹಾ ಅಂಧಕಾರಕ್ಕೆ ಸೂರ್ಯನಂತಿರುವ ಯಾವ ಆಚಾರ್ಯನಿಂದ ಸನಾತನವಾದ ಶಿವಭಕ್ತಿಯು ರಕ್ಷಿಸಲ್ಪಟ್ಟಿತು. ಅಂಥ ಈ ಶಾಸ್ತ್ರವನ್ನು ಎಂದು ಹೇಳಿದ್ದರಿಂದ ೨೫೦೦ ವರ್ಷಗಳ ಹಿಂದೆ ಬೌದ್ಧರ ಪ್ರಾಬಲ್ಯದ ಕಾಲದಲ್ಲಿ ಈ ಶಿದ್ಧಾಂತ ಸಿಖಾಮಣಿ ಗ್ರಥವನ್ನು ರಚಿಸಿದರೆಂದು ಹೇಳಲಡ್ಡಿ ಇಲ್ಲ. ಇದರ ಮೇಲಿಂದ ವೀರಶೈವವು ಬೌದ್ಧರಿಗಿಂತ ಮೊದಲಿತ್ತೆಂದು ಧಾರಾಳವಾಗಿ ಹೇಳಬಹುದು. ೫ ನೇ ಪರಿಚ್ಛೇದದಲ್ಲಿ ಋಗ್ವೇದಾದಿಗಳಲ್ಲಿಯೂ ಮನ್ವಾದಿ ಸ್ಮೃತಿಗಳಲ್ಲಿಯೂ ಸ್ಕಾಂದಾದಿ ಪುರಾಣಗಳಲ್ಲಿಯೂ ವೀರಶೈವನಿಗೆ ನಿಶ್ಚಯವಾಗಿ ಲಿಂಗಧಾರಣವು ಕರ್ತವ್ಯವೆಂದು ಹೇಳಲ್ಪಟ್ಟಿರುವದು. ಇದರ ಮೇಲಿಂದ ವೀರಶೈವವು ವೇದಗಳಿಗಿಂತಲೂ ಪೂರ್ವದಲ್ಲಿಯೇ ಇತ್ತೆಂದು ಧಾರಾಳವಾಗಿ ಹೇಳಬಹುದು.

ನೀಲಕಂಠ ಶಿವಾಚಾರ್ಯ ಮೊದಲಾದವರು - ವೇದಗಳಲ್ಲಿ ಅಷ್ಟಾವರಣ ಷಟ್‌ಸ್ಥಲಾದಿಗಳು ಬೀಜರೂಪದಲ್ಲಿ ಬರೆದದ್ದು ಅವುಗಳ ಸವಿಸ್ತಾರ ವರ್ಣನೆಯು ಶಿವಾಗಮಗಳಲ್ಲಿಯೇ ಇರುವದು. ಇದರಿಂದ ವೇದಗಳಿಗಿಂತಲೂ ಪೂರ್ವದಲ್ಲಿ ವೀರಶೈವವು ಇತ್ತೆಂದು ಹೇಳಲಡ್ಡಿ ಇಲ್ಲ.

ಹೀಗೆ ಅನೇಕ ಆಧಾರಗಳ ಮೇಲಿಂದ ವೀರಶೈವವು ಸನಾತನ ಧರ್ಮವೆಂದೂ ಯಾವ ಸಂದೇಹವಿಲ್ಲದೆ ಹೇಳಬಹುದು. ಲೇಖವು ದೊಡ್ಡದಾಗುವದೆಂದು ತಿಳಿದು ಸಂಸ್ಕೃತ ಶ್ಲೋಕಗಳನ್ನು ಹಾಕಿಲ್ಲ. ಅವುಗಳ ಅರ್ಥವನ್ನೇ ಭಾವವನ್ನೇ ಹಾಕಿ ಈ ಲೇಖ ಬರೆಯಲಾಗಿದೆ. ಮೇಲಾಗಿ ಸಾಮಾನ್ಯರಿಗೂ ಕೂಡ ಈ ಲೇಖ ತಿಳಿಯಬೇಕೆಂದು ಅಭಿಪ್ರಾಯವಿರುವದರಿಂದ ಹೆಚ್ಚಿನ ಗೊಂದಲಕ್ಕೆ ಹೋಗಿಲ್ಲ. ವಾಚಕರು ಹಿಂದಿನ ವಿವರಣೆಯಿಂದ ವೀರಶೈವವು ಅನಾದಿಕಾಲದಿಂದಲೂ ಇತ್ತೆಂದು ಅರಿಯಬಹುದೆಂದು ನಾನು ಭಾವಿಸುವೆನು.

## ೨. ಶಕ್ತಿ ವಿಶಿಷ್ಟಾದ್ವೈತವೆಂದರೇನು?

ಪರಶಿವನಲ್ಲಿ ಸದಾ ಅವಿನಾಭಾವ ಸಂಬಂಧದಿಂದ ಶಕ್ತಿ ಇರುವಳೆಂದು ಹೇಳುವವೇ ವೀರಶೈವದ ಮೂಲರಹಸ್ಯವಾಗಿರುವದು. ಇದೇ ಶಕ್ತಿ ವಿಶಿಷ್ಟಾ

ದ್ವೈತವೆನಿಸುವದು. ಶಕ್ತಿ ವಿಶಿಷ್ಟಜೀವ (ಅಂಗ) ನಿಗೂ ಶಕ್ತಿ ವಿಶಿಷ್ಟ ಶಿವ (ಲಿಂಗ) ನಿಗೂ ಸಾಮರಸ್ಯವೇ ಶಕ್ತಿ ವಿಶಿಷ್ಟಾದ್ವೈತವೆನಿಸುವದು.

"ಶಕ್ತಿಶ್ಚ ಶಕ್ತಿಶ್ಚ ಶಕ್ತೀ, ತಾಭ್ಯಾಂ ವಿಶಿಷ್ಟೌ ಜೀವೇಶೌದಿ ।
ತಯೋರದ್ವೈತಂ ಶಕ್ತಿವಿಶಿಷ್ಟಾದ್ವೈತಂ ॥

ಸೂಕ್ಷ್ಮಚಿದ ಚಿದಾತ್ಮಕ ಶಕ್ತಿಯುಕ್ತನಾದ ಶಿವ, ಸ್ಥೂಲಚಿದಚಿದಾತ್ಮಕ ಶಕ್ತಿಯುಕ್ತನಾದ ಜೀವರ ಅದ್ವೈತ (ಸಮರಸ) ವೇ ಶಕ್ತಿವಿಶಿಷ್ಟಾದ್ವೈತಯಿರುವದು. ಪರಶಿವ ಬ್ರಹ್ಮದಲ್ಲಿ ಶಕ್ತಿಯು ಸ್ವಭಾವ ಸಿದ್ಧವಾಗಿ ಸತ್ಯನಿತ್ಯವಾಗಿ ಅವಿನಾಭಾವ ಸಂಬಂಧದಿಂದ ಇದ್ದು ಜ್ಞಾನಶಕ್ತಿ.ಕ್ರಿಯಾ ಶಕ್ತಿ ಮೊದಲಾದ ರೂಪಗಳಿಂದ ಇರುವದು, ಶಕ್ತಿವಿಶಿಷ್ಟಾದ್ವೈತವಲ್ಲಿ ಜೀವನು ದೇವನಿಂದ ಬೇರೆಯಲ್ಲ. ಪರಿಪೂರ್ಣವಾದ ಅರಿವಿನಿಂದ ಬೆರೆತು ಜೀವವೇ ದೇವನು. ಅಹಂಭಾವನನ್ನು ಬಿಟ್ಟು ಕರ್ತೃತ್ವಾಭಿಮಾನ ಫಲಾಪೇಕ್ಷೆಗಳನ್ನು ತೊರೆದು ಸತ್ಯವಾದ ಈ ಜಗದಲ್ಲಿ ಅಡಗಿದ ಪರಶಿವ ಲೀಲಾವಿಲಾಸಗಳನ್ನು ಕಾಣುವ ದೃಷ್ಟಿಯನ್ನು ಈ ಶಕ್ತಿವಿಶಿಷ್ಟಾದ್ವೈತಗಳು ಪಡೆದಿದ್ದಾರೆಂದು ಹೇಳಬಹುದು.

ವೀರಶೈವ ಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತ, ದ್ವೈತಾದ್ವೈತ, ಶಿವಾದ್ವೈತ ಎಂದು ಪರ್ಯಾಯ ನಾಮಗಳಿರುವವು. ಶಕ್ತಿಯಿಂದ ವಿಶಿಷ್ಟವಾದ ಅದ್ವೈತವು ಎಂದು ಅರ್ಥವಾಗುವದು. ದ್ವೈತದಿಂದ ಅದ್ವೈತಕ್ಕೆ ಹೋಗುವದೇ ಲದಾಗಿದೆ. ಜೀವ ಬೇರೆ ಶಿವ ಬೇರೆ ಎಂದು ತಿಳಿದು ಭಕ್ತಿ ಮಾಡಿ ಜ್ಞಾನಗಳಿಶಿ ಶಿವನಾಗುವನು. ಜೀವ ಭಾವ ಅಳಿದು ಶಿವಭಾವವನ್ನಳವಡಿಸುವದೇ ಶಿವಾದ್ವೈತವೆನಿಸುವದು. ಶಕ್ತಿ-ಭಕ್ತಿಗಳು ಬೇರೆ ಇಲ್ಲ. ಭಕ್ತಿಯಿಂದ ಕೂಡಿದ ಜ್ಞಾನವೆಂದೂ ಭಕ್ತಿಜ್ಞಾನಗಳ ಸಮುಚ್ಚಯವೆಂದೂ ಈ ಶಕ್ತಿವಿಶಿಷ್ಟಾದ್ವೈತದ ಅರ್ಥವಾಗುವದು. ವೀರಶೈವಸಿದ್ಧಾಂತವು ಕೇವಲ ದ್ವೈತವೂ ಅಲ್ಲ, ಕೇವಲ ಅದ್ವೈತವೂ ಅಲ್ಲ ಇವರಡೂ ಕೂಡಿದ್ದು ಅಂದರೆ ದ್ವೈತಾದ್ವೈತವು ಅಥವಾ ಶಕ್ತಿವಿಶಿಷ್ಟಾದ್ವೈತವು ಎಂದೆನಿಸಿದೆ. ಶಕ್ತಿ ಅಂದರೆ ಭಕ್ತಿ ಶಕ್ತಿ ಶಿವನೊಡನೆ ಸಮರಸಾನಂದ ಪಡೆದು ಒಂದಾಗುವದು. ಭಕ್ತಿಯೇ ಬೆಳೆಬೆಳೆದು ದಿವ್ಯಜ್ಞಾನವಾಗುವದು. ಅದಕ್ಕೆ ಪರಭಕ್ತಿ ಮತ್ತು ದಿವ್ಯಜ್ಞಾನಗಳು ಕೊನೆಗೆ ಒಂದೇ ಎನಿಸುವವು. ಅವುಗಳಲ್ಲಿ ಭೇದವಿಲ್ಲ. ಮಿಡಿ ಹಣ್ಣಾಗುವಂತೆ ಭಕ್ತಿಜ್ಞಾನಗಳ ಸಂಬಂಧವಿರುವದು. ಅದಕ್ಕೆ ಶಕ್ತಿ ಶಿವನಾಗುವದು.

ಅಂಗ ಲಿಂಗನಾಗುವದು. ಜೀವ ಶಿವನಾಗುವದು. ಭೇದದಿಂದ ಅಭೇದಕ್ಕೆ ಹೋಗುವುದರಿಂದ ದ್ವೈತಾದ್ವೈತ, ಶಕ್ತಿವಿಶಿಷ್ಟಾದ್ವೈತ, ಶಿವಾದ್ವೈತ ಎಂದು ಹೇಳುವದರ ತಾತ್ಪರ್ಯವಿದಾಗಿರುವದು.

ವಿಚಾರ—ಭಾವಗಳನ್ನು ಒಂದು ಗೂಡಿಸುವದು. ಮಿದುಳು—ಹೃದಯ ಗಳು ಒಂದಾಗುವದು. ಭಕ್ತಿ—ಜ್ಞಾನಗಳು ಒಂದಾಗುವದು. ಅಂಗ—ಲಿಂಗ ಒಂದಾಗುವದು. ಅಂದರೆ ಶರೀರ ಹಾಗೂ ಜೀವಾತ್ಮರೂ ಕೂಡ ಒಂದಾಗು ವದನ್ನೇ ಬೋಧಿಸುವದು. ಲಿಂಗ ಅಂಗ ಅಂದರೆ ಶಿವಜೀವರು ಒಂದಾಗುವದೂ ಮೇಲೆ ಹೇಳಲಾಗಿದೆ. ಆದರೆ ಶರೀರ—ಜೀವಾತ್ಮರು ಒಂದಾಗುವದು. ಹೇಗೆ—ಜೀವಾತ್ಮ ಮನಸ್ಸು ಶರೀರ ಹೀಗೆ ಕ್ರಮವಾಗಿ ಅಂಟಿಕೊಂಡಿವೆ. ಆಕಾಶ, ಘಟ, ಘಟಾಕಾಶಗಳು ಒಂದಾಗುವವು. ಇದರಂತೆ ಶರೀರ ಜೀವಾ ತ್ಮರಗಳ ನಡುವಿನ ಮನಸ್ಸು ಲಯವಾದರೆ ಶರೀರ ಜೀವಗಳು ತಾನೇ ಕೂಡಿ ದಂತೆಯಾಗುವದು. ಇದಕ್ಕೆ ಅಲ್ಲಮ ಪ್ರಭುದೇವರ ಕಾಯಸಿದ್ಧಿಯೇ ಬಲ ವಾದ ಉದಾಹರಣ ಅಲ್ಲದೆ ಹರಳಯ್ಯನು ತನ್ನ ಶರೀರ ಚರ್ಮವನ್ನು ಸುಲಿದು ಮೊಚ್ಚೆ ಮಾಡಿದ್ದು ಇವೇ ಹೇಳುವದು. ಗೋರಕನಾಥನು ಅಲ್ಲಮಪ್ರಭು ವಿನ ಶರೀರಕ್ಕೆ ಹೊಡೆದಾಗ ಆಕಾಶದಲ್ಲಿ ಹೊಡೆದಂತೆ ಆಗಿ ಶರೀರದೊಳ ಗಿಂದ ಕತ್ತಿ ಬೇಕಾದಂತೆ ಪಾರಾಗಿ ನೋವು ಭೇದನಗಳನ್ನು ಮಾಡದೆ ಬರು ತ್ತಿತ್ತು. ಇದು ಏನು ಸೂಚಿಸುವದು? ಶರೀರಕ್ಕೆ ಲಿಂಗದ ಗುಣಗಳು ಬಂದಿ ದ್ದವು. ಇದೂ ಶಿವ-ಜೀವರು ಒಂದಾದಾಗ ಶರೀರ ಜೀವರೂ ಕೂಡ ಒಂದಾ ಗುವರೆಂದು ಇದರಿಂದ ತೋರುವದಿಲ್ಲವೇ ? ಇದೆಲ್ಲಕ್ಕೂ ಕೂಡಿ ಶಕ್ತಿ ವಿಶಿಷ್ಟಾ ದ್ವೈತ ಅಥವಾ ದ್ವೈತಾದ್ವೈತ ಅಥವಾ ಶಿವಾದ್ವೈತವೆನ್ನುವರೆಂದು ಸಾಮಾ ನ್ಯವಾಗಿ ಹೇಳಬಹುದು.

ಇದಕ್ಕೆ ಶಿವಯೋಗವೆಂದೂ ಕೂಡ ಅನ್ನುವರು. ಅಂದರೆ ಶಿವನೊ ಡನೆ ಕೂಡುವದು ಎಂದರ್ಥವಾಗುವದು. ಶಿವನೊಡನೆ ಯಾರು ಕೂಡುವದು ಅವನು ಅನ್ಯರಾರನ್ನೂ ಕೂಡಿಸಿಕೊಳ್ಳನು. ತನ್ನ ಹೆಂಡತಿ ಶಕ್ತಿಯೊಡನೆ ಕೂಡು ವನು ಎಂದು ಹೇಳಬಹುದು. ಶಿವನೊಡನೆ ಶಕ್ತಿ ಕೂಡಿದಾಗ ಶಿವಯೋಗ ವಾಗುವದು. ಈಗ ಪ್ರತಿಯೊಬ್ಬರಲ್ಲಿ ಶಿವನನ್ನೂ ಶಕ್ತಿ ಅಗಲಿದ್ದಾಳೆ. ಅವಳು ಸಹಸ್ರಾರದಲ್ಲಿಯ ಶಿವನನ್ನು ಶಕ್ತಿ ಅಗಲಿ ಆರು ಚಕ್ರಗಳನ್ನು ದಾಟಿ ಮೂಲಾಧಾರದ ತಳದಲ್ಲಿ ತ್ರಿಕೋಣಾಕಾರದಲ್ಲಿ ಕುಂಡಲಿನಿ ಸರ್ಪದಾಕಾರ ದಲ್ಲಿ ಕೆಳಮುಖಮಾಡಿ ಬಿದ್ದಿರುವಳು. ಅದಕ್ಕಾಗಿ ಮಾನವನು ಅತಿಯಾದ

ವಿಷಯಕ್ಕೆ ಎಳಿಸುವನು. ಕೊಂಡಲಿನಿಯು ಕೆಳಮುಖವನಾಡಲು ಬರೆ ವಿಷವನ್ನೇ ಕಾರುವದು. ಮೇಲೆ ಮುಖವಮಾಡಿದರೆ ನಿರ್ವಿಷಯಿಯಾಗಿ ಆರು ಚಕ್ರಗಳನ್ನು ಏರಿ ತನ್ನ ಪತಿಯಾದ ಶಿವನೊಡನೆ ಕೂಡಿ ಸಮರಸಾನಂದ ಸುಖವನ್ನು ಭೋಗಿಸಲು ಲಿಂಗಾಂಗ ಸಮರಸವಾಗುವದು. ಶಿವಜೀವರೈಕ್ಯವಾಗುವದು. ಅದಕ್ಕಾಗಿ ಷಣ್ಮುಖಸ್ವಾಮಿಗಳು—ವಿಷಯವೆಂಬ ಕಾಳ್ಗಿಚ್ಚಿನ ಜ್ವಾಲೆಯಲ್ಲಿ ಈರೇಳು ಲೋಕವೆಲ್ಲಾ ಹತವಾಗಿರ್ಪುದು ನೋಡಾ। ಅದೆಂತೆಂದೊಡೆ—ಕುಂಡಲಿಯೆಂಬ ಮಾಯಾಸರ್ಪವು ತನ್ನ ಬಾಲವ ಬ್ರಹ್ಮರಂಧ್ರಕ್ಕೆ ಸೇರಿಸಿ ನಾಭಿ ಚಕ್ರವ ಸುತ್ತಿಕೊಂಡು ಅಧೋಮುಖವಾಗಿ ಇಂದ್ರಿಯವೆಂಬ ವಿಷವಕಾರುತಿರ್ಪುದು ನೋಡಾ। ಆ ವಿಷಯದ ನಂಜು ತಲೆಗೇರಿದಲ್ಲಿ ಅಸಿಯ ಜವ್ವನೆಯರ ಸಂಪತ್ಸುಖವ ಬಹು ಸವಿಯೆಂದು ತಲೆದೂಗುತಿರ್ಪರು ನೋಡಾ। ಸಕಲ ಪ್ರಾಣಿಗಳು ಇದು ಪಶುಪತಿ ಮಾಡಿದ ಮಾಯಾವಿಧಿಯೆಂದು ತಿಳಿಯದೆ ಹಸೆಗೆಟ್ಟು ಹೋಯಿತು ನೋಡಾ। ಮೂಜಗವೆಲ್ಲಾ ಅಖಂಡೇಶ್ವರಾ॥ ಇದು ಮೇಲಿನದನ್ನೆ ಹೇಳುವದು. ಕುಂಡಲಿನಿಯು ಮೇಲೆ ಮುಖಮಾಡಿ ಚಕ್ರಗಳಗುಂಟ ಏರಹತ್ತಲು ವಿಷಯಗಳು ತಾವಾಗಿಯೇ ಬಿಡುಗಡೆ ಹೊಂದುವವು. ಸಹಸ್ರಾರದಲ್ಲಿ ಶಕ್ತಿಯು ಶಿವನೊಡನೆ ಸಮರಸಹೊಂದಲು ಮಾನವನು ಪರಿಪೂರ್ಣ ನಿರ್ವಿಷಯಿಯಾಗುವನು. ಆಗ ಅವನು ಶಿವಯೋಗಿಯಾಗುವನು. ಅದು ಶಿವಯೋಗವಾಗುವದು. ಭಕ್ತಿ ಬಲಿತು ದಿವ್ಯ ಪರಭಕ್ತಿಯಾದಾಗ ಶಕ್ತಿ ಶಿವನೊಡನೆ ಸಮರಸವಾಗುವಳು ಆಗ ಶಿವ ಜೀವರು ಐಕ್ಯರಾಗುವರು. ಲಿಂಗಾಂಗ ಸಮರಸವಾಗುವದು. ಅಲ್ಲದೆ ಶರೀರದ ಜೀವರು ಒಂದಾಗಿ ಅಲ್ಲಮಪ್ರಭುವಿನಂತೆ ಕಾರ್ಯಸಿದ್ಧಿಯನ್ನು ಪಡೆಯುವರು. ಇದು ವೀರಶೈವರ ಶಕ್ತಿವಿಶಿಷ್ಟಾದ್ವೈತ — ಶಿವಾದ್ವೈತ—ದ್ವೈತಾದ್ವೈತವೆನಿಸುವದು.

ವೀರ ಅಂದರೆ ಶಕ್ತಿಯುಳ್ಳ; ಶೈವಅಂದರೆ ಶಿವೋಪಾಸಕ, ವೀರಶೈವವೆಂದರೆ ಶಕ್ತಿಯುಳ್ಳ ಶಿವನ ಉಪಾಸಕರು ಎಂದು ಅರ್ಥವಾಗುವದು. ಅಂದರೆ ಶಕ್ತಿ ಶಿವನನ್ನು ಕೂಡಿ ಉಪಾಸನೆ ಮಾಡುವದೇ ಶಕ್ತಿವಿಶಿಷ್ಟಾದ್ವೈತವೆಂದು ಅರ್ಥವಾಗುವದು. ಅದಕ್ಕಾಗಿ ಶಿವ+ಶಕ್ತಿಯರ ಮಿಲನದ ಗುರುತಾದ ಇಷ್ಟಲಿಂಗವನ್ನು ಧರಿಸುತ್ತಾರೆ. ಶಿವನು ಸದ್ರೂಪನು, ಶಕ್ತಿಯು ಚಿದ್ರೂಪಳು. ಕಾರಣ ಲಿಂಗವು ಪರಶಿವನ ಸದ್ರೂಪ ಚಿದ್ರೂಪಗಳನ್ನು ಒಂದುಗೂಡಿಸುವ ತತ್ವವಾಗಿದೆ. ಅದಕ್ಕಾಗಿ—

"ಲಿಂಗಂ ಶೈವಮಿದಂ ಸಾಕ್ಷಾತ್ ಶಿವಶಕ್ತ್ಯು ಭಯಾತ್ಮಕಂ"

ಎಂದು ಸೂಕ್ಷ್ಮಾಗಮದಲ್ಲಿ ಹೇಳಲಾಗಿದೆ. ಅದಕ್ಕಾಗಿ ಚರಾಚರಾತ್ಮಕವಾದ ಎಲ್ಲವೂ ಲಿಂಗದಿಂದ ಉದಯಿಸಿ ಲಿಂಗದಲ್ಲಿ ಬೆಳೆದು ಲಿಂಗದಲ್ಲಿ ಉಳಿದು ಕೊಳ್ಳುವದು ಎಂದು ಮಗ್ಗೆಮಾಯಿದೇವನು ಅನುಭವಸೂತ್ರದಲ್ಲಿ ಹೇಳಿದ್ದಾನೆ. "ವಿನಾರ್ಥಂ ಗಮಕಂ ಚಿಹಂ ,ಲಿಂಗ ಮಿತ್ಯಭಿದಾಯತೆ" ಎಂದು ಶಿವ ಪುರಾಣದಲ್ಲಿ ಹೇಳಿದೆ. ಉತ್ಪತ್ತಿ ಸ್ಥಿತಿಲಯಗಳಿಗೆ ಯಾವದು ಕಾರಣವಾಗಿದೆಯೋ ಯಾವದು ಎಲ್ಲವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡು ಅದಕ್ಕೆಲ್ಲ ಆಧಾರಭೂತವಾಗಿದೆಯೋ ಅದು ಲಿಂಗ ಎಂದು ಹೇಳಲಾಗಿದೆ. ಶಿವಶಕ್ತಿಯರ ನಡುವೆ ಅವಿರಳವಾದ ಬೇಸುಗೆಯನ್ನು ಲಿಂಗವು ಸೂಚಿಸುತ್ತದೆ. ಈ ಎರಡು ಹೋಗಿ ಅವಿರಳ ಬೆಸುಗೆಹೊಂದಿ ಸಮರಸ ಹೊಂದುವದಕ್ಕೆ ಶಕ್ತಿ ವಿಶಿಷ್ಟಾದ್ವೈತ- ದ್ವೈತಾದ್ವೈತ ಎಂದು ಹೇಳುವರು. ಮೇಲಿನ ವಿವರಣೆಯಂತೆ ಲಿಂಗ ಅಂಗ ಸಮರಸವೇ ಶಕ್ತಿ ವಿಶಿಷ್ಟಾದ್ವೈತಕ್ಕೆ ಪರಮಧ್ಯೇಯವಾಗಿರುವದು. ಸರ್ವಾಂಗ ಲಿಂಗಸ್ಥಲ ಈ ಅನುಭಾವಿಗಳ ನಿಲುವಿನಲ್ಲಿ ಸರ್ವ ಇಂದ್ರಿಯಗಳೆಲ್ಲ ಲಿಂಗಕಿರಣದಿಂದ ಪ್ರಭಾವಿತವಾಗುತ್ತವೆ. ಇದನ್ನು ಅಲ್ಲಮಪ್ರಭು ದೇವರು ಹೆಚ್ಚಾಗಿ ಸಾರಿದ್ದರೆಂದು ಮೇಲೆ ಹೇಳಲಾಗಿದೆ. ಅದರಂತೆ ಅನೇಕ ಶಿವ ಶರಣರ ಶರೀರಗಳು ಲಿಂಗದ ಗುಣಗಳನ್ನು ಹೊಂದಿದ್ದವು.

ಈ ಮೇಲಿನ ವಿವರಣೆಯಿಂದ ಶಕ್ತಿ ವಿಶಿಷ್ಟಾದ್ವೈತವೆಂದರೇನೆಂಬುದರ ಸ್ಪಷ್ಟ ಕಲ್ಪನೆಯಾಗುವದರಲ್ಲಿ ಸಂದೇಹವಿಲ್ಲ. ವೀರಶೈವರ ಶಕ್ತಿ ವಿಶಿಷ್ಟಾದ್ವೈತವು—ಪ್ರಕೃತಿ, ಪುರುಷ, ಪರಶಕ್ತಿ, ಪರಶಿವ ಈ ನಾಲ್ಕು ತತ್ವಗಳನ್ನು ಒಪ್ಪುವದು. ಪ್ರಕೃತಿಯು ಜಡವಾದ ಶಕ್ತಿ ಇದರ ಸಂಬಂಧದಿಂದ ಪುರುಷನು ಜಾಡ್ಯಕ್ಕೊಳಗಾಗಿದ್ದಾನೆ. ಪರಶಕ್ತಿಯು ಚೈತನ್ಯಸೂಚಕವಾಗಿದೆ. ಪರಶಕ್ತಿಯುತ ಪರಶಿವನು ಚೈತನ್ಯಾತ್ಮಕನಾಗಿರುವನು. ಪರಶಿವನಂತೆ ಪುರುಷನೂ ಶಕ್ತಿಯಿಂದ ಕೂಡಿದ್ದರೂ ಜಡ—ಚೈತನ್ಯಗಳಿಂದ ವಿಶಿಷ್ಟವಾಗಿರುವದು. ಈ ಜೋಡಿಗಳನ್ನು ಸಮರಸಗೊಳಿಸುವದೇ ಶಕ್ತಿ ವಿಶಿಷ್ಟಾದ್ವೈತವೆಂದು ಹೇಳುವರು.

## ೩. ಶಕ್ತಿಯು ಶಿವನ ಅವಿನಾಭೂತವಾಗಿರುವಳು.

ಕಾಲಿದಾಸ ಕವಿಯು ಶಿವ ಶಕ್ತಿಯರ ಸಂಬಂಧವನ್ನು ಈ ಪ್ರಕಾರ ಬಣ್ಣಿಸಿದ್ದಾನೆ— ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ ।
ಜಗತಃ ಪಿತರೌ ವಂದೇ ಪಾರ್ವತಿ ಪರಮೇಶ್ವರೌ ॥

ಪಾರ್ವತಿ ಪರಮೇಶ್ವರರು ಶಬ್ದ ಹಾಗೂ ಅದರ ಅರ್ಥಕ್ಕೆ ಹೇಗೆ ಸಂಬಂಧವಿರುವದೋ ಹಾಗೆ ಸಂಬಂಧವಿರುವರು. ಶಬ್ದವನ್ನು ಬಿಟ್ಟು ಅರ್ಥವೂ ಅರ್ಥವನ್ನು ಬಿಟ್ಟು ಶಬ್ದವೂ ಹೇಗೆ ಇರಲಾರದೋ ಅದರಂತೆ ಶಿವನನ್ನು ಬಿಟ್ಟು ಶಕ್ತಿಯೂ ಶಕ್ತಿಯನ್ನು ಬಿಟ್ಟು ಶಿವನೂ ಇರುವದಿಲ್ಲ.

"ಕಾಯವು—ಜೀವವು, ಜೀವವು—ಕಾಯವು, ಅವು ಎಂತು ಬೆರಸಿಪ್ಪ ವಂತೆ ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ ಬೆರಸಿಪ್ಪುದು ಭಿನ್ನ ಭಾವವಿಲ್ಲದೆ" "ನ ಶಿವೇನ ವಿನಾ ಶಕ್ತಿ । ರ್ನ ಶಕ್ತಿರಹಿತಃ ಶಿವಃ । ಪುಷ್ಪ ಗಂಥ ವಿನಾದ್ವೈನ ಮರುತಾಂಬರ ಯೋರಿವ ॥ ಎಂಬುದಾಗಿ ಭಾವಭೇದವಿ ಲ್ಲದ ಜಂಗಮವೇ ಲಿಂಗವು ಕೂಡಲಚನ್ನಸಂಗಮದೇವಾ " ಎಂದು ಶ್ರೀ ಚನ್ನ ಬಸವಣ್ಣನವರು ಶಿವ ಶಕ್ತಿಯರ ಅವಿನಾಭಾವ ಸಂಬಂಧವನ್ನು ಚನ್ನಾಗಿ ಬಣ್ಣಿಸಿದ್ದಾರೆ.

(೧) ಶಿವಶಕ್ತಿ ಸಂಪುಟನೆಂಬುದೆಂತು ಹೇಳಿದರಣ್ಣಾ. ಶಿವನೇ ಚೈತ ನ್ಯಾತ್ಮನು ಶಕ್ತಿಯೇ ಚಿತ್ತು ಇಂತು ಚೈತನ್ಯಾತ್ಮನೇ ಚಿತ್‌ಸ್ವರೂಪನೆಂದ ರಿಯ ಬಲ್ಲರೆ ಭಿನ್ನವೆಲ್ಲಿಯದು ಗುಹೇಶ್ವರಾ.

(೨) ಶರೀರ ಉಳ್ಳನ್ನಕ್ಕರ ನೆಳಲಿಲ್ಲದಿರಬಾರದು । ಭೂಮಿ ಉಳ್ಳ ನ್ನಕ್ಕರ ಆಕಾಶವಿಲ್ಲದಿರಬಾರದು । ನಾಮ ಉಳ್ಳನ್ನಕ್ಕರ ನೀನಿಲ್ಲದಿರಬಾರದು। ಗುಹೇಶ್ವರ ಲಿಂಗವು ಶಕ್ತಿಗೊಳಗಾಯಿತ್ತು । ಬಟ್ಟ ಬರಿಯ ಬಯಲೆಂಬು ದಕ್ಕೆ ಉಪಮಾನವಿಲ್ಲ.

ಇದರಂತೆ—ಇಂಗಡಲೊಳಿಂಪು, ಬೆಳದಿಂಗಳೊಳು ತಂಪು । ಕುಸು ಮಂಗಳೊಳು ಕಂಪು, ಬೆರೆದಂತೆ ಪರಮನೊಳು ಪಿಂಗದಗಸುತೆ ನತನಪ್ಪೆ ಎಂದು ಶ್ರೀ ನಿಜಗುಣ ಶಿವಯೋಗಿಗಳು ಬಹು ಸುಂದರವಾಗಿ ಶಿವಶಕ್ತಿಯರ ಅವಿನಾಭಾವ ಸಂಬಂಧವನ್ನು ಬಹು ಸರಸಾಗಿ ಹೇಳಿದ್ದಾರೆ. ಶಿವನು ತನ್ನದೇ ಆದ ತನಗಿಂತ ಭಿನ್ನವಲ್ಲದ ಒಂದು ಪ್ರಕಾಶ ಶಕ್ತಿಯಿಂದ ಕೂಡಿದ್ದಾನೆ. ಆ ಶಕ್ತಿಯಿಂದ ಕೂಡಿಹೆನೆಂಬ ಸ್ವವಿಮರ್ಶೆಯೂ ಶಿವನಿಗಿರುವದು. ರತ್ನ, ಸೂರ್ಯ, ವಿದ್ಯುದ್ದೀಪ ಮೊದಲಾದವುಗಳಿಗೆ ಸ್ವಯಂ ಪ್ರಭೆಯಿದ್ದರೂ ಆ ಪ್ರಭೆಯನ್ನು ಅರಿವ ಸ್ವವಿಮರ್ಶೆಯು ಅವುಗಳಿಗಿಲ್ಲ. ಯಾಕಂದರೆ ಅವು ಜಡರೂಪವಾಗಿವೆ. ಆದರೆ ಪರಮಾತ್ಮನು ಚೈತನ್ಯಾತ್ಮಕನಿರುವದರಿಂದ ಆ ತನ್ನ ಶಕ್ತಿಯನ್ನು ಅರಿಯುವನು. ಪರಾಸಂವಿತ್ (ಪೂರ್ಣ ಅರಿವು) ಎಂಬ ಸಂಜ್ಞೆ

ಯುಳ್ಳ ಪರಾಶಕ್ತಿಯಾಗಿದೆ. "ಶಾರದೋಘನದೊಳಗಣ ಮಿಂಚಿನಂತೆ ನೀರೊಳಗಣ ಕಿಚ್ಚಿನಂತೆ ಫಲರಸದೊಳಗಣ ನವರುಚಿಯಂತೆ, ಶಶಿಯೊಳಗಣ ತಪ್ಪಿನಂತೆ, ಮರೀಚಿಯೊಳಗಣ ಬಿಸಿಲಿನಂತೆ, ಆಲಿಯೊಳಗಣ ತೇಜದಂತೆ, ಶಿಲೆಯೊಳಗಣ ಪಾವಕದಂತೆ, ಉದಕದೊಳಗಣ ಪ್ರತಿಬಿಂಬದಂತೆ, ಚಿನ್ನದೊಳಗಣ ಬಣ್ಣದಂತೆ, ಬೀಜದೊಳಗಣ ವೃಕ್ಷದಂತೆ ಸಸಿಯೊಳಗಣ ಪರಿಮಳದಂತೆ, ಕನ್ನೆಯೊಳಗಣ ಸ್ನೇಹದಂತೆ, ಹಸುಳೆಯೊಳಗಣ ಸ್ವಪ್ನದಂತೆ, ಶಬ್ದದೊಳಗಣ ನಿಶ್ಶಬ್ದದಂತೆ, ಉಸಿರೊಳಗಣ ಚೈತನ್ಯದಂತೆ" ಶಿವಶಕ್ತಿಯರು ಅವಿನಾಭಾವ ಸಂಬಂಧದಿಂದ ಸಮರಸವಾಗಿರುವರು. ಒಂದನ್ನು ಬಿಟ್ಟು ಒಂದನ್ನು ತಕ್ಕೊಳ್ಳಲಿಕ್ಕೆ ಬರುವದಿಲ್ಲ. ಅಗಲಿಸಲಿಕ್ಕೂ ಬರುವದಿಲ್ಲ. ಇವು ಒಂದನ್ನೊಂದು ಆಶ್ರಯವಾಗಿ ಹೊಂದಿಕೊಂಡಿರುವವು. ಇದನ್ನೇ ಶ್ರೀ ನಿಜಗುಣ ಶಿವಯೋಗಿಗಳು—ಆಧಾರವಾಬ್ರಹ್ಮ ವಾದೇಯ ವೀಮಾಯೆ । ಯಾಧಾರದಲ್ಲಿ ಬೆರಿಸಿ ಬೇರಿಲ್ಲದಂತಾ ಧ್ಯೇಯ ಮಿರ್ಪುವೆಲೆ ಪುತ್ರ ॥ ಎಂದು ಆಧಾರ ಆದೇಹಗಳ ಹೊಂದಾಣಿಕೆಯನ್ನು ಶಿವ ಶಕ್ತಿಯರಲ್ಲಿ ಹೇಳಿದ್ದಾರೆ. ಇದುವೇ ಅವಿನಾಭಾವ ಸಂಬಂಧವಾಗಿರುವದು. ಅದಕ್ಕಂತೆಯೇ ಶಿವ ಶಕ್ತಿಯರ ಅವಿನಾಭಾವ ಸಂಬಂಧವನ್ನು ಸೂಚಿಸುವ ಸಲುವಾಗಿ ಲಿಂಗವನ್ನು ಹೀಗೆ ರಚಿಸಿದ್ದಾರೆ. ಶಿವನ ಗುರ್ತು ಪೆಂಡಿಕೆ. ಶಕ್ತಿಯ ಗುರ್ತು ಪೀಠ. ಯಾರೂ ಬರೇ ಪೆಂಡಿಕೆಯನ್ನಾಗಲಿ ಬರೇ ಪೀಠವನ್ನಾಗಲಿ ಪೂಜಿಸುವದಿಲ್ಲ. ಪೆಂಡಿಕೆ ಪೀಠಗಳಿಂದ ಕೂಡಿದ ಪರಿಪೂರ್ಣ ಲಿಂಗವನ್ನು ಪೂಜಿಸುವದೂ ಕೂಡ ಶಿವ ಶಕ್ತಿಯರ ಅವಿನಾಭಾವ ಸಂಬಂಧವನ್ನೇ ಸೂಚಿಸುವದು.

ರೂಪಾಯಿಗೆ ಎರಡು ಮೈಗಳಿರುವಂತೆ ಈ ಶಿವ-ಶಕ್ತಿಯರು ಇದ್ದಾರೆ. ಒಂದು ಮೈಬಿಟ್ಟು ಒಂದೇ ಮೈಯ ರೂಪಾಯಿ ಸಿಗುವದಿಲ್ಲ. ಅಥವಾ ಒಂದು ಮೈ ಸಾಪಾದದ್ದು ಇನ್ನೊಂದು ಮೈಯಲ್ಲಿ ಒಳ್ಳೇ ಮುದ್ರೆ ಇದ್ದದ್ದು ಇದ್ದರೂ ಆ ರೂಪಾಯಿ ನಡೆಯುವದಿಲ್ಲ. ಎರಡೂ ಮೈಗಳಲ್ಲಿ ಎರಡೂ ಮುದ್ರೆಗಳು ಸರಿಯಾಗಿ ಇದ್ದರೆ ಮಾತ್ರ ಆ ರೂಪಾಯಿ ಚಲಾವಣೆಯಲ್ಲಿ ಬರುವದು. ಈ ಮೈಗಳೆರಡೂ ಅವಿನಾಭಾವ ಸಂಬಂಧದಿಂದ ಕೂಡಿರುವವು. ಅದರಂತೆ ಶಿವ-ಶಕ್ತಿಯರು ಇದ್ದಾರೆ. ಒಂದನ್ನು ಬಿಟ್ಟು ಒಂದನ್ನು ಅರಿಯುವದಾಗಲಿ ಪಡೆಯುವದಾಗಲಿ ತಿಳಿಯುವದಾಗಲಿ ಶಕ್ಯವೇ ಇಲ್ಲ. ಯಾಕೆಂದರೆ ಅವೆರಡೂ ಅವಿನಾಭಾವ ಸಂಬಂಧದಿಂದ ಸಮರಸವಾಗಿಯೇ ಇರುವವು.

ವೀರಶೈವ ತತ್ವಜ್ಞಾನದಲ್ಲಿ ಶಕ್ತಿಗೆ ಶಿವನಲ್ಲಿ ಆಶ್ರಯ ಸ್ಥಾನವಿರುವದರಿಂದ ಆವನು ಶಿವ-ಶಕ್ತಿ ಲಿಂಗ-ಜಂಗಮ ಸತ್ಯ-ನೆನಹುಗಳ ಅವಿನಾಭಾವ ಸಂಬಂಧವನ್ನು ಎತ್ತಿ ಹಿಡಿದಿರುವನು. ಶಿವನು ವಿಶ್ವಾಧಿಕ ವಿಶ್ವೋತ್ತೀರ್ಣ ಸತ್ಯವಾದರೆ ಶಕ್ತಿಯು ವಿಶ್ವಗತ ನಿತ್ಯನಾಗಿರುವಳು.

ನಿರ್ಗುಣ ಸಗುಣಗಳು ಕೂಡ ಒಂದೇ ಇರುವವು. ಸಗುಣ ಹಾಗು ನಿರ್ಗುಣಗಳನ್ನೂ ವಿಂಗಡಿಸಲಿಕ್ಕೆ ಬರುವದಿಲ್ಲ. ಹೇಗೆಂದರೆ, ಹಾಲೂ ಅದರ ಬಿಳಿಯ ಬಣ್ಣವೂ ಇದ್ದಂತೆ ಹಾಲನ್ನು ಅದರ ಬಿಳಿಯ ಬಣ್ಣದಿಂದ ವಿಂಗಡಿಸಲಿಕ್ಕೆ ಬರುವದಿಲ್ಲ. ರತ್ನ ಅದರ ಕಾಂತಿ ಇದ್ದಂತೆ ರತ್ನದಿಂದ ಕಾಂತಿಯನ್ನು ವಿಂಗಡಿಸಲಿಕ್ಕೆ ಬರುವದಿಲ್ಲ. ಮೆಣಸಿನಕಾಯಿ ಅದರ ಖಾರಗುಣ ಇವುಗಳನ್ನು ಬೇರೆ ಬೇರೆ ಮಾಡಲಿಕ್ಕೆ ಬರುವದಿಲ್ಲ. ಬೆಲ್ಲ ಅದರ ರುಚಿಗಳನ್ನು ವಿಂಗಡಿಸಲಿಕ್ಕೆ ಬರುವದಿಲ್ಲ. ಅದರಂತೆ ಹೂವಿನಿಂದ ಗಂಧ, ಎಳ್ಳಿನಿಂದ ಎಣ್ಣೆಗಳನ್ನೂ ವಿಂಗಡಿಸಲಿಕ್ಕೆ ಬರಲಾರವು. ಯಾರಾದರೂ ಶಾಸ್ತ್ರೀಯ ಪ್ರಯೋಗದಿಂದ ವಿಂಗಡಿಸಿದರೆ ಅವುಗಳ ಮೂಲ ಗುಣ-ಧರ್ಮಗಳು ನಾಶವಾಗುವವು. ಹೀಗೆ ಮಾಡಿದರೆ ವಿಂಗಡಿಸಿದಂತೆಯಾಗುವದಿಲ್ಲ. ಇವರವೂ ಆಧಾರ ಆಧೇಹವಾಗಿ ಇರುವವು. ಇದಕ್ಕೆ ಅವಿನಾಭಾವ ಸಂಬಂಧವೆನ್ನುವರು. ಅದರಂತೆ ಶಿವಶಕ್ತಿಯರೂ ಕೂಡ ಇದ್ದಾರೆ. ಅಗಲಿಸಲಿಕ್ಕೆ ಬರುವದಿಲ್ಲ. ಅನೇಕ ಮಾಯಾವಾದಿಗಳು ಅಗಲಿಸಲಿಕ್ಕೆ ಹೋಗಿ ಸೋತಿದ್ದಾರೆ. ಇವರು ಪೂರ್ಣ ಮಾನವರಲ್ಲ. ಅವರು ಮಾಡುವ ಪೂಜೆ ಪೂರ್ಣ ಪೂಜೆಯಲ್ಲ, ಪೂರ್ಣ ಭಕ್ತಿಯಲ್ಲ, ಅವರು ಪೂರ್ಣ ಯೋಗಿಗಳೂ ಆಗಲಾರರು. ಯಾಕಂದರೆ ಇವೆರಡೂ ಅವಿನಾಭಾವ ಸಂಬಂಧದಿಂದ ಹೊಂದಿಕೊಂಡಿರುವವು. ಅದಕಂತೆ ನಮ್ಮವರು 'ಪಾರ್ವತಿಪತಿಹರಹರ ಮಹಾದೇವ' ಎಂದು ಜಯಘೋಷ ಮಾಡುವರು ಅಲ್ಲದೆ ಶಿವ-ಶಕ್ತಿಯರ ಗುರುತಾದ ಲಿಂಗವನ್ನೇ ಪೂಜಿಸುವರು. ಅದಕ್ಕಂತೆ ಉಳಿದವರಿಗಿಂತ ವೀರಶೈವರು ಪೂರ್ಣ ಮಾನವರೆಂದು ಹೇಳಲಿಕ್ಕೆ ಯಾವ ಅಭ್ಯಂತರವೇ ಇಲ್ಲ. ಇವರೇ ಮೊದಲು ಶಿವಶಕ್ತಿಯರ ಅವಿನಾಭಾವ ಸಂಬಂಧವನ್ನು ಕಂಡುಹಿಡಿದಿದ್ದಾರೆ.

ಜಗತ್ತಿನಲ್ಲಿ ಅನೇಕ ತತ್ವಗಳನ್ನು ಅನೇಕರು ಕಂಡುಹಿಡಿದಿದ್ದಾರೆ. ಅದ್ವೈತಿಗಳು—"ಬ್ರಹ್ಮ ಸತ್ಯಂ ಜಗನ್ಮಿಥ್ಯಾ" ಎಂದು ಹೇಳುವರು. ಜಗವು ಬ್ರಹ್ಮನಲ್ಲಿ ಭ್ರಮೆಯಾಗಿರುವದು. ಹಗ್ಗದಲ್ಲಿ ಹಾವಿನ ಭ್ರಮೆಯಾದಂತೆ

ಇದ್ದುದೆಲ್ಲವೂ ಬ್ರಹ್ಮವೇ ಇರುವದೆಂದು ಹೇಳುವರು. ಶಕ್ತಿ ಮಾಯೆ ಇವೆಲ್ಲ ಸುಳ್ಳೆಂದು ಹೇಳುವರು. ಇದಕ್ಕೆ ಶ್ರೀ ಶಂಕರಾಚಾರ್ಯರೇ ಗುರುಗಳೆಂದರೆ ಅಡ್ಡಿಯಿಲ್ಲ. ದ್ವೈತಿಗಳು ಜೀವಾತ್ಮ-ಪರಮಾತ್ಮ ಎರಡೂ ನಿರಂತರವಾದ ತತ್ವಗಳನ್ನು ನಂಬಿ ಜೀವ-ಪರಮರಲ್ಲಿ, ಜೀವ-ಜೀವರಲ್ಲಿ, ಜೀವ-ಜಡದಲ್ಲಿ, ಜಡ- ಪರಮರಲ್ಲಿ, ಜಡ-ಜಡದಲ್ಲಿ ಹೇಗೆ ಪಂಚಭೇದಗಳನ್ನು ಮನ್ನಿಸುತ್ತಾರೆ. ಇವರು ಐಕ್ಯತೆಯನ್ನು ಒಪ್ಪುವದಿಲ್ಲ. ಇದಕ್ಕೆ ಶ್ರೀ ಮಧ್ವಾಚಾರ್ಯರೇ ಗುರುಗಳು. ವಿಶಿಷ್ಟಾದ್ವೈತಿಗಳು ಚಿತ್ ಅಚಿತ್ ಈಶ್ವರ ಎಂದು ಮೂರು ತತ್ವಗಳನ್ನು ಮನ್ನಿಸುವರು. ಚಿತ್ ಎನಿಸಿದ ಜೀವ, ಅಚಿತ್ ಎನಿಸಿದ ಪ್ರಕೃತಿ ಇವು ಪ್ರತ್ಯೇಕವಾಗಿರದೆ ದಾಳಿಂಬ ಹಣ್ಣಿನ ಕಾಳಿನಂತೆ ಈಶ್ವರನಲ್ಲಿ ಸದಾ ಸರ್ವದಾ ಸೇರಿರುತ್ತಿವೆ ಎಂದು ಹೇಳಿ ಚಿದಚಿತ್ತಿನಿಂದ ಕೂಡಿದ ಪರಮಾತ್ಮ ಒಂದೇಯಾಗಿದೆ ಎಂದು ಕೊನೆಗೆ ಸಮನ್ವಯಗೊಳಿಸುತ್ತಾರೆ. ರುಚಿ-ಬಿಳಿ ಬಣ್ಣಗಳು ಹಾಲಿನಲ್ಲಿ ಅಡಗಿ ಅದರಲ್ಲಿ ಪ್ರತ್ಯೇಕವಾಗಿ ತೋರದಿರುವಂತೆ ಚಿತ್, ಅಚಿತ್‌ಗಳನ್ನು ಗರ್ಭೀಕರಿಸಿಕೊಂಡು ಪರಮಾತ್ಮನ ನಿಲವು ಎಲ್ಲವನ್ನು ಒಳಗೊಂಡಿರುತ್ತದೆ. ಇದಕ್ಕೆ ಶ್ರೀರಾಮಾನುಜಾಚಾರ್ಯರೇ ಗುರುಗಳು. ಬಹುತರ ಎಲ್ಲ ಜಗತ್ತಿನ ಧರ್ಮಗಳು ಇವುಗಳಲ್ಲೇ ಹೊಂದಿಕೊಳ್ಳುವವು. ಅಲ್ಲದೆ ಕೆಲವರು ಶಕ್ತಿಯನ್ನು ಕೆಲವರು ಗಣಪತಿಯನ್ನು ಬರೇ ಶಿವನನ್ನು ಕೆಲವರು ಸೂರ್ಯನನ್ನು ಕೆಲವರು ಬ್ರಹ್ಮನನ್ನು ಕೆಲವರು ಈಶ್ವರನನ್ನು ಕೆಲವರು ಅಲ್ಲಾನನ್ನು ಹೀಗೆ ಒಂದೇ ತತ್ವವನ್ನು ಒಪ್ಪಿಕೊಂಡಿದ್ದಾರೆ. ಇವರೆಲ್ಲರೂ ಈ ಮೇಲಿನ ಮೂರು ತತ್ವಗಳಲ್ಲಿಯೇ ಬರುವರು. ಆದರೆ ವೀರಶೈವರು ಮಾತ್ರ ಎಲ್ಲರಿಗಿಂತಲೂ ಬಹು ಮುಂದೆ ಹೋಗಿದ್ದಾರೆ. ಇವರು ಶಿವ—ಶಕ್ತಿ ಎರಡನ್ನೂ ಪ್ರಕೃತಿ—ಪುರುಷರನ್ನೂ ಒಪ್ಪಿಕೊಳ್ಳುವರು. ಯಾಕಂದರೆ ಪರಮನಿಂದ ಅಣುವಿನ ವರೆಗೆ ಶಿವ—ಶಕ್ತಿ, ಪ್ರಕೃತಿ ಪುರುಷರ ಹೊಂದಾಣಿಕೆ ಇರುವದು ಕಂಡು ಬರುವದು. ಎಲ್ಲ ಕಡೆಗೂ ಎರಡರ ಅವಿನಾಭಾವ ಸಂಬಂಧವೇ ಕಾಣುವದು. ಪ್ರತಿ ಸೃಷ್ಟ ವಸ್ತುಗಳಲ್ಲಿ ಪ್ರಪಂಚದಲ್ಲಿ ವ್ಯವಹಾರದಲ್ಲಿ ಸಂಸಾರದಲ್ಲಿ ಎಲ್ಲಿ ಬೇಕಾದಲ್ಲಿ ಜೊಡಿ ಇರುವದೇ ಕಂಡುಬರುವದು. ಅದಕ್ಕೆ ಶಿವನೂ ಕೂಡ ಶಕ್ತಿಯಿಂದಲೇ ಕೂಡಿರಬೇಕು. ಮೇಲೆ ವಿವರಿಸಿದಂತೆ ಇವರು ಅವಿನಾಭಾವ ಸಂಬಂಧದಿಂದಲೇ ಕೂಡಿರುವರು. ಇಬ್ಬರೂ ಇಲ್ಲದೆ ಯಾವ ವ್ಯವಹಾರಗಳು ಎಂದೂ ನಡೆಯಲಾರವು ಎಂದು ವೀರಶೈವರು ಕಂಡು ಹಿಡಿದು ಜಗತ್ತಿನ ಸತ್ಯತೆಯನ್ನು

ಒಪ್ಪಿಕೊಂಡಿದ್ದಾರೆ. ಜಗತ್ತು ಮಾತ್ರ ಸದಾ ರೂಪಾಂತರ ಹೊಂದುವದೆಂದು ನಂಬಿರುವರು. ಆದರೆ ವೀರಶೈವರು ಇದನ್ನು ಶಿವಪ್ರಪಂಚವನ್ನಾಗಿ ಭೂಕೈಲಾಸವನ್ನಾಗಿ ಮಾಡಲಿಕ್ಕೆ ಬರುವದೆಂದು ಹೇಳುವರು. ಇದೇ ತತ್ವಕ್ಕೆ ಶಕ್ತಿ ವಿಶಿಷ್ಟಾದ್ವೈತವೆನ್ನುವರು. ಶಿವ ಶಕ್ತಿಯರ ಸಮರಸವನ್ನು ಇವು ಅಂತ್ಯದಲ್ಲಿ ಸಾಧಿಸಿ ಬಿಡುವದನ್ನೇ ಹೇಳುವದು. ಜಡವಾದ ಪ್ರಕೃತಿಯ ಸಂಗದಿಂದ ಜೀವನು ಜಾಡ್ಯಗೊಳಗಾಗಿದ್ದಾನೆ. ಈ ಜಾಡ್ಯವನ್ನು ಹೋಗಲಾಡಿಸಲು ಜೀವನೇ ಶಿವನಾಗುವನು. ಪ್ರಕೃತಿಯೇ ಶಕ್ತಿಯಾಗುವಳು ಶಕ್ತಿಯು ಶಿವನೊಳಗಾಗಿ ಒಂದಾಗುವರು. ಇದೆಲ್ಲ ಅವಿನಾಭಾವ ಸಂಬಂಧವಾಗಿರುವರಿಂದ ಜಾಡ್ಯದಿಂದ ಎರಡಾದದ್ದು ಒಂದೇ ಆಗಿ ಸಮರಸವಾಗಿ ಬಿಡುವವು. ಇವೆಲ್ಲ ಪರಮ ಶಿವಶಕ್ತಿಯಿಂದ ವಿಲಾಸ ಲೀಲೆಯಾಗಿದೆ. ಶಕ್ತಿಯು ಶಿವನಿಗಾಗಿ ಈ ಪ್ರಪಂಚವಾಗಿ ಲೀಲೆಯಾಡುತ್ತಿರುವಳು. ಸಾಕಾಗಲು ಅವಿನಾಭಾವ ಸಂಬಂಧದಿಂದ ಒಂದೇಯಾಗಿ ಸಮರಸವಾಗುವದು. ಎಂದು ವೀರಶೈವರು ನಂಬವರು. ಮೇಲಿನ ವಿವರಣೆಯಿಂದ ಶಿವ—ಶಕ್ತಿಯರ ಅವಿನಾಭಾವಸಂಬಂಧವನ್ನು ವಾಚಕರು ಅರಿಯಬಹುದಾದೆ. ಇದನ್ನು ಜಗತ್ತಿಗೆ ತಿಳಿಸ ವದಕ್ಕಾಗಿ ಅರ್ಧನಾರೀನಟೇಶ್ವರನ ರೂಪತಾಳಿ ಲೀಲೆಮಾಡಿ ತೋರಿಸಿದ್ದಾರೆ. ಇದರಿಂದ ಶಿವ-ಶಕ್ತಿಯರು ಅವಿನಾಭಾವ ಸಂಬಂಧದಿಂವ ಇರುವರೆಂದು ಹೊಳೆಯುವದಿಲ್ಲವೇನು? ಕಾರಣ ಶಿವನನ್ನು (ಪುರುಷ) ಬಿಟ್ಟು ಶಕ್ತಿ ಪ್ರಕೃತಿ) ಯಾಗಲಿ, ಶಕ್ತಿ (ಪ್ರಕೃತಿ) ಯನ್ನು ಬಿಟ್ಟು ಶಿವ (ಪುರುಷ) ನಾಗಲಿ ಇಲ್ಲವೆಂದು ಧಾರಾಳವಾಗಿ ಹೇಳಬಹುದಲ್ಲವೇ ? ಇದಕ್ಕಾಗಿ ಶಿವನು ತನ್ನ ಅರ್ಧ ಶರೀರ ಗಂಡಾಗಿ ಅರ್ಧ ಶರೀರ ಹೆಣ್ಣಾಗಿ ತೋರಿಸಿದ್ದಾರೆಂದು ಪುರಾಣಗಳಲ್ಲಿ ಹೇಳಿದ್ದಾರೆ. ಇದವೇ ತಾತ್ವಿಕವಾಗಿ ಹೇಳುವದಾದರೂ ಕೆಳಗಿನಂತೆ.

ಸತ್ (ಪರಶಿವ) ಪರಮ ಶಾಂತಿಮಯ ಸ್ವರೂಪ ಚಿತ್ (ಪರಶಕ್ತಿ) ಪರಮ ಶಕ್ತಿಮಯ ಸ್ವರೂಪ ಪರಮ ಶಾಂತಿಮಯನೂ ಪರಮ ಶಕ್ತಿಮಯಳೂ ಕೂಡಿ ಅರ್ಧನಾರೀ ನಟೇಶ್ವರನ ಲೀಲೆ ತೋರಿದ ಶಿವ—ಶಕ್ತಿಯ ಒಂದೇ ರೂಪವಾಗಿದೆ. ಶಾಂತಿಮಯ ಪರಶಿವನ ಕಾರಣರೂಪ ಸಂಕಲ್ಪ ಪರಮ ಶಕ್ತಿಮಯ ಪಾರ್ವತಿಯ ಕ್ರಿಯಾ ಶಕ್ತಿಗಳೆರಡೂ ಕೂಡಿ ಅದದ್ದೇ ಈ ವಿರಾಟ ವಿಶ್ವದ ವಿರಾಟ ಲೀಲೆ.

ಕರಗಿದ ತುಪ್ಪ ನಿರಾಕಾರ ಪರಶಿವ. ಗಟ್ಟಿಯಾದ ತುಪ್ಪ ಸಾಕಾರ ಪರಶಕ್ತಿ ಸಮುದ್ರ ನಿರಾಕಾರ ಪರಶಿವ ಅದರ ಮೇಲಿನ ತೆರೆ ಏರು ಪೇರುಗಳು ಸಾಕಾರ ಪರಶಕ್ತಿ ಇದರಂತೆ ಶಿವ—ಶಕ್ತಿಯರೂ ಕೂಡ ಅವಿನಾಭಾವ ಸಂಬಂಧದಿಂದ ಕೂಡಿರುವವು. ಹೀಗೆ ಶ್ರೀ ರಾಮಕೃಷ್ಣರು ಹೇಳಿದ್ದಾರೆ.

ಓಡುವ ಹಾವಿನಲ್ಲಿಯೂ ಸ್ವಸ್ಥವಾಗಿ ಸುತ್ತಿಕೊಂಡು ಬಿದ್ದಿರುವ ಹಾವಿನಲ್ಲಿಯೂ ಯಾವ ಸಂಬಂಧವಿರುವದೋ ಅದೇ ಸಂಬಂಧವು ಶಕ್ತಿಯಲ್ಲಿಯೊ ಶಿವನಲ್ಲಿಯೂ ಇರುತ್ತದೆ. ಗತಿಯು ಶಕ್ತಿಯನ್ನೂ, ಸ್ಥಿರತೆಯು ಶಿವನನ್ನೂ ಹೋಲುವವು. ಇದು ಇವರಿಬ್ಬರ ಅವಿನಾಭಾವ ಸಂಬಂಧವಾಗಿರುವದೆಂದು ಶ್ರೀರಾಮಕೃಷ್ಣರು ಹೇಳಿದ್ದಾರೆ. ಬೆಂಕಿ ಮತ್ತು ಅದರ ದಾಹಕ ಶಕ್ತಿ ಇವುಗಳಲ್ಲಿರುವ ಸಂಬಂಧವನ್ನೇ ಶಿವಶಕ್ತಿಯರಲ್ಲಿಯೂ ಕೂಡ ಇರುವದು. ಇವೆಲ್ಲ ಅವಿನಾಭಾವ ಸಂಬಂಧವಾಗಿರುವವು. ಶಿವನು ಸಾಕಾರನೂ ನಿರಾಕಾರನೂ ಹೌದು ಅಲ್ಲದೆ ಅವನು ಸಾಕಾರ ನಿರಾಕಾರಗಳನ್ನೂ ಮೀರುವದು ಪರಶಿವನು ಸಾಕಾರನಾದಾಗ ಶಕ್ತಿ ಎನಿಸುವನು. ನಿರಾಕಾರನಾದಾಗ ಶಿವನೆನಿಸುವನು ಎರಡೂ ಮೀರಿದಾಗ ಪರಶಿವನೆನಿಸುವನು.

ಶಿವನು ಜ್ಞಾನರೂಪನು ಶಕ್ತಿ ಕ್ರಿಯಾರೂಪಳು. ಸೃಷ್ಟಿಸ್ಥಿತಿ, ಲಯ ಕಾರ್ಯವಿಲ್ಲದ ಸ್ಥಿತಿಯಲ್ಲಿ ವಿಚಾರಿಸಿದರೆ ಪರಶಿವ ನಿರ್ಗುಣ, ಸತ್ ಎಂದೆನಿಸುವನು. ಅದನ್ನೇ ಸೃಷ್ಟಿ ಸ್ಥಿತಿ ಲಯ ಮೊದಲಾದ ಕರ್ಮಾವಸ್ಥೆಯಲ್ಲಿ ವಿಚಾರಿಸಿದರೆ ಪರಶಕ್ತಿ ಚಿತ್‌ಸಗುಣ ಮಾಯೆ ಪ್ರಕೃತಿ ಎಂದೆನಿಸುವಳು. ಹೀಗೆ ಶಿವ ಶಕ್ತಿಯರು ಅವಿನಾಭಾವ ಸಂಬಂಧದಿಂದ ಎಲ್ಲಕಡೆಗೂ ವ್ಯಾಪಿಸಿದ್ದಾರೆಂದು ತೋರುವದು. ಇದನ್ನು ಆಧುನಿಕರ ಉದಾಹರಣಗಳಿಂದಲೂ ಸಿದ್ಧ ಮಾಡಲಾಗಿದೆ.

### ೪. ಶಕ್ತಿವಿಶಿಷ್ಟಾದ್ವೈತದ ಮೋಕ್ಷಸ್ಥಿತಿಯ ಸ್ವರೂಪ:

ವೀರಶೈವರು ಇದಕ್ಕೆ ಲಿಂಗಾಂಗಸಮರಸ ಅಥವಾ ಶಿವಜೀವರ ಐಕ್ಯ ಎಂದು ಹೇಳುವರು. ಅದ್ವೈತ ದ್ವೈತ ವಿಶಿಷ್ಟಾದ್ವೈತಿಗಳು ಮೋಕ್ಷವೆಂದರೆ ಸರ್ವ ದುಃಖಗಳ ನಿವೃತ್ತಿ ಪರಮಾನಂದ ಪ್ರಾಪ್ತಿ ಎಂದು ಹೇಳುವರು. ಇದು ಸರಿಯಲ್ಲ. ಸರ್ವ ದುಃಖಗಳೆಂದರೇನು? ಸುಖದುಃಖಗಳು ಯಾವವು? ನಮಗೆ ದುಃಖವೆನಿಸಿದ್ದು ಎರಡನೇಯವನಿಗೆ ಸುಖವೆನಿಸುವದು. ಒಬ್ಬರಿಗೆ ಸಕ್ಕರೆ ಸುಖವೆನಿಸಿದರೆ ಇನ್ನೊಬ್ಬರಿಗೆ ಅದೇ ಸಕ್ಕರೆಯಿಂದ ದುಃಖವಾಗು

ವದು. ಸುಖದುಃಖಕ್ಕೆ ಸಕ್ಕರೆ ಹೇಗೆ ಕಾರಣವಲ್ಲವೋ ಅದರಂತೆ ಈ ಜಗತ್ತು ಸುಖದುಃಖಗಳಿಗೆ ಕಾರಣವಲ್ಲ. ಅದೆಲ್ಲ ನಮ್ಮ ಮನಸ್ಸಿನ ಕಲ್ಪನೆ. ಸಕಲರಿಗೂ ಸಕಲದೇಶ ಕಾಲಸ್ಥಿತಿಗಳಲ್ಲಿ ದುಃಖವಾಗುತ್ತಿದ್ದರೆ ಮಾತ್ರ ಅದಕ್ಕೆ ದುಃಖವೆಂದು ಹೇಳಬಹುದು. ಅದರಂತೆ ಸುಖದ ಪರಿಸ್ಥಿತಿಯೂ ಆಗಿರುವದು. ಅದಕ್ಕೆ ಸರ್ವದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯೆಂದರೆ ಮೋಕ್ಷವಲ್ಲ ಒಂದು ಇದರ ಮೇಲಿಂದ ಸಿದ್ಧವಾಗುವದು. ಆದರೆ ಮೋಹವನ್ನು ಕ್ಷಯ ಮಾಡುವದೇ ಮೋಕ್ಷವೆಂದು ಅದರ ಶಬ್ದಗಳಿಂದಲೇ ಅರ್ಥಹೊರಡುವದು. ಅಂದರೆ ನಿರ್ಮೋಹದಿಂದ ದಾಸೋಹಭಾವದಿಂದ ಪ್ರಸಾದ ರೂಪದಿಂದ ಈ ಜಗದಲ್ಲಿ ಇದ್ದ ಶಿವಾಚಾರದ ಶಿವಲೋಕವನ್ನು ಭೂಕೈಲಾಸವನ್ನು ಮಾಡುವದಕ್ಕೆ ಮೋಕ್ಷವೆಂದು ಹೆಸರು. ಇದಕ್ಕಾಗಿ ವೀರಶೈವರು ಇಹ—ಪರದಲ್ಲಿ ಭೇದ ಮಾಡುವದಿಲ್ಲ. ಅದಕ್ಕಾಗಿ ಬಸವಣ್ಣನವರು—

"ದೇವಲೋಕ ಮೃತ್ಯುರ್ಲೋಕವೆಂಬುದು ಬೇರೆಮತ್ತುಂಟೇ? ಈ ಲೋಕದಲ್ಲಿ ಮತ್ತನಂತಲೋಕ. ಶಿವಲೋಕ ಶಿವಾಚಾರವಯ್ಯ. ಶಿವಭಕ್ತನಿದ್ದ ತಾವೇ ದೇವಲೋಕ, ಭಕ್ತನಂಗಣವೇ ವಾರಣಾಸಿ ಕಾಯವೇ ಕೈಲಾಸ ಇದು ಸತ್ಯ ದೇವನಾಣೆ ಕೂಡಲಸಂಗಮದೇವಾ"

"ಮೃತ್ಯುಲೋಕವೆಂದು ಕರ್ತಾರನ ಕಮ್ಮಟವಯ್ಯ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಕೂಡಲಸಂಗಮದೇವಾ" ವೀರಶೈವರು ಇಹಪರದಲ್ಲಿ ವಿಂಗಡಿಸಿ ಭೇದಮಾಡುವದಿಲ್ಲ. ದೇವ ಪ್ರಪಂಚ ಭೂಕೈಲಾಸವನ್ನಾಗಿ ಮಾಡುವರು ಮಾಯಾವಾದಿಗಳಂತೆ ಕಾಯಕ ಮಾಡದೆ ವೀರಶೈವನು ಈ ಲೋಕವನ್ನು ಹಾಳುಮಾಡುವದಿಲ್ಲ. ಅದಕ್ಕಾಗಿ ನಮ್ಮವರು ಕಾಯಕಕ್ಕೆ ಅತೀವ ಮಹತ್ವ ಹಾಗೂ ಹಿರೇಸ್ಥಾನವನ್ನು ಕೊಟ್ಟಿದ್ದಾರೆ. ಗುರುಜಂಗಮಕ್ಕಾದರೂ ಕಾಯಕವೇ ಬೇಕೆಂದು ಹೇಳಿದ್ದರ ಮರ್ಮವೇನು? ಜಗತ್ತು ಭ್ರಮೆ, ಸುಳ್ಳು, ಮಾಯೆ, ಅನಿತ್ಯವೆಂದಾಗ ಅವರ ಮೋಕ್ಷದ ಅರ್ಥವು ಸರಿಹೋಗುತ್ತಿತ್ತು. ಆದರೆ ವೀರಶೈವನು ಶಿವಶಕ್ತಿ ಪುರುಷ ಪ್ರಕೃತಿ ಸತ್ಯವೆನ್ನುವರು. ಆಗ ಈ ತೋರುವ ಜಗವೂ ಕೂಡ ಸತ್ಯವೆಂದಂತಾಗುವದು. ಇದುಕಾರಣನಾದ ಪರಶಿವನಿಂದ ಕಾರ್ಯರೂಪಳಾದ ಪರಶಕ್ತಿಯಿಂದ ಹೀಗೆಲ್ಲ ಹೊರಗೆ ಬಂದಿದೆ. ಇದು ಸದಾ ಸ್ಥಿತ್ಯಂತರ ರೂಪಾಂತರ ಹೊಂದುತ್ತಲೇ ಇರುವದು. ಸೃಷ್ಟ ವಸ್ತುಗಳಿಗೆಲ್ಲ

ಆಯುಷ್ಯವಿದೆ ಜನನ ಬಾಲ್ಯ ಯೌವನ ವಾರ್ಧಿಕ್ಯ ಮುಪ್ಪು ಸಾವುಗಳು ಇರುವವು. ಇವೆಲ್ಲ ರೂಪಾಂತರಗಳು ಕಡೆಗೆ ಪರಶಿವನಲ್ಲಿ ಜೀವ ರೂಪದಿಂದ ಇರುವದು. ಇದಕ್ಕೆ ನಾಶವಿಲ್ಲ. ಅದಕ್ಕಾಗಿ ಸಂಚಲನ ಸ್ವರೂಪಕ್ಕೆ ಚರ-ಶಕ್ತಿ-ಜಂಗಮವೆಂದು ಅನ್ನುವರು. ಇವು ಕ್ರಿಯಾ ಪ್ರವೃತ್ತಿಯುದು. ಕೇವಲದ ಶಬ್ದಸ್ವರೂಪಕ್ಕೆ ಸ್ಥಿರ-ಶಿವ-ಲಿಂಗವೆಂದು ಹೇಳುವರು. ಚರ ಶಕ್ತಿ ಜಂಗಮವು. ದಿವ್ಯ ನೆನಪನೇ ಅಂಗವಾಗಿ ಉಳ್ಳದ್ದು ಪರಶಿವನಿಗೆ ಪರಿಪೂರ್ಣವೂ ಅಖಂಡವೂ ಆದ ಅರುಹೆ—ಚಿತ್‌ಶಕ್ತಿಯು ಒಂದಿದೆ. ಈ ವಿಶ್ವವು ಶಿವನ ಅಂಕಿತದಲ್ಲಿ ಶಿವನ ನೆನಹಿನಿಂದ ಶಕ್ತಿಯು ಮುಖಾಂತರ ಹೊರಹೊಮ್ಮಿಹುದು. ಇದು ಸುಳ್ಳಲ್ಲ. ಮಿಥ್ಯವೂ ಅಲ್ಲ ರೂಪಾಂತರ ಹೊಂದಿ ಪುನಃ ಅವಿಭಾಭಾವ ಸಂಬಂಧದಿಂದ ಸಮರಸಹೊಂದಿ ಪರಶಿವನಲ್ಲಿ ಶಕ್ತಿ ರೂಪದಿಂದ ಹೊಂದಿಕೊಂಡು ಇರುವದು. ಇದಕ್ಕಾಗಿ ಜಗದಲ್ಲಿ ಮೋಹ ತೊರೆದು ಶರಣನಾಗಿ ನಿಷ್ಕಾಮಿಯಾಗಿ ಶಿವಾಚಾರ ಹೊಂದಿ ಶಿವಪ್ರಪಂಚವನ್ನು ಮಾರ್ಪಡಿಸಿ ಬಾಳುವದೇ ಮೋಕ್ಷಸ್ವರೂಪವಾಗಿದೆ.

ಮಹಾಕಾರಣ (ಸತ್—ಚಿತ್—ಆನಂದ) ದಿಂದ ಕಾರಣ (ವಿಜ್ಞಾನ) ಜಗತ್ತು. ಕಾರಣ (ವಿಜ್ಞಾನ) ದಿಂದ ಸೂಕ್ಷ್ಮ (ಮನ—ಬುದ್ಧಿ—ಪ್ರಾಣಗಳ) ಜಗತ್ತು. ಸೂಕ್ಷ್ಮಜಗದಿಂದ ಸ್ಥೂಲ (ಭೌತಿಕ) ಜಗತ್ತು ತೋರುವ ಜಗತ್ತು ಹೊರಗೆ ಬಂದವು. ಯಾವ ಪ್ರಕಾರ ಜಗತ್ತು ಹೊರಗೆ ಬಂದವು ಅದೇ ಪ್ರಕಾರ ನಾವು ಅದೇ ಮಾರ್ಗದಿಂದ ಸಾಗಬೇಕು. ಅಂದರೆ ಸ್ಥೂಲಜಗದಿಂದ ಸೂಕ್ಷ್ಮಕ್ಕೆ; ಸೂಕ್ಷ್ಮದಿಂದ ಕಾರಣಕ್ಕೆ; ಕಾರಣದಿಂದ ಮಹಾಕಾರಣಕ್ಕೆ ಸಾಗಬೇಕು. ಅದಕ್ಕೆ ಲಿಂಗಾಂಗ ಸಮರಸವೆನ್ನುವರು. ಇಷ್ಟಲಿಂಗದಿಂದ ಪ್ರಾಣಲಿಂಗಕ್ಕೆ ಪ್ರಾಣಲಿಂಗದಿಂದ ಭಾವಲಿಂಗಕ್ಕೆ ಭಾವಲಿಂಗದಿಂದ ಮಹಾಲಿಂಗಕ್ಕೆ ಸಾಗಬೇಕು. ಇದುವೇ ವೀರಶೈವರ ಮೋಕ್ಷದ ಅರ್ಥವು.

ಇದಕ್ಕಾಗಿ ಶರೀರಬೇಕು. ಅದರಲ್ಲಿ ಶಕ್ತಿಬೇಕು. ಮನಸ್ಸಿನಶಕ್ತಿ ಬುದ್ಧಿ ಶಕ್ತಿ ಹೃದಯದಶಕ್ತಿ ಮೊದಲಾದ ಶಕ್ತಿಗಳು ಅವಶ್ಯ ಬೇಕೇಬೇಕು. ಅದಕ್ಕಾಗಿಯೇ ಭಕ್ತಿ—ಜ್ಞಾನ—ಕ್ರಿಯೆಗಳು ಒಂದೇ ಆಗಿ ಮುಂದೆ ಸಾಗಬೇಕು. ಈ ಮೂರರಲ್ಲಿ ತಾಳಮೇಳವಿರಬೇಕು. ನಮಗೆ ಪರಶಿವನ ದರ್ಶನವಾಗುವದು. ಇದನ್ನೇ ಶ್ರೀರಾಮಕೃಷ್ಣರೂ ಕೂಡ ಹೇಳಿದ್ದಾರೆ.—ಮಾಯೆಯೇ ಪರಶಿವನ ಪರಿಚಯವನ್ನು ಮಾಡಿಕೊಡುವಳು. ಮಾಯೆಯು ಹೊರತು ಪರ

ಶಿವನ ಪರಿಚಯ ಮಾಡಿಕೊಡಲಿಕ್ಕೆ ಯಾರು ಸಮರ್ಥರು ? ಶಿವನ ಶಕ್ತಿಯನ್ನು ತಿಳಕೊಂಡ ಹೊರತು ಶಿವನನ್ನು ತಿಳಿಯುವ ಸಾಧನವು ದೊರೆಯುವದಿಲ್ಲೆಂದು ಶಕ್ತಿವಿಶಿಷ್ಟಾದ್ವೈತದ ಮೋಕ್ಷಸ್ವರೂಪವನ್ನು ಶ್ರೀರಾಮಕೃಷ್ಣರು ಹೇಳಿದ್ದಾರೆ. "ಸೈಷಾ ಪ್ರಸನ್ನಾ ವರದಾ ನೃಣಾಂ ಭವತಿ ಮುಕ್ತಯೇ" ಶಕ್ತಿಯು ಪ್ರಸನ್ನಳಾದಾಗ ಮಾತ್ರ ಮುಕ್ತಿಗೆ ಸಹಕಾರಳಾಗುವಳೆಂದು ಋಕ್‌ದೇವಿ ಸೂಕ್ತದಲ್ಲಿಯೂ ಕೂಡ ಹೇಳಿದ್ದಾರೆ. ಇದಾದರೂ ಮೇಲಿನ ದಕ್ಕೆ ಪುಷ್ಟಿಕೊಡುತ್ತದೆ.

ಪರಮಾತ್ಮನ ಕೀಲಿ ಹಾಗೂ ಕೀಲಿಕೈಗಳೆರಡೂ ಮಹಾ ತಾಯಿ ಪರ ಶಕ್ತಿಯ ಹತ್ತಿರವೇ ಇರುವವು. ಅವಳೂ ತನ್ನ ಮಾಯೆಯನ್ನು ಸರಿಸಿ ಓರೆ ಮಾಡಿ ಪರಶಿವನ ಬಾಗಿಲ ತೆಗೆದು ಅವನು ತಾನು ಒಂದಾಗಿಯೇ ತೋರುವರು. ನಾವು ಪರಮಾತ್ಮನ ಉಪಾಸನೆಯನ್ನು ಮಾಡಿದ್ದರೂ ಕೂಡ ಅವನು ತನ್ನ ಶಕ್ತಿಗೆ ಹೇಳುವನು. ಆಗ ತಾಯಿ—"ಇರಲಿ ನಿನ್ನ ಉಪಾಸನೆ ಮಾಡಿದರೂ ಅಷ್ಟೇ ನನ್ನ ಉಪಾಸನೆ ಮಾಡಿದರೂ ಅಷ್ಟೇ. ನಾನು ನನ್ನ ಮಾಯೆಯನ್ನು ಓರೆಮಾಡಿ ಭಕ್ತನಿಗೆ ದರ್ಶನಮಾಡಿಸುವೆನು" ಎಂದು ಹೇಳುವಳು. ಇದಕ್ಕೆ ಸ್ವಲ್ಪ ತಡವಾಗುವದು. ಪರಶಿವನು ಸಾಧಕನ ಮಾರ್ಗ ದಲ್ಲಿಯ ಅಡೆತಡೆಗಳನ್ನು ಸರಿಪಡಿಸಲಾರನು. ತಾಯಿಯೇ ಅವುಗಳನ್ನೆಲ್ಲ ಸರಿ ಪಡಿಸುವಳು ಎಂದು ಶ್ರೀರಾಮಕೃಷ್ಣರು ಹೇಳಿದ್ದರ ಮರ್ಮವಾದರೂ ಏನು? ಅದನ್ನೇ ಸಮರ್ಥಿಸುವದು. ಇದಕ್ಕಾಗಿಯೇ ವೀರಶೈವರು ಶಿವ ಶಕ್ತಿಯರ ಗುರುತಾದ ಲಿಂಗವನ್ನು ಅಂಗದ ಮೇಲೆ ಧರಿಸಿ ಪೂಜಿಸುವರು ಅದಕ್ಕೆ ಮೋಕ್ಷಸ್ವರೂಪ ಹೊಂದಲು ಅವರಿಗೆ ಎಡರುತೊಡರುಗಳು ಬರದೆ ಸರಾಗವಾಗಿ ಮಾರ್ಗಕ್ರಮಣವಾಗಿ ಲಿಂಗಾಂಗ ಸಮರಸಕ್ಕೆ ಹೋಗಲಿಕ್ಕೆ ಬರುವದು.

ಮೋಹವು ಮನಸ್ಸಿಗೆ ಸಂಬಂಧಿಸಿದ್ದು ಅದಕ್ಕೆ ಆದಯ್ಯನು ಮೋಕ್ಷದ ಸ್ವರೂಪವನ್ನು ಬಹು ಚನ್ನಾಗಿ ವರ್ಣಿಸಿದ್ದಾನೆ.—ಸಕಲೇಂದ್ರಿಯಗಲ್ಲಿ ವಿಕಾರಿಸುವ ಮನವ ಸೆಳೆದು ನಿಂದಾತನೇ ಸುಖಿ। ಪಂಚೇಂದ್ರಿಯಂಗಳಿಚ್ಛೆಯಲ್ಲಿ ಕೀಳು ಮನಂಗೊಂದು ಸುಳಿವಾತ ದುಃಖಿ। ಮನವು ಬಹಿರ್ಮುಖವಾದಡೆ ಅವಿರಳ ಜ್ಞಾನಿ। ಮನವು ಮಹದಲ್ಲಿ ನಿಂದಿರಲಾತ ಮುಕ್ತನು ॥

ಅಂದರೆ ಸಕಲ ಸುಖ ದುಃಖ ಬಂಧ ಮೋಕ್ಷ ಜ್ಞಾನ ಅಜ್ಞಾನಗಳಲ್ಲಿ ಈ ಮನದಲ್ಲಿಯೇ ಇರುವದೆಂದು ಚನ್ನಾಗಿ ಬಣ್ಣಿಸಿದ್ದಾರೆ. ಮನಸ್ಸಿಗೆ

ಸಂಬಂಧಿಸಿದ್ದೇ ಮೋಹ ಆ ಮೋಹವನ್ನು ಕ್ಷಯಿಸಿದರಾಯಿತು ಮೋಕ್ಷವಾದಂತೆ. ಅದ್ವೈತ ಮೊದಲಾದವರು ಸತ್ತ ಬಳಿಕ ಜೀವಾತ್ಮನಿಗೆ ಮೋಕ್ಷವಾಗುವದೆಂದು ನಂಬಿರುವರು. ಇದು ಉದ್ರಿ ವ್ಯವಹಾರವಲ್ಲ. ಶರೀರದಲ್ಲಿ ಇರುವಾಗಲೇ ಆ ಸ್ಥಿತಿಯನ್ನು ಅನುಭೋಗಿಸುವದು. ಅದಕ್ಕೆ ಮೋಹವನ್ನು ಸಂಪೂರ್ಣ ಕ್ಷಯಿಸಿದರೆ ಆ ದಿವ್ಯ ಸಮರಸಾನಂದದ ಸ್ಥಿತಿಯು ತಾನೇ ಪ್ರಾಪ್ತವಾಗುವದು. ಇದೇ ಲಿಂಗಾಂಗ ಸಮರಸವೆನಿಸುವದು. ಶರೀರ ಆತ್ಮಗಳ ನಡುವು ನಸ್ಸೇ ಎರಡನ್ನುಂಟುಮಾಡುವದು. ಅದನ್ನು ಕ್ಷಯಿಸಿದರೆ ಅಂದರೆ ಶರೀರದ ಕಡೆಗೆ ಅದನ್ನು ಹರಿಯಗೊಡದೆ ಜೀವಾತ್ಮನ ಕಡೆಗೆ ಹರಿಯುವಂತೆ ಮಾಡಿದರೆ ಅದೇ ಮನಸ್ಸು ಶಿವನಾಗುವನು. ಆಗ ಲಿಂಗಾಂಗ ಸಮರಸವಾಗುವದು. ವಿಷಯಗಳ ಕಡೆಗೆ ಹರಿಯುವದನ್ನು ಬಿಡಿಸಿದರೆ ಅದನ್ನು ಕ್ಷಯ ಮಾಡಿದಂತೆ ಆಯಿತು. ಆಗ ಮೋಕ್ಷಸ್ಥಿತಿಯು ಪ್ರಾಪ್ತವಾಗುವದು. ಇದನ್ನೇ ವೀರಶೈವರು ಪಡೆಯಲಿಕ್ಕೆ ಪಂಚಾಚಾರ, ಅಷ್ಟಾವರಣ, ಷಟ್‌ಸ್ಥಲಗಳಂತೆ ಆಚರಿಸುವರು. ಅಂದರೆ ಇವುಗಳಿಂದ ಶರೀರಶುದ್ಧಿಯಾಗಿ ಶಿವನಲ್ಲಿ ಕೂಡುವವು. ಆಗ ಲಿಂಗಾಂಗ ಸಮರಸವಾಗುವದು. ಇದನ್ನೇ ಸ್ವಲ್ಪದರಲ್ಲಿ ವಿವರಿಸುವೆವು.—

ವೀರಶೈವನು ಮೋಕ್ಷವೆಂಬ ಕಟ್ಟಡ ಕಟ್ಟಲು ಮೊದಲು ಪಂಚಾಚಾರಗಳು ಅವಶ್ಯಬೇಕು. (೧) ಸದಾಚಾರ (೨) ನಿಯತಾಚಾರ (೩) ಗಣಾಚಾರ (೪) ಭೃತ್ಯಾಚಾರ (೫) ಲಿಂಗಾಚಾರ ಇವುಗಳಿಂದ ಶರೀರ ಮನ ಬುದ್ಧಿಗಳು ಶುದ್ಧವಾಗುತ್ತ ಹೋಗುವವು. ಇವುಗಳಿಗೂ ಅಷ್ಟಾವರಣಗಳಿಗೂ ಸಂಬಂಧವಿರುವದು ಇವೆಲ್ಲ ಕೂಡಿ ಸಾಗಬೇಕಾಗುವದು. ಗುರು, ಲಿಂಗ, ಜಂಗಮ ಪಾದೋದಕ ಪ್ರಸಾದ ಶಿವಮಂತ್ರ ವಿಭೂತಿ ರುದ್ರಾಕ್ಷಿ ಇವು ಬಾಹ್ಯ ಅಷ್ಟಾವರಣಗಳಿರುವವು. ಇವುಗಳಿಂದ ಇವುಗಳ ಸಹಾಯದಿಂದ ಅಂತರಿಕ ಅಷ್ಟಾವರಣಗಳನ್ನು ಪಡೆಯಬೇಕು. ಆಗ ಶಿಷ್ಯನ ಸ್ಥಿತಿಗೆ ಏರಿದಾಗ ಗುರುವಾಗುವನು ಲಿಂಗವಾಗುವನು ಜಂಗಮನಾಗುವನು. ಆಗ ಮಹಾವಿಭೂತಿಯಾಗುವನು ಅವನೇ ರುದ್ರಾಕ್ಷಿ ಶಿವನ ಕಣ್ಣನ್ನು ಜ್ಞಾನನೇತ್ರವನ್ನು ಪಡೆಯುವನು. ಆಗ ಇವನು ಮುಟ್ಟಿದ್ದೆಲ್ಲ ತಟ್ಟಿದ್ದೆಲ್ಲ ಪವಿತ್ರ ಪೂಜ್ಯವಾಗಿ ನೀರು ಪಾದೋದಕವಾಗುವದು. ಅನ್ನ ಪ್ರಸಾದವಾಗುವದು ಆಗ ಅವನ ನುಡಿ ಮಂತ್ರಗಳಾಗುವವು ಎಂದೂ ಹೇಳಬಹುದು. ಅಲ್ಲದೆ ಇನ್ನೊಂದು ಬಗೆಯಿಂದ ಹೇಳಬೇಕೆಂದರೆ **ಗುರುವಿನ** ಕಡೆಯಿಂದ **ಲಿಂಗದ** ಜ್ಞಾನ ಪಡಕೊಂಡು

ಅವನಿಂದ ಗೌಪ್ಯವಾಗಿ **ಮಂತ್ರೋ**ಪದೇಶವನ್ನು ಹೊಂದಿ ನಿಷ್ಕಾಮವಾಗಿ ಭಕ್ತಿ-ಕರ್ಮಗಳನ್ನು ಮಾಡಿ ಅದರ ಫಲವನ್ನು ನರರಿಗೆ ಹರನೆಂದು (ಲಿಂಗಾಂಗಿಗಳು ಶಿವನೆಂದು) ಬಗೆದು ದಾಸೋಹಭಾವದಿಂದ ಅರ್ಪಿಸಿ ಉಳಿದ ಫಲವನ್ನು (ಮಿಕ್ಕ ಪ್ರಸಾದವನ್ನು) **ಪ್ರಸಾದ**ವೆಂದು ಸ್ವೀಕರಿಸಿ ಉದಕವನ್ನು ಪಾದೋದಕ ಮಾಡಿ ಸೇವಿಸಿ ಮಹಾ **ವಿಭೂತಿ** ಅಂದರೆ ಮಹಿಮಾಶಾಲಿ ಸಿದ್ಧಪುರುಷ ಪವಾಡ ಪುರುಷನಾಗಿ **ರುದ್ರಾಕ್ಷ** ಪಡೆವ ಅಂದರೆ ಶಿವನ ಮೂರನೇ ಕಣ್ಣನ್ನು ಅಂದರೆ ಜ್ಞಾನನೇತ್ರವನ್ನು ಪಡೆದು **ಜಂಗಮ** ಮೂರ್ತಿ ಜಗಭರಿತನಾಗೆಂದು ಈ ಅಷ್ಟಾವರಣಗಳು ಸೂಚಿಸುವವು. ಹೀಗೆ ಮೂರು ಅರ್ಥಗಳಿಂದ ಅಷ್ಟಾವರಣಗಳನ್ನು ಉಪಯೋಗಿಸಿಕೊಳ್ಳುತ್ತ, ಷಟ್-ಸ್ಥಲಗಳನ್ನು ಕ್ರಮವಾಗಿ ಹತ್ತುತ್ತಹೋಗಬೇಕು.

ಭಕ್ತಸ್ಥಲ ಮಹೇಶಸ್ಥಲ ಪ್ರಸಾದಿಸ್ಥಲ ಪ್ರಾಣಲಿಂಗಿಸ್ಥಲ ಶರಣಸ್ಥಲ ಐಕ್ಯಸ್ಥಲ ಆಯಾಸ್ಥಲಗಳಲ್ಲಿ ಇದ್ದಾಗ ಬೇರೆ ಬೇರೆ ಆರು ಲಿಂಗಗಳನ್ನು ಮಾನವನು ಪಡೆಯುವನು ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಈ ಆರು ಲಿಂಗಗಳನ್ನು ಆಯಾಸ್ಥಲವನ್ನು ಹೊಂದಿದ ಬಳಿಕ ಪಡೆಯುವನು. ಇವನ್ನೇ ಇಷ್ಟ ಪ್ರಾಣ ಭಾವಲಿಂಗಗಳಲ್ಲಿ ಎರಡೆರಡಂತೆ ಮಾಡಿದ್ದಾರೆ. ಇಷ್ಟಲಿಂಗದಿಂದ ಪ್ರಾಣಲಿಂಗ ಪ್ರಾಣಲಿಂಗದಿಂದ ಭಾವಲಿಂಗಗಳ ಕಡೆಗೆ ಏರಿ ಕಡೆಗೆ ಮಹಾಲಿಂಗವನ್ನು ಹೊಂದುವವೇ ಮೋಕ್ಷಸ್ವರೂಪವಾಗಿದೆ.

ಈ ಷಟ್‌ಸ್ಥಲಗಳಲ್ಲಿ ಅಂಗಸ್ಥಲ ೪೪, ಲಿಂಗಸ್ಥಲಗಳು ೫೭ ಇರುವವು. ಈ ೪೪ ರಿಂದ ಶರೀರ ಮನ ಬುದ್ಧಿಗಳು ಸುಧಾರಣೆಯಾಗುವವು. ಈ ೫೭ ಸ್ಥಲಗಳಿಂದ ಜೀವಾತ್ಮನ ಸುಧಾರಣೆಯಾಗಿ ಜಡದಿಂದ ಜಾಡ್ಯಕ್ಕೆ ಒಳಗಾದವನು. ಜಾಡ್ಯದಿಂದ ಬಿಡುಗಡೆಯಾಗಿ ಜೀವಾತ್ಮನು ಶಿವನಾಗುವನು. ಆಗ ಶಿವಜೀವರು ಐಕ್ಯರಾದಂತೆ ಆಗುವದು. ಲಿಂಗಾಂಗ ಸಮರಸವಾದಂತೆ ಆಗುವದು. ಅಲ್ಲದ ಶರೀರವೂ ಕೂಡ ಲಿಂಗದ ಗುಣಗಳನ್ನು ಹೊಂದುವದೆಂದು ಹಿಂದೆ ವಿವರಿಸಲಾಗಿದೆ. ಬರೇ ಜೀವ ಶಿವನಾಗಿದೆ ಎಂದು ಹೇಳಿದರೆ ತೀರದು. ಅದರಂತೆ ಶರೀರದಲ್ಲಿ ಪ್ರತಿ ಇಂದ್ರಿಯಗಳಲ್ಲಿ ಲಿಂಗದ ಸೆಲೆ ಕಲೆಗಳೂ ಒಡಮೂಡಬೇಕು. ಅಲ್ಲಮಪ್ರಭು, ಹರಳಯ್ಯ ಮೊದಲಾದ **ಶರಣರ** ಸ್ಥಿತಿಯು ಶರೀರದಲ್ಲಿ ಬರಬೇಕು. ಆಗ ಮೋಕ್ಷ ಸ್ಥಿತಿ ಪ್ರಾಪ್ತವಾದಂತಾಯಿತು. ಇಂಥವರು ತಮ್ಮ ಶರೀರವನ್ನು ಬೇಕಾದಾಗ ಬಿಟ್ಟು

ಹೊರಡಲಿಕ್ಕೆ ಬರುವದು. ಬೇನೆ ಬೇಸರಿಕೆ ಬಾರದೆ ವಿಷ ತಕ್ಕೊಳ್ಳದೆ ಎಲ್ಲರ ಮಧ್ಯದಲ್ಲಿ ಕುಳಿತು ಬಯಲಾಗಲಿಕ್ಕೆ ಬರುವದು. ಅನೇಕ ಶರಣರು ಇದನ್ನು ಸಾಧಿಸಿದ್ದರು. ಇದುವೇ ವೀರಶೈವರ ಮೋಕ್ಷ ಸ್ಥಿತಿಯು. ಸತ್ತಬಳಿಕ ಜೀವಹೋಗಿ ಶಿವನಲ್ಲಿ ಕೂಡುವದೆಂದು ವೀರಶೈವರು ನಂಬಿಲ್ಲ. ಸಾಯುವ ಪೂರ್ವದಲ್ಲೇ ಜೀವವನ್ನು ಶಿವನಲ್ಲಿ ಬೆರಿಸಿ ಬಿಡುವದೇ ವೀರಶೈವರ ಮೋಕ್ಷದ ಸ್ಥಿತಿಯು. ಇದನ್ನೇ ಈ ಷಟ್‌ಸ್ಥಲಗಳನ್ನು ಕ್ರಮವಾಗಿ ಏರಿದರೆ ಸಾಧಿಸುವದೆಂದು ಗೊತ್ತಾಗುವದು.

(೧) ಭಕ್ತಸ್ಥಲಃ— ಪರಮಾತ್ಮಬೇರೆ ತಾನುಬೇರೆ ಶಿವನನ್ನು ಲಿಂಗ ರೂಪದಲ್ಲಿ ಪ್ರೀತಿ ವಿಶ್ವಾಸದಿಂದ ಪೂಜಿಸುವದು. ದ್ವೈತವು ಪ್ರಾರಂಭದಲ್ಲಿ ಸುರು ಆಗುವದು. ಇದೇ ಶಕ್ತಿವಿಶಿಷ್ಟದ ಆರಂಭ ಶಕ್ತಿಯನ್ನು ಶಿವನಲ್ಲಿ ಕೂಡಿಸುವ ಮೊದಲಿನ ದಾರಿ. ಇದರಿಂದ ಕುಂಡಲಿನಿಯು ಜಾಗ್ರತವಾಗುವಳು. ಭಕ್ತನು ನಿರ್ವಿಷಯಿಯಾಗಹತ್ತುವನು. ಇದರಲ್ಲಿ ಸದಾಚಾರವು ಒಳ್ಳೇ ಮಹತ್ವದ ಆಚರಣೆಯಾಗಿರುವದು. ಭಕ್ತಿ ಸದಾಚಾರಗಳು ಜೋಡಿಯಾಗಿ ಸಾಗುವವು. ಇದು ವೇದಾಂತದ ಭಕ್ತಿಯೋಗವಾಗಿದೆ. ಇದು ಭಾವ ಪ್ರಧಾನವಿರುವದು.

ಮಹೇಶ್ವರಸ್ಥಲಃ— ಇದು ಬುದ್ಧಿಪ್ರಧಾನವಾಗುವದು. ಭಕ್ತಿಯ ಸಾಧನೆಯು ಮುಂದುವರಿದಂತೆ ಮಹೇಶಸ್ಥಲವು ಸಾಧಿಸುವದು. ಇದು ಸಾಧಿಸಿದಾಗ ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷ ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ ಜ್ಞಾನದಲ್ಲಿ ಪರಮಾನಂದ ನೆಲಗೊಳ್ಳಹತ್ತುವದು. ಮಹೇಶಸ್ಥಲವು ಭಕ್ತಿಯಲ್ಲಿ ಮುಂದುವರಿದ ಸಾಧಕನಿಗೆ ಸಾಧಿಸುವದು. ಇದರಲ್ಲಿ ಗುರುಲಿಂಗದ ಜ್ಞಾನವಾಗುವದು. ಇಲ್ಲಿ ಕೂಡ ಸದಾಚಾರ ಅತಿ ಅವಶ್ಯಬೇಕು.

ಪ್ರಸಾದಿಸ್ಥಲ;— ಇದು ಕ್ರಿಯೆಗೆ (ಶರೀರಕೆ) ಸಂಬಂಧಿಸಿದ್ದು ಇದು ವೇದಾಂತದ ಕರ್ಮಯೋಗವೆನಿಸುವದು. ಭಾವವಿಚಾರ (ಭಕ್ತಿ+ಜ್ಞಾನ) ಕೆಳಗೆ ಹೊಳೆದ ಸತ್ಯಾನುಭವವನ್ನು ಆಚರಣೆಯಲ್ಲಿ ತರುವ ಸ್ಥಲವು ಇದಾಗಿದೆ.

ಕ್ರಿಯಾಭಕ್ತಿಗೆ ಜ್ಞಾನಗಳು ಕ್ರಮವಾಗಿ ಕೂಡಿದರೆ ವೇದಾಂತದ ಪೂರ್ಣ ಯೋಗವಾಗುವದು. ವೇದಾಂತದಲ್ಲಿ ಭಕ್ತಿಯಿಂದ ಮುಕ್ತಿ, ಜ್ಞಾನ

ದಿಂದ ಮುಕ್ತಿ, ಕರ್ಮದಿಂದ ಮುಕ್ತಿ ಎಂದು ಪ್ರತ್ಯೇಕ ಯೋಗಗಳನ್ನು ಹೇಳುವದು. ಆದರೆ ವೀರಶೈವರಲ್ಲಿ ಈ ಆರೂ ಸ್ಥಲಗಳು ಕೂಡಿದಾಗ ಶಿವ ಯೋಗವಾಗುವದು. ಇದಕ್ಕೆ ಶಕ್ತಿವಿಶಿಷ್ಟಾದ್ವೈತವೆನ್ನುವರು. ನಿಷ್ಕಾಮ ಕರ್ಮಮಾಡಿ ಗಳಿಸಿದ್ದನ್ನು ತ್ರಿವಿಧದಾಸೋಹಕ್ಕೆ ಬಳಿಸಿ ಉಳಿದದ್ದನ್ನು ಪ್ರಸಾದ ರೂಪದಿಂದಲೇ ಸೇವಿಸುವದೇ ಪ್ರಸಾದಿಸ್ಥಲವೆನಿಸುವದು. ಪ್ರಸಂಗಬಂದರೆ ಅದನ್ನೂ ಕೂಡ ಅನ್ಯರಿಗೆ ಕೊಟ್ಟು ಉಪವಾಸ ಸಹ ಸಾಯುವದೇ ಪ್ರಸಾದಿ ಸ್ಥಲವೆನಿಸುವದು.— ಲಿಂಗಕ್ಕೆಂದೇ ನೆನೆವೆ ಮಾಡುವೆ, ಕೊಡುಕೊಳ್ಳುವ ಸಕಲ ಪದಾರ್ಥವೇ ಲಿಂಗಕ್ಕೆಂದೇ ಭಾವಿಸುವೆ. ಅಂಗಗುಣಗಳನರಿಯೆ ಲಿಂಗಕ್ಕೆಂದೇ ಕಾಮಿಸುವೆ ನಿಃಕಾಮಿಯಾಗಿ ಎನ್ನದೇಹೇಂದ್ರಿಯ ಮನಪ್ರಾಣಾ ದಿಗಳು ಲಿಂಗದ ಸತಿಯಾಗಿ ಲಿಂಗಕ್ಕೆಂದೇ ಬಯಸಿ ಲಿಂಗಪ್ರಾಣಿಗಳಾದ ಕಾರಣ ಲಿಂಗಕೆಂದೇ ಕೈಕೊಂಬೆನು. ಅನರ್ಪಿತವನರಿಯೇ ಕೂಡಲಸಂಗಮದೇವಾ. ಇದು ಪ್ರಸಾದಿಸ್ಥಲದ ಬಲವಾದ ವಚನವಾಗಿದೆ. ಇಲ್ಲ ಶಿವಲಿಂಗದ ಅರಿವೆ ಯಾಗುವದು.

ಪ್ರಾಣಲಿಂಗಿಸ್ಥಲಃ— ಮೂರೂಸ್ಥಲವನ್ನು ಸಾಧಿಸಿದ ಬಳಿಕ ತಾನೇ ದೇವರೆಂಬ ಭಾವ ಬರುವದು. ಶಿವೋಹಂ ಭಾವ ಅಳವಡುವದು. ಲಿಂಗ ಪ್ರಾಣಿಯಾಗುವನು. ಹೊರಗೆ ಹುಡುಕುತ್ತಿರುವ ಶಿವನು ತನ್ನೊಳಗೆ ತಾನೇ ಇರುವನೆಂದು ಅನುಭವವನ್ನು ಪ್ರಾಣಲಿಂಗಿ ಸ್ಥಲದಲ್ಲಿ ಪಡೆಯುವನು. ಆಗ ದೇಹವೇ ದೇಗುಲವಾಗುವದು. ಜೀವಾತ್ಮನೇ ಲಿಂಗವಾಗುವದು. ಹೊರಗಿನ ಲಿಂಗಪೂಜೆ ತಾನೇ ನಿಂತು ಹೋಗುವದು. ಇಲ್ಲಿ ಲಿಂಗಾಂಗ ಸಮರಸವಾ ಗುವದು. ಆಗ ಸರ್ವ ಇಂದ್ರಿಯಗಳಲ್ಲಿ ಲಿಂಗಗುಣಗಳು ಅಳವಡುದವು. ತನ್ನ ತಾನರಿದಡೆ ತಾನೆ ಗುರು. ತಾನೇ ಲಿಂಗ. ತನ್ನ ನಿಷ್ಪತ್ತಿಯೇ (ಸ್ವರೂಪ ಜ್ಞಾನ) ಜಂಗಮ ಇಂತೀ ತ್ರಿವಿಧವು ಒಂದಾದಡೆ ರಾಮೇಶ್ವರ ಲಿಂಗವು ತಾನೇ. ಇಲ್ಲಿ ಜಂಗಮಲಿಂಗದ ಜ್ಞಾನವಾಗುವದು.

ಶರಣಸ್ಥಲ;— ಇದೇ ಜೀವನ್ಮುಕ್ತನ ಸ್ಥಿತಿ. ಇವನೇ ಸ್ಥಿತಪ್ರಜ್ಞ, ಯಾವ ಚಿಂತೆ ಆಶೆ ವ್ಯಾಧಿಗಳಿರುವದಲ್ಲ. ಆದರೂ ಜೀವಕೋಟಿಯನ್ನು ಉದ್ಧಾರಮಾಡುವ ಹೊಣೆಯನ್ನು ಹೊತ್ತು ಪ್ರಪಂಚದಲ್ಲಿ ಇರುತ್ತಾನೆ. ಯಾವ ಕರ್ಮದ ಕಟ್ಟಳೆ ಇಲ್ಲ. ಎಲ್ಲರಲ್ಲಿ ಆಗ ಇವನು ಪರಮಾತ್ಮನನ್ನೆ ನೋಡು ವನು. ಭವಿಯ ಮುಖ ನೋಡನೆಂದು ಹೇಳುವವರ ತಾತ್ಪರ್ಯವೇ ಇದಾಗಿವೆ. ಕಲ್ಲು ಭಂಗಾರ ಹೆಂಟೆ ಚಂಡಾಲ ಪಾಪಿ ಬ್ರಾಹ್ಮಣ ಆಕಳು ಹುಲಿ ನಾಯಿ

ಶರಣ ಸೂಳೆ ಮೊದಲಾದವುಗಳನ್ನೆಲ ಸಮದೃಷ್ಟಿಯಿಂದ ನೋಡುವನು. ಆಗ ಸುಖ ದುಃಖಗಳಲ್ಲಿ ಸಮದೃಷ್ಟಿಯನ್ನು ಪಡೆಯುವನು. ಶಿವ–ಶರಣರಲ್ಲಿ ಭೇದ ವಿರುವದಿಲ್ಲ. ಶರಣರು ಪ್ರತ್ಯಕ್ಷ ದೇವರೇ ಸರಿ. ಇಲ್ಲಿ ಪ್ರಸಾದಲಿಂಗದ ಜ್ಞಾನ ನವಾಗುವದು.

ಐಕ್ಯಸ್ಥಲ:— ಶಿವ ಜೀವರು ಒಂದಾಗುವ ಸ್ಥಿತಿ. ಸಾಧಕನು ಐದು ಸ್ಥಲಗಳನ್ನು ಹತ್ತಿ ಆರನೇದ್ದರಲ್ಲಿ ಅನಂತನಲ್ಲಿ ಲೀನನಾಗುವ ಸ್ಥಿತಿ ಬರುವದು. ಇದಕ್ಕೆ ಮುಕ್ತಾವಸ್ಥೆ ಎನ್ನುವರು. ಐದೂ ಸ್ಥಲದಲ್ಲಿ ದ್ವೈತಭಾವವು ಇದ್ದೇ ಇರುದದು. ಆರರ ಕಟ್ಟಕಡೆಗೆ ದೇಹಬಿಟ್ಟ ಬಳಿಕ ಮುಕ್ತಾವಸ್ತೆ, ಇಷ್ಟರಲ್ಲಿ ತೂರ್ಯಾತೀತ ಸಮಾಧಿಯನ್ನು ಸದಾ ಅನುಭವಿಸಿರುವನು. ಮುಕ್ತಾತ್ಮನಾಗುವನು, ಆದರೂ ಈ ಮುಕ್ತಾತ್ಮನು ಪ್ರಸಂಗ ಬಂದಾಗ ಅವಶ್ಯವಿದ್ದಾಗ ಭೂಮಿಯಲ್ಲಿ ಜನಿಸಿ ಲೋಕಕಲ್ಯಾಣ ಮಾಡಲು ಬರುವರು. ಇವರು ಕಾಯ್ದಿರಿಸಿದ ದಂಡಿನಂತೆ ಇರುವರು. ಇದೇ ವೀರಶೈವರ ಶಕ್ತಿ ವಿಶಿಷ್ಟಾದ್ವೈತದ ಮುಕ್ತಾವಸ್ಥೆಯ ಸ್ವರೂಪವು. ಇದಕ್ಕಾಗಿ ವೀರಶೈವರ ಷಟ್ ಸ್ಥಲವು (ಶಿವಯೋಗವು) ವೇದಾಂತಿಗಳ ಪೂರ್ಣಯೋಗಕ್ಕಿಂತ ಹೆಚ್ಚಿನದು. ಸುಲಭ, ಸರಳ ಎಂದು ಹೇಳಲಿಕ್ಕೆ ಯಾವ ಅಡ್ಡಿ ಇಲ್ಲ. ಇಲ್ಲಿ ಮಹಾ ಲಿಂಗದ ಜ್ಞಾನವಾಗುವದು. ವೇದಾಂತಿಗಳಂತೆ ಶಿವ ಬೆರೆತು ಹೋಗಿ ಒಂದಾ ವದೆಂದು ನಮ್ಮ ಮೋಕ್ಷಸ್ವರೂಪ ಹೇಳುವದಿಲ್ಲ.

ಈ ಆರೂ ಸ್ಥಲಗಳನ್ನು ಹತ್ತಿ ಆರೂ ಲಿಂಗಗಳ ಜ್ಞಾನವಾಗಲಿಕ್ಕೆ ಮೊದಲು ಇಷ್ಟಲಿಂಗ ಪೂಜೆಬೇಕು. ಜಗತ್ತಿನಲ್ಲಿ ಇಷ್ಟಲಿಂಗ ಧರಿಸಿ ಪೂಜಿಸುವ ಹಿರೇ ಶ್ರೇಷ್ಠ ಅತ್ಯುಚ್ಚತತ್ವವೇ ಇವರದಾಗಿದೆ. ಇದನ್ನು ಉಳಿದ ಯಾರೂ ಕಂಡುಹಿಡಿದಿಲ್ಲ. ಏಕಾಂತದಲ್ಲಿ ಪದ್ಮಾಸನ ಹಾಕಿ ದೃಷ್ಟಿ ಹೆಳಚದೆ ನೋಡುತ್ತ ಗುರುಮಂತ್ರ ಧ್ಯಾನಿಸುತ್ತ ನಿತ್ಯ ಕೆಲಹೊತ್ತು ಕುಳಿತರೆ ಮನಸ್ಸಿನ ದುಷ್ಟ ವ್ಯಾಪಾರಗಳು ನಿಲ್ಲಹತ್ತುವವು ಮನವು ಶಾಂತವಾಗಹತ್ತುವದು. ಆಗ ಒಂದೊಂದು ಸ್ಥಾನಗಳನ್ನು ಏರುತ್ತ ಸಾಗಲು ಒಂದೊಂದು ಲಿಂಗದ ಜ್ಞಾನವಾಗುವದು. ಅಲ್ಲದೆ ಸರ್ವ ಇಂದ್ರಿಯಗಳಲ್ಲಿ ಲಿಂಗ ಧ್ಯಾನವೂ ನಡೆದು ಸರ್ವ ಕಡೆಗೆ ಲಿಂಗ ಕಳೆಯೇ ಪ್ರಕಟವಾಗಹತ್ತುವದು. ಆಗ ಲಿಂಗಾಂಗ ಸಮರಸವಾಗುವದು ಶಿವಜೀವರು ಐಕ್ಯರಾಗುವರು ಕಾಯುಶುದ್ಧಿಯಾಗುವದು. ಇದೇ ವೀರಶೈವರ ಶಕ್ತಿ ವಿಶಿಷ್ಟಾದ್ವೈತದ ಮೋಕ್ಷದ ಸ್ವರೂಪವಾಗಿದೆ.

**೫. ಶಕ್ತಿ ವಿಶಿಷ್ಟಾದ್ವೈತದ ಜ್ಞಾನ ಕರ್ಮ ಮತ್ತು ಭಕ್ತಿಗಳ ಸ್ಥಾನಮಾನ**

ಪಕ್ಷಿ ಹಾರಲಿಕ್ಕೆ ಎರಡು ಸಮಾನ ರೆಕ್ಕೆಗಳೂ ದಿಕ್ಕು ಬದಲಿಸಲಿಕ್ಕೆ ಮೇಲೆ ಕೆಳಗೆ ಹೋಗಲಿಕ್ಕೆ ಹಿಂದೆ ಪುಚ್ಚದ ಒಂದು ಬಾಲವೂ ಬೇಕು. ಅಂದರೆ ಆ ಪಕ್ಷಿ ಮನಬಲ್ಲದಂತೆ ಬೇಕಾದಂತೆ ಬೇಕಾದಲ್ಲಿ ಹಾರಿ ಹೋಗಬಹುದು ಬರಬಹುದು. ಅದರಂತೆ ಭಕ್ತಿ—ಜ್ಞಾನ - ಕರ್ಮಗಳು ಮಾನವನೆಂಬ ಹಕ್ಕಿ ಇಹದಿಂದ ಪರಕ್ಕೆ ಹಾರಲು ಬೇಕೇಬೇಕು. ಇವುಗಳಲ್ಲಿ ಸಮನ್ವಯ ದೃಷ್ಟಿಬೇಕು. ಸಮನ್ವಯವಿರದಿದ್ದರೆ ದುರುಳ ವೇದಾಂತಿ ಮರುಳ ವೇದಾಂತಿಯಂತೆ ಆಗುವದು. ಹೀಗಾಗಬಾರದೆಂದೇ ವೀರಶೈವರು ಶಕ್ತಿ ವಿಶಿಷ್ಟಾದ್ವೈತವನ್ನು ಒಪ್ಪಿಕೊಂಡು ಷಟ್‌ಸ್ಥಲಗಳಂತೆ ನಡೆಯಬೇಕೆಂದು. ಹೇಳಿದ್ದಾರೆ. ಇದರಲ್ಲಿ ಒಂದು ಸ್ಥಲವನ್ನು ಬಿಟ್ಟರೆ ಹಾರಿಸಿರೆ ನಡೆಯುವದಿಲ್ಲ ಮೊದಲು ಭಕ್ತ ಮಹೇಶ ಪ್ರಸಾದಿಗಳನ್ನು ಅಂದರೆ ಭಕ್ತಿ ಜ್ಞಾನ ಕ್ರಿಯೆಗಳನ್ನು ಸಾಧಿಸಲೇಬೇಕು. ಅಂದಬಳಿಕ ಉಳಿದ ಮುಂದಿನ ಮೂರು ಸ್ಥಾನಗಳನ್ನು ಹತ್ತಲಿಕ್ಕೆ ಅಧಿಕಾರ ಬರುವದು. ಇಲ್ಲವಾದರೆ ಇಲ್ಲ. ಭಕ್ತಿ ( ಹೃದಯ ) ಮಹೇಶ ( ಬುದ್ಧಿ ) ಪ್ರಸಾದಿ ( ತನು ) ಇವುಗಳಲ್ಲಿ ಸಮನ್ವಯ ಸಾಧಿಸುವದೇ ಶಿವಯೋಗದ ರಹಸ್ಯವಾಗಿದೆ. ಇವುಗಳಲ್ಲಿ ತಾಳಬೇಕು. ನಿಷ್ಕಾಮ ಕ್ರಿಯೆಗಳಿಂದ ತನುವಳಿದು ಮಹಾತನುವಾಗಬೇಕು. ಸುಜ್ಞಾನದಿಂದ ಮನ ಬುದ್ಧಿಗಳಳಿದು ಮಹಾ ಮನ ಬುದ್ಧಿಗಳಾಗಬೇಕು. ಸದ್ಭಕ್ತಿಯಿಂದ ಭಾವವಳಿದು ನಿರ್ಭಾವವಾಗಬೇಕು. ಇದೇ ಜಂಗಮವೆನಿಸುವದು. ತನುವಿನ ಆಣವ ಮಲವೂ ಮನದ ಮಾಯಾ ಮಲವೂ ಭಾವದ ಕಾರ್ಮಿಕ ಮಲವೂ ಅಳಿಯುತ್ತ ಹೋಗಬೇಕಾದರೆ ಭಕ್ತಿ ಜ್ಞಾನ ಹಾಗೂ ಕ್ರಿಯೆಗಳಿಂದ ನಿತ್ಯ ಶುದ್ಧಗೊಳಿಸುತ್ತ ಶಿವನ ಪ್ರಪಂಚವಾಗಬೇಕು. ಆಗ ಗುರು ಲಿಂಗ ಜಂಗಮವು ಕೈಸೆರೆಯಾಗುವವು. ಅದಕ್ಕೆ ಕ್ರಿಯಾಜ್ಞಾನಾತ್ಮಕವಾದ ಸಮ್ಯಕ್ ದೃಷ್ಟಿಯಿಂದ ಒಳಗಣ್ಣನ್ನು ಸಂಪಾದಿಸಿದ ಹೊರತು ಮನದ ಮಾಯಾ ಮಲವೂ ಅಳಿಯಲು ಸಾಧ್ಯವಿಲ್ಲ. ಕಾರ್ಮಿಕ ಮಲವು ಪ್ರಾಣವ್ಯಾಪಾರದ ಸುಸ್ಥಿರತೆಯಿಂದ ಅಳಿಯುವದು. ಅದಕ್ಕೆ ಲಿಂಗವನ್ನು ಕೆಲಕಾಲ ಪದ್ಮಾಸನ ಹಾಕಿ ದೃಷ್ಟಿ ಹಳಚದೆ ಧ್ಯಾನಿಸುತ್ತ ನೋಡುತ್ತ ಕೂಡ್ರಬೇಕು. ಅಂದರೆ ದೃಷ್ಟಿನಿಲ್ಲುವದು. ಆಗ ಕಾರ್ಮಿಕ ಮಲವು ಅಳಿಯುವದು. ತನುವಿನ ಆಣವ ಮಲವು ಅಳಿಯಲು ಇಂದ್ರಿಯ ನಿಗ್ರಹಮಾಡಿ ಸದಾ ಸತ್ಕಾರ್ಯ ನಿಷ್ಕಾಮ ಕಾರ್ಯಮಾಡಿದರೆ ಸಾಧ್ಯವಿದೆ. ಆಗ ಮಾತ್ರ ಭಕ್ತಿ ಜ್ಞಾನಕ್ರಿಯೆಗಳಲ್ಲಿ

ಸಮತೋಲ ಉಂಟಾಗಿ ಲಿಂಗಾಂಗಸಮರಸವಾಗುವದು. ಇಂಥ ನಿರ್ಮಲ ತನುವನ್ನು ಹೊಂದಿದವನೇ ಶರಣ ಅಥವಾ ಭಕ್ತನಾಗುವನು. ಆಗ ಇವನದು ಪ್ರಸಾದ ಕಾಯುವೆನಿಸುವದು. ಇಂಥ ಭಕ್ತನಿಲ್ಲದೆ ಗುರು-ಲಿಂಗ-ಜಂಗಮಕ್ಕೆ ಅಶ್ರಯವಿಲ್ಲ. ಅದಕ್ಕೆ ಭಕ-ಗುರು-ಲಿಂಗ-ಜಂಗಮಗಳೇ ಶಿವ ಶರಣರ ಚತುರ್ವಿಧಸಾರಾಯ ಸಂಪತ್ತು ಇವುಗಳಲ್ಲಿ ಭೇದವಿಲ್ಲ. ಇವರೇ ವೀರಶೈವಶಕ್ತಿವಿಶಿಷ್ಟಾದ್ವೈತದ ಮೋಕ್ಷ ಸ್ವರೂಪಕ್ಕೆ ಯೋಗ್ಯರು. ದಿವ್ಯಪರ ಭಕ್ತಿ ದಿವ್ಯಜ್ಞಾನ ದಿವ್ಯಕರ್ಮಗಳಿಗೆ ಒಂದೇ ಫಲವಿರುವದು. ಅದೇ ಮೋಕ್ಷ ಸ್ವರೂಪವೇ ಹೊರತು ಬೇರೆ ಇಲ್ಲ. ಭಾವವಳಿದರೆ ಜೀವನೇ ಶಿವನಾಗುವನು. ಲಿಂಗಾನುಸಂಧಾನ, ಯೋಗಶಕ್ತಿಯಿಂದ ಶರಣನು ಶಿವನಾಗುವನು. ಈ ಭಿನ್ನಭಾವನಳಿದ ಜೀವನಿಗೆ ಅಂಗನೆಂದೂ ಹೆಸರು. ಲಿಂಗಅಂಗ ಸಮರಸದಲ್ಲಿ ಶರಣನ ವ್ಯಕ್ತಿತ್ವವು ನಷ್ಟವಾಗುವದಿಲ್ಲ. ಅದು ಮತ್ತಷ್ಟೂ ಪ್ರಬಲಗೊಳ್ಳುವದು. ಆಗ ಶರಣಸತಿ ಲಿಂಗಪತಿ ಎಂಬ ಗಾಢಪ್ರೇಮದ ವಿಲೀನ ಭಾವವಳವಡುವದು ಇದೇ ವೀರಶೈವ ಮೋಕ್ಷಸ್ಥಿತಿಯ ಸ್ವರೂಪವು. ಇದು ಸಾಧಿಸಿತೆಂದು ತಿಳಿಯಬೇಕಾದರೆ ಭಕ್ತಿ-ಜ್ಞಾನ-ಕ್ರಿಯೆಗಳಲ್ಲಿ ಒಳ್ಳೇ ಸಮತೋಲಬೇಕು. ಅವೆಲ್ಲ ದಿವ್ಯಪರಭಕ್ತಿ ದಿವ್ಯಪರಜ್ಞಾನ ದಿವ್ಯಪರಕ್ರಿಯೆಗಳು ಆ ಶರಣನಿಂದ ಸದಾ ನಡೆಯಬೇಕು. ಅಂದರೆ ಲಿಂಗಾಂಗ ಸಮರಸವಾಗಿದೆಯೆಂದೇ ಹೇಳಬೇಕು. ಆಗ ಇವನ ತನು ದಿವ್ಯ ತನುವಾಗುವದು. ಮನ ದಿವ್ಯ ಮನವಾಗುವದು. ಹೃದಯ ದಿವ್ಯ ಹೃದಯವಾಗುವದು. ಬರೇ ಭಕ್ತಿಯಿಂದ ಉಪಯೋಗವಿಲ್ಲ. ಅವನು ಹೆಣವಾಗುವನು, ಅದು ಮೂಢಭಕ್ತಿ ಎನಿಸುವದು. ಬರೇ ಜ್ಞಾನದಿಂದಲೂ ಉಪಯೋಗವಿಲ್ಲ. ಅವನು ಹೇಡಿಯಾಗುವನು. ಅದು ಶುಷ್ಕವೆನಿಸುವದು. ಮರುಳ ದುರುಳ ವೇದಾಂತಿ ಎನಿಸುವನು. ಬರೇ ಕ್ರಿಯೆಯಿಂದಂತೂ ಉಪಯೋಗವಿಲ್ಲ ಕರ್ಮಿ ಎನಿಸುವನು. ಮಾಯಾಪ್ರಪಂಚಿಯಾಗುವನು. ವಿಚಾರದಿಂದ ಕೂಡಿದ ಭಕ್ತಿಯುಕ್ತ ಕ್ರಿಯೆಗಳು ಬೇಕು. ನಮ್ಮಲ್ಲಿ ಕಾಯಕಕ್ಕೆ ಅತೀ ಮಹತ್ವಕೊಟ್ಟಿದ್ದರ ಕಾರಣವೇ ಇದಾಗಿದೆ. ಒಳ್ಳೇ ನಿಷ್ಕಾಮ ಕರ್ಮಸಾಧಿಸಬೇಕಾದರೆ ಒಳ್ಳೇ ವಿಚಾರದಿಂದ ಕೂಡಿದ ಭಕ್ತಿ ಅತಿ ಅವಶ್ಯ. ಅದಕ್ಕೆ ಗುರುಜಂಗಮಕ್ಕಾದರೂ ಕಾಯಕಬೇಕೆಂದು ಹೇಳಿದ್ದಾರೆ. ಇದರಿಂದ ದೇಶದ ಆರ್ಥಿಕ ಸ್ಥಿತಿಯು ಸುಧಾರಿಸಿ ಜನರು ಭಕ್ತಿಯನ್ನು ಸಹಜ ಮಾಡುವರು. ಒಬ್ಬರನ್ನೊಬ್ಬರು ಹಿಂಸಿಸರು ಶಾಂತಿ ನೆಲಿಸುವದು. ಕಳವು ಕೊಲೆಗಳು ಸಂಭವಿ

ಸುವದಿಲ್ಲ. ಅದಕ್ಕೆ ವಿಚಾರ ಪೂರ್ಣ ಭಕ್ತಿಯುಕ್ತ ಕ್ರಿಯೆಗಳು ಬೇಕೆಂದು ಹೇಳುವದರ ತಾತ್ಪರ್ಯವೇ ಇಹಪರಗಳನ್ನು ಸಮಾನ ದೃಷ್ಟಿಯಿಂದ ನೋಡುವ ಉದ್ದೇಶವಾಗಿದೆ. ಇದನ್ನು ವೀರಶೈವರ ಹೊರತು ಉಳಿದ ಯಾವ ಧರ್ಮದವರು ಒಪ್ಪಿಕೊಳ್ಳುವದಿಲ್ಲ.

ಆಗಮಕಾರರನು ಶಕ್ತಿಯೇ ಭಕ್ತಿ, ಭಕ್ತಿಯೇ ಶಕ್ತಿ ಎಂದು ಬಗೆದರು. ಆದರೆ ಭಕ್ತಿಯಿಂದಲೇ ಮುಕ್ತಿ ಎಂದು ಹೇಳಿ ಶಕ್ತಿಯು ಸಮಾಯೆ ಎಂದು ಹೇಳಿದರು, ಆದರೆ ಶಿವಶರಣರು ಶಕ್ತಿಗೆ ಕೊಡುವಷ್ಟು ಸ್ಥಾನವನ್ನು ಜ್ಞಾನ ಹಾಗೂ ಭಕ್ತಿಗೆ ಕೊಟ್ಟಿಲ್ಲ. ಶಕ್ತಿಯು ಕ್ರಿಯೆಗೆ ಸಂಬಂಧಿಸಿದ್ದು ಅದಕ್ಕಾಗಿ ಲಿಂಗವ ಗೆಲಿವರೆ ಶರಣಸತಿ ಲಿಂಗಪತಿ ಎಂಬುದೊಂದಲಗು ಸಾಲದೇ? ಎಂದು ಬಸವಣ್ಣನವರು ಹಾಡಿದ್ದಾರೆ. ಇಲ್ಲಿ ಅಲಗು ಶಕ್ತಿಪರವಾಗಿ ಅದೆ. ಭಕ್ತಿಯಪರವಾಗಿ ಅಲ್ಲ. ನಿಷ್ಕಾಮ ಕಾಯಕವೇ ಲಿಂಗವನ್ನು ಗೆಲಿಯುವದೆಂದು ಹೇಳಿದ್ದಾರೆ. ಆದರೆ ಭಕ್ತಿಜ್ಞಾನಗಳಿಲ್ಲದ ಕಾಯಕದಿಂದ ಏನೂ ಪ್ರಯೋಜನವಿಲ್ಲ. ಇವನು ಮಾಯಾಪ್ರಪಂಚಿಯಾಗುವನು. ಆದರೆ ವಿಚಾರದಿಂದ ಕೂಡಿದ ಭಕ್ತಿಯಿಂದ ಸತ್ಕಾರ್ಯ ನಿಷ್ಕಾಮ ಕರ್ಮಗಳೇ ಬೇಕೆಬೇಕು. ಇದರ ಮೇಲಿಂದ ನೋಡಲಾಗಿ ಒಂದಿಷ್ಟು ಕರ್ಮಕ್ಕೆ ಮಹತ್ವಕೊಟ್ಟಿದ್ದಾರೆಂದು ಹೊಳೆಯುವದಿಲ್ಲವೇ ? ಈಗಿನ ಕಾಲದಲ್ಲಿ ಭಕ್ತರೆಂದು ಎನಿಸಿಕೊಂಡು ಕ್ಯಾವಿ ರುದ್ರಾಕ್ಷಿ ಭಸ್ಮಗಳನ್ನು ಢಾಳಾಗಿ ಧರಿಸಿಕೊಂಡು ಊರೂರ ಮಠ ಮಠಗಳಿಗೆ ಹೊಟ್ಟೆಗಾಗ ಶಾಸ್ತ್ರದ ನೆವಮಾಡಿಕೊಂಡು ತಿರುಗುವವರೆ ಹೆಚ್ಚಾಗಿದ್ದಾರೆ. ಈ ಹುಚ್ಚುತನ ಹೋಗಲಿಕ್ಕೆ ಶರಣರು ನಿಷ್ಕಾಮ ಕ್ರಿಯೆಗಳಿಗೆ ಮಹತ್ವಕೊಟ್ಟಿದ್ದಾರೆ, ಅದರೂ ದಿವ್ಯ ಭಕ್ತಿಜ್ಞಾನಗಳೂ ಅದಕ್ಕೆ ಬೆಂಬಲವಾಗ ಬೇಕೇಬೇಕು. ಈ ಪ್ರಕಾರ ವೀರಶೈವರು ಭಕ್ತಿ ಜ್ಞಾನ ಕ್ರಿಯೆಗಳಲ್ಲಿ ಸಮನ್ವಯ ಹೇಳಿದ್ದಾರೆ. ಅಲ್ಲದೆ ಶರಣಸ್ಥಲ ದಾಟಿಡರೂ ಐಕ್ಯಸ್ಥಲದ ಆರಂಭಕ್ಕೂ ಸತ್ಕ್ರಿಯೆಗಳು ಬೇಕೇಬೇಕು. ಲೋಕೋದ್ಧಾರದ ಕಾರ್ಯಗಳು ಆಗ ನಡೆಯುವವು. ಅವು ಶಾರೀರಿಕವಿರದಿದ್ದರೂ ಮಾನಸಿಕ ಬೌದ್ಧಿಕ ಕರ್ಮಗಳಿರಬಹುದು. ಅಲ್ಲದೆ ಹೃದಯದಿಂದಲೂ ಲೋಕಕ್ಕೆ ನೆರವಾಗಬಹುದು. ಐಕ್ಯಸ್ಥಿತಿಯವರು ಸೂಕ್ಷ್ಮ ಕರ್ಮಗಳನ್ನು ಮಾಡಿ ಜಗದ ಹೊಲಸನ್ನು ತೊಳೆಯಲು ಶಕ್ಯವಿದೆ. ಈ ಪ್ರಕಾರ ಸಾಧಕನು ಯಾವ ಸ್ಥಿತಿಗೆ ಹೋದರು: ಅವನಿಗೆ ಕರ್ಮಗಳು ಬಿಟ್ಟಿರುವದಿಲ್ಲ. ಅವುಗಳನ್ನು ಭಕ್ತಿಜ್ಞಾನಯುಕ್ತನಾಗಿ ಮಾಡಬೇಕಾಗುವದು. ಆಳಸಿಯಾಗಲಿಕ್ಕೆ ಬರುವದಿಲ್ಲ. ಶರೀರ

ಇರುವವರೆಗೆ ಒಂದಿಲ್ಲೊಂದು ಬಗೆಯಿಂದ ಕರ್ಮಗಳು ನಡೆಯಲೇಬೇಕು. ಮುಕ್ತಾತ್ಮರೂ ಕೂಡ ತಮ್ಮ ಶಿಷ್ಯರ ಮಠದ ಹಾಗೂ ಅವರಿಗೆ ಸಂಬಂಧಿಸಿದ ಪ್ರತಿಯೊಬ್ಬರ ಯೋಗಕ್ಷೇಮಗಳನ್ನು ನೋಡಿಕೊಳ್ಳುವರೆಂದು ಪ್ರತಿಯೊಬ್ಬರು ಹೇಳುವರು. ಅದಕ್ಕಾಗಿಯೇ ಅವರ ಸಮಾಧಿಕಟ್ಟಿಸಿ ಗಡಿನಿರ್ಮಿಸಿ ಪೂಜೆ, ಪುಣ್ಯತಿಥಿ, ಜಾತ್ರೆಗಳನ್ನೂ ಮಾಡುವರು. ಇದರಮೇಲಿಂದ ಯಾರಿಗೂ ಕ್ರಿಯೆಗಳು ಬಿಟ್ಟಿಲ್ಲೆಂದು ಹೊಳೆಯುವದು. ಅದಕ್ಕಾಗಿಯೇ ಶಿವಶರಣರು ಗುರುಜಂಗಮುಕ್ತಾದರೂ ಕಾಯಕವೇಬೇಕೆಂದು ಸಾರಿದ್ದಾರೆ. ಇದರಿಂದ ಭಕ್ತಿಜ್ಞಾನಯುಕ್ತವೇದ ಕ್ರಿಯೆಗಳ ಅವಶ್ಯಕತೆಯನ್ನು ವೀರಶೈವರು ಕಂಡು ಹಿಡಿದಿದ್ದಾರೆ.

## ೬. ಅಷ್ಟಾವರಣಾಂತರ್ಗತ ಗುರು ಜಂಗಮರ ಕರ್ತವ್ಯ ಕರ್ಮಗಳು. ಹಾಗೂ ಗುರು ಲಿಂಗ ಜಂಗಮ ಇವರಲ್ಲಿಯ ತಾರತಮ್ಯಗಳು.

ಗುರು ಅಂದರೆ ಕಲಿಸುವವ ತಿಳಿಸುವವ ದಾರಿ ತೋರಿಸುವವ ಉಪದೇಶಿಸುವವ ಎಂದು ಹೇಳಬಹುದು. ವೀರಶೈವರಲ್ಲಿ ಗುರುವಿನ ಸ್ಥಾನ ಹಿರಿದು. ಅದಕ್ಕಾಗಿಯೇ ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ। ಗುರುರ್ದೈವಾತ್ಪರಂ ನಾಸ್ತಿ ತಸ್ಮೈಶ್ರೀ ಗುರವೇ ನಮಃ॥ ಶ್ರೀ ಗುರುವೇ ಪರಬ್ರಹ್ಮ ವಸ್ತುವೆಂದರಿದು ನಂಬುವದು ಮರುಳೇ ಉದಾಸೀನವ ಮಾಡಲಾಗದು. ಹರ ಮುನಿದಡೆ ತಿಳಿಹಿಕೊಡಬಹುದು. ಗುರು ಮುನಿದಡೆ ಏಳೇಳು ಜನ್ಮ ನರಕ ತಪ್ಪದು. ಗು. ಅಂದರೆ ಗುಣಾತೀತ ರು ಅಂದರೆ ರೂಪಾತೀತ, ನನ್ನಾಗಿ ಶಿಷ್ಯನನ್ನು ಮಾಡುವವನೇ ಗುರು ಎಂದು ಒಂದು ಅರ್ಥವಿದೆ. ಗು ಎಂದರೆ ಅಂಧಕಾರ, ರು ಎಂದರೆ ನಿರೋಧಿಸು. ಅಂದರೆ ಶಿಷ್ಯನ ಅಜ್ಞಾನಂಧಕಾರವನ್ನು ನಾಶ ಮಾಡುವವನೇ ಗುರು ಎಂದು ಆಗುವದು.

ಅದಕ್ಕೆ ಶಕ್ತಿ ಪಾತವಿಲ್ಲದ ಗುರುವಿನ ಉಪದೇಶ ಶಿಷ್ಯರ ಯಾವ ಪಾತಕವನ್ನು ಪರಿಹರಿಸದು. ಗುರುವಾಗಲು ಸಮರ್ಥತೆಬೇಕು. ಅನುಗ್ರಹ ಶಕ್ತಿ ಬೇಕು. ಸ್ವಯಂ ಜ್ಯೋತಿ ಸ್ವರೂಪ ಅವಶ್ಯ. ಗುರುಸ್ಥಲವೆಂಬುದು ತಾನು ಸ್ವಯಂಜೋತಿ ಪ್ರಕಾಶವು ಅಂತಪ್ಪ ಸ್ವ ಜೋತಿ ಪ್ರಕಾಶವಂ ತಂದು ಉರಜ್ಯೋತಿಯ ಹತ್ತಿಸಿದೊಡೆ ಆ ಜ್ಯೋತಿ ತನ್ನಂತೆ ಮಾಡಿತು. ಇವರಲ್ಲಿ ಭಕ್ತಿ ಗುಣವು ಅಧಿಕವಾಗಿರುವದು. ಇವನು ಪಟ್ಟದ ದೇವರು.

ಜಂಗಮವೆಂದರೂ ಪರಿಪೂರ್ಣ ಜ್ಞಾನಿ, ಆದರೆ ನಿಜ ಜಂಗಮವೆಂತೆಂದೊಡೆ ನಿರ್ಲೇಪಕ, ನಿರುಪಾಧಿಕ, ನಿರ್ಭೇದ್ಯ ನಿರಾಶ್ರಿತ ಜಂಗಮ ನಿರ್ಲಂಪಟ ಜಂಗಮ ನಿಜೈಕ್ಯನಾದ ನಿಶ್ಯೀಮನೇ ಜಂಗಮ. ಅರಿವು ಆಚಾರ ಸತ್ಕ್ರಿಯೆಯುಳ್ಳಡೆ ಜಂಗಮ ಅಂತಪ್ಪ ಸಚ್ಚಿದಾನಂದ ನಿತ್ಯ ನಿರಂಜನ ಜಂಗಮದ ಸುಳುಹು ಪಾವನ. ಲಕ್ಷಕ್ಕಾದರೂ ಒಬ್ಬ ಭಕ್ತನುಂಟು ಕೋಟಿಗಾದರೂ ಒಬ್ಬ ಜಂಗಮನಿಲ್ಲ. ಜಂಗಮನು ಉಪಾಧಿಕನಲ್ಲ, ಬೋಧಕನಲ್ಲ ಆಶಕನಲ್ಲ ಕಾರ್ಯ ಕಾರಣನಲ್ಲ ಸ್ತ್ರೀಲಂಪಟನಲ್ಲ ವೇಶದಾರಿ ಜಂಗಮನಲ್ಲ ಬೇಡುವಾತ ಜಂಗಮನಲ್ಲ ಇವನು ವೈರಾಗ್ಯಸಿಧಿ ವಿರಕ್ತನಾಗಿರುವನು. ಇವನು ಜ್ಞಾನದಲ್ಲಿ ಅಧಿಕನು ಇವನು ಪರಮಗುರು ಗುರುವಿನ ಗುರುವಾಗಿರುವನು ಅದಕ್ಕೆ ಗುರುವಿನಗಿಂತ ಒಂದು ದೃಷ್ಟಿಯಿಂದ ಜಂಗಮನೇ ಹಿರಿದೆನ್ನಬಹುದು. ಗುರುವಿನಲ್ಲಿ ಜ್ಞಾನ, ಲಿಂಗದಲ್ಲಿ ಸುಜ್ಞಾನ ಜಂಗಮದಲ್ಲಿ ಮಹಾ ಜ್ಞಾನಗಳು ಸಾಹಿತ್ಯವಾಗಿರುತ್ತವೆ. ಪರ ವಸ್ತುವಿಗೆ ಇವು ಮೂರು ರೆಂಬೆಗಳಾಗಿರುವವು. ಇದರಿಂದಲೂ ಜಂಗಮನಧಿಕವೆನಿಸುವನು ಗುರುನರನೆಂದರೆ ಆಗದು ಭಕ್ತಿಗೆ ಪರಮಾಶ್ರಯವಾದುದೇ ಗುರು. ಗುರುವಿನಲ್ಲಿಯೇ ಮೊದಲು ಭಕ್ತಿಯ ಬೀಜಾರೋಪಣ.

ಗುರುಜಂಗಮರಲ್ಲಿ ಜ್ಞಾನದ ತಾರತಮ್ಯ ವೈರಾಗ್ಯ ವಿರಕ್ತಿಗಳಲ್ಲಿಯೂ ತಾರತಮ್ಯಗಳು ಕಂಡುಬರುವವು. ಅದರಂತೆ ಕ್ರಿಯೆಗಳಲ್ಲಿಯೂ ಕಂಡು ಬರುವದು ಗುರುಗಳು ಶಿವದೀಕ್ಷೆ ಲಿಂಗದೀಕ್ಷೆ ಮೊದಲಾದ ಕ್ರಿಯೆಗಳನ್ನು ಮಾಡುವರು. ಒಂದೇ ಸ್ಥಳದಲ್ಲಿ ಮಠ ಕಟ್ಟಿಕೊಂಡು ಆಸ್ತಿ, ಪಾಸ್ತಿ, ಗಳನ್ನು ಗಳಿಸಿ ಇರಬಹುದು. ಅದರಲ್ಲಿ ಎಳ್ಳಷ್ಟು ಆಸಕ್ತರಾಗಿರುವದಿಲ್ಲ. ಭಕ್ತಾದಿಗಳಿಗೆ ಆದರ್ಶವಾಗುವಂತೆ ನಿಷ್ಕಾಮ ಕರ್ಮ ಮಾಡುತ್ತ ದಾಸೋಹ ಮಾಡುತ್ತ ಪರಹಿತ ಸಾಧಿಸುತ್ತ ಜ್ಞಾನಬೀರುತ್ತ ಪೂಜೆಗೊಳ್ಳುತ್ತ ಇರುವನು. ಜಂಗಮನು ಲಿಂಗ ಶಿವದೀಕ್ಷೆ ಮಾಡಲು ಅಧಿಕಾರಿಯಲ್ಲ ಇವನು ಒಂದೇ ಸ್ಥಳದಲ್ಲಿ ಇರನು ಬೇಡಿಕೊಳ್ಳನು ಆಸ್ತಿ ಪಾಸ್ತಿಗಳನ್ನು ಗಳಿಸನು, ಮಠವನ್ನು ಕಟ್ಟಿಸಿದರೂ ಅದು ಶಿವನ ಮನೆಯಾಗಿರುವದು. ವೇಷ ಆರಾಮಗಳಿರುವದಿಲ್ಲ ವೈರಾಗ್ಯನಿಧಿ ವಿರಕ್ತ ಯಾತರಲ್ಲಿಯೂ ಅನುಕಕ್ತನಲ್ಲ ಆದರೂ ಬೋಧಿಸುತ್ತಿರುವನು. ಇವನು ಸೂಕ್ಷ್ಮವಾಗಿ ಕುಳಿತಲ್ಲಿ ಸಂಚಾರದಲ್ಲಿ ಲೋಕದ ಹೊಲಸನ್ನು ತೊಳೆಯುವನು. ಆದಷ್ಟು ಇವನು ಸಂಚಾರದಲ್ಲಯೇ ಇರುವನು. ಮೂರು ದಿನಗಳಿಗಿಂತ ಒಂದೂರಲ್ಲಿ ಹೆಚ್ಚಿಗೆ ಇರುವದಿಲ್ಲ. ಅದಕ್ಕಾಗಿಯೇ ಭಕ್ತಿ ಇಲ್ಲದೆ

ಕೆಟ್ಟಹುದು ಗುರುತನ! ಜ್ಞಾನವಿಲ್ಲದೆ ಕೆಟ್ಟಹುದು ಲಿಂಗತನ ವೈರಾಗ್ಯವಿಲ್ಲದೆ ಕೆಟ್ಟಹುದು ಜಂಗಮತನ। ಭಕ್ತಿ ಇಲ್ಲದೆ ಗುರುತತ್ವ ಅಳವಡದು ಜ್ಞಾನವಿಲ್ಲದೆ ಲಿಂಗತತ್ವ ಅಳವಡದು, ವೈರಾಗ್ಯವಿಲ್ಲದೆ ಜಂಗಮತತ್ವ ಅಳವಡದು, ಎಂದು ಆದ್ಯರು ಹೇಳಿದ್ದರ ಮೇಲಿಂದ ಗುರುಲಿಂಗ ಜಂಗಮರ ಸ್ಥಾನ ಮಾನಗಳು ಸಹಜ ತಿಳಿಯುವವು. ಇಬ್ಬರಿಗೂ ತಕ್ಕ ಆಚರಣೆ ಬೇಕೇಬೇಕು ಅದಕ್ಕಾಗಿ ಬಸವಣ್ಣನು ಲಾಂಛನಕ್ಕೆ ಶರಣೆಂಬೆನು ಲಾಂಛನಕ್ಕೆ ತಕ್ಕ ಆಚರಣೆಯಿಲ್ಲ ದಿದ್ದರೆ ಕೂಡಲಸಂಗಮ ದೇವರ ಸಾಕ್ಷಿಯಾಗಿ ಛೀ ಎಂಬೆ ಎಂದು ಹೇಳಿ ವ್ದಾರೆ. ಒಬ್ಬನೇ ದೇವರು ಕ್ರಿಯಾಭೇದದಿಂದ ಗುರುಲಿಂಗ ಜಂಗಮ ಎಂದು ಮೂರು ತೇರನಾದನೆಂದು ಆಗಮದಲ್ಲಿ ಹೇಳಿದೆ ಮೇಲೆ ಅವರ ಕ್ರಿಯೆಗಳನ್ನು ಹೇಳಲಾಗಿದೆ. ಇವರಲ್ಲಿ ಏನೂ ಬೇಧವಿಲ್ಲ ಆದರೆ ಕ್ರಿಯಾಭೇಧ ಮಾತ್ರ ಇರುವದು.

ವೀರಶೈವರಲ್ಲಿ ಸಾಮಾನ್ಯ ವಿಶೇಷ ನಿರಾಭಾರಿ ಎಂದು ಭೇದಗಳುಂಟು. ಇದು ವಸ್ತು ಭೇದವಲ್ಲ. ಆದರೆ ವಿಶೇಷ ತರದ ಅನುಭವ ಸಂಪಾದನೆ ಮಾಡಿ ರುವದರಿಂದ ಹೀಗೆ ಭೇದಗಳನ್ನೂ ಹೇಳುಬೇಕಾಗಿದೆ. ಅದು ಸ್ಥಿತಿಯನ್ನು ಹೇಳುವದು. ಅಂಗ (ಜೀವ)ನು ಇಷ್ಟಲಿಂಗ ಅನುಸಂಧಾನದಿಂದ ಬಹಿರಂಗ ವನ್ನು ತನುವಿನಲ್ಲಿ ಶುದ್ಧಗೊಳಿಸಿ ಭಕ್ತನೆನಿಸಿಕೊಳ್ಳುವನು. ಇವನು ಸಾಮಾನ್ಯ ವೀರಶೈವನು. 'ಅದೇ ಅಂಗವನು ಪ್ರಾಣಲಿಂಗದ ಅನುಸಂಧಾನದಿಂದ ಅಂತ ರಂಗವನ್ನು ಶುದ್ಧಗೊಳಿಸಿ ಗುರುವೆನಿಸಿಕೊಳ್ಳುವನು. ಇವನಿಗೆ ವಿಶೇಷ ವೀರ ಶೈವನೆಂದು ಹೆಸರು. ಅದೇ ಅಂಗನು ಭಾವಲಿಂಗದ ಅನುಸಂಧಾನದಿಂದ ಭಾವ ಬತ್ತಲೆಗೊಳಿಸಿ ಜಂಗಮನೆನಿಸಿಕೊಳ್ಳುತ್ತಾನೆ. ಇವನಿಗೆ ನಿರಾಭಾರಿ ವೀರಶೈವ ನೆಂದು ಹೆಸರು. ಶ್ರೀ ನಿಜಗುಣ ಶಿವಯೋಗಿಗಳು ಕೂಡ ಇದನ್ನೇ ಎತ್ತಿ ಹಿಡಿ ದಿದ್ದಾರೆ.—ಪಿಂಡವು ಪ್ರಸಾದವಾಗಲು ಸಾಮಾನ್ಯ ವೀರಶೈವ. ಅದೇ ಪಿಂಡವು ತುಂಬಾ ಅರಿವೆಯುಳ್ಳದ್ದಾಗಲು ವಿಶೇಷ ವೀರಶೈವನಾಗುವನು. ಅದೇ ಅರಿವೆ ಯುಳ್ಳ ಪ್ರಸಾದ ಪಿಂಡವು ಬ್ರಹಾಂಡವನ್ನು ಪ್ರಸಾದಗೊಳಿಸಲು ನಿರಾಭಾರಿ ವೀರಶೈವನೆನಿಸುವದೆಂದು ಹೇಳಿದ್ದಾರೆ. ಇಷ್ಟಾದಮೇಲೆ ಗುರು ಜಂಗಮರ ಲ್ಲಿಯ ಭೇದವು ವಸ್ತುವಿನಲ್ಲಿ ಇಲ್ಲ. ಆದರೆ ಗಳಿಸಿದ ಜ್ಞಾನ ಮಾಡುವ ತ್ಯಾಗ ವೈರಾಗ್ಯ ಪರಹಿತಗಳಲ್ಲಿಯೇ ಇರುವದಿಲ್ಲವೇನು ?

ಲಿಂಗವೆಂಬುದು ಸರ್ವಲೋಕೋತ್ಪತ್ತಿಗೆ ಕಾರಣ, ಸರ್ವತತ್ವಪೂರಣ ಪರಶಕ್ತಿಯುತ ಪರಶಿವನ ನಿಜದೇಹ, ಪರಶಿವನ ಘನತೇಜ, ಪರಶಿವನ ನಿರತಿ

ಶಯಾನಂದ ಸುಖವು, ಪರಶಿವನ ಪರಮಜ್ಞಾನವು. ಹೀಗೆ ಗುರುಲಿಂಗ ಜಂಗ ಮರು ಒಬ್ಬನೇ ಪರಶಿವನು ಜಗತ್ಕಲ್ಯಾಣಕ್ಕಾಗಿ ಮೂರು ರೂಪತಾಳಿ ಮೂರು ಬಗೆಯ ಕ್ರಿಯೆಗಳನ್ನು ಮಾಡುತ್ತಿರುವನು. ಅದಕ್ಕೆ ಈ ಮೂರರಲ್ಲಿ ವಸ್ತು ಭೇದವಿಲ್ಲ. ಆದರೆ ಕ್ರಿಯಾಭೇದ ಮಾತ್ರ ಕಂಡುಬರುವದು. ಗುರುಜಂಗಮ ರಿಗೂ ಕೂಡ ಲಿಂಗ ಬೇಕೇಬೇಕು. ಅದರಂತೆ ಭಕ್ತನಿಗೂ ಬೇಕು. ತನು ಶುದ್ಧಿಗಾಗಿ ಇಷ್ಟಲಿಂಗ (ಆಚಾರಲಿಂಗ) ಗುರುಲಿಂಗ, ಪೂಜಿಸುತ್ತಿರುವಾಗ ಭಕ್ತನೆನಿಸುವನು. ಪ್ರಾಣಶುದ್ಧಿಗಾಗಿ ಪ್ರಾಣಲಿಂಗ (ಶಿವಲಿಂಗ ಜಂಗಮಲಿಂಗ) ವನ್ನು ಪೂಜಿಸುವಾಗ ಅವನೇ ಗುರುಮಹೇಶ ಎನಿಸಿಕೊಳ್ಳುವನು. ಭಾವ ಶುದ್ಧಿಗಾಗಿ ಭಾವಲಿಂಗ (ಪ್ರಸಾದಲಿಂಗ-ಮಹಾಲಿಂಗ) ಪೂಜಿಸುವಾಗ ಪ್ರಸಾದಿ ಜಂಗಮನೆನಿಸುವನು. ಇದರಿಂದ ಒಂದಕ್ಕಿಂತ ಮತ್ತೊಂದು ಹೆಚ್ಚಿನದೆನಿ ಸುವದು. ಅವರ ಸ್ಥಿತಿ ಏರಿದಹಾಗೆ ಅವನಿಗೆ ಬೇರೆ ಸ್ಥಿತಿಯು ಬರುವದು.' ಅಲ್ಲದೆ ಕರ್ತವ್ಯಕರ್ಮಗಳಲ್ಲಿಯೂ ಕೂಡ ಅಂತರವಾಗುವದು. ಮತ್ತು ಇರು ವಿಕೆಯಲ್ಲಿಯೂ ಕೂಡ ಅಂತರ ಉಂಟೆಂದು ಮೇಲಿನ ವಿವರಣೆಯಿಂದ ಹೊಳೆಯುವದು.

ಅನ್ಯರು ಮಾಡಿದರೆ ಭಕ್ತ ಗುರು ಜಂಗಮತನವು ಎಂದೂ ಬರಲಾ ರದು. ಅದನ್ನು ಹೊಂದುವ ಶಕ್ತಿಯು ತನ್ನಲ್ಲಿರುವದು. ತಾನು ಸರಿಯಾದ ಸಾಧನ ಮಾಡಿ ಪಡೆದರೆ ಆ ನಿಲವು ನಿಲಕುವದು. ಹೀಗಾಗಿ ಇವುಗಳು ಈಗ ಜ್ಞಾನವಿಶಿಷ್ಟವಾಗಿಲ್ಲ. ಆದರೆ ಜಾತಿವಿಶಿಷ್ಟವಾಗಿರುವವು. ಹೀಗಾಗಿ ಶಿವಶರಣರು ನಿರ್ಮಿಸಿದ ವೀರಶೈವ ಸಮಾಜವು ಹ್ರಾಸವಾಗಿರುವದು. ಈ ಗುರುತ್ವ ಜಂಗಮತ್ವಗಳು ಮೇಲೆ ವಿವರಿಸಿದ ರೀತಿಯಿಂದ ಸಾಧನಮಾಡಿ ಪಡೆದುಕೊಂಡರೆ ಒಳ್ಳೇದಾಗುವದು. ಇವರಲ್ಲಿ ಜಾತಿಭೇದವಿಲ್ಲ. ಗುರು ಲಿಂಗ ಜಂಗಮ ಹಾಗೂ ಭಕ್ತರ ಸರಿಸಮಾನತೆಯನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು.

ತನುವಿನೊಳಗೆ ಲಿಂಗ, ಲಿಂಗದೊಳಗೆ ಪ್ರಾಣವಿರ್ದದು, ಬೇರಿಟ್ಟುನುಡಿವ ಭಿನ್ನ ಜ್ಞಾನದೊಳಗೆ ಲಿಂಗವೆಲ್ಲಿಯದೋ? ಲಿಂಗವಿಲ್ಲವಾಗಿ ಪ್ರಸಾದವಿಲ್ಲ ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ. ಬಿನ್ನ ಭಾವವಳಿದು ನಿನ್ನೊಳಡಗಿಹೆನು ಮಾ. ಲಿ. ಗು. ಸಿ.

ಕಾರಣ ಶರೀರ ಪ್ರಾಣ ಲಿಂಗ ಇವುಗಳು ಸ್ಥೂಲ ಸೂಕ್ಷ್ಮ ಕಾರಣ ಶರೀರಕ್ಕೆ ಸಂಬಂಧಿಸಿರುವವು. ನಿಜವಾಗಿ ಒಂದೇ ಯಾಗಿರುವವು ಆದ್ದರಿಂದ ಶರೀರವೇ ಭಕ್ತ, ಪ್ರಾಣವೇ ಲಿಂಗವೆಂದು ಹೇಳಬಹುದು.

ದೇವ ಭಕ್ತರ ಬಗೆಯು ಬೇರೆಂದರೆ, ಭಕ್ತಿಯು ಬೀಜದಂಕೂರವೆಲ್ಲಿ ? । ಸತಿಪತಿಯು ಬೇರಾದರೆ, ಪಿಂಡದಂಕುರವೆಲ್ಲಿ? ಭೂಮಿ ಬೀಜ। ಬೇರಾದರೆ, ವೃಕ್ಷದಂಕುರವೆಲ್ಲಿ? ಇದು ಕಾರಣ ದೇವ (ಲಿಂಗ) ಭಕ್ತರಲ್ಲಿ। ಬೇರೆಂಬ ಬಗೆಯುದೆಂತು ಹೇಳಾಕೂ । ಚ. ಸಂ ॥ ಇದರಿಂದ ಭಕ್ತ ಹಾಗು ಲಿಂಗಗಳಲ್ಲಿ ಭೇದವನ್ನು ಕಲ್ಪಿಸಬಾರದೆಂದು ಹೇಳಿದಂತಾಗುವದಿಲ್ಲವೆ।

ಒಡಲಿಲ್ಲದಾತ ಜಂಗಮ ಪ್ರಾಣವಿಲ್ಲದಾತ ಭಕ್ತನಯ್ಯ ।
ಆಚಾರವೇ ಜಂಗಮ ವಿಚಾರವೇ ಭಕ್ತನಯ್ಯ ।
ಆಚಾರ ವಿಚಾರವೆಂಬುದು ಸ್ವಾನುಭವ ನೋಡಾ ಕೂ. ಸ. ದೇ. ॥

ಅಂದರೆ ಶರೀರದ ಯಾವತ್ತೂ ಅಭಿಮಾನ ಮೋಹ ಬಿಟ್ಟು ಅದನ್ನು ನಿಗ್ರಹಿಸಿ ಕಾಯದಿಂದ ಸದಾ ಪರಹಿತ ಮಾಡುತ್ತಿದ್ದರೆ ಆತ ಜಂಗಮ ದೇಹವನ್ನು ದೇಗುಲಮಾಡಿ ಪ್ರಾಣವನ್ನೇ ಲಿಂಗವನ್ನಾಗಿ ಮಾಡಿ ನಿರಹಂಕಾರದಿಂದ ಸ್ವಾರ್ಥಬಿಟ್ಟು ಪೂಜಿಸುತ್ತಿದ್ದರೆ ಆತ ಭಕ್ತನೆಂದು ಹೇಳಿದ್ದಾರೆ.

ಭಕ್ತನು ಭಕ್ತನ ಕಂಡಲ್ಲಿ ಕೈಮುಗಿಯುವುದೇ ಭಕ್ತಸ್ಥಲ ।
ಜಂಗಮನು ಜಂಗಮನ ಕಂಡಲ್ಲಿ ಶರಣೆಂಬುದೇ ಜಂಗಮಸ್ಥಲ ॥
ಭಕ್ತ ಜಂಗಮ ಎಂದು ಬೇರುಂಟೆ ? ರಸದಂತೆ ಭಕ್ತ ।
ರುಚಿಯಂತೆ ಜಂಗಮ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನ ॥

ಎಂದು ರಸರುಚಿಗೆ ಭಕ್ತ ಜಂಗಮರನ್ನು ಹೋಲಿಸಿದ್ದು ನೋಡಿದರೆ ಇವರೂ ಒಂದೇ ಎಂದು ಹೇಳಿದಂತೆ ಆಗುವವು. ಇದರ ಮೇಲಿಂದ ಭಕ್ತ ಜಂಗಮರು ಅವಿನಾಭಾವ ಸಂಬಂಧದಿಂದ ಕೂಡಿ ಒಂದೇ ಇರುವವೆಂದು ಭಾವ ಭರುವದು.

ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ । ಭಕ್ತನ ಕಿಂಕರತ್ವವೇ ಜಂಗಮಕ್ಕೆ ದಾಸೋಹ । ಭಕ್ತನೊಳಗೆ ಜಂಗಮವಡಗಿ, ಜಂಗಮದೊಳಗೆ ಭಕ್ತನಡಗಿ । ಇದನೇನೆಂದು ಹವಣಿಸುವೆನಯ್ಯ ? ಎರಡೊಂದಾದ ಘನವ ಇದನೆಂತುಪಮಿಸುವೆನಯ್ಯ ? ತೆರಹಿಲ್ಲದ ಘನವ.

ಇದರಿಂದ ಭಕ್ತ—ಜಂಗಮ ಸಂಬಂಧವು ಚನ್ನಾಗಿ ಒಡೆದು ಕಾಣುವದು. ಕಾಯವು ಜೀವವು ಎಂತು ಬೆರಸಿಪ್ಪನಂತೆ ಲಿಂಗದೊಳಗೆ ಜಂಗಮ ಜಂಗಮದೊಳಗೆ ಲಿಂಗ ಬೆರಸಿಪ್ಪುದು ಭಿನ್ನಭಾವವಿಲ್ಲದೆ ನ ಶಿವೇನ ವಿನಾ ಶಕ್ತಿರ್ನ ಶಕ್ತಿರಹಿತೋ ಶಿವಃ। ಪುಷ್ಪಗಂಧ ವಿನಾನ್ಯೈವ ಮರುತಾಂಬರಯೋರಪಃ। ಎಂದುದಾಗಿ ಭಾವಭೇದವಿಲ್ಲದ ಜಂಗಮವೇ ಲಿಂಗವು ಕೂ. ಚ. ಸ. ದೇ. ಲಿಂಗ ಜಂಗಮರ ಅವಿನಾಭಾವ ಸಂಬಂಧ ಇರುವರೆಂದು ನುಡಿದಿದ್ದಾರೆ. ಅದಕ್ಕಾಗಿ ಸಿದ್ಧರಾಮನೂ ಕೂಡ ಸಕ್ಕರೆ ಬಿಟ್ಟು ರುಚಿ ಇಲ್ಲ. ಜಂಗಮಬಿಟ್ಟು ಲಿಂಗವಿಲ್ಲ ಲಿಂಗಬಿಟ್ಟು ಜಂಗಮವಿಲ್ಲ ಎಂದು ಹೇಳಿದ್ದಾನೆ.

ಕಾಯ ಗುರು ಪ್ರಾಣ ಲಿಂಗ, ಜ್ಞಾನ ಜಂಗಮ ಎಂಬ ವಚನದಂತೆ ಈ ಮೂರು ಕೂಡಿದವನೇ ಭಕ್ತನು ಅದಕ್ಕಾಗಿ ಭಕ್ತನ ಸಾಧನೆಯಿಂದ ಗುರುವಾಗುವನು. ಲಿಂಗವಾಗುವನು ಜಂಗಮನೂ ಆಗುವನು ಕಾರಣ ಭಕ್ತ ಗುರು ಲಿಂಗ ಜಂಗಮರು ಒಂದೇ ಇವರಲ್ಲಿ ವಸ್ತು ಭೇದವಿಲ್ಲ ಕ್ರಿಯಾ ಭೇದ ಮಾತ್ರ ಇರುವುದು. ಮೇಲೆ ಹೇಳಿದೆ. ಅದು ಇಲ್ಲಿ ಸಿದ್ಧವಾಗುವದು. ಆ ಭೇದಗಳನ್ನೂ ಕ್ರಿಯೆಗಳನ್ನೂ ಮೇಲೆ ವಿವರಿಸಲಾಗಿದೆ.

ಈ ವಿಷಯವು ಬಹು ದೊಡ್ಡದು. ಅದನ್ನು ಚಿಕ್ಕ ಪೆಟ್ಟಿಗೆಯಲ್ಲಿ ಅತಿ (ಪ್ರೆಸ್ ಮಾಡಿ) ಒತ್ತಿ ಒತ್ತಿ ತುಂಬಿದರೂ ಇಷ್ಟು ದೊಡ್ಡದಾಗಿರುವದು ಇದನ್ನು ಚನ್ನಾಗಿ ಬರೆದರೆ ವಿಶಾಲ ಹೊತ್ತಿಗೆಯಾಗಬಹುದು. ಇಷ್ಟರಿಂದ ತಕ್ಕಷ್ಟು ವೀರಶೈವರ ಶಕ್ತಿ ವಿಷ್ಟಾದ್ವೈತದ ಕಲ್ಪನೆ ಬರುವದೆಂದು ಆಶಿಸಿ ಲೇಖಣಿಗೆ ವಿರಾಮ ಕೊಡುವೆನು.



ಶಯಾನಂದ ಸುಖವು, ಪರಶಿವನ ಪರಮಜ್ಞಾನವು. ಹೀಗೆ ಗುರುಲಿಂಗ ಜಂಗಮರು ಒಬ್ಬನೇ ಪರಶಿವನು ಜಗತ್ಕಲ್ಯಾಣಕ್ಕಾಗಿ ಮೂರು ರೂಪತಾಳಿ ಮೂರು ಬಗೆಯ ಕ್ರಿಯಗಳನ್ನು ಮಾಡುತ್ತಿರುವನು. ಅದಕ್ಕೆ ಈ ಮೂರರಲ್ಲಿ ವಸ್ತು ಭೇದವಿಲ್ಲ. ಆದರೆ ಕ್ರಿಯಾಭೇದ ಮಾತ್ರ ಕಂಡುಬರುವದು. ಗುರುಜಂಗಮರಿಗೂ ಕೂಡ ಲಿಂಗ ಬೇಕೇಬೇಕು. ಆದರಂತೆ ಭಕ್ತನಿಗೂ ಬೇಕು. ತನು ಶುದ್ಧಿಗಾಗಿ ಇಷ್ಟಲಿಂಗ (ಆಚಾರಲಿಂಗ) ಗುರುಲಿಂಗ, ಪೂಜಿಸುತ್ತಿರುವಾಗ ಭಕ್ತನೆನಿಸುವನು. ಪ್ರಾಣಶುದ್ಧಿಗಾಗಿ ಪ್ರಾಣಲಿಂಗ (ಶಿವಲಿಂಗ ಜಂಗಮಲಿಂಗ) ವನ್ನು ಪೂಜಿಸುವಾಗ ಅವನೇ ಗುರುಮಹೇಶ ಎನಿಸಿಕೊಳ್ಳುವನು. ಭಾವ ಶುದ್ಧಿಗಾಗಿ ಭಾವಲಿಂಗ (ಪ್ರಸಾದಲಿಂಗ-ಮಹಾಲಿಂಗ) ಪೂಜಿಸುವಾಗ ಪ್ರಸಾದಿ ಜಂಗಮನೆನಿಸುವನು. ಇದರಿಂದ ಒಂದಕ್ಕಿಂತ ಮತ್ತೊಂದು ಹೆಚ್ಚಿನದೆನಿಸುವದು. ಅವರ ಸ್ಥಿತಿ ಏರಿದಹಾಗೆ ಅವನಿಗೆ ಬೇರೆ ಸ್ಥಿತಿಯು ಬರುವದು.' ಅಲ್ಲದೆ ಕರ್ತವ್ಯಕರ್ಮಗಳಲ್ಲಿಯೂ ಕೂಡ ಅಂತರವಾಗುವದು. ಮತ್ತು ಇರುವಿಕೆಯಲ್ಲಿಯೂ ಕೂಡ ಅಂತರ ಉಂಟೆಂದು ಮೇಲಿನ ವಿವರಣೆಯಿಂದ ಹೊಳೆಯುವದು.

ಅನ್ಯರು ಮಾಡಿದರೆ ಭಕ್ತ ಗುರು ಜಂಗಮತನವು ಎಂದೂ ಬರಲಾರದು. ಅದನ್ನು ಹೊಂದುವ ಶಕ್ತಿಯು ತನ್ನಲ್ಲಿರುವದು. ತಾನು ಸರಿಯಾದ ಸಾಧನ ಮಾಡಿ ಪಡೆದರೆ ಆ ನಿಲವು ನಿಲಕುವದು. ಹೀಗಾಗಿ ಇವುಗಳು ಈಗ ಜ್ಞಾನವಿಶಿಷ್ಟವಾಗಿಲ್ಲ. ಆದರೆ ಜಾತಿವಿಶಿಷ್ಟವಾಗಿರುವವು. ಹೀಗಾಗಿ ಶಿವಶರಣರು ನಿರ್ಮಿಸಿದ ವೀರಶೈವ ಸಮಾಜವು ಹ್ರಾಸವಾಗಿರುವದು. ಈ ಗುರುತ್ವ ಜಂಗಮತ್ವಗಳು ಮೇಲೆ ವಿವರಿಸಿದ ರೀತಿಯಿಂದ ಸಾಧನಮಾಡಿ ಪಡೆದುಕೊಂಡರೆ ಒಳ್ಳೇದಾಗುವದು. ಇವರಲ್ಲಿ ಜಾತಿಭೇದವಿಲ್ಲ. ಗುರು ಲಿಂಗ ಜಂಗಮ ಹಾಗೂ ಭಕ್ತರ ಸರಿಸಮಾನತೆಯನ್ನು ಕೆಳಗಿನ ವಚನಗಳಲ್ಲಿ ಕಾಣಬಹುದು.

ತನುವಿನೊಳಗೆ ಲಿಂಗ, ಲಿಂಗದೊಳಗೆ ಪ್ರಾಣವಿರ್ಪದು, ಬೇರಿಟ್ಟೆನುಡಿವ ಭಿನ್ನ ಜ್ಞಾನದೊಳಗೆ ಲಿಂಗವೆಲ್ಲಿಯದೋ? ಲಿಂಗವಿಲ್ಲವಾಗಿ ಪ್ರಸಾದವಿಲ್ಲ ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ. ಬಿನ್ನ ಭಾವವಳಿದು ನಿನ್ನೊಳಡಗಿಹೆನು ಮಾ. ಲಿ. ಗು. ಸಿ.

ಕಾರಣ ಶರೀರ ಪ್ರಾಣ ಲಿಂಗ ಇವುಗಳು ಸ್ಥೂಲ ಸೂಕ್ಷ್ಮ ಕಾರಣ ಶರೀರಕ್ಕೆ ಸಂಬಂಧಿಸಿರುವವು. ನಿಜವಾಗಿ ಒಂದೇ ಯಾಗಿರುವವು ಆದ್ದರಿಂದ ಶರೀರವೇ ಭಕ್ತ, ಪ್ರಾಣವೇ ಲಿಂಗವೆಂದು ಹೇಳಬಹುದು.

ದೇವ ಭಕ್ತರ ಬಗೆಯು ಬೇರೆಂದರೆ, ಭಕ್ತಿಯ ಬೀಜದಂಕೂರವೆಲ್ಲಿ ? । ಸತಿಪತಿಯು ಬೇರಾದರೆ, ಪಿಂಡದಂಕುರವೆಲ್ಲಿ? ಭೂಮಿ ಬೀಜ। ಬೇರಾದರೆ, ವೃಕ್ಷದಂಕುರವೆಲ್ಲಿ? ಇದು ಕಾರಣ ದೇವ (ಲಿಂಗ) ಭಕ್ತರಲ್ಲಿ। ಬೇರೆಂಬ ಬಗೆಯದೆಂತು ಹೇಳಾಕೂ । ಚ. ಸಂ ॥ ಇದರಿಂದ ಭಕ್ತ ಹಾಗು ಲಿಂಗಗಳಲ್ಲಿ ಭೇದವನ್ನು ಕಲ್ಪಿಸಬಾರದೆಂದು ಹೇಳಿದಂತಾಗುವದಿಲ್ಲವೆ!

ಒಡಲಿಲ್ಲದಾತ ಜಂಗಮ ಪ್ರಾಣವಿಲ್ಲದಾತ ಭಕ್ತನಯ್ಯ ।
ಆಚಾರವೇ ಜಂಗಮ ವಿಚಾರವೇ ಭಕ್ತನಯ್ಯ ।
ಆಚಾರ ವಿಚಾರವೆಂಬುದು ಸ್ವಾನುಭವ ನೋಡಾ ಕೂ. ಸ. ದೇ. ॥

ಅಂದರೆ ಶರೀರದ ಯಾವತ್ತೂ ಅಭಿಮಾನ ಮೋಹ ಬಿಟ್ಟು ಅದನ್ನು ನಿಗ್ರಹಿಸಿ ಕಾಯದಿಂದ ಸದಾ ಪರಹಿತ ಮಾಡುತ್ತಿದ್ದರೆ ಆತ ಜಂಗಮ ದೇಹವನ್ನು ದೇಗುಲಮಾಡಿ ಪ್ರಾಣವನ್ನೇ ಲಿಂಗವನ್ನಾಗಿ ಮಾಡಿ ನಿರಹಂಕಾರದಿಂದ ಸ್ವಾರ್ಥಬಿಟ್ಟ ಪೂಜಿಸುತ್ತಿದ್ದರೆ ಆತ ಭಕ್ತನೆಂದು ಹೇಳಿದ್ದಾರೆ.

ಭಕ್ತನು ಭಕ್ತನ ಕಂಡಲ್ಲಿ ಕೈಮುಗಿಯುವುದೇ ಭಕ್ತಸ್ಥಲ ।
ಜಂಗಮನು ಜಂಗಮನ ಕಂಡಲ್ಲಿ ಶರಣೆಂಬುದೇ ಜಂಗಮಸ್ಥಲ ॥
ಭಕ್ತ ಜಂಗಮ ಎಂದು ಬೇರುಂಟೆ ? ರಸದಂತೆ ಭಕ್ತ ।
ರುಚಿಯಂತೆ ಜಂಗಮ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನ ॥

ಎಂದು ರಸರುಚಿಗೆ ಭಕ್ತ ಜಂಗಮರನ್ನು ಹೋಲಿಸಿದ್ದು ನೋಡಿದರೆ ಇವರೂ ಒಂದೇ ಎಂದು ಹೇಳಿದಂತೆ ಆಗುವವು. ಇದರ ಮೇಲಿಂದ ಭಕ್ತ ಜಂಗಮರು ಅವಿನಾಭಾವ ಸಂಬಂಧದಿಂದ ಕೂಡಿ ಒಂದೇ ಇರುವವೆಂದು ಭಾವ ಬರುವದು.

ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ । ಭಕ್ತನ ಕಿಂಕರತ್ವವೇ ಜಂಗಮಕ್ಕೆ ದಾಸೋಹ । ಭಕ್ತನೊಳಗೆ ಜಂಗಮವಡಗಿ, ಜಂಗಮದೊಳಗೆ ಭಕ್ತನಡಗಿ । ಇದನೇನೆಂದು ಹವಣಿಸುವೆನಯ್ಯ ? ಎರಡೊಂದಾದ ಘನವ ಇದನೆಂತುಪಮಿಸುವೆನಯ್ಯ ? ತೆರಹಿಲ್ಲದ ಘನವ.

ಇದರಿಂದ ಭಕ್ತ—ಜಂಗಮ ಸಂಬಂಧವು ಚನ್ನಾಗಿ ಒಡೆದು ಕಾಣು ವದು. ಕಾಯವು ಜೀವವು ಎಂತು ಬೆರಸಿಪ್ಪನಂತೆ ಲಿಂಗದೊಳಗೆ ಜಂಗಮ ಜಂಗಮದೊಳಗೆ ಲಿಂಗ ಬೆರಸಿಪ್ಪುದು ಭಿನ್ನಭಾವವಿಲ್ಲದೆ ನ ಶಿವೇನ ವಿನಾ ಶಕ್ತಿರ್ನ ಶಕ್ತಿರಹಿತೋ ಶಿವಃ। ಪುಷ್ಪಗಂಧ ವಿನಾಸ್ಯೈವ ಮರುತಾಂಬರ ಯೋರಪಃ। ಎಂದುದಾಗಿ ಭಾವಭೇದವಿಲ್ಲದ ಜಂಗಮವೇ ಲಿಂಗವು ಕೂ. ಚ. ಸ. ದೇ. ಲಿಂಗ ಜಂಗಮರ ಅವಿನಾಭಾವ ಸಂಬಂಧ ಇರುವರೆಂದು ನುಡಿದಿದ್ದಾರೆ. ಅದಕ್ಕಾಗಿ ಸಿದ್ಧರಾಮನೂ ಕೂಡ ಸಕ್ಕರೆ ಬಿಟ್ಟು ರುಚಿ ಇಲ್ಲ. ಜಂಗಮಬಿಟ್ಟು ಲಿಂಗವಿಲ್ಲ ಲಿಂಗಬಿಟ್ಟು ಜಂಗಮವಿಲ್ಲ ಎಂದು ಹೇಳಿದ್ದಾನೆ.

ಕಾಯ ಗುರು ಪ್ರಾಣ ಲಿಂಗ, ಜ್ಞಾನ ಜಂಗಮ ಎಂಬ ವಚನದಂತೆ ಈ ಮೂರು ಕೂಡಿದವನೇ ಭಕ್ತನು ಅದಕ್ಕಾಗಿ ಭಕ್ತನ ಸಾಧನೆಯಿಂದ ಗುರುವಾಗುವನು. ಲಿಂಗವಾಗುವನು ಜಂಗಮನೂ ಆಗುವನು ಕಾರಣ ಭಕ್ತ ಗುರು ಲಿಂಗ ಜಂಗಮರು ಒಂದೇ ಇವರಲ್ಲಿ ವಸ್ತು ಭೇದವಿಲ್ಲ ಕ್ರಿಯಾ ಭೇದ ಮಾತ್ರ ಇರುವುದು. ಮೇಲೆ ಹೇಳಿದೆ. ಅದು ಇಲ್ಲಿ ಸಿದ್ಧವಾಗುವದು. ಆ ಭೇದಗಳನ್ನೂ ಕ್ರಿಯೆಗಳನ್ನೂ ಮೇಲೆ ವಿವರಿಸಲಾಗಿದೆ.

ಈ ವಿಷಯವು ಬಹು ದೊಡ್ಡದು. ಅದನ್ನು ಚಿಕ್ಕ ಪೆಟ್ಟಿಗೆಯಲ್ಲಿ ಅತಿ (ಪ್ರೆಸ್ ಮಾಡಿ) ಒತ್ತಿ ಒತ್ತಿ ತುಂಬಿದರೂ ಇಷ್ಟು ದೊಡ್ಡದಾಗಿರುವದು ಇದನ್ನು ಚನ್ನಾಗಿ ಬರೆದರೆ ವಿಶಾಲ ಹೊತ್ತಿಗೆಯಾಗಬಹುದು. ಇಷ್ಟರಿಂದ ತಕ್ಕಷ್ಟು ವೀರಶೈವರ ಶಕ್ತಿ ವಿಷ್ಟಾದ್ವೈತದ ಕಲ್ಪನೆ ಬರುವದೆಂದು ಆಶಿಸಿ ಲೇಖಣಿಗೆ ವಿರಾಮ ಕೊಡುವೆನು.



# ಮಾನಪತ್ರ ಸಮರ್ಪಣ ಸಮಾರಂಭ

## ಬನಹಟ್ಟಿ

ತಾರೀಖು ೩-೧-೧೯೫೮ ನೇ ದಿವಸ ಜಮಖಂಡಿ ತಾಲೂಕು ಬನಹಟ್ಟಿ ಗ್ರಾಮದಲ್ಲಿ ಶ್ರೀ. ಮ. ನಿ. ಪ್ರ. ಗಳಾದ ಶ್ರೀ ಶಂಕರ ಶಿವಾಚಾರ್ಯ ಮಹಾ ಸ್ವಾಮಿಗಳು ವೀರ ಭಿಕ್ಷಾವೃತ್ತಿಮಠ ಮುಕ್ಕಾಮ ಹುಬ್ಬಳ್ಳಿ ಇವರು ಚಾಮರ ಸಕೃತ ಪ್ರಭುಲಿಂಗ ಲೀಲಾ ಪುರಾಣವನ್ನು ಒಂದು ತಿಂಗಳಿನಿಂದಲೂ ಹೇಳುತ್ತ ಬಂದಿದ್ದು ಅದು ಅಲ್ಲಿಯ ಜನರಿಗೆ ಅತ್ಯಂತ ಪ್ರಿಯತಮವಾಗಿತ್ತು. ಅದು ಮೇಲ್ಕಂಡ ತಾರೀಖಿಗೆ ಸಮಾಪ್ತವಾಗುತ್ತಿದ್ದು ಆ ದಿನ ಸುತ್ತಲಿನ ಗ್ರಾಮಗಳಲ್ಲಿಯ ಬಹು ಜನರು ಬನಹಟ್ಟಿಗೆ ಬರುವವರಾಗಿದ್ದರು. ಆ ಕಾಲದಲ್ಲಿ ಡಾ॥ ಫ. ಗು. ಹಳಕಟ್ಟಿ ಇವರನ್ನು ಬನಹಟ್ಟಿಯ ನಾಗರೀಕರು ಬರಮಾಡಿ ಕೊಂಡು ಮಾನಪತ್ರವನ್ನು ಅವರಿಗೆ ಸಮರ್ಪಿಸುವ ಸಮಾರಂಭವನ್ನು ನೆರ ವೇರಿಸಿದರು. ಸಭಾ ಕಾರ್ಯಗಳು ಮಹಿಮಾ ಪುರುಷರಾದ ಕಾಡಸಿದ್ಧೇಶ್ವ ರರು ವಾಸ ಮಾಡಿದ ಸ್ಥಳವು ಬನಹಟ್ಟಿಯಾಗಿದ್ದು ಅಲ್ಲಿ ಅದು ಒಂದು ದಿನ್ನೆಯ ಮೇಲೆ ಹಳ್ಳದ ಬದಿಯಲ್ಲಿ ಒಂದು ಮನೋಹರವಾದ ಸ್ಥಳದಲ್ಲಿರುತ್ತದೆ. ಅಲ್ಲಿ ಕಾಡಸಿದ್ಧೇಶ್ವರರ ಒಂದು ಅಚ್ಚುಕಟ್ಟಾದ ದೇವಾಲಯವೂ ಇರುತ್ತದೆ. ಗ್ರಾಮ ಸ್ಥರೂ, ಸುತ್ತಲಿನ ಪ್ರದೇಶದಲ್ಲಿಯ ಗ್ರಾಮದವರೂ ಈ ಮಹಿಮಾ ಪುರುಷರ ಸ್ಥಾನವನ್ನು ಅತಿ ಪೂಜ್ಯಭಾವದಿಂದ ಕಾಣುತ್ತ ಬಂದಿದ್ದಾರೆ ಈ ಪುಣ್ಯ ಸ್ಥಳದಲ್ಲಿಯೇ ಮಾನಪತ್ರ ಸಮಾರಂಭವು ಜರಗಿತು. ಈ ಕಾಲಕ್ಕೆ ಶ್ರೀ. ಮ. ನಿ. ಪ್ರ. ಮಲ್ಲಿಕಾರ್ಜುನ ಮಹಾ ಸ್ವಾಮಿಗಳೂ ಜಮಖಂಡಿಯಿಂದ ಮುದ್ದಾಮ ಆಗಮಿಸಿದ್ದರು. ಈ ಕಾಲದಲ್ಲಿ ಬನಹಟ್ಟಿಯಲ್ಲಿ ಸ್ಥಾಪಿತವಾಗಿ ರುವ ಹಾಯಸ್ಕೂಲು ಒಂದು ಕಾಲದಲ್ಲಿ ಮುರುಕಳಿಗೆ ಬಂದದ್ದನ್ನು ರಾ॥ ಬ॥ ಹಳಕಟ್ಟಿಯವರು ಊರ್ಜಿತ ಸ್ಥಿತಿಗೆ ತಂದು ಅಂದಿನಿಂದ ಈ ವರೆಗೆ ಅನೇಕ ವರ್ಷ ಅದರ ಅಧ್ಯಕ್ಷರಾಗಿ ಕೆಲಸ ಮಾಡುತ್ತ ಬಂದಿದ್ದಾರೆ. ದಿವಂಗತರಾದ ಚಿಕ್ಕೋಡಿ ಶ್ರೀ ತಮ್ಮಣ್ಣಪ್ಪನವರು ರಾ॥ ಬ॥ ಹಳಕಟ್ಟಿಯವರ ಮಾವಂದಿರಾಗ ಬೇಕು. ಶ್ರೀ ತಮ್ಮಣ್ಣಪ್ಪನವರು ಈಗ ಲಿಂಗೈಕ್ಯರಾಗಿದ್ದ ಅವರ ಮೂಲಕವಾ ಗಿಯೇ ಬನಹಟ್ಟಿ ಹೈಸ್ಕೂಲು ಸ್ಥಾಪಿತವಾಗಿದೆ. ಈ ಮಹನೀಯರು ಮುಧೋಳ

ಮಹಾಲಿಂಗಪೂರ ರಬಕವಿ ಮುಂತಾದ ಗ್ರಾಮಗಳಲ್ಲಿ ಕನ್ನಡಕ್ಕೋಸ್ಕರ ಅದ್ಭುತ ಚಳವಳಿ ಮಾಡಿರುವರು. ಈ ಭಾಗದಲ್ಲಿ ನೇಕಾರರ ಮತ್ತು ಬಣ್ಣಕಾರರ ದಟ್ಟವಾದ ವಸತಿ ಇದೆ. ಅವರಲ್ಲಿ ವಿದ್ಯಾಪ್ರಸಾರವು ಚನ್ನಾಗಿ ಆದದ್ದರಿಂದ ಅವರಲ್ಲಿ ಅನೇಕ ಜನರು ಪದವೀಧರರೂ ಶಿಕ್ಷಕರೂ ಉಚ್ಚ ಉದ್ಯೋಗದಲ್ಲಿರುವವರೂ ಆಗಿದ್ದಾರೆ. ಮುಸಲ್ಮಾನ ಮೊದಲ್ಗೊಂಡು ಎಲ್ಲರೂ ಸುಧಾರಿಸಿದವರು ಇದ್ದಾರೆ. ಈಗ ಕರ್ನಾಟಕ ವಿಶ್ವ ವಿದ್ಯಾಲಯದ ಉಪಕುಲಪತಿಗಳಾದ ರ್‍ಯಾಂಗಲರ್ ಡಿ. ಸಿ. ಪಾವಟೆಯವರು ತಮ್ಮ ಇಂಗ್ಲಿಷ ಶಿಕ್ಷಣದ ಪ್ರಾರಂಭವನ್ನು ಬನಹಟ್ಟಿಯ ಇಂಗ್ಲಿಷ ಸಾಲೆಯಲ್ಲಿಯೇ ಮಾಡಿದರು. ಇಲ್ಲಿಂದ ಮುಂದೆ ಅವರು ಹೆಚ್ಚಿನ ಶಿಕ್ಷಣಕ್ಕಾಗಿ ಬನಹಟ್ಟಿಯಿಂದ ಬೇರೆ ಬೇರೆ ಕಡೆಗೆ ಹೋದರು. ಬನಹಟ್ಟಿ ಗ್ರಾಮದಲ್ಲಿಯ ಜನರು ಸಾರ್ವಜನಿಕ ಕಾರ್ಯಗಳಲ್ಲಿ ಪ್ರಭಾವಿಗಳಾಗಿರುವರು. ಇಲ್ಲಿರುವ ಹಾಯಸ್ಕೂಲು ಈಗ ಅತ್ಯುಚ್ಚ ಸ್ಥಿತಿಯಲ್ಲಿರುತ್ತದೆ. ಆದರೆ ಇಲ್ಲಿಯ ಜನರ ಪರಿಸ್ಥಿತಿಯು ಬಡತನದಲ್ಲಿಯದು. ಈ ಸ್ಥಿತಿಯಲ್ಲಿಯೂ ಕೂಡ ಈ ಗ್ರಾಮದವರು ಸುಮಾರು ೧೧೧೧ ರೂಪಾಯಿಗಳ ಬಂದು ನಿಧಿಯನ್ನು ಶೇಖರಿಸಿ ಡಾ॥ ಹಳಕಟ್ಟಿಯವರಿಗೆ ಸಮರ್ಪಿಸಿದ್ದು ಅವರಿಗೆ ಭೂಷಣವಾಗಿರುತ್ತದೆ. ಬನಹಟ್ಟಿ ಗ್ರಾಮಕ್ಕೆ ಸಮೀಪದಲ್ಲಿ ರಬಕವಿ ಗ್ರಾಮವಿದ್ದು ಅದುಸಹ ಔದ್ಯೋಗಿಕ ಕೇಂದ್ರವಾಗಿರುತ್ತದೆ. ಅಲ್ಲಿಯೂ ಒಂದು ದೊಡ್ಡ ಹಾಯಸ್ಕೂಲವಿರುತ್ತದೆ. ಅದರ ಹೆಡ್ ಮಾಸ್ತರರು ಶ್ರೀ. ಅಂಗಡಿ ಎಮ್. ಎ. ಇವರು ಇದ್ದು ಇದೂ ಕೂಡ ಅತ್ಯುತ್ತಮ ಸ್ಥಿತಿಯಲ್ಲಿರುತ್ತದೆ. ಶ್ರೀ ಅಂಗಡಿಯವರು ಇಂಗ್ಲೀಷ ಮತ್ತು ಕನ್ನಡ ಭಾಷೆಯಲ್ಲಿ ಪ್ರವೀಣರಾಗಿದ್ದು ಅವರು ಗ್ರಂಥಕಾರರೂ ಇರುತ್ತಾರೆ. ಬನಹಟ್ಟಿಯ ಹೆಡ್ ಮಾಸ್ತರರಾದ ಶ್ರೀ. ಮುನವಳ್ಳಿಯವರು ಮತ್ತು ಅದರ ಶಿಕ್ಷಕರು ಒಗ್ಗಟ್ಟಿನಿಂದ ನಡೆದು ಅದನ್ನು ಮಾದರಿ ಶಾಲೆಯನ್ನಾಗಿ ಮಾಡಿದ್ದಾರೆ. ಹೀಗೆ ಬನಹಟ್ಟಿ ರಬಕವಿಯಲ್ಲಿಯ ಮುಖ್ಯ ನಾಗರಿಕರೂ ಸಂಘಟಿತರಾಗಿ ಕಾರ್ಯ ಮಾಡುತ್ತಿದ್ದಾರೆ. ಇವರು ವಚನ ಶಾಸ್ತ್ರದ ಬಗ್ಗೆ ಮಾಡತಕ್ಕ ಕಾರ್ಯಗಳನ್ನು ನಿರ್ಧರಿಸಿದ್ದಾರೆ. ಅವರು ಮಾಡಿದ ನಿರ್ಧಾರಗಳನ್ನು ಕರ್ನಾಟಕದ ಮುಖ್ಯ ಗ್ರಾಮಗಳಲ್ಲಿ ಅವರು ಪ್ರಚಾರದಲ್ಲಿ ತರುವ ಬಗ್ಗೆ ಯೋಜನೆ ಮಾಡಿರುವರು ಇವುಗಳ ಸಂಬಂಧವಾಗಿ ಶ್ರೀ ಶಿವಾನಂದ ಸ್ವಾಮಿಗಳೂ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ರಾ॥ ಬ॥ ಹಳಕಟ್ಟಿಯವರೂ ಸಭಾ ಕಾಲದಲ್ಲಿ ವಿವರಿಸಿ ಹೇಳಿದರು. ಅವುಗಳನ್ನು ನಾವು ಶಿವಾ

ನುಭವದ ಮುಂದಿನ ಸಂಚಿಕೆಯಲ್ಲಿ ಸವಿಸ್ತಾರವಾಗಿ ನಿರೂಪಿಸುವೆವು ಸಭಾ ಕಾಲದಲ್ಲಿ ಸಾವಿರಾರು ಜನರು ನೆರೆದಿದ್ದರು. ಆಗ ಶ್ರೀ ಶಂಕರ ಶಿವಾಚಾರ್ಯ ಸ್ವಾಮಿಗಳೂ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳೂ ಡಾ॥ ಫ ಗು. ಹಳಕಟ್ಟಿ ಯವರೂ ಇನ್ನಿತರ ಪುರ ಪ್ರಮುಖರೂ ಮಾಡಿದ ಭಾಷಣಗಳೂ ಹೃದಯ ಸ್ಪರ್ಶಿಯಾಗಿದ್ದವು.

ಈ ಕಾಲದಲ್ಲಿ ಹಾಯಸ್ಕೂಲಿನ ವಾರ್ಷಿಕ ಸಮಾರಂಭವೂ ಏರ್ಪಡಿಸ ಲ್ಪಟ್ಟಿತ್ತು. ಆಗ ಬಾಲ ಬಾಲಕಿಯರಿಗೆ ಪಾರಿತೋಷಕಗಳು ಕೊಡಲ್ಪಟ್ಟವು. ಈ ಶಾಲೆಯ ವಿದ್ಯಾರ್ಥಿಗಳಲ್ಲಿ ಸುಮಾರು ೬೦—೫೦ ಜನ ವಿದ್ಯಾರ್ಥಿನಿಯರು ಇದ್ದು ಅವರು-ಇಂಗ್ಲೀಷ ಶಿಕ್ಷಣವನ್ನು ಹೊಂದುತ್ತಿರುವದು ಅಲ್ಲಿಯವರ ವೈಶಿಷ್ಟ್ಯವಾಗಿರುತ್ತದೆ. ಈ ವಿದ್ಯಾರ್ಥಿನಿಯರು ಶಿಕ್ಷಣ ಮತ್ತು ಉದ್ಯೋಗ ಇವೆರಡರಲ್ಲಿ ಪ್ರಮುಖ ಪಾತ್ರವನ್ನು ವಹಿಸಿರುತ್ತಾರೆ.

ಈ ಪ್ರಕಾರ ಕಾರ್ಯಗಳು ಗ್ರಾಮದಲ್ಲಿ ಜರಗಿದ ಬಳಿಕ ಕಾಡಸಿದ್ಧೇ ಶ್ವರರ ಹೆಸರಿನಿಂದ ಜಯಘೋಷವು ಮಾಡಲ್ಪಟ್ಟಿತು. ವಿದ್ಯಾರ್ಥಿಗಳಿಗೆ ಸಂಬಂ ಧಿಸಿದ ಕಾರ್ಯಕ್ರಮಗಳು ಈ ದಿನ ಪೂರ್ಣ ಹೊಂದದೆ ಇದ್ದದರಿಂದ ಸಭೆಯು ಮರುದಿವಸ ಜರುಗಿ ಕಾರ್ಯಗಳು ಜರುಗಿಸಲ್ಪಟ್ಟವು.

ಬನಹಟ್ಟಿ ಗ್ರಾಮದಂತೆ ಮಹಾಲಿಂಗಪೂರ, ಜಮಖಂಡಿ, ಹುಲ್ಯಾಳ, ಮೈದರಗಿ,| ಕಮತಗಿ, ಮುಂತಾದ ಗ್ರಾಮಗಳು ನಿಬಿಡವಾದ ನೇಕಾರ ಮೊದ ಲಾದ ಉದ್ಯೋಗಸ್ಥರಿಂದ ತುಂಬಿಕೊಂಡಿವೆ. ಆದ್ದರಿಂದ ಅಲ್ಲಿಯೂ ಕೂಡ ಬನಹಟ್ಟಿಯಲ್ಲಿಯಂತೆಯೇ ಶಿಕ್ಷಣ, ಉದ್ಯೋಗ ಮುಂತಾದವುಗಳ ಬಗ್ಗೆ ಪ್ರಯತ್ನಗಳನ್ನು ಮಾಡುವ ಬಗ್ಗೆ ಅಧ್ಯಕ್ಷರಾದ ಡಾ॥ ಹಳಕಟ್ಟಿಯವರೂ ಶ್ರೀ. ಮಲ್ಲಿಕಾರ್ಜುನ ಸ್ವಾಮಿಗಳೂ ಅಧ್ಯಕ್ಷರಾದ ಶ್ರೀ. ಶಂಕರ ಶಿವಾಚಾರ್ಯ ಮಹಾ ಸ್ವಾಮಿಗಳೂ ಸಭೆಯಲ್ಲಿ ಭಾಷಣ ಮಾಡಿದರು.

## ಬಿನ್ನವತ್ತಳೆ.

ಶ್ರೀ ಮನ್ನಿರಂಜನ ಪ್ರಣವಸ್ವರೂಪಿಗಳೂ ಪ್ರೇಮ ಲೀಲಾವತಾರಿಗಳೂ ಆದ ಶ್ರೀ ಮಜ್ಜಗದ್ಗುರು ಶ್ರೀ ಶಂಕರ ಶಿವಾಚಾರ್ಯ ಮಹಾಸ್ವಾಮಿಗಳು ವೀರ ಭಿಕ್ಷಾವೃತ್ತಿಮಠ ಹುಬ್ಬಳ್ಳಿ ಇವರಿಂದ ಬನಹಟ್ಟಿ ಗ್ರಾಮದಲ್ಲಿರುವ ಶ್ರೀ ನೀಲಕಂಠ ಮಠದಲ್ಲಿ ಶ್ರೀವರ ಚಾಮರಸ ಕೃತ ಶ್ರೀ ಪ್ರಭುಲಿಂಗ ಲೀಲಾ ಪುರಾಣ ಸಮಾಪ್ತಿಯ ಸುಪ್ರಸಂಗದಲ್ಲಿ ಅರ್ಪಿಸಲ್ಪಟ್ಟ **ನಿಧಿ ಸಮೇತ ಬಿನ್ನ ವತ್ತಳೆ.**

ಶರಣರ ಸಂದೇಶವನ್ನು ತಮ್ಮ ಶಿವಾನುಭವದ ಮುಖಾಂತರ ಕಳೆದ ಅರ್ಧ ಶತಮಾನದಲ್ಲಿ ಕನ್ನಡ ನಾಡಿನ ಮನೆ ಮನೆಗೂ ಮೂಲೆ ಮೂಲೆಗೂ ಹರಡಿ ತಮ್ಮ ಬಾಳನ್ನು ಸಾರ್ಥಕಗೊಳಿಸಿದ ಮಹಾನುಭಾವರೂ ಶರಣ ಜೀವಿಗಳೂ ಆದ ಡಾ|| ಶ್ರೀಯುತ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. (ಡಿ. ಲಿಟ್.) ವಿಜಾಯಪೂರ, ಇವರ ಸೇವೆಗೆ ಬನಹಟ್ಟಿಯ ನಾಗರಿಕರು ಆದರ ಪೂರ್ವಕವಾಗಿ ಅರ್ಪಿಸುವ ಮಾನಪತ್ರ. ಶರಣರ ಸಾಹಿತ್ಯಕ್ಕೆ ಪುನ ರ್ಜನ್ಮವನ್ನಿತ್ತ ಪ್ರ. ಪಿತಾಮಹ ಸನ್ಮಾನ್ಯ ಡಾ|| ಶ್ರೀ ಹಳಕಟ್ಟಿಯವರೇ—

ಉತ್ತರ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವೆನಿಸಿದ ಧಾರವಾಡದಲ್ಲಿ ಏಳು ದಶಕಗಳ ಹಿಂದೆ ಜನ್ಮವೆತ್ತಿ ಹೂಗಳ ಪರಿಮಳವನ್ನು ಹೀರುವ ಹಿರಿ ದುಂಬಿಯಂತೆ ಧಾರವಾಡ, ಪುಣೆ, ಮುಂಬಯಿ ನಗರಗಳಲ್ಲಿ ಆಂಗ್ಲ ಶಿಕ್ಷಣ ವನ್ನು ಪಡೆದು ಪದವೀಧರರಾಗಿ ವಿಜಯಪೂರದಲ್ಲಿ ನೆಲಿಸಿ ಪ್ರಾಮಾಣಿಕ ವಕೀಲರಾಗಿ ಶಿವಾನುಭವ ನವಕರ್ನಾಟಕ ಮುಂತಾದ ಪತ್ರಿಗಳ ಸಂಚಾಲಕ ಸಂಪಾದಕರಾಗಿ ಕಳೆದ ನಲವತ್ತುವರ್ಷಗಳಿಂದ ಕನ್ನಡನುಡಿಗಳಿಗೆ ಸರ್ವಾಂಗ ಸುಂದರವಾದ ಸೇವೆಯನ್ನು ಸಲ್ಲಿಸುತ್ತಾ ಹಿರಿಯ ಬಾಳನ್ನು ಬಾಳಿದ ಮಹಾ ನುಭಾವಿಗಳಾದ ಕನ್ನಡ ನಾಡಿನ ಪಿತಾಮಹರೂ, ಶೀಘ್ರ ಕವಿಗಳೂ ತಮ್ಮ ಪೂಜ್ಯ ಮಾವಂದಿರೂ ಆದ ಲಿಂಗೈಕ್ಯ ಶ್ರೀ ಚಿಕ್ಕೋಡಿ ತಮ್ಮಣ್ಣಪ್ಪನವರ ಕರ್ಮಭೂಮಿಯೆನಿಸಿದ ಬನಹಟ್ಟಿ ಗ್ರಾಮಕ್ಕೆ ನಿಮ್ಮನ್ನು ಬರಮಾಡಿಕೊಂಡು ಅಧ್ಯಾತ್ಮ ವಿದ್ಯಾ ಪರಿಣಿತರು ತಪಸ್ವಿಗಳೂ ಆದ ಪರಮಪೂಜ್ಯ ಶ್ರೀ. ಶ್ರೀ. ಶಂಕರ ಶಿವಾಚಾರ್ಯ ಮಹಾಸ್ವಾಮಿಗಳವರ ಸನ್ನಿಧಿಯಿಂದ ಸಾಂಗವಾಗುತ್ತಿದ್ದ ಪ್ರಭುಲಿಂಗಲೀಲೆಯ ಪ್ರವಚನ ಉಪಸಂಹಾರವಾಗುತ್ತಿರುವ ಇಂದಿನ ಮಂಗಲ ಪ್ರಸಂಗದಲ್ಲಿ ತಮ್ಮ ಗೌರವಾದರಗಳನ್ನು ಸಲ್ಲಿಸುವ ಸುಯೋಗ ಒದಗಿ ಬಂದ ದ್ದಕ್ಕಾಗಿ ನಮಗೆ ಆನಂದವಾಗಿದೆ.

**ಸಮಾಜ ಸೇವಾ ತ್ಯಾಗ ಪುರುಷರೇ —**

ಈ ಶತಮಾನದ ಆರಂಭದ ದಶಕದಲ್ಲಿ ತಾವು ವಿಜಯಪುರಲ್ಲಿ ತಮ್ಮ ವಕೀಲಿ ವ್ಯವಸಾಯವನ್ನು ಆರಂಭಿಸಿದಾಗ ನಮ್ಮ ಪ್ರದೇಶದ ಶೈಕ್ಷಣಿಕ ಸ್ಥಿತಿ ಅತ್ಯಂತ ಶೋಚನೀಯವಿತ್ತು. ಅದನ್ನು ಕಂಡು ಕನಿಕರಿಸಿ ಸಿದ್ಧೇಶ್ವರ ಸಂಸ್ಥೆಯನ್ನು ಸಂಘಟಿಸಿ ಸಿದ್ಧೇಶ್ವರ ಹಾಯಸ್ಕೂಲವನ್ನು ಸ್ಥಾಪಿಸಿ ಜಿಲ್ಲೆಯ ಶೈಕ್ಷಣಿಕ ಯಶೋಭಿವೃದ್ಧಿಗೆ ಭದ್ರ ತಳಹದಿಯನ್ನು ಹಾಕಿದಿರಿ. ಇಂದಿನ

ಇಂದಿನ ಕರ್ನಾಟಕದಲ್ಲಿ ಗಣ್ಯಸ್ಥಾನವನ್ನು ಗಳಿಸಿದ ವಿಜಯ ಕಾಲೇಜ ನಿಮ್ಮ ಅನುಪಮ ತ್ಯಾಗ ಅಖಂಡ ಸೇವೆ ದೂರ ದೂರ ದರ್ಶನ ಜ್ಞಾನ ಮುಂಥೋ ರಜೆ ಸಮಾಜಿಕ ಹಿತಚಿಂತನೆಗಳನ್ನು ಎತ್ತಿ ಸಾರುತ್ತಿವೆ. ನಿಮ್ಮ ಉತ್ತುಂಗ ಶ್ರೇಯಸ್ಸಿಗೆ ಕಳಸಪ್ರಾಯವಾಗಿ ಶೋಭಿಸುತ್ತಿದೆ.

ಅದರಂತೆ ಸಿದ್ಧೇಶ್ವರ ದೇವಾಲಯ ವೀರಶೈವ ಪೌರಭವನ ಇತ್ಯಾದಿ ಸಂಸ್ಥೆಗಳು ನಿಮ್ಮ ಸಮಾಜ ಸೇವೆಯ ಸ್ಮಾರಕಗಳಾಗಿ ಬೆಳಗುತ್ತಿವೆ.

**ಸತ್ಯನ್ವೇಷಿಗಳಾದ ಸಂಶೋಧಕರೇ:—**

ಕನ್ನಡ ಸಾಹಿತ್ಯದಲ್ಲಿ ಅನೇಕ ವಿಶ್ವ ಸಾಹಿತ್ಯದಲ್ಲಿಯ ಶರಣರ ವಚನಗಳಿಗೆ ಅವುಗಳಲ್ಲಿ ಪ್ರಕಟವಾದ ತತ್ವಗಳಿಗೆ ಒಂದು ಅಪೂರ್ವ ಸ್ಥಾನ ವಿದೆ. ಆದರೆ ವೀರಶೈವ ಸಮಾಜದವರ ಅಜ್ಞಾನ, ಆಲಸಿಕೆ, ಇತ್ಯಾದಿ ಕಾರ ಣದಿಂದ ಬಸವಾದಿ ಪ್ರಮಥರ ವಚನಗಳು ಮತ್ತು ವೀರಶೈವ ಸಿದ್ಧಾಂತದ ಇನ್ನಿತರ ಗ್ರಂಥಗಳೂ ಜಗುಲಿಯ ಮೇಲಿಟ್ಟು ಪೂಜಿಸುವ ನಿರ್ಜೀವ ವಿಗ್ರ ಹಗಳಾಗಿದ್ದವೊ ಇಲ್ಲವೆ ಎಲ್ಲಿಲ್ಲೋ ಮೂಲೆಯಲ್ಲಿ ಬಿದ್ದು ಕ್ರಿಮಿಗಳಿಗೆ ಆಹಾ ರವಾಗುತ್ತಿದ್ದವೊ ಅಂಥ ಕೈಬರಹದ ತಾಡವಾಲಿ ಗ್ರಂಥಗಳನ್ನೆಲ್ಲಾ ಅತ್ಯಂತ ಪರಿಶ್ರಮ ವಹಿಸಿ ನಾನಾ ಸ್ಥಳಗಳಿಂದ ಶೇಖರಿಸಿ, ಪರಿಶೋಧಿಸಿ, ಪರಿಶೀಲಿಸಿ, ಪರಿಸ್ಪರಿಸಿ ಶಿವಾನುಭವ ಪತ್ರಿಕೆಯ ಮುಖಾಂತರ ಜನಸಾಮಾನ್ಯರಲ್ಲೂ, ಸಪ ಪ್ರಚುರಗೊಳಿಸಿ ಬೆಳಕಿಗೆ ತಂದಿರುವಿರಿ. ಈಗಾಗಲೆ ಆ ರೀತಿಯಾಗಿ ನೀವೂ ಪ್ರಕಟಗೊಳಿಸಿದ ಗ್ರಂಥಗಳ ಸಂಖ್ಯೆ ನೂರರ ಸಮೀಪಕ್ಕೆ ಸಂದಿವೆ, ಹಾಗೂ ಸಾಗರದ ಗುಹ್ಯ ಗುಹಾಂತರಗಳಿಂದ ರತ್ನ ರಾಶಿಯನ್ನು ಹೊರದೆಶೆಯುವಂತೆ ತಾವು ಪ್ರಾಪಂಚಿಕ ಯಾವ ಅಡೆತಡೆಗಳನ್ನು ಲೆಕ್ಕಿಸದೆ ಅಖಂಡ ನಲವತ್ತು ವರುಷಗಳ ವರೆಗೆ ಪ್ರಮಥರ ವಚನ ರಾಶಿಯನ್ನು ಬೆಳಕಿಗೆ ತಂದು ಕನ್ನಡ ನಾಡು ನುಡಿಗಳ ಧವಳ ಕೀರ್ತಿಯನ್ನು ಶಿಖರಕ್ಕೇರಿಸಿದ್ದೀರಿ, ಇಂತೀ ನಿಮ್ಮ ಕಾರ್ಯದ ವಿಸ್ತಾರ ವೈಶಾಲ್ಯಗಳನ್ನು ಮಹತಿ ಮೇಲ್ಮೆಗಳನ್ನು ಕೊಂಡಾ ಡಲು ನಮ್ಮ ಶಬ್ದ ಸಾಲವು.

**ಕಾರಣ ಪುರುಷರೇ—**

ಕರ್ನಾಟಕ ಏಕೀಕರಣ ಪರಿಷತ್ತು, ಕನ್ನಡ ಸಾಹಿತ್ಯಸಮ್ಮೇಲನ, ಅಖಿ ಲಭಾರತ ವೀರಶೈವ ಮಹಾಸಭೆ, ಮುಂತಾದ ಸಾರ್ವಜನಿಕ ಸಂಘ ಸಂಸ್ಥೆ

ಗಳ ಅಧ್ಯಕ್ಷ ಸ್ಥಾನಗಳನ್ನು ಅಲಂಕರಿಸಿ ಜನತೆಯನ್ನು ಜಾಗ್ರತ ಜೀವನ ದತ್ತ ಕರೆದೊಯ್ದು ತಮ್ಮ ಧೀರ ಮುಂದಾಳುತನವನ್ನು ಕನ್ನಡನಾಡು ಎಂದಿಗೂ ಮರೆಯಲಾರದು.

ಮುಂಬೈ ಶಾಸನ ಸಭೆ, ಮೈಸೂರ ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳು, ಕನ್ನಡ ಪರೀಕ್ಷಾ ಮಂಡಲ ಹಾಗೂ ಪಠ್ಯ ಪುಸ್ತಕ ಸಮಿತಿ ಮುಂತಾದ ಸಂಸ್ಥೆಗಳ ಸದಸ್ಯರಾಗಿ ತಾವು ಗೈದ ಸೇವೆ, ನೀಡಿದ ಸಲಹೆಗಳ ಪರಿಚಯವಿದ್ದ ಪ್ರತಿಯೊಬ್ಬ ಕನ್ನಡಿಗನೂ ನವಕರ್ಣಾಟಕದ ನಿರ್ಮಾತೃಗಳ ಲ್ಲೊಬ್ಬರೆಂದು ತಮ್ಮನ್ನು ಕೃತಜ್ಞೆಯಿಂದ ಸ್ಮರಿಸದಿರಲಾರನು.

**ಸ್ಥಿತಪ್ರಜ್ಞರೇ—**

ದೇವ ಮಾನವರ ಕಲ್ಯಾಣಕ್ಕಾಗಿ ಕಾಲಕೂಟ ವಿಷವನ್ನು ಪಾನಮಾಡಿ ತನ್ನ ಸೃಷ್ಟಿಯ ಕಾರ್ಯವನ್ನು ಮುಂದುವರಿದ ನೀಲಕಂಠನಂತೆ ಪ್ರಾಪಂಚಿಕ ಸಾವು ನೋವುಗಳು ದುಃಖವನ್ನು ಸ್ಥಿತಪ್ರಜ್ಞರಂತೆ ನುಂಗಿ ಇಂಥ ವೃದ್ಧಾಪ್ಯ ದಲ್ಲಿಯೂ ಕೂಡ ನಿಮ್ಮ ಶರಣ ಸಾಹಿತ್ಯದ ಕಾರ್ಯವನ್ನು ಮುಂದುವರಿ ಸಿದ್ದು ಸ್ತುತ್ಯವೇ ಸರಿ.

ಎಲೆಯ ಮರೆಯ ಕಾಯಿಯಂತೆ ನಿಷ್ಕಾಮ ಕರ್ಮಯೋಗಿಯಾಗಿ ಸೇವೆ ಸಲ್ಲಿಸುತ್ತಾ ನಿಮ್ಮ ಬಾಳುದ್ದಕ್ಕೂ ಕಾಯಕನಿರತರಾಗಿ ಪುಣ್ಯಚರಿತರಾಗಿ ಬಾಳುತ್ತ ಬಂದ ಮಹಾನುಭಾವರಾದ ತಮ್ಮನ್ನು ಗೌರವಿಸುವ ಅವಕಾಶವಿ ತ್ತುದಕ್ಕಾಗಿ ನಾವು ತಮಗೆ ಚಿರಋಣಿಯಾಗಿದ್ದೇವೆ. ನಿಮ್ಮ ಮಹಾ ಸೇವೆಗೆ ನಮ್ಮ ಕಿರಿಯ ಕಾಣಿಕೆಯೆಂದು ಈ ಅಲ್ಪ ನಿಧಿಯನ್ನು ಶ್ರೀಗಳವರ ಅಮೃತ ಹಸ್ತದಿಂದ ಸಲ್ಲಿಸುತ್ತಿದ್ದೇವೆ. ಅಲ್ಲದೇ ಇನ್ನು ಮುಂದೆ ತಾವು ಕೈಕೊಳ್ಳುವ ಪ್ರತಿಯೊಂದು ಕಾರ್ಯದಲ್ಲಿಯೂ ಶಕ್ಯವಿದ್ದ ಬೆಂಬಲವೀಯಲು ಸದಾ ಸಿದ್ಧರಿದ್ದೇವೆ.

ದಯಾಘನನಾದ ಆ ಪರಮೇಶ್ವರನು ಇನ್ನೂ ಚಿರಕಾಲ ಶರಣ ಸಾಹಿತ್ಯ ಸಂಸ್ಕೃತಿಗಳ ಸೇವೆಯನ್ನು ಮಾಡಲು ನಿಮಗೆ ಉತ್ಸಾಹಶಕ್ತಿಯನ್ನು ಆಯುರಾರೋಗ್ಯವನ್ನು ಅನುಗ್ರಹಿಸಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿ ಸುತ್ತೇವೆ.

ತಮ್ಮ

**ಬನಹಟ್ಟಿ ನಾಗರಿಕರು.**

# ಕೈ. ವಾ. ತಮ್ಮಣ್ಣಪ್ಪಾ ಚಿಕ್ಕೋಡಿ ಅವರ ೨೪ನೇ ಪುಣ್ಯ ದಿನದ ಸಂಕ್ಷಿಪ್ತ ವರದಿ,

## ೬–೧೨–೧೯೫೭.

ಕರ್ನಾಟಕದ ಹಿರಿಯ ಮುಖಂಡರೂ, ವಿದ್ಯಾಪ್ರೇಮಿಗಳೂ, ತ್ಯಾಗ ಶೀಲರೂ ಆಗಿದ್ದ ಕೈ. ವಾ. ತಮ್ಮಣ್ಣಪ್ಪಾ ಚಿಕ್ಕೋಡಿ ಅವರ ೨೪ನೇ ಪುಣ್ಯ ದಿನವು ಅವರಿಂದಲೇ ಸ್ಥಾಪಿತವಾದ ಜನತಾ ಶಿಕ್ಷಣ ಸಂಘದ ಪರವಾಗಿ, ಎಸ್. ಆರ್ ಎ. ಹಾಯಸ್ಕೂಲದಲ್ಲಿ, ತಾ. ೬-೧೨-೫೭ ರಂದು, ವಿಜೃಂಭಣೆ ಯಿಂದ ನೆರವೇರಿತು.

೬ ನೇ ತಾರೀಖಿನ ದಿನ ಮುಂಜಾನೆ, ನಿರ್ಣಾಯಕ ಸ್ಪರ್ಧೆಗಳು ನಡೆದ ನಂತರ, ನಗರದ ಸದ್ಗೃಹಸ್ಥರಿಂದೊಡಗೂಡಿದ ಶಾಲಾ ಬಾಲಕರು, ಪುಣ್ಯಾತ್ಮರ ಸಮಾಧಿಗೆ ಹೋಗಿ, ಪೂಜೆ ಸಲ್ಲಿಸಿ, ಕೈ. ವಾ. ತಮ್ಮಣ್ಣಪ್ಪನವರ ಭಾವ ಚಿತ್ರದ ಮೆರವಣಿಗೆಯಿಂದ ಶಾಲೆಗೆ ಬಂದರು.

ಅದೇ ದಿನ ಉಳಿದ ನಿರ್ಣಾಯಕ ಶಾರೀರಿಕ ಸ್ಪರ್ಧೆಗಳನ್ನು ಮತ್ತು ವಾಕ್ ಹಾಗೂ ಗಾಯನ ಸ್ಪರ್ಧೆಗಳು ನಡೆದವು.

ವಿಶೇಷಾಮಂತ್ರಣದ ಮೇರೆಗೆ ಬಂದಿದ್ದ ವಚನ ಪಿತಾಮಹ ರಾವ ಬಹಾದ್ದೂರ ಡಾ|| ಫ. ಗು. ಹಳಕಟ್ಟಿ ಅವರ ಹಿರಿತನದಲ್ಲಿ, ಪರಮ ಪೂಜ್ಯ ಶ್ರೀ ಶ್ರೀ ಶ್ರೀ ಶಂಕರ ಶಿವಾಚಾರ್ಯ ಯೋಗಿಗಳ ಅಧ್ಯಕ್ಷತೆಯಲ್ಲಿ ಕಾರ್ಯ ಕ್ರಮಗಳು ಸ್ವಾಗತ ಗೀತೆಯೊಂದಿಗೆ ಪ್ರಾರಂಭವಾದವು.

ಮುಖ್ಯಾಧ್ಯಾಪಕರ ವರದಿ ವಾಚನೆಯ ನಂತರ, ಸ್ಪರ್ಧೆ ವಿಜಯಿಗಳಿಗೆ, ಶ್ರೀ ಶ್ರೀಗಳ ಅಮೃತ ಹಸ್ತಗಳಿಂದ ಬಹುಮಾನ ವಿತರಣೆ ನಡೆಯಿತು.

ಆ ನಂತರ ಈ ಉತ್ಸವಕ್ಕೆಂದೇ ಆಹ್ವಾನಿತರಾಗಿ ಬಂದಿದ್ದ, ಬೆಳಗಾವಿಯ ಲಿಂಗರಾಜ ಕಾಲೇಜದ ಪದವೀಧರರಾದ ಪ್ರೊ. ಚರಂತಿಮಠ ಅವರ ಭಾಷಣ ಆಯಿತು. ವ್ಯಾಖ್ಯಾತೃಗಳು ತಮ್ಮ ಸುಮನೋಹರ ಶೈಲಿಯಲ್ಲಿ, ವಿಜ್ಞಾನ ಮತ್ತು ಜನಜೀವನ'ವನ್ನು ಕುರಿತು ಒಂದು ತಾಸಿನ ವರೆಗೆ ಮಾತನಾಡಿದರು.

ಭಾಷಣಕಾರರು ತಮ್ಮ ಭಾಷಣದಲ್ಲಿ, "ವಿಜ್ಞಾನವು ವಿಜ್ಞಾನಿಗಳಿಗೆ ಮಾತ್ರ ಮೀಸಲಾಗಿಲ್ಲ. ಎಲ್ಲರೂ ಅದನ್ನು ಕುರಿತು ಚಿಂತಿಸಿ ವಿಚಾರಿಸಿ ತಮ್ಮ ನಿತ್ಯ ಜೀವನವನ್ನು ಬೆಳಗಿಸಿಕೊಳ್ಳಬೇಕು; ವಿಜ್ಞಾನವು ನಾಶಕ್ಕಾಗಿ ಅಲ್ಲ, ಕೊಲ್ಲಲು ಅಲ್ಲ, ಆದರೆ ಜೀವನಕ್ಕಾಗಿ, ಬದುಕಲಿಕ್ಕಾಗಿ. ವಿಜ್ಞಾನಿಗಳು ನಾಸ್ತಿಕರಲ್ಲ, ಆಸ್ತಿಕರು." ಇವೇ ಮೊದಲಾದ ಅಮೌಲ್ಯ ವಿಚಾರಗಳನ್ನು ಎಲ್ಲರಿಗೂ ತಿಳಿಯುವಂತೆ ವಿದರಿಸಿದರು.

ತದ ನಂತರ ಶ್ರೀ ಶ್ರೀ ಗಳು ಉಪದೇಶ ಪರ ಮಾತುಗಳನ್ನು ಹೇಳಿದ ಮೇಲೆ ಧನ್ಯವಾದ ಮಾಲಾರ್ಪಣ ನಡೆದು ರಾಷ್ಟ್ರಗೀತೆಯಿಂದ ಕಾರ್ಯಕ್ರಮ ಕೊನೆಗೊಂಡಿತು.

ರಾತ್ರಿ ಆಟ ನಾಟಕ, ನರ್ತನ, ಗಾಯನ ಮೊದಲಾದ ಕಾರ್ಯಕ್ರಮ ಗಳು ಸಾಂಗವಾದವು.

ಹೆಡ್ ಮಾಸ್ತರ,

ಎಸ್. ಆರ್. ಎ. ಹಾಯಸ್ಕೂಲ ಬನಹಟ್ಟಿ

# ದನಗೂರಿಗೆ

(ಹೋಗಿಬಂದವರು:— ಶ್ರೀ ಮ. ಮಲ್ಲಪ್ಪ ಜ್ಞಾನಮಂದಿರ, ಹಲಗೂರು.)

(ಬಸ್‌ಸ್ಟ್ಯಾಂಡ, ಗೆಳೆಯರೊಬ್ಬರ ಭೇಟಿ.)

"ಏನ್ರಿ ? ಆರೋಗ್ಯವಾಗಿ ಇದ್ದೀರಾ ? ''

"ಎಲ್ಲವೂ ಆ ಮಹಾಮಹಿಮನ ಕೃಪೆ ಏನೋ ಮನುಷ್ಯ ಎಂದು ಅನ್ನೋ ಮಟ್ಟಿಗೆ. ''

"ಭಗವಂತನನ್ನು ನಂಬಿ ನಡೆಯುವ ನಿಮಗೆ ಚ್ಯುತಿ ಇಲ್ಲವೇ ಸರಿಯು."

"ದನುಗೂರು ಹತ್ತಿರದಲ್ಲಿಯೇ ಇದೆಯಂತೆ. ಇನ್ನಾವ ಅತ್ಯಗತ್ಯ ಕೆಲಸ ವಿದ್ದರೂ ಸರಿಯೇ. ಅದನ್ನು ನಿಲ್ಲಿಸಿ ದನುಗೂರಿಗೆ ದೃಷ್ಟಿಯನ್ನು ದಯವಿಟ್ಟು ತಿರುಗಿಸಿರಿ. ದನುಗೂರ ಗದ್ದುಗೆಯನ್ನು ಕಣ್ಣಾರೆ ನೋಡಿ ಮಹಾಮಹಿಮ ಮಹಾ ಕವಿ ಷಡಕ್ಷರ ದೇವನ ತಪೋ ಭೂಮಿಯನ್ನು ನೋಡಿ ಧನ್ಯರಾಗೋಣ. ಪಾಶ್ಚಿಮಾತ್ಯರಿಗೆ ಇರುವ ಸಾಹಿತ್ಯ ಪ್ರೇಮವು ನಮ್ಮಲ್ಲಿ ಇಲ್ಲವಲ್ಲಾ ಎಂಬುದೇ ವಿಷಾದಕರ ಸಂಗತಿಯು. ಈಗಲೂ ಪ್ರತಿಯೊಬ್ಬ ಆಂಗ್ಲೇಯನೂ ಮೊಟ್ಟ ಮೊದಲು ಶೇಕಸ್ಪಿಯರ್ ಗದ್ದುಗೆಗೆ ನಮಸ್ಕರಿ ಆತನ ನೆನಹಿನಿಂದ ಕೊಂಚ ಕಾಲ ಕಳೆದು ಪುಣ್ಯ ಪುನೀತನಾಗಿ ಇಂಗ್ಲಂಡಿನಿಂದ ವಾಪಸು ಬರುವ ರೂಢಿಯು ನೆಲೆಸಿದೆ. ಈ ನಮ್ಮ ಜನ ಕಲ್ಲು ಮರಗಳಿಗೆ ದೀರ್ಘದಂಡ ನಮಸ್ಕಾರ ಮಾಡುವರೇ ಹೊರತು ಜನವನ್ನು ಎಚ್ಚರಗೊಳಿಸಿದ ದೈವದ ಪ್ರತೀಕವಾದ ಈ ಎಚ್ ಎಂ ನಾಯಿಕರನ್ನು ಕನಸಿನಲ್ಲಿಯೂ ನೆನೆಸಿಕೊಳ್ಳು ವುದಿಲ್ಲವಲ್ಲಾ ! ಎಂತಹ ಹುಚ್ಚು ಜನ ! ನನಗೇನೋ ಆ ಪುಣ್ಯಪುರುಷನ ಆ ವಾಸ ಕ್ಷೇತ್ರವನ್ನು ನೋಡಿಯೇ ತೀರಬೇಕೆಂಬ ಹಂಬಲು ಹಿರಿದಾಗಿದೆ. ಏನೋ ತೊಂದರೆ ಕೊಟ್ಟನು ಎಂದು ತಿಳಿದುಕೊಳ್ಳಬೇಡಿ"

"ಮಿತ್ರರ ಕುತೂಹಲವನ್ನು ನಾನೇಕೆ ತಗ್ಗಿಸಲಿ"

ಮಿತ್ರರು ಅಂದಿನ ತಮ್ಮ ಸರಕಾರಿ ಡ್ಯೂಟಿಯನ್ನು ಮಾಡಿ ಮುಗಿ ಸಿದರು. ವೇಳೆಯು ಅವೇಳೆಯಾದ ಕಾರಣ ಅಂದು ಅಲ್ಲಿಯೇ ನಿಂತನ

ಬೆಳಿಗ್ಗೆ ಬಂದಿತು. ದಿನಚರಿಯ ಕರ್ಮಗಳನ್ನು ದಾಮಾಲಾಗಿ ಮುಗಿಸಿ ಮಧ್ಯಾಹ್ನ ಹನ್ನೊಂದು ಗಂಟೆಗೆ (ಬಸ್ಸ ಸ್ಟ್ಯಾಂಡ) ಗೆ ಇಬ್ಬರೂ ಬಂದೆವು.

ಬಸ್ಸಿನಲ್ಲಿ ಕುಳಿತು ಧನಗೂರತ್ತ ಮನವನ್ನು ಮುಂಡಿಸಿದೆವು. ಗಾಡಿ ಚಲಿಸುತ್ತಿತ್ತು. ದೃಷ್ಟಿಯೆಲ್ಲವೂ ಮಾತಿನಲ್ಲಿಯೇ ಮುಳುಗುತ್ತಿತ್ತು. ಹಲಸಳ್ಳಿ ಬೋರ್ಡ ಕಲ್ಲಿನ ಹತ್ತಿರ ಇಳಿದೆವು. ಹಲಸಳ್ಳಿಯನ್ನು ಹೊಕ್ಕೆವು. ಗಣ್ಯ ಹಿರಿಯರೊಬ್ಬರ ಗೃಹವನ್ನು ಪ್ರವೇಶಿಸಿದೆವು. ಆ ಯಜಮಾನರಿಗೂ, ನನ್ನ ಗೆಳೆಯರಿಗೂ ಮಾತು ಕತೆಗಳು ಎಡೆಬಿಡದೆ ನಡೆದವು. ಬಿಸಿಲಿನ ಬೇಗೆಗೆ ಸಿಕ್ಕು ತಂಪು ಪೆಂಪನ್ನೀಯುವ ಆಹಾರ ಪಾನೀಯವು ಆ ಮನೆಯವರಿಂದ ಸಂದಿತು. ಅಲ್ಲಿಂದ ನನ್ನ ಪರಿಚಿತರೊಬ್ಬರ ಮನೆಗೆ ತೆರಳಿದೆವು. ದನಗೂರೂ ಷಡಕ್ಷರ ದೇವನ ಮಾತೂ ಮಧ್ಯೆನನ್ನಿಂದ ಬಂದಿತು.

"ಇಂದ್ರಿಯ ಸುಖಾನುಭವವು ಮಾನವನಿಗೆ ಆ ಜನ್ಮಸಿದ್ಧ ಹಕ್ಕು. ಅದು ಬಗೆ ಬಗೆಯ ರೀತಿಯಲ್ಲಿ ನಮಗೆ ಲಭ್ಯವಾಗುತ್ತದೆ. ಇದು ಶ್ರೋತ್ರೇಂದ್ರಿಯದ ಮೂಲಕ ದೊರಕುವುದು. ಒಂದು ಬಗೆಯಾಗಿರುತ್ತದೆ. ಪಂಚೇಂದ್ರಿಯಗಳ ಸುಖಾನುಭವವನ್ನು ಶ್ರೋತ್ರೇಂದ್ರಿಯವೊಂದರಲ್ಲಿಯೇ ಶಬ್ದದ ಮೂಲಕ ಅಭಿವ್ಯಕ್ತಗೊಳಿಸಿ, ಆನಂದವನ್ನುಂಟುಮಾಡುವ ಚೈತನ್ಯವು ಸಾಹಿತ್ಯಕ್ಕೆ ಇದೆ. ಅದುಕಾರಣವೇ ಚಿಕ್ತಾನಂದವನ್ನುಂಟುಮಾಡುವ ಮನೋಹಾರಿಯು ಸಾಹಿತ್ಯವಾಗಿದೆ. ಅದರ ಬಗೆಬಗೆಯ ಅಂಶಗಳಲ್ಲಿ ಒಂದೊಂದು ಒಬ್ಬೊಬ್ಬರಿಗೆ ರುಚಿಸುತ್ತದೆ. ಇದನ್ನು ಷಡಕ್ಷರ ಕವಿಯು ನಿದರ್ಶನಗಳ ಮೂಲಕ ವ್ಯಕ್ತಪಡಿಸಿದ್ದಾನೆ.

ಅಳಿಯಲರಂ ಗಿಣಿಪಣ್ಣಂ ।
ತಳಿರಂ ಪಿಕನೊಲ್ವ ತೆರದೆ ಕುಜದೊಳ್ ಶ್ರುತಿಯೊಳಿ ॥
ವಿಳಸಿತ ಪದಮುಮನರ್ಥಮ ।
ನಳಂ ಕೃತ ಪ್ರಹಿತ ಭಾವಮುಂ ಕೆಲ ರೋಲ್ವರ್ ॥

ಒಂದು ಮರದಲ್ಲಿನ ಹಣ್ಣು, ಹೂವು, ಚಿಗರು–ಇವುಗಳಲ್ಲಿ ಒಂದೊಂದು ಒಂದೊಂದು ಹಕ್ಕಿಗೆ ಪ್ರಿಯವಾಗಿರುತ್ತವೆ. ಅಂತೆಯೇ ಸಾಹಿತ್ಯದಲ್ಲಿ ಶಬ್ದ, ಅರ್ಥ, ಅಲಂಕಾರ, ರಸಮುಖವಾದ ಭಾವಗಳನ್ನು ಜನರು ಬಯಸುತ್ತಾರೆ. ಜನರ ಬಯಕೆಯು ಈಡೇರಲು ಕಾವ್ಯಗಳಲ್ಲಿ ಅವಕಾಶವು ಅನುಗೊಳಿಸಲ್ಪಟ್ಟಿರುವ ಕಾರಣವೇ ಸಾಹಿತ್ಯವು. ಜನತೆಯ ಉಪಕಾರಿಯಾಗಿರುತ್ತದೆ.

ಇಷ್ಟೇ ಅಲ್ಲದೆ ಬಾಳಿನ ಬಟ್ಟೆ, ಭಾವದ ಬೆಳವಣಿಗೆ, ಸಂಸ್ಕೃತಿಯ ಸಾರೋದಯ, ಅನುಭವದ ರಸಚಿತ್ರವಾಗಿ ಸಾಹಿತ್ಯವು ಸಾರ್ಥಕವಾಗಿದೆ. ಅದು ಕಾರಣವೇ ಸಾಹಿತ್ಯವು ಜಗತ್‌ಸ್ತುತ್ಯವಾಗಿದೆ ಈ ಬಗೆಯ ಸಾಹಿತ್ಯವು ಷಡಕ್ಷರ ಜೀವನ ಕೃತಿಯಲ್ಲಿ ಎದ್ದು ಕಾಣುತ್ತದೆ.

ಗೆಳೆಯರು ಅವರ ಸಂಗಡ ಷಡಕ್ಷರ ದೇವನಿಗೆ ಜನತೆಯು ಕಾಣಿಕೆ ಏನೆಂಬುದನ್ನು ಮಾತಿನ ಮಧ್ಯದಲ್ಲಿ ತಿಳಿಸಿದರು. ಅವರ ಜೊತೆಯಲ್ಲಿ ಅಲ್ಲಿಂದ ನಾವಿಬ್ಬರೂ ಧನುಗೂರು ಮಠಕ್ಕೆ ಹೊರಟೆವು. ಗತವೈಭವ ಚಿತ್ರ ವನ್ನು ನೆನಪಿಗೆ ತಂದು ಎದೆ ಕರಗಿಸುವ ಸನ್ನಿವೇಶ ಸ್ಥಳವನ್ನು ಕಂಡೆವು. ಕೊಂಚಕಾಲ ನೀರವತೆಯಿಂದ ನಿಂತೆವು. ಅನಂತರ ಕವಿಯ ಮಹತ್ವವನ್ನು ತಿಳಿಸಬೇಕಾಯಿತು.

“ ನೋಡಿ ಎಂತಹ ಮುತ್ತಿನ ಮಾತನ್ನು ಮನುಜರಿಗೆ ಮಹಾ ಕವಿಯು ನೀಡಿದ್ದಾನೆ.”

ಕಲಿಸಿದೊಡೆ ಬರ್ಕುಮೇಸ |
ಲ್ಲಲಿತಕವಿತ್ವಂ ನಿಸರ್ಗ ಸುಭಗಂ ರಮಣೀ ॥
ವಿಲಸಿತರತಿ ಸುರಸಕತೆ |
ಕತೆದೋರ್ಪುಮ ತಾನೆ ಕಲಿಸಲೇಂಬಂದಪುದೇ ॥

ಪಾಪ ಪುಣ್ಯಗಳ ಉಚಿತ ಜ್ಞಾನವನ್ನುಂಟು ಮಾಡುವುದೇ ಕಾವ್ಯ. ಪುಸ್ತಕ ರಚನೆಯ ಯೋಗ್ಯತೆಯ ಜೊತೆಗೆ ಮಾನವೀಯತೆಯ ಗ್ರಹಣ ಶಕ್ತಿಯೂ ಕೂಡ ಈತನಿಗೆ ಇದ್ದಿತು. ಜೀವನದಲ್ಲಿನ ಧರ್ಮಾನುರಕ್ತಿಯು ಆಚಾರ ವ್ಯವಹಾರಗಳಲ್ಲಿಯೂ ಅಲ್ಲದೆ ಕಾವ್ಯಗಳಲ್ಲಿಯೂ ಕಾಣುವಂತಾಗಲು ಮಾಡಿದ ಮಹಾ ಸಾಹಸಿಯು ಷಡಕ್ಷರ ದೇವನು. ನರನು ಹರನಾಗುವ, ಜನವು ಜನಾರ್ದನಾಗುವ ಮಟ್ಟಕ್ಕೆ ಕರೆದೊಯ್ಯುವ ತಾರಕೆಯೇ ಸಾಹಿತ್ಯವು ಎಂಬು ದನ್ನು ವ್ಯಕ್ತಪಡಿಸಲು ಕಾವ್ಯ ರಚನೆಯನ್ನು ಮಾಡಿದ ಷಡಕ್ಷರ ದೇವನು ತನ್ನ ಕಾವ್ಯವು “ ಶಿವತಾಯುತ ಮರ್ಥದಾಯಿ ” ಎಂದಿದ್ದಾನೆ. ತಪಸ್ಸಿನಿಂದ ನಿಗ್ರಹದಿಂದ ಬಂದ ಭಾಷಾಮಿತವ್ಯಯವೇ ಈತನ ಶ್ರೇಷ್ಠ ಶೈಲಿಯು. ಇಲ್ಲಿ ಕಾಣುವ ಶಾಂತಿಮಯ ಸನ್ನಿವೇಶ, ಈ ಮನೋಹರ ಸುಂದರ ದೃಶ್ಯವು ಈ ಮಹಾ ಕವಿಯ ಮೇಲೆ ಪ್ರಭಾವವನ್ನು ಬೀರಿದ್ದಿರದೆ ಇರದು! ಈ ಮಹಾ ವಿಭೂತಿಯನ್ನು ಪಡೆದನಾವಲ್ಲವೇ ಧನ್ಯರು. ಆಹಾ! ಈತನು ನಮಗೆ ಎಂತಹ ಮಹದುಪಕಾರ ಮಾಡಿ ಹೋಗಿದ್ದಾನೆ. ಕಳ ಕಂಠೀರವ ಕಾವ್ಯ ಕಾಮಿನಿ

ಯನ್ನು ಕೊಟ್ಟು ಹೋಗಿದ್ದಾನೆ. ಕಾವ್ಯವು ರಸಿಕರ ಚಿತ್ತವನ್ನು ಮನ್ಮಥನ ಅವ್ಯಕ್ತ ಕುಸುಮ ಶರಪ್ರಯೋಗದಂತೆ ಮನೋಜ್ಞವೂ ಹೃದಯ ಸ್ಪರ್ಶಿಯೂ ಆಗಿ ನಾಟಿದರೆ ಮಾತ್ರ ಕಾವ್ಯವು ಸಾರ್ಥಕವಾಗುತ್ತದೆ. ಕವಿಗೆ ಅಮರ್ದಾಗೆ ಮಂಜುಳಯುಕ್ತಿ ಮುಂಜವಾಗೆ ದೇಸಿಯುತ್ಸವದ ಬಂಧವಾಗೆ ಸೊಂಪು ಸುಳಿ ವಾಡೆ ರಸಂಪೊಸತಾಗೆ ಕಾಲ್ಪುರಂ ಕವಿಯೇ ಆನಂದವುವರೆ — ಇದಿಷ್ಟು ತಾಗುನಂತೆ ಕವಿಯು ಕಾವ್ಯವನ್ನು ರಚಿಸಿದರೆ ಮಾತ್ರ ಕೃತಿಕಾಂತೆಯು ಸವಾ ಮೋದೆಯಾಗಿ ಇರುತ್ತಾಳೆ. ಕವಿಯು ಸದಮಳಮಂತ್ರಾರ್ಥ ವಾದಸಹಿತಂತಾ ನಾದುದ ಅಂದೀಕಾವ್ಯಂ ವೇದದವೋಲ್ ಬುಧಜನಕ್ಕೆ ಮಂಗಳ ಪ್ರದಮಕ್ಕಿ ಎಂದು ಸಾರುತ್ತಾನೆ. ಕಾವ್ಯದ ಗುರಿಯು ಆತ್ಮೋನ್ನತ್ಯದ ಹಾದಿಯಾಗಿದೆ.

ಬಹುತರ ಜನ್ಮಕೋಟಿಗಳೊಳಾಜಿಸಿದುತ್ತಮ ಪುಣ್ಯದೇಳ್ಗೆಯಿಂ |
ಮಹಿಯೊಳೆ ಸತ್ಕವಿತ್ವದಿ ವಿಷನ್ಮಣಿ ಸಾಗರ್ ಮವೀಗುಮದ್ಭುತಾ ||
ವಹ ಸುಖಮಂಲಸತ್ಕವಿಗೆ ಸಾರ್ಚಗು ಮುಜ್ಜಳ ಕೀರ್ತಿಯಂ ಸದಾ |
ಮಹಿತ ಪದಾರ್ಥಮಂ ಕುಡುಗುವಿಶ್ವರನೊಲ್ಮೆಯನುಂಟು ಮಾಡುಗು

ಋಷಿಯ ಅಂಶವಿಲ್ಲದನನು ಕಾವ್ಯವನ್ನು ಬರೆಯಲಾರನು ಎಂಬುದು ಸತ್ಯವೇತ್ರಿ ಕಾರ್ಲೈಲ ಮಹಾಶಯನು *the Poet is a seer* ಎಂದಿದ್ದಾನೆ. ಕಾವ್ಯ ರಚನೆಗೆ ಸಂಸ್ಕಾರವಿಲ್ಲದಿದ್ದರೆ ಸೌರಭವು ಸೂಸಲಾರದು. ಮಹಾ ಕವಿಗಳ ಕಾರ್ಯಗಳು ಅಳಿದು ಹೋಗಿದ್ದರೂ ಅವರ ಯಶಸ್ಸು ಮಾತ್ರ ಅಳಿಸಿಹೋಗದೆ, ಅವರ ಕಲಾಕೃತಿಗಳ ಮೂಲಕ ಆ ಚಂದ್ರಾರ್ಕವಾಗಿ ನಿಂತು ಎಲ್ಲರಿಗೂ ಕೀರ್ತಿ ಜ್ಯೋತಿಯ ಬೆಳಕು ಕಾಣುಸುತ್ತಿರುವುದು ಸರ್ವ ವಿದಿತ ಗೋಚರವಾಗಿದೆ. ಜನತೆಯ ಬಾಳನ್ನು ಹಸನುಮಾಡಿ ಮಿಸುನಿಯ ಪ್ರಕಾಶದಿಂದ ಕೂಡಿ ಮಂದರಹಿತವಾಗಿರಲು ತನ್ನ ಕಲಾಕೃತಿಯನ್ನು ಬಿಟ್ಟುಹೋದ ಮಹಾ ವಿಭೂತಿಯ ನೆನಪನ್ನು ತಂದುಕೊಂಡರೆ ನನ್ನ ಮನಸ್ಸು ರಸಗಡಲಿನಲ್ಲಿ ಹಾಯಲು ಅವಕಾಶವಾಗುತ್ತದೆ. ಜೀವನವು ನಶ್ವರ, ಸಾಹಿತ್ಯವು ಸತ್ಯ ಸ್ಥಿರವು ಎಂಬುದನ್ನು ಪ್ರದರ್ಶಿಸಿದ ಧೀಮಂತಶಾಲಿಯು ಷಡಕ್ಷರದೇವನು''

ಶಿಂಷಾ ನದಿಯ ಸನಿಹದಲ್ಲಿ ಕಾಡುಕಣಿವೆಗಳ ಹಸುರು ಹೊದಿಕೆಯಲ್ಲಿ ಗುಡ್ಡ ಕಟ್ಟೆಗಳ ನಡುವೆಯಲ್ಲಿ ಶಯನಿಸಿ ಚಿತ್ತಾರದಂತೆ ಕಾಣುವ ಕವಿಯ ಸ್ಥಳವನ್ನು ಕಣ್ದಣಿಯುವಂತೆ ನೋಡಿದ್ದಾಯಿತು. ಗವಿಯಲ್ಲಿಗೆ ಹೋಗಿ ಅದರ ಒಳಗಡೆ ಅಷ್ಟು ದೂರ ಸಾಗಿ ಹಿಂತಿರುಗಿದೆವು, ಅವರ ಹಿಂದಿನ ಕಥೆಯಲ್ಲ

ವನ್ನೂ ಕೇಳಿದ್ದಾಯಿತು. ತಪೋಯೋಗ ನಿಷ್ಠೆಯ. ಸನ್ನಿವೇಶ ಸಮಯವು ಮನೋ ಭೂಮಿಯಲ್ಲಿ ಅಂಕುರಿಸಿತು. ಕೊಂಚಕಾಲ ಕಳೆದ ಅನಂತರ ಜಾಗ ವನ್ನು ಬಿಟ್ಟು ಪುನಃ ಮಠಕ್ಕೆ ಬಂದೆವು.

ಪಕ್ಕದ ಊರಿನ ಪರಿಚಿತ ಅಧ್ಯಾಪಕರೊಬ್ಬರು ಭೇಟಿಯಾದವರು ಬಂದಿದ್ದ ವಿಷಯವನ್ನು ಸಾಂಗೋಪಾಂಗವಾಗಿ ತಿಳಿಸಿದೆನು. ಆ ಅಧ್ಯಾಪ ಕರು ಮನಕರಗುವ ಹಾಗೂ ರಚನಾತ್ಮಕ ವಿಚಾರವನ್ನು ತಿಳಿಸಿದರು.

"ಸರಿ ಸಾರ್ ಏನು ಮಾಡಲಿಕ್ಕಾದೀತು! ಈ ಜನವೋ ಹೇಳತೀರದು ! ಈ ಮಠವನ್ನು ನೋಡಿದರೆ ಕರುಳನ್ನು ಕಿತ್ತುಕೊಳ್ಳುವ ಹಾಗಾಗುತ್ತದೆ. ಇಲ್ಲಿ ಈ ಹಾಳು ಪಿರ್ಕಾಗಳು ನಾಯಿ ಕೊಡೆ ಚಚ್ಚಿದಂತೆ ಬೆಳೆದು ಬಿಟ್ಟು ಈ ಮಹಾ ಪುಣ್ಯಾತ್ಮನನ್ನೇ ಮರೆತು ಬಿಟ್ಟಿದ್ದಾರೆ. ಮುತ್ತಿನಂತಹ ಮಾತನ್ನು ಹೇಳಿ ಹೋಗಿದ್ದಾನೆ.

> ರಸೆಯೊಳ್ ರಸವ ಕವಿತೆಯ ।
> ನುಸಿರಲ್ಪಡದೆ ಸಮನಯನನಂ ಪೊಗಳದೆ ಮಾ ।
> ನಿಸರಂ ಸುರರಂ ಪೊಗಳ್ವುದು ।
> ಕಸವರಮುಂ ಕಳೆದು ಕಸವನಾಂತವೋಲಿಕ್ಕುಂ ॥

ಕವಿತಾ ರಹಸ್ಯವನ್ನು ಹೊರಗೆಡವಿದ ಈ ರಸಿಕ ಕಲೆಗಾರನ ಕೃತಿಯು ಯಾರಿಗೆ ತಾನೇಬೇಡ !

> ತಂಬೆಲರಂತೆ ತುಂಬುವರೆಯುಂ ಪೊರಪೊಣ್ಮುವು ಜೊನ್ನದಂತೆ ಪೆ ।
> ಣ್ದುಂಬಿಯ ಗಾನದಂತೆ ಪೊಸಸುಗ್ಗಿಯ ನಂದನದಂತೆ ನಲ್ಮೆಯಿಂ
> ದಂ ಬಿಗಿದಪ್ಪಿದಂಗನೆಯ ವೇರ್ವೊಲೆ ಸೋಂಕಿನ ಸೌಖ್ಯದಂತೆ ಚಿ ।
> ತ್ತಂ ಬಿಡದಪ್ಪುದೀ ಕೃತಿ ॥

ಹೇಗಾದರೂ ಮಾಡಿ ಈ ಮಹಾನುಭಾವನ ಮಠವನ್ನು ಭದ್ರಪಡಿಸಿ ಹೆಸರನ್ನು ಹಸನಾಗಿರಿಸಿ ಪುಣ್ಯಕಟ್ಟಿಕೊಳ್ಳಲು ಒಂದು ದಾರಿ ಮಾಡಿ ಸರಿ ಯಾದ ದಕ್ಷತೆಯ ಹಾಗೂ ಕ್ರಿಯಾ ಶೀಲತೆಯ ಮಠಾಧಿಪತಿಗಳು ಇದ್ದರೆ ಇದು ಹೀಗೆ ಹೀನತರವಾಗುತ್ತಿರಲ್ಲ. ಅಂತು ಇಂತು ಇದು ಭದ್ರವಾಗಿದ್ದರೆ ಸಾಕು. ಅದೇ ನಮಗೆಲ್ಲಾ ಪರಮಾನಂದ ಎಲ್ಲರಿಗೂ ಆ ಮಹಾನುಭಾವನು ಮರೆಯಾಗದೆ ಮೂರ್ತಿಗೊಳ್ಳಲಿ. ಈ ಮಠವಲ್ಲಿ ಇದ್ದ ಸುರುಳಿ, ತಾಮ್ರ ಶಾಸನ, ಓಲೆಯ ಗರಿಯು ಇವೆಲ್ಲವೂ ಈ ಮಧ್ಯೆ ಪತ್ತೆಯಿಲ್ಲದಂತಾಗಿದೆ.

ಕವಿಯ ಕೃತಿಯಲ್ಲಿ ಅಲ್ಲಲ್ಲಿ ಬರುವ 'ಶಿವಲಿಂಗ' ಎಂಬುದಕ್ಕೆ ಅನುಗುಣವಾಗಿ ಈಲ್ಲಿ ಕೆರೆಯ ಏರಿಯ ಮೇಲೆ ಶಿವಲಿಂಗ ದೇವಸ್ಥಾನವು ಇದೆ. ಈ ಮಠದ ಸ್ವಾಮಿಗಳೊಬ್ಬರ ಗದ್ದುಗೆ ಪಾಳ್ಯ, ಇನ್ನೊಬ್ಬರ ಗದ್ದುಗೆ ಯೋಗ್ಯ, ಕವಿ ಷಡಕ್ಷರ ದೇವರ ಗದ್ದುಗೆಯು ಎಳಂದೂರು—ಇಲ್ಲಿ ಇದೆ. ಉಳಿದವರ ಗದ್ದುಗೆಗಳೆಲ್ಲವೂ ಈ ಮಠದಲ್ಲಿಯೇ ಇವೆ."

ಅಲ್ಲಿಂದ ಮುಂದೆ ಬಂದು ಕೈ ಕಾಲು ತೊಳೆದುಕೊಂಡು ದೇಹವನ್ನು ಕಂಪಾಗಿರಿಸಿ ಕೊಂಡೆವು. ಅಲ್ಲಿನ ಹೊಸ ಮಠಪತಿಗಳು ಅಂದು ಅಲ್ಲಿ ಇರಲಿಲ್ಲ. ಮಠದ ಮನುಷ್ಯರೊಬ್ಬರು ಅಲ್ಲಿನ ಗದ್ದುಗೆಗಳನ್ನು ತೋರಿಸಿದರು. ಅಂದಿನ ಆ ಸ್ಥಿತಿಯು ನಮ್ಮ ಮನಸ್ಸನ್ನು ಕರಗಿಸಿತು. ಎಲ್ಲರೂ ಕುಳಿತರು. ಜನರಿಗೆ ಮಿತ್ರರು ತಿಳಿವಳಿಕೆಯನ್ನು ಕವಿಯ ಮತ್ತು ಮಠದ ವಿಚಾರವಾಗಿ ಕೊಟ್ಟರು.

" ಅಯ್ಯೋ ! ಎಂತಹ ಜನಗಳು ನೀವು. ಮಾರಿ ಮಾಸಣಿ ಹಟ್ಟಿವನ್ನು ಮಾತ್ರ ತಪ್ಪದೆ ಬಹಳ ವೈಭವ ವಿಜೃಂಭಣೆಯಿಂದ ಮಾಡುವಿರಿ; ಜನರಲ್ಲಿ ಒಂದು ಬಗೆಯ ಹೊಸ ಶಕ್ತಿ, ಸ್ಫೂರ್ತಿ, ಕಾಂತಿಯನ್ನು ಕೊಟ್ಟ ಮಹಾತ್ಮನ ಜಯಂತಿಯನ್ನು ಮಾಡಲು ಯೋಗ್ಯತೆಯಿಲ್ಲ. ಈ ಊರು ಮತ್ತು ಇದರ ಸುತ್ತಮುತ್ತಲೂ ಆ ಮಹಾನುಭಾವನ ಜಯಂತಿಯು ನಾಡದೇವತೆ ಅಥವಾ ಗ್ರಾಮದೇವತೆ ಹಬ್ಬವಾಗಿ ಪ್ರತಿವರ್ಷವೂ ನಡೆಯಬೇಕು. ಊರಿನ ಚಾವಡಿಯಲ್ಲಿ ಆ ಮಹಾತ್ಮನ ಕಾವ್ಯಗಳನ್ನು ಬಲ್ಲವರಿಂದ ಓದಿಸಿ ಅವರ ಕಥೆಯನ್ನು ಜನರಿಗೆ ಮಂದಟ್ಟು ಮಾಡಿಸಬೇಕು. ಇಲ್ಲಿಗೆ ಆಗಮಿಸಿದ ಅಧಿಕಾರಿಗಳಿಗೆ ಇದೆಲ್ಲವನ್ನು ತೋರಿಸಿ ಶಿಥಿಲವಾಗುತ್ತಿರುವ ಮಠ ಗದ್ದುಗೆ, ದೇವಸ್ಥಾನ ಇವುಗಳನ್ನು ಸರಿಪಡಿಸಿ ಭದ್ರವಾಗಿರಿಸಲು ಏರ್ಪಾಡು ಮಾಡಬೇಕು. ಆ ಮಹಾನುಭಾವನು ನಮ್ಮ ಜನ್ಮದಾತ್ಮನು ಎಂದು ಅರಿತು ಆಚರಿಸಬೇಕು.

ಮಠದ ಹೊರಗಡೆ ಬರಲು ಶಿಥಿಲವಾಗಿದ್ದ ಶಿಲಾಮಂಟಪವು ಕಣ್ಣಿಗೆ ಬಿದ್ದು ಮನವು ಮರುಕಗೊಂಡಿತು. ಗುಂಡಿನ ಏಟಿನ ಗುರುತು ಅಚ್ಚಳಿಯದಂತೆ ಇದ್ದಿತು. ಮಠಕ್ಕೆ ಸಂಬಂಧಪಟ್ಟ ಜಮೀನನ್ನು ಜೊತೆಯಲ್ಲಿದ್ದವರು ತೋರಿಸಿದರು. ಕೊಳ, ಬಿಲ್ವಪತ್ರಮರದ ವಿಚಾರ ಮಠದ ಸ್ವಾಮಿಗಳ ವಿಷಯವನ್ನು ಮುಸುಕು ಮುಸುಕಾಗಿ ತಿಳಿಸಿದರು.

"ನೋಡಿ ಸಾರ್! ಭದ್ರವಾದ ಸ್ವಾಮಿಗಳಿದ್ದರೆ ಇದು ಮುಂದುವರಿಯದೆ ತಾನೇ ಏನಾದೀತು! ಹಿಂದೆ ಒಬ್ಬ ಸ್ವಾಮಿಗಳಿದ್ದರು. ರೂಢಿಯಂತೆ ಮೂಡಲ ಸೀಮೆಗೆ ಅವರು ಹೋದರು. ಅದಕ್ಕೆ ಹಿಂದೆ ಭಿಕ್ಷವು ಕ್ರಮವಾಗಿ ಬರುತ್ತಲಿತ್ತು. ಭಕ್ತರು ಕೊಟ್ಟಷ್ಟನ್ನು ತೃಪ್ತಿಯಿಂದ ಸ್ವಾಮಿಗಳು ಸ್ವೀಕರಿಸುತ್ತಿದ್ದರು. ಆಗಮಾತ್ರ ಮಳೆಯು ಬರದೆ ಜನರು ನೊಂದು ನುರಿಯಾಗಿದ್ದರು. ಈ ಪೈಕಿ ಒಬ್ಬನು ಭಿಕ್ಷಕ್ಕೆ ಬಂದ ಸ್ವಾಮಿಗಳ ಮೇಲೆ ಕೂಗಾಡಿದನು.

"ಮಳೆಯೇ ಇಲ್ಲದೇ ಇರುವಾಗ ಅಯ್ಯನಿಗೆ ಏನುಕೊಡ್ಡೋದು! ಮಳೆ ಹೊಯ್ಯಿಸಿದರೆ ಬಂದಬಂದಾಗಲೆಲ್ಲ ಕೊಡಬಹುದು."

ಭಕ್ತರ ನೋವನ್ನು ಅರಿತಕೊಂಡ ಹಳ್ಳಿ ಸ್ವಾಮಿಗಳು ಉಸಿರಿಗೆ ಒಂದು ಮಾತನಾಡದೆ ನೇರವಾಗಿ ಮಠಕ್ಕೆ ಬಂದರು. ಮಠದಲ್ಲಿ ಕಠಿಣ ವ್ರತವನ್ನು ಹಿಡಿದರು. ಸ್ನಾನ, ಪೂಜೆ, ಜಪ--- ಇವುಗಳನ್ನು ಮುಗಿಸಿ ತಪಸ್ಸಿಗೆ ಪ್ರಾರಂಭಿಸಿದರು. ಮೊದಮೊದಲು ಹಾಲನ್ನು ಸೇವಿಸುತ್ತಿದ್ದ ಸ್ವಾಮಿಗಳು ಬರುಬರುತ್ತ ನೀರನ್ನು ಸೇವಿಸಲು ಸುರುಮಾಡಿದರು. ಸ್ವಾಮಿಗಳ ಪ್ರತಿಜ್ಞೆಯ ವಾಯಿದೆಯು ಹತ್ತಿರಹತ್ತಿರಕ್ಕೆ ಬಂದಿತು. ಸವುದೆ ಗುಡ್ಡೆಗುಡ್ಡೆಯಾಗಿ ಕೂಡಿತು. ಆ ಅಗ್ನಿಕುಂಡದ ಏರ್ಪಾಡಿಗೆ ಮೊದಲಾಯಿತು. ಯಾರು ಏನು ಹೇಳಿದರೂ ಅದೆಲ್ಲವೂ ಸ್ವಾಮಿಗಳ ಚಿತ್ತಕ್ಕೆ ಬರಲಿಲ್ಲ. ಅವರ ಹಠವೇಹಠ.

"ಈ ನನ್ನ ಜಪ ಮುಗಿಯೋದರೊಳಗೆ ಮಳೆ ಬಂದರೆ ಸರಿ, ಇಲ್ಲದಿದ್ದರೆ ನಾನು ಇದ್ದು ತಾನೇ ಏನು ಫಲ? ಅಗ್ನಿಯೇ ಕಾಪಾಡುತ್ತಾನೆ."

ವಾಯಿದೆಗೆ ಕೇವಲ ಮೂರುಗಂಟೆ ಏನೋಎತ್ತಲೋ ಎನ್ನುತ್ತಿದ್ದಾತ ಜನರು ಗುಂಪಿನಲ್ಲಿ ಹಾಹಾಕಾರ ಎದ್ದಿದೆ. ಕಾಲ ಸಮೀಪಿಸುತ್ತಲಿದೆ. ಬಾಹ್ಯ ಪ್ರಜ್ಞೆಯಿಲ್ಲದೆ ಸ್ವಾಮಿಗಳು ಕುಳಿತಿದ್ದಾರೆ. ನಾಗರಹಾವೊಂದು ಹೆಡೆಯನ್ನು ಬಿಚ್ಚಿ ಇವರ ಸುತ್ತ ಮೂರುಬಾರಿ ಬರುತ್ತಲಿದೆ. ಇದ್ದಲ್ಲಿದ್ದಂತೆಯೇ ಮಿಂಚೊಂದು ಹಾಯ್ದಿತು. ಬೀದಿ ಬೀದಿಯಲ್ಲಿ ನೀರು ಹರಿಯಲು ಆರಂಭವಾಯಿತು. ಇವರು ಕುಳಿತಿದ್ದ ಜಾಗದಲ್ಲಿಯೂ ನೀರಿನ ಪ್ರವಾಹವು ನೂಕಿ ನೂಕಿಕೊಂಡು ಬರುತ್ತಲಿತ್ತು. ಅಷ್ಟರಲ್ಲಿಯೇ ತಂಪಾದ ಗಾಳಿಯು ಬೀಸಿ ಸ್ವಾಮಿಗಳು ಕಣ್ಣು ತೆರೆದರು. ಅಲ್ಲಲ್ಲಿ ನೆರವಿದ್ದ ಜನರು ಬಂದು ನೋಡಿದರು. ಸ್ವಾಮಿಯವರನ್ನು ಎತ್ತಿಕೊಂಡು ಸ್ನಾನ, ಪೂಜೆ ಮಾಡಿದರು. ಸ್ವಾಮಿಯವರ ಉತ್ಸವವು ಮುಗಿದು ಬೆಳಕು ಹರಿಯುವ ಹೊತ್ತಿಗೆ ಉತ್ಸವವು ಊರ ಬಾಗಿಲ ಬಳಿಗೆ ಬರುತ್ತಿದ್ದಂತೆಯೇ ನೊಂದಭಕ್ತನು ಸ್ವಾಮಿಗಳಿಗೆ

ದೀರ್ಘದಂಡ ಸಾಷ್ಟಾಂಗ ನಮಸ್ಕಾರ ಮಾಡಿದನು. ಸ್ವಾಮಿಯವರು ಆತ ನನ್ನು ಆಶೀರ್ವದಿಸಿದರು. ಅಂದಿನಿಂದ ಅತ್ತಕಡೆ ಇವರಿಗೆ ದಿವಸ ಧ್ಯಾನ, ಹಣಕಾಸು ಮಳೆಯು ನೀರಾಯಿತು. ದಮ್ಮಯ್ಯ ಸ್ವಾಮಿಗಳು ಅನ್ನೋರು ಇಲ್ಲಿನವರ ಒಂದುಸಾರಿ ಬೆಳಕ ವಾಡಿಗೆ ಬಿನ್ನಹಕ್ಕೆದಯ ಮಾಡಿಸಿದರು. ಆಗ ಹಾಗೆಯೇ ಕಾವೇರಿ ನದಿಯಲ್ಲಿ ಸ್ನಾನ ಮುಗಿಸಿದರು. ಬಿನ್ನಹದ ಮನೆಗೆ ಬಂದು ಕುಳಿತರು. ಲಿಂಗಪೂಜೆಗೆ ಕುಳಿತರೋ ಇಲ್ಲವೋ ಲಿಂಗಪ್ಪನೇ ಇಲ್ಲ. ನದಿಯ ದಡದಲ್ಲಿಯೇ ಲಿಂಗಪ್ಪನಿದ್ದ ಬಟ್ಟೆಯನ್ನು ಬಿಟ್ಟು ಬಂದಿದ್ದರು. ತಕ್ಷಣವೇ ಹೊಳೆಗೆ ಹೋದರು. ಇದ್ದಲ್ಲಿದ್ದಂತೆಯೇ ಓಡಿ ಹೋದ ಈ ಸ್ವಾಮಿ ಯವರ ಹಿಂದೆ ಜನವೂ ಓಡಿತು. ನದಿಯ ಹತ್ತಿರ ಬಂದು ತಾವು ಇಟ್ಟಿದ್ದ ಜಾಗದಲ್ಲಿ ಹುಡಕಲು ಹೊರಟರು. ಪ್ರವಾಹ ಬಂದಿದ್ದ ಕಾರಣ ಆ ಜಾಗವು ಮುಚ್ಚಿ ಹೋಗಿತ್ತು. ಪರಪರವೇ ಸ್ವಾಮಿಯವರು ಹೊಳೆಯನ್ನು ಪ್ರವೇಶಿ ಸಿದರು. ಜನರು ಎಷ್ಟು ಹೇಳಿದರೂ ಕೇಳದೆ ಅದನ್ನು ಮೂಲೆಗೊತ್ತರಿಸಿದರು. ರೇಗಿ ಎಲ್ಲರನ್ನೂ ಹಿಂದಕ್ಕೆ ಕಳುಹಿಸಿದರು. ಪ್ರವಾಹವು ಜೋರಾಗಿತ್ತು. ನೀರು ನಡುವಿಗೆಬಂತು, ಎದೆಗೆ ಬಂತು, ಅಯ್ಯೋ ಇನ್ನೇನುಗತಿ ಎನ್ನುತ್ತಿ ದ್ದಾರೆ. ನೋಡುತ್ತಿದ್ದ ಭಕ್ತರು ಹೆಕ್ಕತ್ತಿಗೆ ಬಂದಿತು. ಬಂದಿತು. ನೀರು ಮೂಗ ನ್ನೂ ಮುಟ್ಟಿಸಿಕೊಂಡು ಬಿಟ್ಟಿತು. ಜನರೆಲ್ಲಾ ಮೀನ ಮೇಷ ಎನಲಿಸುತ್ತಿದ್ದಾರೆ ಸ್ವಲ್ಪಹೊತ್ತು ಸ್ವಾಮಿಗಳೇ ಕಣ್ಣಿಗೆ ಕಾಣಿಸಲಿಲ್ಲ ಬಹಳ ಹೊತ್ತಿನವರೆಗೂ ಭಕ್ತರು ಬಡೆದಾಡಿ ಪೇಚಾಡಿದರು. ಹಸ್ತದಲ್ಲಿ ಲಿಂಗಪ್ಪನ ಕೂಡಿಸಿಕೊಂಡು ಬರುತ್ತಿರುವ ಸ್ವಾಮಿಗಳ ಸಂದರ್ಶನವು ಅಲ್ಲಿನವರಿಗೆಲ್ಲರಿಗೂ ಆ ಮೇಲೆ ಮುಂದಿನ ಕಾರ್ಯಕ್ರಮವನ್ನು ಮುಗಿಸಿದರು. ಈ ಮಠದಲ್ಲಿ ಇಂತಿಂತಪ್ಪೆಲ್ಲ ಇದ್ರು. ಈಗ ನೋಡಿದರೆ ಈ ರೀತಿಯಾಗಿದೆ- ಇಲ್ಲಿ ಬಿದ್ದಿರುವ ಕಂಬಗಳನ್ನು ನೋಡಿ ಶಿವನ ಸಮುದ್ರದ ಹಳೆ ಸೇತುವಿಗೆ ಹಾಕಿರುವ ಕಂಬಗಳು ಇಲ್ಲಿನವೇ ಇಲ್ಲಿನ ಈ ಅವಸ್ಥೆಗೆ ಕಾರಣವನ್ನು ಹೇಳತೀರದು. ಪಾಳೆಯಗಾರನೊಬ್ಬ ಇಗ ಈ ಮಠದಲ್ಲಿದ್ದ ಉದ್ದಾನ ಶಿವಯೋಗಿಗಳ ಪ್ರಭಾವಳಿಯಿಂದ ಎಲ್ಲೆಲ್ಲಿಯೂ ಶಿವಭಕ್ತಿಯೂ ಅವತಾರವೆತ್ತಿತ್ತು ಚಾಡಿಕೋರ ಮಾತನ್ನು ಕೇಳಿ ಕಲುಷಿತ ಹೃದಯ ನಾದಪಾಳೆಯಗಾರನು ಮಠದ ನಿರ್ನಾಮಕ್ಕೆ ನಿರ್ಧರಿಸಿದನು. ಸೇವೆ ಯನ್ನು ಜಯಾಯಿಸಿದನು. ಮದ್ದು ತುಬಾಕಿಗಳ ಸಹಿತ ದರೀಗುಡ್ಡಿಗೆ ಸೈನ್ಯವು ಬಂದಿತು. ಯೋಗಪ್ರಭಾವದಿಂದ ಉದ್ದಾನ ಶಿವಯೋಗಿಗಳಿಗೆ ಈ ಸಮಾಚಾ ರವು ತಿಳಿಯಿತು.

ಇನ್ನು ಇಲ್ಲಿ ಇರುವುದು ಸರಿಯಲ್ಲವೆಂದು ಭಾವಿಸಿ ಸಮಾಧಿ ಭವನವನ್ನು ಭೂಮಿಯ ಒಳಗಡೆ ಸಿದ್ಧಪಡಿಸಿದರು. ಗಂಡಿನೇಟು ಮಠದ ಬಾಗಿಲಿಗೆ ಬೀಳುವುದರೊಳಗಾಗಿಯೇ ಕಾಯಸಹಿತ ಸಮಾಧಿಯನ್ನು ಉದ್ದಾನರು ಪ್ರವೇಶಿಸಿದರು. ಮಠದಲ್ಲಿ ಬಸವನ ವಿಗ್ರಹವಿರುವ ಆ ಚಿಕ್ಕ ಕೊದಡಿಯಂತಿರುವುದೇ ಆ ಶಿವಯೋಗಿಗಳ ಸಮಾಧಿಯು ಇಂತಹ ಮಹಾತ್ಮರು ಇದ್ದ ಜಾಗವಿದು. ಧರ್ಮ ಪ್ರಚಾರದಲ್ಲಿ! ಭಕ್ತಿಯುಪದೇಶದಲ್ಲಿ, ದಾಸೋಹ ವಿನಿಯೋಗದಲ್ಲಿ, ಆಚಾರದ ಅನುಕ್ರಮಣಿಕೆಯಲ್ಲಿ ಇದು ಎತ್ತಿದ ಕೈಯಾಗಿತ್ತು. ಯಾವ ಕಾರ್ಯವನ್ನೇ ಆಗಲಿ ಈ ಮಠದ ಹೆಸರು ಹೇಳಿ ಮಾಡಿದರೆ ಸಾಕು. ಅದು ಜಯಪ್ರದ. ಈ ಮಠದ ಹೆಸರನ್ನು ಹೇಳಿ ಕೇಳಿ ಬರಿ ಕೈಯ್ಯಲ್ಲಿ ಬಂದವರಿಲ್ಲ. ಈ ಮಠದ ದುಗ್ಗಾಣಿಯ ಸೊತ್ತನ್ನು ಸ್ವಾರ್ಥಕ್ಕೆ ಉಪಯೋಗಿಸಿದರೆ ಸಾಕು ಆತನಿಗೆ ಬಂತು ಕುತ್ತು. ಇದೇನೂ ಬರೀ ಹೊಗಳಿಕೆಯಲ್ಲ. ಕಣ್ಣಾರೆ ಕಂಡು ಕಿವಿಯಾರೆ ಕೇಳಿದ ಸತ್ಯವಿಚಾರ. ಹುಚ್ಚುಬಸವ ಅಂತ ಪಂಚಮನೊಬ್ಬನು ಇದ್ದನು. ತನಗೆ ತಿಳಿವಳಿಕೆ ಬರುವ ಮೊದಲೇ ಆತನು ಮಾಂಸ ಮದ್ಯವನ್ನು ಬಿಟ್ಟಿದ್ದನು: ಎಲ್ಲಿ ಹೋದರೂ ತಾನೇ ಸ್ವಂತ ಶಾಖಾಹಾರ ಪಾಕವನ್ನು ತಯಾರು ಮಾಡಿ ತೆಗೆದುಕೊಳ್ಳುತ್ತಿದ್ದನು. ಆ ಗುಡ್ಡದ ಹತ್ತಿರ ಇರುವ ಗವಿಯನ್ನು ಈತನೇ ಪತ್ತೆ ಮಾಡಿದನು. ಪ್ರತಿದಿವಸವೂ ಅಲ್ಲಿಯೇ ಅಟ್ಟಣೆ ಹಾಕಿಕೊಂಡು ಹೊಲವನ್ನು ಕಾಯುತ್ತಿದ್ದನು. ಮುಟ್ಟು ಮೈಲಿಗೆಯವರು ಮಾತನಾಡಿಸಿದರೆ ಮೌನವಾಗಿ ಹೋಗುತ್ತಿದ್ದನು. ಆವೇಶ ಬಂದಾಗ ಹೇಳಿದ ಮಾತುಗಳು ಸತ್ಯವಾಗುತ್ತಿದ್ದವು. ಪ್ರತಿಯೊಂದು ಬಾರಿಗೂ 'ಆ ಅಪ್ಪ ಹೇಳುತ್ತಾನೆ. ಅವರ ಹಾಗೆ ನಾನು ಮಾಡುತ್ತೀನಿ. ಅವನು ಹೇಳದಿದ್ದರೆ ನಾನೇನು ಮಾಡಲಿ' ಎನ್ನುತ್ತಿದ್ದ. ಆ ಹುಚ್ಚ ಬಸವನ ಮಾತು ಸತ್ಯವಾದುದು ನನ್ನ ಅನುಭವಕ್ಕೆ ಬಂದಿದೆ ಹಲವಾರು ಮಂದಿ ಅಪಾರಮಾಡಿ, ಅಪಾಯಕ್ಕೆ ಸಿಕ್ಕಿದ ಸಮಯದಲ್ಲಿ 'ಅಯ್ಯೋ ಮಹಾರಾಯ, ನನ್ನಪ್ಪ! ಆವರನ್ನು ಏಕಪ್ಪಾ ತೊಂದರೆಪಡಿಸುತ್ತೀಯೆ? ನಿನ್ನ ಅವಾಂತರವನ್ನು ತಡೆಯುವವನು ನಾನೊಬ್ಬನಲ್ಲದೆ ಮತ್ತಿನ್ನಾರಪ್ಪ? ಬಿಡು ಬಿಡು ದಮ್ಮಯ್ಯ ನಿನ್ನ ಪಾದ' ಎಂದರೆ ಸಾಕು ಆ ಮಂದಿಗೆ ಆವ ಪ್ರಸಿದ್ಧ ಆಪತ್ತು ಅಮರಿ ಹೋದಂತೆಯೇ ಇಂತಹ ಭಕ್ತಿಯ ಭಂಡಾರವು ಇದು. ಮಹಾಮಹಿಮರ ಮಠವು ಇದು."

———

# ಜೀವಂತ ಧರ್ಮ

( ಲೇಖಕರು :— ಎಂ. ದೊಡ್ಡಯ್ಯ ಶಾಸ್ತ್ರಿಗಳು ನಾಗರಹಾಳು ಮುಕ್ಕಾಮು )

ಯಾವ ಧರ್ಮ ( ಮತ ) ದಲ್ಲಿ ಸಾಮಾಜಿಕ, ನೈತಿಕ, ತಾತ್ವಿಕ, ಈ ಮೂರರ ಉನ್ನತಿಗೆ ಸ್ಥಾನವಿದೆಯೋ ಅದುವೇ ಜೀವಂತ ಧರ್ಮವೆನಿಸುವ ದೆಂದು ಸಕಲ ಅನುಭವಿಗಳ ಉಪದೇಶವು.

ಇದರೊಳಗೆ ಒಂದು ಕೊರತೆಯಾದರೆ ಅದು ನಿರ್ಜೀವ ಧರ್ಮವೆನಿಸುವದು ಹೇಗೆ? ದೇಹ, ಪ್ರಾಣ, ಆತ್ಮ ಈ ಮೂರು ಕೂಡಿರುವದರಿಂದ ಸಚೇತನ ಮನುಷ್ಯನಾಗಿರುವನೋ ? ಹಾಗೆ ಸಮಾಜಕ್ಕೂ ದೇಹಕ್ಕೂ ಸಂಬಂಧ, ಪ್ರಾಣಕ್ಕೂ ನೀತಿಗೂ ಹೊಂದಿಕೆ, ತತ್ವಕ್ಕೂ ಜೀವನಿಗೂ ಸಮಾನಹೀಗೆ ತಿಳಿಯತಕ್ಕದ್ದು. ಒಂದು ಕೆಟ್ಟರೆ ಇನ್ನೆರಡು ಕೆಟ್ಟಂತೆಯೇ ಸರಿ. ಒಡಲಿದ್ದರೆ ಪ್ರಾಣ ಪ್ರಾಣವಿದ್ದರೆ ದೇಹ, ಹೀಗೆ ಸಂಬಂಧ ಉಂಟಲ್ಲವೇ ? ಮಗುವು ಹೆತ್ತ ವರ ಸಹಾಯದಿಂದಲೇ ದೇಹದ ಬೆಳವಣಿಗೆಗೆ ಇದಾದಬಳಿಕ ತನ್ನ ಸುತ್ತಲಿ ರುವ ಸಮಾಜದ ಸಹಾಯಬೇಕು. ಹೀಗೆ ಸಾಯುವವರೆಗೂ ಸಮಾಜದ ನೆರವು ಅವಶ್ಯವೆಂಬುದು ಗೊತ್ತಾಗುತ್ತದೆ.

ಆದ್ದರಿಂದ ಸಮಾಜ ಸಹಾಯವಿಲ್ಲದೆ ಇದುವರೆಗೂ ಯಾರು ದೊಡ್ಡವ ರೆನಿಸಿಲ್ಲ. ಬುದ್ಧ, ಬಸವ, ಶಂಕರ ಇತ್ಯಾದಿ ಮಹಾತ್ಮರೂ ಸಮಾಜದ ನೆರವಿ ನಿಂದೇ ಬದುಕಿ ಬಾಳಿ ಹೋದರು. ಮನುಷ್ಯನು ಸಂಘ ಪ್ರಾಣಿಯಾದ್ದರಿಂದ ಮತ್ತಿಷ್ಟು ಪ್ರೇಮ ಸಹಕಾರ ಪರಸ್ಪರರಲ್ಲಿ ಇದ್ದೇ ತೀರಬೇಕಾಗುತ್ತದೆ. ಸಮಾಜ ವೆಂದರೆ ತನ್ನ ದೇಹವೇ ಹೊರತು ಬೇರೆ ಎಂದು ತಿಳಿದರೆ ದೊಡ್ಡ ಅಪರಾಧ ವೆನಿಸುತ್ತದೆ.

ಪಾಶ್ಚಾತ್ಯರು ದೇಹ, ಮನ ಇವುಗಳ ಉನ್ನತಿ ಅಥವಾ ಪ್ರಗತಿಯಾದರೆ ಸಾಕೆಂದು ಭಾವಿಸುವರು. ಭಾರತೀಯರು ದೇಹ, ಮನ, ಆತ್ಮ ಈ ಮೂರರ ಉನ್ನತಿಯೇ ನಿಜವಾದ ಆನಂದಕ್ಕೆ ಹೇತುವಾಗುತ್ತದೆಂದು ಬೋಧಿಸುತ್ತಾರೆ. ಆದ್ದರಿಂದ ಸಮಾಜದ ನೆರವು ಬೇಕು, ಅದು ಬೇಕಾದರೆ ಸಮಾಜದ ಯೋಗ ಕ್ಷೇಮಗಳನ್ನು ತನ್ನವಾಗಿ ನೋಡಿಕೊಂಡು ನೀತಿಯಿಂದ ನಡೆದರೆ ವ್ಯಕ್ತಿಯು ಜೀವಿಸುವನು.

ವ್ಯಕ್ತಿಯ ದೇಹಕ್ಕೆ ಪ್ರಾಣ ಸಮಾನವಾದದ್ದು ನೀತಿಯು 'ನಿ' ಧಾತು ಮಯ್ಯು ಎಂಬ ಕನ್ನಡದಲ್ಲಿ ಅರ್ಥ. ಅಂದರೆ ಮಾನಸಿಕ ಉನ್ನತಿಯು ಎಲ್ಲಿಯ ವರೆಗೆ ಮನವು ನಿರ್ಮಲವಿಲ್ಲವೋ ಅಲ್ಲಿಯವರೆಗೆ ಸಮಾಧಾನವಿರುವದಿಲ್ಲ. ದೇಹವು ನಿರೋಗಿಯಾದ್ದರೂ ದೇಹದಲ್ಲಿಸ್ದ ಮನಸ್ಸಿಗೆ ಕಾಮ ಕ್ರೋಧಾದಿ ಗಳಿಂದ ದೂಷಿತವಾಗಿದ್ದರೆ ಮನೋರೋಗವೆನಿಸುತ್ತದೆ. ಮನೋರೋಗ ದಿಂದ ದೇಹಕ್ಕೂ ಸಂಬಂಧಿಸಿ ಅನಾರೋಗ್ಯ ಉಂಟಾಗುತ್ತದೆಂದು ವೈದ್ಯ ಶಾಸ್ತ್ರದ ಅಭಿಪ್ರಾಯವಿದೆ. ಆದ್ದರಿಂದ ನಿರ್ಮಲ ತನು, ನಿರ್ಮಲ ಮನ ಹೀಗಿ ರುವದರಿಂದ ಮುಂದಿನ ಆತ್ಮೋನ್ನತಿಗೆ ಸುಲಭವೆನಿಸುವದು. ಪರಿಣಾಮ ದೊಳಗೆ ಮನದ ಪರಿಣಾಮವೇ ಚೆಲುವು ಎಂದು ಪ್ರಭುದೇವರು ಬೋಧಿ ಸುವರು.

ಬಳಿಕ ಆತ್ಮೋನ್ನತಿಯಾಗಬೇಗು "ಆತ್ಮ" ಎಂದರೆ ಜೀವನಿಗೂ ಪರ ಮಾತ್ಮನಿಗೂ ಹೆಸರುಂಟು. "ಅತತಿ ವ್ಯಾಪ್ನೋತೀತಿ ಆತ್ಮ" ಎಂಬ ಶಬ್ದದ ನಿರ್ವಚನವಿದೆ. ಅಂದರೆ ಸಕಲದೇಹಾದಿ ಜಗತ್ತಿನಲ್ಲಿ ತುಂಬಿದ ಅದ್ಭುತಶಕ್ತಿ ವಿಶಿಷ್ಟವಾದ ಪರಮಾತ್ಮನೆಂಬ ಅರ್ಥವು ಹೀಗೆ ಜೀವನು ತಿಳಿಯದೆ ದೇಹಾತ್ಮ ಬುದ್ಧಿಯಿಂದ ನಾನು, ನನ್ನದು ಎಂಬ ಅರ್ಥವನ್ನು ಮಾಡಿ ಸಂಸಾರದ ಸುಖ ದುಃಖ, ಜನನ, ಮರಣಾದಿಗಳಿಗೆ ಪಾತ್ರನಾಗಿದ್ದಾನೆ. ಆದ್ದರಿಂದ ಮೊದಲು ಹೇಳಿದ ಮಾನಸಿಕೋನ್ನತಿಯಾಗಬೇಕಾದರೆ ಸುವಿಚಾರ-ಸದಾಚಾರಗಳಿಂದ ಕೂಡಿಕೊಂಡು ನೀತಿಯನ್ನು ಪಾಲಿಸಬೇಕು. ಹಾಗೆ ಈ ಆತ್ಮನ ಉನ್ನತಿಗೆ ಅಂದರೆ ಜೀವವಿಕಾಸಕ್ಕೆ ಪ್ರತಿಬಂಧಕವಾದುದೇನಂದರೆ ಭಾವ, ಈ ಭಾವವು ಸದ್ಭಾವವಾಗಬೇಕು. ಸತ್ ಸದ್ರೂಪ ಪರಮಾತ್ಮನು ನಾನೆಂಬಭಾವ (ಇರುವಿಕೆ) ಇದನ್ನು ಗುರು ಶಾಸ್ತ್ರಾದಿಗಳ ಮುಖಾಂತರ ಕೇಳಿ ನಡೆದು ವಿಶ್ವಾಂತರ್ಗತ ಚೈತನ್ಯವು, ದೇಹಾಂತರ್ಗತ ಚೈತನ್ಯವು ಒಂದೆಂಬ ಭಾವವು ವಿಕಾಸವಾದು ದಾದರೆ ಶಿವಾನಂದ ಲಭಿಸುತ್ತದೆಂದು ಸಕಲ ಅನುಭವಿಗಳ ಅಭಿಪ್ರಾಯ ವಿರುವದರಿಂದ ಸಂಕುಚಿತ ಭಾವವನ್ನುಳಿದು, ವಿಕಾಸ ಭಾವ ( ಶಿವಭಾವ ) ವನ್ನು ಹೊಂದುವದೇ ಪರಮಗುರಿ.

ಈ ದೇಹ, ಪ್ರಾಣ (ಮನ) ಆತ್ಮ ಈ ಮೂರರ ಉನ್ನತಿಯನ್ನು ಕುರಿತು ಬೋಧಿಸುವ ಸಕಲ ಶಾಸ್ತ್ರಗಳು, ಮತಗಳು, ದರ್ಶನಗಳು ಜೀವಂತ ಧರ್ಮ ವೆನಿಸುತ್ತದೆ.

ಆದ್ದರಿಂದ ಹಿಂದೂ ಧರ್ಮಗಳಲ್ಲಿ ಬಹುಶಃ ಈ ಮೂರರ ವಿಷಯ ಬೋಧಿಸುವದೇ ಹೊರತು ಅನ್ಯಥಾ ಭಾವವಿಲ್ಲ. ಇದರೊಳಗೆ ಕೆಲವು ಮತಗಳು ಒಂದಂನ್ನೇ ಗುರಿಯನ್ನಾಗಿಟ್ಟುಕೊಂಡಿವೆ ಎಂದು ಕಂಡು ಬರುತ್ತದೆ ಆದರಲ್ಲಿ, ಆದ್ಯಾಪಿ, "ಶಕ್ತಿ ವಿಶಿಷ್ಟಾದ್ವೈತ" ವೀರಶೈವ ಧರ್ಮದಲ್ಲಿ ಚಾಚೂ ತಪ್ಪದೆ ದೇಹೋನ್ನತಿ, ಮಾನಸಿಕೋನ್ನತಿ, ಆತ್ಮೋನ್ನತಿ ಇವುಗಳ ವಿಷಯದಲ್ಲಿ ಪ್ರಬಲವಾಗಿ ಶಾಸಿಸಲ್ಪಡುತ್ತದೆ. ಅಷ್ಟಾವರಣವೇ ಅಂಗ, ಪಂಚಾಚಾರವೇ ಪ್ರಾಣ, ಷಟಸ್ಥಲ ತತ್ವವೇ ಆತ್ಮ ಈ ಮೂರರಿಂದ ಸಮನ್ವಯವಾದ ಧರ್ಮಗಳನ್ನು ಕಡುಖಂಡಿತವಾಗಿ ಬೋಧಿಸುತ್ತದೆ.

" ಅಂಗಕ್ಕೆ ಆಚಾರವೇ ಚಲುವು
ಮನಕ್ಕೆ ಮಹಾನುಭಾವವೇ ಚಲುವು
ಆತ್ಮನಿಗೆ ಅರುಹೇ ಚಲುವು
ಅಖಂಡೇಶ್ವರನ ಇಂಬುಗೊಳಲಿಕ್ಕೆ ಶಿವಶರಣರ ಸಂಗವೇ ಚೆಲುವು

ಎಂಬುದನ್ನು ಪ್ರತಿಪಾದಿಸಬೇಕಾದರೆ ಅಂಗವಿದ್ದವರೆಲ್ಲರೂ ( ದೇಹ ) ಆಚಾರವಂತರಾಗಬೇಕು. (ಒಳ್ಳೇ ನಡತೆ) ಮನವಿದ್ದವರೆಲ್ಲರೂ ವಿಶಾಲ ಮನ ಉಳ್ಳವರಾಗಬೇಕು. ಆತ್ಮ (ಜೀವನ) ವಿದ್ದವರೆಲ್ಲರೂ ಅರುಹಿನಿಂದ (ಸುಜ್ಞಾನ) ಹೊಂದಿರಬೇಕು ಎಂಬುದಾಗಿ ಸ್ಪಷ್ಟ ಮಾತುಗಳಿಂದ ಬೋಧಿಸುತ್ತಾರೆ. ಅಂದಬಳಿಕ ದೇಹ ಯಾರಿಗಿಲ್ಲವೋ ಆಚಾರಬೇಡ ಮನವಾರಿಗೆ ಇಲ್ಲವೋ ಮಹಾನುಭಾವ ಬೇಡ ಜೀವ ಯಾರಿಗೆ ಇಲ್ಲವೋ ಅರಿವು (ಸುಜ್ಞಾನ) ಬೇಡ. ಹೀಗಿಲ್ಲವಾದ್ದರಿಂದ ಜಗತ್ತಿನಲ್ಲಿ ಮಾನವ ಮಾತ್ರದವರೆಲ್ಲಾ ಈ ಮೂರರಿಂದ ಸಂಬಂಧವುಳ್ಳವರಾಗಿದ್ದಾರೆ. ಈ ಮೂರರ ಸಮನ್ವಯ ಧರ್ಮ ಮನುಷ್ಯ ಮಾತ್ರದವರಾದ ಎಲ್ಲರಿಗೂ ಅವಶ್ಯಕವೆನಿಸುವದಿಲ್ಲವೇ? ಇದೇ ಜೀವಂತ ಧರ್ಮ ಇದೇ ಶಕ್ತಿಯುತವಾದ ಧರ್ಮ ಇಲ್ಲವಾದರೆ ನಿಶ್ಚೇತನ ನಿಷ್ಪ್ರಾಣ ಧರ್ಮವೆಂದು ಹೇಳಲು ಯಾವ ಭೀತಿಯು ಇಲ್ಲವೆಂದು ಭಾಸವಾಗುತ್ತದೆ. ಆದರೆ ಈಗಿನ ವಿಜ್ಞಾನದ ಪ್ರಗತಿಪರವಾದ ವಿಷಯಗಳನ್ನು ಕಂಡವರೆಲ್ಲ ಧಾರ್ಮಿಕ ಸಂಬಂಧವಾದ ವಿಷಯಗಳನ್ನು ಕೇಳಿ ಮೂಗು ಮುರಿಯುತ್ತಾರೆ. ಯಾಕೆಂದರೆ ಇದರಿಂದ ಯಾವ ವಿಧವಾದ ಸುಖಲೇಶವಿಲ್ಲಾ ಇದೆಲ್ಲಾ ಶುಷ್ಕವಾದ ಬೋಧೆಯಲ್ಲ ದೇಹಾ ಪ್ರಯೋಜನವೆನಿಸದೆಂದು ಅವರ ತೀರ್ಮಾನ ಇರಲಿ ಈಗ ಬಳಕೆಯಲ್ಲಿರುವ ಅನೇಕ ಭೌತಿಕ ಉಪಕರಣಗಳಿಂದ ಬಂದ ಸುಖವಾದರೂ ಸಾಕೆನಿಸುವದೇ ? ಇಲ್ಲ ಮತ್ತೆ ಮತ್ತೆ ಹೊಸ ಸಂಶೋಧನೆ ನಡದೇ ಇರುತ್ತವೆ.

ರಷ್ಯಾ ವಿಜ್ಞಾನಿಯು ಉಪಗ್ರಹವನ್ನು ಕಂಡಿಟ್ಟ ಇದನ್ನು ನೋಡಿ ಅಮೇರಿಕೆಯ ವಿಜ್ಞಾನಿಗಳು ಇಂಥಾ ಕಾಲದಲ್ಲಿ ನಾವು ಇದಕ್ಕಿಂತ ಅತಿಶಯವಾದ ಉಪಗ್ರಹವನ್ನು ನಿರ್ಮಿಸುತ್ತೇವೆಂದು ಈಗಲೇ ಘೋಷಿಸಿದ್ದಾರೆ. ಅನಂತರ ಕೃತಕ ಚಂದ್ರನಿರ್ಮಾಣ ಮಾಡುವರೆಂದು ಸ್ಪಷ್ಟವಾಗಿ ಹೇಳಿದ್ದಾರೆ ಈ ವಿಷಯ ಬುದ್ಧಿ ಶಕ್ತಿಯ ಪರಾಕಾಷ್ಠತೆ ಎಂಬುದು ಅತ್ಯಾನಂದವೇ ಹೊರತು ಸಾಮಾನ್ಯವಾದುದಲ್ಲ.

ವಿಜ್ಞಾನದ ಮೂಲಕ ಶಾಂತಿ ಆನಂದಗಳು ಸ್ಫೂರಿಸಬೇಕಲ್ಲವೆ ? ಆದರೂ ಇಹಲೋಕಕ್ಕೆ ಸಂಬಂಧಿಸಿದ ಸುಖಸಂತೋಷಗಳ ಸೌಕರ್ಯವು ಹೆಚ್ಚಿದವು ಇದು ನಿಜ. ಇಲ್ಲಿಗೆ ನಿಜವಾದ ಶಾಂತಿ ಆನಂದ ಇವುಗಳ ಲವ ಲೇಶವಾದರೂ ಯಾವ ವಿಜ್ಞಾನಿಗೂ ಇಲ್ಲ.

ಯಾಕೆಂದರೆ ಸರಳರೇಖೆಗೆ ಅವಧಿ ಇಲ್ಲ. ಅದು ವರ್ತುಳಕ್ಕೆ ಬರಬೇಕಲ್ಲವೇ? ಹಾಗೆ ಹೊರಗೆ ದೃಶ್ಯ ಪದಾರ್ಥಗಳಿಂದ ಸುಖಲೇಶವಿಲ್ಲವೆಂಬುದು ಭಾರತೀಯರ ಸಿದ್ಧಾಂತ. ಆದ್ದರಿಂದ ಇಂದ್ರಿಯಗಳ ಸನ್ನಿಕರ್ಷದಿಂದ ಜ್ಞಾನವೆಂಬುದು ನಿಜವಾದರೂ ಪದಾರ್ಥಗಳಲ್ಲಿ ಸುಖವಿಲ್ಲ. ಇಂದ್ರಿಯಗಳ ಸಂಬಂಧದಲ್ಲಿ ದೃಶ್ಯಪದಾರ್ಥಗಳ ಸುಖವೆಂಬ ಅರ್ಥ.

ಪ್ರಗತಿಯೆಂದರೆ ಮುಂದಡಿ ಇಡುವುದು. ಇದು ಎಲ್ಲಿಗೆ ಇದರ ಪ್ರಯೋಜನವೇನೆಂದು ಊಹಿಸಿದರೆ ತನಗೆಂಬುದು ಸ್ಪಷ್ಟ.

"ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವಸೆಳೆದು ನಿಂದಾತನೇ ಸುಖಿ
ಪಂಚೇಂದ್ರಿಯಂಗಳಿವ್ಹೆಯಲ್ಲಿ ಕೀಳು ಮನಂಗೊಂಡು ಸುಳಿವಾತ ದುಃಖಿ
ಮನವು ಬಹಿರ್ಮುಖವಾಗಲು ಮಾಯಾ ಪ್ರಪಂಚ ಮನವು ಅಂತರ್ಮುಖವಾದಡೆ ಅಪರಳ ಜ್ಞಾನಿ
ಮನವು ಮಹದಲ್ಲಿ ನಿಂದಿರಲಾತ ಮುಕ್ತನು.
ಮನೋಲಯವಾದಡೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಆ ಭೇದ್ಯನು"

ಪ್ರಗತಿಯ ಆರಂಭ ಮನಸ್ಸಿನಿಂದ, ಮನಸ್ಸು ಬಹಿರ್ಮುಖವಾದರೆ ಪ್ರಪಂಚ, ಅಲ್ಲ ಪ್ರಗತಿಗೆ ಸಾಧ್ಯವೇ ಇಲ್ಲ. ಮಾನವ ದೃಷ್ಟಿಯು ಬಹಿರ್ಮುಖದಿಂದ ಅಂತರ್ಮುಖಕ್ಕೆ ತಿರುಗುವುದರಲ್ಲಿಯೇ ಪ್ರಗತಿಯು ಪ್ರಾರಂಭವಿದೆ,

ಅಂತರ್ಮುಖಿಯಾಗುವುದು. ಸುಲಭ ಸಾಧ್ಯವಲ್ಲ. ಮಾನವನ ಇಂದ್ರಿಯಗಳು ಮನಸ್ಸು ಹೊರಗಿನ ವಿಷಯಗಳನ್ನು ಮಾತ್ರ ಬಹು ಬೇಗ ಅರಿಯ ಬಲ್ಲವು. ಆದರೆ ತಮ್ಮನ್ನು ತಾವು ವಿಷಯಿಕರಿಸವು. ಬಾಹ್ಯ ಸಂಗತಿಗಳಲ್ಲಿ ಹೊಕ್ಕು ನೋಡುವ ಕಣ್ಣು ತನ್ನಿಂದ ಹೊರಗಾದ ಪದಾರ್ಥಗಳನ್ನು ನೋಡಬಲ್ಲುದೇ ಹೊರತು, ತನ್ನ ತಾನು ಕಾಣದು.

ಆದ್ದರಿಂದ ಕಣ್ಣು ತನ್ನನ್ನು ತಾನು ಅರಿಯಲಿಕ್ಕೆ ಕನ್ನಡಿಬೇಕು. ಹಾಗೆ ತನ್ನನ್ನು ತಾನು ಅರಿಯಲಿಕ್ಕೆ ಆತ್ಮ ದರ್ಪಣಬೇಕು. ಇದನ್ನೇ ವಿಷಯಾಕರಿಸಲು ಬಗೆ ಬಗೆಯಾಗಿ ಭಾರತೀಯ ತತ್ವವೇತ್ತಿಗಳು ಕಂಡುಂಡ ಪ್ರಜ್ಞಾನಂ ಬ್ರಹ್ಮ.

# ನಾವು ಯಾರು ?

(ಲೇಖಕರು:— ಶ್ರೀ. ಜಿ. ಎಚ್. ಹನ್ನೆರಡುಮಠ-ಹುಬ್ಬಳ್ಳಿ)

ಅಬ್ಬಾ ಇದೆಂತಹ ಮಾತು!! "ನಾವು ಯಾರು" ನಿಜಕ್ಕೂ ಆಶ್ಚರ್ಯ ಜಗತ್ತಿನ ನಾನಾ ರಂಗಗಳಲ್ಲಿ ಅದ್ಭುತ ರೀತಿಯಿಂದ ಮುನ್ನಡೆದ ಪ್ರಗತಿ ಶೀಲ ಮಾನವರು ನಾವಲ್ಲವೇ ? ಅಂದಮೇಲೆ ''ನಾವು ಯಾರು?'' ಎಂಬ ಚಿಕ್ಕ ವಿಷಯ ನಮಗೆ ಪ್ರಶ್ನೆಯಾಗಿ ನಿಂತಿದೆಯೆಂದ ಮೇಲೆ ವಿಚಿತ್ರವೇ ಸರಿ. ಸಾವಿರಾರು ಮೈಲು ದೂರವಿದ್ದವರೊಡನೆ ಮಾತನಾಡುವವರು, ನೆಲ-ನೀರು—ಖಾನುಗಳಲ್ಲಿ ವಿಕ್ರಮವನ್ನು ಸಾಧಿಸಿದವರು, ಗಗನಕ್ಕೆ ಎರಡನೇ ಚಂದಿರನನ್ನು ತೂರಿಬಿಟ್ಟವರು ನಾವಲ್ಲವೇ ? ಅದಲ್ಲದೇ ಹೊರಲಾರದ ಹೊತ್ತಿಗೆಗಳನ್ನು ಬರೆದು ಸಾಹಿತ್ಯವನ್ನು ಮಿಂಚಿಸಿದವರು, ಕೈಯ್ಯ ಕುಶಲತೆಯಿಂದ ಕಲೆಗೆ ಬೆಲೆ ತಂದವರು, ಇನ್ನೂ ಸಹಸ್ರಾರು ರಂಗಗಳಲ್ಲಿ ಅತ್ಯಧಿಕ ರೀತಿಯಿಂದ ಅತ್ಯದ್ಭುತವಾಗಿ ಮುನ್ನಡೆದವರು ನಾವಲ್ಲವೇ? ಹೀಗಿದ್ದರೂ " ನಾವು ಯಾರು '' ಎಂಬುದೇ ನಮಗೆ ಒಡೆಯದ ಒಗಟೇ? ನಮ್ಮ ಹೆಸರು ನಮ್ಮ ಮನೆ ನಮಗೆ ಗೊತ್ತಿಲ್ಲವೆಂದಮೇಲೆ ಅದೆಂತಹ ಅಪಮಾನ!

ಜನ ಕೇಳಿ ನಕ್ಕಾರು. ಬೇಗನೇ ನಮ್ಮನ್ನು ಮೊದಲು ನಾವು ಅರಿಯೋಣ ಅಹುದು; ಅದೇ ಚರಮೋಕ್ತಿ. ನಾವು ಬಂದುದು ಎಲ್ಲಿಂದ? ಈಗ ಇರುವದು ಯಾವ ಸ್ಥಳ ? ಇಲ್ಲಿ ಇದ್ದು ಮಾಡಬೇಕಾದ ಕರ್ತವ್ಯವೇನು ? ಅಲ್ಲದೇ ಮುಂದೆ ನಾವೆಲ್ಲಿಗೆ ಹೋಗಬೇಕಾಗಿದೆ ?

ಸಂಸಾರವೆಂಬುದು ಮೂರು ದಿನಗಳ ಸಂತೆ ಎಂದು ಶರಣರು ಸಾರಿದ್ದಾರೆ. ದಾಸರು ಹಾಡಿದ್ದಾರೆ. ಇರಲಿ! ಈ ಸಂತೆಗೆ ಬರುವ ಮುನ್ನವೇ ನಾವು ಸಾಕಷ್ಟು ಹಣ ತಂದಿದ್ದರೆ ಒಳಿತಾಗುತ್ತಿತ್ತು. ಆಯಿತು; ಇಷ್ಟಾದರೂ ತಂದಿದ್ದೇವಲ್ಲಾ. ಪುಣ್ಯಕ್ಕೆ ಬರೆಗೈಯಿಂದ ಬಂದಂತಿಲ್ಲ. ಇದರಲ್ಲಿಯೇ ಸ್ವಲ್ಪಾದರೂ ಒಳ್ಳೆಯ ಫಲವನ್ನು ತೆಗೆದುಕೊಂಡು ಹೆಂತಿರುಗೋಣ. ನಿಧಾನವಾಗಿ ಹೊಂದಿಕೆಯಿಂದ ಸಂತೆ ಮಾಡೋಣ. ಅವಸರ ಮಾಡಿದರೆ ಹುಳಕು ಬದನೆಯು ಕಾಯಿ, ಕೊಳೆತ ಉರುಳೀಗಡ್ಡೆಗಳನ್ನು ಒಯ್ಯಬೇಕಾಗುವದು. ಅಂತಹನನ್ನು ಒಯ್ದರೆ ಅವ್ವ ಬಿಡುವಳೇ ? "ಮರಳಿ ಹೋಗಿ ಇವನ್ನು ಬದಲಾಯಿಸಿಕೊಂಡು ಬಾ." ಎಂದು ಹೇಳಿ ಮತ್ತೆ ಸಂತೆಗೆ ಅಟ್ಟುತ್ತಾಳೆ. ಅಂದರೆ ನಮಗೆ ಮತ್ತೆ ಸಂತೆಯು ಬಂಧನ. ಅದೇ ಮುಂದಾಲೋಚನೆಯಿಂದ ಈಗಲೇ ನಾವು ಒಳ್ಳೇಯ ಕಾಯಿಪಲ್ಯವನ್ನು ಕೊಂಡೊಯ್ದರೆ?

ಸಂತೆಯೆಂಬುದೇ ನಮ್ಮ ಸಂಸಾರ ಅಥವಾ ಜೀವನವೆಂದಹಾಗಾಯಿತು. ನಾವು ಈ ಜನ್ಮಕ್ಕೆ ಬರಬೇಕಾದರೆ ಹಿಂದೆ ಅನೇಕ ಯೋನಿಗಳಲ್ಲಿ ಸಂಚರಿಸಿ ಬಂದಿದ್ದೇವೆ. ನಮ್ಮ ಪಾಪ, ಪುಣ್ಯವೆಂಬ ಮೂಟೆಗಳೆರಡನ್ನು ಹೊತ್ತು ತಂದಿದ್ದೇವೆ. ಮೂಟೆ ಸಣ್ಣದಿರಲಿ ಅಥವಾ ದೊಡ್ಡದಿರಲಿ; ಇನ್ನಾದರೂ ಯತ್ನಿಸಿ ಪುಣ್ಯ ಮೂಟೆಯನ್ನು ದೊಡ್ಡದಾಗಿ ಮಾಡೋಣ. ನಿರುಪಯುಕ್ತವಾದ ವಸ್ತುಗಳನ್ನು ತುಂಬುವದರಿಂದ ಪಾಪ ಮೂಟೆಯನ್ನು ಹೆಚ್ಚಿಸುವದು ಬೇಡ. ಯಾಕೆಂದರೆ ಅದನ್ನು ಹೊರಲಿಕ್ಕೆ ನಮಗೇ ತ್ರಾಸು.

ಅಂತೂ ಈಗಲಾದರೂ ತಿಳಿಯಿತಲ್ಲಾ; ಈ ಮೂಟೆಗಳನ್ನು ಹೊತ್ತುಕೊಂಡು ಸಂತೆ ಸಂತೆಗಳಿಗೆ ತಿರುಗುವ ಕಾಟ. ಇನ್ನಾದರೂ ಪಾರಾಗೋಣ. ಯಾವದೋ ಕರ್ಮಫಲದಿಂದ ನಾವು ಈ ಜನ್ಮಕ್ಕೆ ಬಂದಿದ್ದೇವೆ. ಬಂದಿದ್ದೇವೆಂದ ಮೇಲೆ ಮೂಟೆಗಳು ಎಷ್ಟೇ ಜಡವಿದ್ದರೂ ಹೊರಲೇಬೇಕು. ಅವುಗಳಿಗಾಗಿ ಚಿಂತೆ ಬೇಡ. ಆದರೆ ಮುಂದೆ? ಮುಂದೆ ಮತ್ತೆ ಇಪ್ಪತ್ತೆಂಟು ಸಂತೆಗಳನ್ನು ತಿರುಗುತ್ತ ಪ್ರಯಾಣ ಮಾಡುವದೋ ಅಥವಾ ಫರಾರಿ ಆಗು

ವದೋ ? ಘರಾರಿ ಮಾತೇ ಒಳ್ಳೆಯದು. ಅದೇ ಸ್ವಾತಂತ್ರ್ಯ, ಅರ್ಥಾತ್ ಅನುಭವಿಗಳು ಹೇಳುವಂತೆ ಮೋಕ್ಷ. ಈ ಸಂಸಾರವೆಂಬುದು ಒಂದು ಮಾಯಾ ಪಾಶ. ಕೇವಲ ಭ್ರಮೆ. ಮಿಥ್ಯ. ನಾವೂ ಮಿಥ್ಯ. ಆದರೂ ಮಿಥ್ಯತ್ವದಲ್ಲಿ ಸತ್ಯತ್ವದಿಂದ ನಡೆದು ನಿತ್ಯತ್ವವನ್ನು ಹೊಂದುವದೇ ಅತ್ಯುತ್ತಮ. ಆದ್ದರಿಂದ ನಾವೆಲ್ಲರೂ ಇನ್ನು ಮೇಲೆ ಧರ್ಮದಿಂದ ನಡೆಯೋಣ. ಕಾಮಕ್ರೋಧಾದಿ ಗಳ ಕಡುವೈರಿಗಳಾಗಿ ಅವುಗಳೊಡನೆ ಹೋರಾಡಿ ಜಯ ಹೊಂದೋಣ. ಯಾಕಂದರೆ ನಾವು ಸೋತು ಸಾಯಲು ಬಂದಿಲ್ಲ; ಗೆದ್ದು ಬಾಳಲು ಬಂದಿದ್ದೇವೆ. ಮುಖ್ಯವಾಗಿ ಹೆಣ್ಣು, ಹೊನ್ನು, ಮಣ್ಣುಗಳೆಂಬ ಮೂರು ಮಹಾ ರಾಕ್ಷಸರು ನಮ್ಮನ್ನು ನರಕಕುಂಡಕ್ಕೆ ಒಯ್ಯುತ್ತಿಹವು. ಈ ಮೂರು ಗುಣಗಳಿಂದ; ಮುಕ್ತಿಯನ್ನು ಹೊಂದಿದವನೇ ಮುಕ್ತ. ಜೀವನ್ಮುಕ್ತ. ಜ್ಞಾನಿ. ಯೋಗಿ. ಮಹಾತ್ಮ. ಶರಣ.

ಈಗಲಾದರೂ ನಾವಾರೆಂಬ ಸಮಸ್ಯ ಬಗೆಹರಿಯಿತು. ಇನ್ನಾದರೂ ನಾವು ಕಣ್ಣರಳಿಸುವಾ. ಈ ಗಾಢನಿದ್ರೆ ಇನ್ನು ಸಾಕು. ಕಳ್ಳರು ಬಂದು ಮನೆಯಲ್ಲಾ ದೋಚಿಕೊಂಡು ಹೋಗುತ್ತಿದ್ದರೂ ಅಂಧಃಕ್ಕಾರದಲ್ಲಿ ಹಾಗೆಯೇ ಮಲಗಿದ್ದೇವೆ. ಒಮ್ಮೆ ಅರಿವು ಬಂದಮೇಲೆ ಮರೆಯುವದು ಬೇಡ. ಅರಿವು ಅರಿದತ್ತ ನಡೆಯೋಣ. ಇದಕ್ಕೆ ಕ್ರಿಯೆ ಅತ್ಯವಶ್ಯ. ಕ್ರಿಯಾಮಥನವಿಲ್ಲದೇ ಕಾಣ ಬಂದುದೇ ಕಾಷ್ಟದೊಳಗಣ ಅಗ್ನಿ. ನಿಜ; ಧರ್ಮ ನಿಷ್ಠೆಯಿಂದ ಕ್ರಿಯಾ ಶೀಲರಾಗೋಣ. ಬಂಧನದಿಂದ ಮುಕ್ತರಾಗೋಣ. ಜೀವನದಿಂದ ಜೀವನ್ಮುಕ್ತರಾಗೋಣ.

———

# ನಿಧಿಸಮರ್ಪಣೆ.



ರಾವಬಹಾದ್ದೂರ ಡಾಕ್ಟರ ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಡಿ. ಲಿಟ್. ಅವರಿಗೆ ಪೂಜ್ಯ ಶ್ರೀ ಕುಮಾರಸ್ವಾಮಿಗಳು ನವಕಲ್ಯಾಣಮಠ ಧಾರವಾಡ ಅವರ ಅಧ್ಯಕ್ಷತೆಯಲ್ಲಿ ಶ್ರೀಗುರು ಬಸವ ಮಂಟಪದಲ್ಲಿ ತಾರೀಖು ೬-೧೧ ೫೭ ರ ಸಾಯಂಕಾಲ ೫ ಘಂಟೆಗೆ ಸತ್ಕರಿಸಿ ನಿಧಿ ರೂ. ೧೧೫೩-೦-೦ ಅರ್ಪಿಸಿದ್ದು.—

## ವಿವರ.

**ನಿಧಿ ಕೊಟ್ಟವರ ಹೆಸರುಗಳು:—**

(೧) ಶ್ರೀಯುತ ಹುಬ್ಬಳ್ಳಿ ನಗರದ ಓರ್ವ ಸುಪ್ರಸಿದ್ಧ ಕವಿಗಳು ೧ ರೂ. (೨) ಶ್ರೀ ಚಂದ್ರಶೇಖರಪ್ಪನವರು ನಾಗಠಾಣ ೫೦ ರೂ. (೩) ಶ್ರೀ ಬಸಪ್ಪನವರು ಚಿವಟಕುಂಡಿ ೫೦ ರೂ. (೪) ಶ್ರೀ ಪರ್ವತಪ್ಪನವರು ಮಿರ್ಜಿ ೫೦ ರೂ. (೫) ಶ್ರೀ ಮಹಾರುದ್ರಪ್ಪನವರು ಮಿರ್ಜಿ ೫೦ ರೂ. (೬) ಶ್ರೀ ವಿರುಪಾಕ್ಷಪ್ಪನವರು ಕುದರಿ ೫೦ ರೂ. (೭) ಶ್ರೀ ಜಂಬುಲಿಂಗಪ್ಪ ಕುಪ್ಪಸ್ತ ೫೦ ರೂ. (೮) ಶ್ರೀ ತೆಂಗಿನಕಾಯಿ ಬಂಧುಗಳು ಸರಾಫ ೫೦ ರೂ. (೯) ಶ್ರೀ ವಿರುಪಾಕ್ಷಪ್ಪನವರು ಬ್ಯಾಹಟ್ಟಿ, ಹೆಬ್ಬಳ್ಳಿ ೫೧ ರೂ. (೧೦) ಶ್ರೀ. ಲಿಂಗೈಕ್ಯ ಗಂಗಪ್ಪನವರು ಈಚಗೇರಿ ೨೫೧ ರೂ. (೧೧) ಶ್ರೀಮತಿ ಗೌರಮ್ಮನವರು ಸಾದರಹಳ್ಳಿ ೫೦೦ ರೂ. ನಿಧಿ ಒಟ್ಟು ೧೧೫೩ ರೂ.

**ಈ ಸಮಾರಂಭಕ್ಕೆ ಬಂದ ಖರ್ಚಿನ ತಪಶೀಲು**

(೧) ಸಮಾರಂಭದ ಪ್ರಕಟನೆಯ ಹಸ್ತಪ್ರತಿಗೆ ೬ ರೂ. (೨) ಅಧ್ಯಕ್ಷ ಹಾಗು ಹಳಕಟ್ಟಿಯವರಿಗೆ ಸರಗಳು ೫ ರೂ. (೩) ನಿಧಿ ಸಮರ್ಪಣೆಗೆ ಒಂದು ಪೆಟ್ಟಿಗೆಗೆ ೪ ರೂ. ೮ ಆ. (೪) ಕಾರಿನ ಪೆಟ್ರೋಲ್ ಬಾಬತ್ತು ಶ್ರೀ ವ್ಹಿ. ಆರ್. ಕರವೀರ ಶೆಟ್ರರಿಗೆ ಕೊಟ್ಟದ್ದು ೩ ರೂ. ೫ ಆಣೆ (೫) ಹಳಕಟ್ಟಿಯವರಿಗೆ ಕರೆಯಿಸಿದ ರೇಲ್ವೆ ಚಾರ್ಜ ೨೦ ರೂ. (೬) ಹಳಕಟ್ಟಿಯವರಿಗೆ ಉಡುಗರೆಯ ಬಾಬತ್ತು. ಒಟ್ಟು ೬೮ ರೂ. ೧೩ ಆಣೆ

ಈ ಸಮಾರಂಭಕ್ಕೆ ಬಂದ ಖರ್ಚನ್ನು ಶ್ರೀ ಮೂರುಸಾವಿರಪ್ಪನವರು ಸಾದರಹಳ್ಳಿ ಇವರು ವೈಯಕ್ತಿಕವಾಗಿ ಕೊಟ್ಟಿರುವರು.

# ಜೀವನ ಮಾರ್ಗ

[ ಲೇಖಕರು:- ಶ್ರೀಯುತ ಭೀ. ಶ್ರೀ. ಕುಲಕರ್ಣಿ, ವಿಜಾಪುರ. ]



ಮಾನವನು ತನ್ನ ಸ್ವಗುಣ ದೋಷಗಳಿಂದಲೇ ಸದಾ ದುಃಖವನ್ನನುಭವಿಸುತ್ತಾನೆ. ಕೊನೆಗೆ ಆತನು ತನ್ನ ಆ ಗುಣದಿಂದ ಮುಕ್ತನಾದರೂ ಕೂಡ ಆ ಗುಣವೇ ಆತನನ್ನು ಆವರಿಸುವಂತೆ ವಿಶ್ವವು ಸದಾಕಾಲ ಹೆಣಗುವದು. ಹೀಗಾಗಿ ಇಡೀ ವಿಶ್ವವೇ ಒಂದು ಕಡೆಯಾದಾಗ ಒಂದು ಚಿಕ್ಕ ಮೆದುಳಿನ ಆಟ ಅದೆಂತು ಸಾಧ್ಯ ? ಆ ಚಿಕ್ಕದಾದ ಒಂದು ಜ್ಞಾನವೇ ಚೊಕ್ಕವಾಗಿದ್ದಲ್ಲಿ ಇಡೀ ವಿಶ್ವವನ್ನೇ ತೂಗಬಲ್ಲದು. ಆದರೆ ಅದು ಅಲ್ಪ ಮಲಿನತೆಯಿಂದ ಜೀವಿಸಿದಲ್ಲಿ ಅದಕ್ಕೆ ಇನ್ನಷ್ಟು ದೋಷಾರೋಪಗಳಾವರಿಸಿ ಬೆಲೆಯಿಲ್ಲದಂತೆ ಮಾಡುವದು.

ವಿಶ್ವದಲ್ಲಿ ಮಾನವನು ಇಷ್ಟೊಂದು ಕಷ್ಟ, ಅನ್ಯಾಯ, ಅಸೂಯೆಗೊಳಗಾಗಿದ್ದು ಕೇವಲ ನಾನು, ನನ್ನದು, ನಮ್ಮವರೆಂಬ ದುರಭಿಮಾನದಿಂದ ಮಾತ್ರ. ಇಂಥ ದುರಭಿಮಾನದ ಮೂಲವನ್ನು ನಾಶಗೊಳಿಸಲು ಅದೆಷ್ಟು ಜನ ಮಹಾಪುರುಷರು ಜನ್ಮನೀಗಿದರೋ ಎಣಿಕೆಯೇ ಇಲ್ಲ. ಆ ಮಹಾಪುರುಷರಳಿದು ಪೋದರೂ ಅವರು ತೋರಿಸಿದ ಮಾರ್ಗಗಳು ಅಳಿಯದೇ ಉಳಿದಿವೆ. ಆ ಮಾರ್ಗದಲ್ಲಿ ಶಾಂತಿ ಸೌಖ್ಯಗಳಿವೆ. ಇದನ್ನರಿಯದೆ ನಾವು ನಿರ್ದಿಷ್ಟಪಡಿಸಿಕೊಂಡ ಗ್ರಾಮಕ್ಕೆ ತೆರಳಬೇಕಾದಲ್ಲಿ ಕವಲು ಮಾರ್ಗಗಳು ಇನ್ನಷ್ಟು ತೀವ್ರತೆಯಿಂದ ನಮ್ಮನ್ನು ನಾವು ನಿರ್ದಿಷ್ಟಪಡಿಸಿಕೊಂಡ ಗ್ರಾಮಕ್ಕೆ ತಲುಪಿಸಬಹುದು. ಆದರೆ ಆ ದಾರಿಯಲ್ಲಿಯ ಕಷ್ಟ ದಾರಿಕಾರನಿಗೇ ಗೊತ್ತು.

ವಿಶ್ವದಲ್ಲಿ ನ್ಯಾಯ ನೀತಿಗಳಿಂದ ನಡೆಯಬಲ್ಲ ಜೀವಿಗಳಿಗೆ ಕಷ್ಟ ಹೆಚ್ಚು. ಅಂಥವರಿಗಾವರಿಸುವ ಕಷ್ಟವು ಕಷ್ಟವೆನಿಸಲಾರದು. ಅದು ಅವರ ಜೀವನ ಚರಿತೆಯನ್ನು ಹಿರಿದಾಗಿಸಲು ವಿಶ್ವವು ಕೊಟ್ಟ ಹಿಡಿಮೆಯೆಂದು ಬಗೆಯಬಹುದು.

ವಿಶ್ವದಲ್ಲಿ ಪ್ರತಿಯೊಂದು ಅಣುರೇಣು ತಿಲಕಾಷ್ಟಗಳಲ್ಲಿಯೂ ಶಕ್ತಿ ಇದೆ. ನಾವು ನುಡಿಯುವ ನುಡಿಯಲ್ಲಿ, ನಡೆಯುವ ನಡೆಯಲ್ಲಿ, ಬರೆಯುವ ಬರಹ

ದಲ್ಲಿಯೂ ಕೂಡ ಶಕ್ತಿಯು ಆವರಿಸಿದೆ. ಒಂದು ನುಡಿಯಿಂದ ಇನ್ನೊಂದು ಎಂಬುದನ್ನು ಪಡೆಯಬಹುದು. ಇನ್ನೊಂದು ನುಡಿಯಿಂದ ಒಂದನ್ನು ದೂರೀಕರಿಸಬಹುದು. ಹೀಗೆ ಅರಿಯದ ನಡೆಯಿಂದಲೇ ಕೋರ್ಟು ಕಚೇರಿಗಳೂ, ಆಡಳಿತವೂ ಪ್ರತಿಯೊಂದು ರಾಷ್ಟ್ರಗಳಲ್ಲಿ ಜನ್ಮಿಸಿವೆ.

ಮಾನವನು ತನ್ನ ಜೀವನದಲ್ಲಿ ಒಳ್ಳೆಯ ಮಾರ್ಗವಿಡಿದು ನಡೆದಲ್ಲಿ ಆತನು ಇನ್ನಿತರರ ಪ್ರೀತಿಗೆ ಪಾತ್ರನಾಗಿ ಪೂಜ್ಯನಾಗುವನು. ಆದರೆ ವಿಶ್ವದಲ್ಲಿ ಹರಿಯುವ ಪ್ರವಾಹವು ತಾನು ಸಾಗುತ್ತಿರುವ ಭೂ ಗುಣವನ್ನು ಅವರಿಸಿಕೊಳ್ಳುವಂತೆ ಒಳ್ಳೆಯ ಗುಣವೇ ಇನ್ನಿತರ ಸಹವಾಸದಿಂದ ಕೆಡಲೂಬಹುದು. ಒಂದು ಸಲ ಮಾಡಿದ ಅಪರಾಧದಿಂದ ದೇವರ ತಲೆಯಮೇಲೇರುವ ಪುಷ್ಪದಂಥ ಜೀವನವು ಕಾಲ್ಕೆಳಗಿನ ಪುಷ್ಪವಾಗಿ ಪರಿಣಮಿಸುವದು. ಅದರಿಂದಾಗಿ ಅದು ಕೊನೆಯುವರೆಗೂ ಮೂಲ ಶಾಸ್ವತ ಸುಖವನ್ನು ಪಡೆಯಲಾರದು.

ವಿಶ್ವದಲ್ಲಿ ಸರ್ವರೂ ಪುರುಳರು, ಸರ್ವರೂ ಅಪರಾಧಿಗಳು, ಸರ್ವರೂ ಹೀನರೆಂದು ಒಂದೊಂದು ಸಲ ನಾವು ಉಲ್ಲೇಖಿಸಬಹುದು. ಆದರೂ ಸರ್ವರೂ ನ್ಯಾಯಾನ್ಯಾಯಗಳನ್ನು ಬೇರೆ ಎಲ್ಲಿಂದ ಕಲ್ಪಿಸಿಕೊಂಡರು? ಇದೆಲ್ಲಿಯ ನ್ಯಾಯು? ಎಂದೂ ನಾವು ವಿಚಾರಿಸಬಹುದು. ವಿಶ್ವದಲ್ಲಿ ಒಂದು ಜೀವವು ಬಾಳಿ ಬದುಕಬೇಕಾದಲ್ಲಿ ಇನ್ನೊಂದು ಜೀವವನ್ನು ನಾಶಪಡಿಸಿಯೇ ಜೀವಿಸುವದುಂಟು. ಆದರೆ ಮಾನವನು ಮಾತ್ರ ತಾನು ಶ್ರೇಷ್ಠನೆಂದೂ ಒಂದು ಜೀವವನ್ನು ನಾಶಪಡಿಸಿಯೇ ಜೀವಿಸುವ ಜೀವನವು ಹೀನವೆಂದು ಬಗೆದುದು ಶ್ರೇಷ್ಠ ಹುಚ್ಚುತನವೇ ಸರಿ. ಒಂದು ಜೀವವು ಇನ್ನೊಂದು ಜೀವವನ್ನು ಒಂದರೆಕ್ಷಣದಲ್ಲಿ ಅದಕ್ಕೆ ತಿಳಿಯದಂತೆ ನಾಶಪಡಿಸಿದರೆ ಮಾನವನು ತನ್ನಂತೆ ತಿಳವಳಿಕೆಯುಳ್ಳ ಜೀವಿಯ ರಕ್ತವನ್ನೇ ತನ್ನ ನ್ಯಾಯುವೆಂಬ ವಸ್ತ್ರದಲ್ಲಿ ಸೋಸಿ ಕುಡಿಯುತ್ತಿರುವದು ಎಷ್ಟೊಂದು ಅನ್ಯಾಯ ? ಪ್ರತಿಯೊಂದು ವ್ಯವಹಾರದಲ್ಲಿಯೂ ಬಡವನ ರಕ್ತವಿದೆ. ಪ್ರತಿಯೊಂಬು ತಿಜೋರಿಗಳೂ ರಕ್ತದ ರಕ್ಷಣೆಗಳಾಗಿವೆ. ಅಂಥ ರಕ್ಷಣೆ ಪಡೆದುಕೊಳ್ಳಬೇಕಾದ ರಕ್ತದ ಜೀವಿಗಳಿಗೆ ಎಂದಿನ ವರೆಗೆ ಸುಖವಿಲ್ಲವೋ ಅಲ್ಲಿಯ ವರೆಗೆ ವಿಶ್ವದ ಈ ನ್ಯಾಯಾನ್ಯಾಯವೆಂಬ ನುಡಿಗೆ ಬೆಲೆ ಇಲ್ಲ. ಹೀಗೆ ನ್ಯಾಯುವು ಅನ್ಯಾಯವಾಗಿಯೂ ಅನ್ಯಾಯವು ನ್ಯಾಯುವಾಗಿಯೂ ಪರಿಣಮಿಸಿದುದಕ್ಕೆ ಮೂಲ ಕಾರಣವಾದುದು ಸ್ವಾರ್ಥತನವೇ ಕಾರಣ. ಈ ಸ್ವಾರ್ಥತನವಾಗಲಿ ಇನ್ನಾವದೇ ಆಗಲಿ ಮರವು

ಬೇರೂರಿ ನಿಂತಂತೆ ನಿಂತಿವೆ. ಒಂದಿಲ್ಲೊಂದು ಭಾಗದಿಂದ ಅದು ಚಿಗುರುತ್ತಲೇ ಸಾಗುವಂಥದಾಗಿದೆ. ಮರವನ್ನು ಬೇರು ಸಹಿತವಾಗಿ ಕಡಿದೊಗೆದಲ್ಲಿ ಅದು ಹೇಗೆ ನಾಶವಾಗುವದೋ ಹಾಗೆ ವಿಶ್ವವೇ ಪ್ರಳಯವಾಗುವ ವರೆಗೆ ಈಗ್ಗೆ ನಡೆದಿರುವ ಜಂಜಾಟ ಯಥಾಪ್ರಕಾರವಾಗಿಯೇ ಸಾಗುವದರಲ್ಲಿ ಸಂದೇಹವಿಲ್ಲ. ವಿಶ್ವವು ಪ್ರಳಯವಾಗುವ ವರೆಗೂ ಬೋಧಿಸುವ ಗುರುಹಿರಿಯರ ನುಡಿಯು ವ್ಯರ್ಥ.. ಲೇಖಕರ ಲೇಖನ ವ್ಯರ್ಥ. ಪ್ರಚುರ ಪಡಿಸುವ ಗ್ರಂಥಗಳ ಕಾಗದಗಳು ವ್ಯರ್ಥ. ಗ್ರಂಥ ಕರ್ತರ ಶ್ರಮವು ವ್ಯರ್ಥವೆಂದು ಹೇಳಿದರೆ ತಪ್ಪಾಗದು. ಆದರೆ ಇಷ್ಟೊಂದಾದರೂ ನಾಗರಿಕತೆಯನ್ನುಳಿಸಿಕೊಂಡು ಬಂದಂಥವರಾದ ಅವರ ಶ್ರಮವು ವ್ಯರ್ಥವೆಂದು ಹೇಳಲು ಹೇಗೆ ಸಾಧ್ಯ? ಅನಂತ ಜನ ಮಹಾಪುರುಷರು, ಸಾಹಿತಿಗಳು ಮುಂತಾದ ಬೋಧಕರಿಂಲೇ ಇಷ್ಟಾದರೂ ನಾಗರಿಕತೆಯು ಅಳಿಯದೆ ಉಳಿದಿದೆ ಇಲ್ಲವಾದರೆ ವಿಶ್ವವೊಂದು ಅನಾಗರಿಕತೆಯ ಆಲಯವಾಗಿಯೇ ಉಳಿಯುತ್ತಿತ್ತು.

ಮಾನವನು ವಿಶ್ವದಲ್ಲಿ ಏನನ್ನೂ ಹೆಚ್ಚಾಗಿ ಇನ್ನಿತರರಿಗೆ ಕೊಡದಿದ್ದರೂ ಉಪದೇಶವನ್ನು ಮಾತ್ರ ಧಾರಾಳವಾಗಿ ಕೊಡಬಲ್ಲನು. ಆದರೆ ಅದನ್ನೂ ಕೂಡ ಬೇರೆ ರೂಪದಿಂದ ಮಾರಿಕೊಳ್ಳುವನು.

ವಿಶ್ವದಲ್ಲಿ ಜನಿಸಿದ ಪ್ರತಿಯೊಂದು ಜೀವವೂ ಒಂದಿಲ್ಲೊಂದು ತೆರದಿಂದ ಉಪಯೋಗಕ್ಕೆ ಬರುವಂಥವುಗಳೇ ಆಗಿವೆ. ಒಂದು ಕೆಲಸವು ಶ್ರೇಷ್ಠ ವ್ಯಕ್ತಿಯಿಂದಾದರೆ ಇನ್ನೊಂದು ಕೆಲಸವು ಕೀಳನಿಂದಾಗುವದು. ಅಂದಮೇಲೆ ವಿಶ್ವದಲ್ಲಿ ಕೀಳು ಮೇಲುಗಳೆಂಬುವುಗಳು ಕೇವಲ ಕಲ್ಪನೆಗಳೇ ಸರಿ. ವಿಶ್ವದ ಮುನ್ನಡೆಗೆ ಕೀಳು ಮೇಲುಗಳೂ ನ್ಯಾಯಾನ್ಯಾಯಗಳೂ ಸಾಧನಗಳಾಗಿವೆ.

ಒಂದು ಗ್ರಾಮವನ್ನು ತಲುಪುವದಕ್ಕಾಗಿ ಅನೇಕ ಮಾರ್ಗಗಳು ಇರುವಂತೆ ಈ ಜೀವನು ಜೀವನದಿಂದ ಮುಕ್ತನಾಗಿ ಹೋಗುವದಕ್ಕೆ ವಿಶ್ವದಲ್ಲಿ ಅನೇಕ ಮಾರ್ಗಗಳಿವೆ. ಆಯಾ ಮಾರ್ಗಗಳಲ್ಲಿರುವ ವಿಘ್ನಗಳು ಆತನನ್ನು ಆವರಿಸದೇ ಬಿಡವು.

ವಿಶ್ವದಲ್ಲಿ ಜನಿಸಿದಾರಭ್ಯದಲ್ಲಿ ಇರುವ ಶಕ್ತಿ, ಜ್ಞಾನಗಳನ್ನೇ ನಾವು ಮರಳಿ ಪೋಗುವಾಗ್ಗೆ ಒಯ್ಯುವೆವಲ್ಲದೆ ವಿಶ್ವದಿಂದ ಪಡೆದ ಹೊಗಳಿಕೆ ತೆಗಳಿಕೆಗಳೆಂಬ ಶಬ್ದಗಳನ್ನು ಮಾತ್ರ ಸಂಗಡ ಒಯ್ಯುವ ವಸ್ತುವನ್ನಾಗಿ ಭಾವಿಸಿ ಡಿಸಿಕೊಳ್ಳುತ್ತೇವೆ. ನಿಜವಾಗಿ ವಿಚಾರಿಸಿದಲ್ಲಿ ಅವುಗಳನ್ನಾದರೂ ನಾವು

ಒಯ್ಯುವವು. ಹೀಗೆ ಈ ವಿಶ್ವದಿಂದ ಪಡೆದ ಶಕ್ತಿ, ಜ್ಞಾನಗಳನ್ನು ಕೂಡ ಒಯ್ಯುದ ಈ ಜೀವಕ್ಕೆ ಇಷ್ಟೇಕೆ ಆತುರವೋ ನಾನು ನನ್ನದೆಂಬುದಕ್ಕೆ ? ಕೊನೆಗೆ ಅದು ತನ್ನ ಪ್ರಾಯಶ್ಚಿತ್ತವನ್ನು ಅನುಭವಿಸಲೋಸುಗವೇ ಕಾರಣವಾಗಿ ಕಾಣುತ್ತಿ.

ಜೀವನದಲ್ಲಿ ಅನಂತ ಹಾಸ್ಯಕಾರಕ ಘಟನೆಗಳು ನಮಗೆ ತೋರಿಬರುತ್ತವೆ. ವಿಶ್ವನಿಯಮಕ್ಕನುಸಾರವಾಗಿ ಜನಿಸಿದಾರಭ್ಯದಲ್ಲಿ ಇರುವ ಸ್ಥಿತಿಯೇ ಮರಳಿ ಪೋಗುವಾಗ್ಗೆ ಉಳಿದಿರುವ ಕಾರಣ ತನ್ನ ಸುತ್ತಮುತ್ತಲಿರುವ ಜನವನ್ನು ಈಕ್ಷಿಸದೆ ಶಿಶುವಿನಂತೆ ಜೀವವು ಈ ದೊಡ್ಡದಾದ ದೇಹವಲ್ಲಿ ಕಾರ್ಯ ನಡೆಸದಾಗದುದಕ್ಕೆ ಭ್ರಮೆ ಹಿಡಿದವರಂತೆ, ಅಕ್ಷುವಿನಲ್ಲಿಯೇ ಸರ್ವ ಜೀವವನ್ನೇ ತಳೆದು ಕೊನೆಗೆ ಈ ಜಡದೇಹದಿಂದ ಮುಕ್ತನಾಗುತ್ತಲಿರುವಾಗ್ಗೆ "ರಾಮ-ರಾಮ''ನೆನ್ನು "ಶಿವ-ಶಿವ"ನೆನ್ನು ಎಂಬ ನುಡಿಯನ್ನು ಕಲಿಸಹೋಗುತ್ತಾರೆ ಹಾಗೆ ಅನ್ನುವದರಿಂದ ಏನು ಫಲವೋ ಅದಾರಿಗೆ ಗೊತ್ತು? ಇದನ್ನು ಹಲವರಲ್ಲಿ ವಿಚಾರಿಸಿದರೆ ಹಲವು ತೆರನಾಗಿ ಹೇಳುವದುಂಟು. ಇದೆಲ್ಲವೂ ಮರುಳತನ. ಆ ಚಿಕ್ಕ ಜೀವಕ್ಕೆ ಜೀವವೆನ್ನುವದೇ ತಪ್ಪು.

ಸುಖದುಃಖಗಳ ಸಂಗಮವಾಗಿರುವ ಈ ವಿಶ್ವದಲ್ಲಿ ಮಾನವನಿಗೆ ದುಃಖಪರಿಸಲು ಆತನು ಪೂರ್ವಜನ್ಮದ ಪಾಪದ ಫಲವೆಂದು ಬಗೆಯುವದು ಶುದ್ಧ ತಪ್ಪು. ಇದೇ ಜನ್ಮದ ಬಾಲ್ಯಾವಸ್ಥೆಯಲ್ಲಿಯ ನಮ್ಮ ಸ್ಥಿತಿಯನ್ನು ನಾವರಿಯದ ಮೇಲೆ ಹಿಂದಿನ ಜನ್ಮದಗೊಡವೆ ನಮಗೇಕೆ ? ಮುಂದಿನ ಜನ್ಮದ ಆಶೆಯಾದರೂ ನಮಗೇಕೆ ? ಈಗಿನ ಜನ್ಮದಲ್ಲಿಯಾದರೂ ಯಾವ ಸೌಖ್ಯವಿದೆ ? ಹುಟ್ಟಿ ಬಂದುದಕಾಗಿ ನೀತಿಯನ್ನರಿತು ಸಾಗುವ ಮಾರ್ಗವೇ ಜೀವನ ಮಾರ್ಗ.

ಮಾನವನು ವಿಶ್ವದಲ್ಲಿ ಅನಂತದಾರಿಗಳಿಂದ ಸಾಗಿರಬಹುದು. ಆದರೆ ತಾನರಿಯದ ದಾರಿಯಿಂದ ಸದಾ ತಾನು ಸಾಗದೇ ಸಾಗುತ್ತಿರುತ್ತಾನೆ ತಾನು ಸಾಗದೇ ಸಾಗುತ್ತಿರುವ ಗ್ರಾಮವು ಸಮೀಪಿಸಿದ್ದಾಗ್ಗೆ ಭಯಗೊಳ್ಳುವನೆಂದು ಪರಮಾತ್ಮನು ಆತನಿಗೆ ಆ ಮಾರ್ಗವನ್ನು ಹಾಗು ಗ್ರಾಮವನ್ನು ಆತನಿಗೆ ತಿಳಿಯುವಂತೆ ಮಾಡಿಲ್ಲ. ಹೀಗಾಗಿ ಅರಿಯದ ಗ್ರಾಮ ಅರಿಯದ ಮಾರ್ಗದಲ್ಲಿ ಅರಿಯದೇ ಸಾಗಿದ್ದಾನೆ. ಈ ಮಾರ್ಗವನ್ನು ಲಕ್ಷಿಸಿ, ಲೋಕೋಪಯುಕ್ತ ಕಾರ್ಯಾಚರಣೆಯಲ್ಲಿ ಕಾಲ್ಕಳೆಯುವ ಜೀವನವೇ ಶ್ರೇಷ್ಠ ಜೀವನ. ಆ ಮಾರ್ಗವನ್ನನುಸರಿಸಿ ನಡೆಯುವದೇ ಜೀವನದಲ್ಲಿಯ ಹಿರಿದಾದ ಮಾರ್ಗ.

# ಧಾರವಾಡ ಸರಕಾರಿ ಟ್ರೇನಿಂಗ ಕಾಲೇಜದ ಶತಸಾಂವತ್ಸರಿಕೋತ್ಸವದ

# ಉದ್ಘಾಟಕರ ಭಾಷಣ.



## ಕನ್ನಡದ ಉಳಿವು ಬಳವಿಯಲ್ಲಿ ಟ್ರೇನಿಂಗ ಕಾಲೇಜ.

೧೯ನೆಯ ಶತಮಾನದ ಮಧ್ಯದಲ್ಲಿ ರಾಜಕೀಯ ವಿಪ್ಲವಗಳಿಂದ ಕನ್ನಡಕ್ಕೆ ಕಗ್ಗತ್ತಲೆಯ ಕಾಲವೊದಗಿತ್ತು. ಮುಂಬೈಯಾದಿ ಪ್ರಾಂತಗಳಲ್ಲಿ ಸೇರ್ಪಡೆಯಾದ ಕನ್ನಡವು ಅನ್ಯ ಭಾಷೆಗಳ ವರ್ಚಸ್ಸಿನ ಪೆಟ್ಟಿಗೆ ಬಲು ನುಗ್ಗಾಯಿತು. ಆದರೆ ಅದನ್ನರಿತ ಕನ್ನಡ ಮಾತೆಯ ಸುಪುತ್ರರಾದ ದಿ. ವಿರುಪಾಕ್ಷಪ್ಪ ಹೂಲಿ, ಕೈ. ಡೆಪ್ಯೂಟಿ ಚನ್ನಬಸಪ್ಪನವರ ಪ್ರಭಾವದಿಂದ ಕನ್ನಡ ಮಾತೆಯ ಪ್ರಾಣ ಉಳಿಯಿತು. ಅದರ ಪರಿಣಾಮವಾಗಿ ಇಂದಿನ ಟ್ರೇನಿಂಗ ಕಾಲೇಜವು ನಿಂತಿದ್ದು ಕನ್ನಡ ಮಾತೆಯ ಭಾಷಾ ಪ್ರಾಣ ಉಳಿಯಲು ಈ ಟ್ರೇನಿಂಗ ಕಾಲೇಜವು ಸಂಜೀವಿನಿಯೆಂದರೂ ಸರಿಯೆ! ಏಕೆಂದರೆ ಈ ಟ್ರೇನಿಂಗ ಕಾಲೇಜದ ಶತ ಸಂವತ್ಸರದ ಇತಿಹಾಸವೆಂದರೆ ಪರ್ಯಾಯದಿಂದ ಕನ್ನಡ ಭಾಷಾ ಪ್ರಗತಿಯ ಇತಿಹಾಸವೆಂದು ಹೇಳಲು ಅಡ್ಡಿ ಇಲ್ಲ. ಮುಂಬೈ ಕರ್ನಾಟಕದಲ್ಲಿಯೇ ಹೊಸದಾಗಿ ನಾರ್ಮಲ್ ಕ್ಲಾಸವೆಂಬ ಸಂಸ್ಥೆಯು ೧೮೫೭ ರಲ್ಲಿ ಸ್ಥಾಪಿತವಾಯಿತು. ನಾರ್ಮಲ್ ಕ್ಲಾಸವೆಂದರೆ ಶಿಕ್ಷಕರಿಗೆ ಶಿಕ್ಷಣದಲ್ಲಿ ತರಬೇತಿ ಕೊಡುವ ವರ್ಗವು ಅದುವೇ ಈ ಗಂಡು ಮಕ್ಕಳ ಟ್ರೇನಿಂಗ ಕಾಲೇಜದ ಉಗಮಸ್ಥಾನವು. ನಾರ್ಮಲ್ ಕ್ಲಾಸದಲ್ಲಿ ಮೊದಲನೆಯ ವರ್ಷ ೧೦ ವಿದ್ಯಾರ್ಥಿಗಳಿದ್ದು ಎರಡನೆಯ ವರ್ಷ ಅದರ ಸಂಖ್ಯೆಯು ೨೦ ರ ವರೆಗೆ ಬೆಳೆಯಿತು. ಕಾರಣಾಂತರದಿಂದ ನಾರ್ಮಲ್ ಸ್ಕೂಲು ಬೆಳಗಾಂವಿಗೆ ಹೋದ ಮೇಲೆ ಪುನಃ ಅದರ ಸಂಖ್ಯೆಯು ಕಡಿಮೆ ಆಗಿ ೧೨ ಕ್ಕೆ ಇಳಿಯಿತು. ಮತ್ತೆ ಹೊಸ ಯೋಜನೆಯ ಪ್ರಕಾರ ವಿದ್ಯಾರ್ಥಿಗಳ ಸಂಖ್ಯೆಯು ಬೇರೆ ಪ್ರಾಂತಗಳ ನಾರ್ಮಲ್ ಸ್ಕೂಲಗಳಲ್ಲಿ ಹೆಚ್ಚಾದಂತೆ ಕಂಡರೂ ಧಾರವಾಡದಿಂದ ಸ್ಥಳಾಂತರಿಸಿದ ಬೆಳಗಾಂವಿಯ ಸ್ಕೂಲಿನಲ್ಲಿ ಮಾತ್ರ ಹೆಚ್ಚಿನ ಪರಿಣಾಮವೇನೂ ಆಗಲಿಲ್ಲವೆಂದು ಆಗಿನ ವರದಿಗಳಿಂದ ತಿಳಿದುಬರುತ್ತಿದೆ. ಆಗ

ಕನ್ನಡ ಶಿಕ್ಷಣಕ್ಕೆ ಆಕರ್ಷಿಸಲ್ಪಟ್ಟ ತರುಣರು ಸಾಕಷ್ಟಿರಲಿಲ್ಲವೆಂದು ಹೇಳಬಹುದಾಗಿದೆ. ೧೮೫೬ ರಿಂದ ೧೮೬೧ ರ ವರೆಗೆ ಈ ನಾರ್ಮಲ್ ಸ್ಕೂಲಿನಲ್ಲಿ ಹೆಚ್ಚಾಗಿ ಮರಾಠಿ ವಿದ್ಯಾರ್ಥಿಗಳೇ ಇದ್ದರೆಂದು ಅದೇ ವರದಿಗಳಿಂದಲೇ ಗೊತ್ತಾಗುತ್ತದೆ. ಕನ್ನಡ ಶಾಲೆಗಳಿಗೆ ಶಿಕ್ಷಕರನ್ನು ತಯಾರಿಸುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಈ ತರಬೇತಿ ಕೇಂದ್ರದಲ್ಲಿ ಕನ್ನಡ ಉಮೇದವಾರರಿಲ್ಲದೆ ಇದ್ದುದು ವಿಷಾದ ಸಂಗತಿಯೇ ಸರಿ. ಹೀಗಾಗಿ ಕನ್ನಡಿಗರಿಗೆ ಈ ಸ್ಕೂಲು ಇದ್ದೂ ಇಲ್ಲದಂತಾಯಿತು. ಇಂಥ ಜೀವನ್ಮೃತ ಸ್ಥಿತಿಯಲ್ಲಿರುವ ನಾರ್ಮಲ್ ಸ್ಕೂಲಿಗೆ ಉಜ್ವಲ ಕನ್ನಡಾಭಿಮಾನಿಗಳಾದ ಕೈ. ಡೆ. ಚನ್ನಬಸಪ್ಪನವರು ಪ್ರಥಮ ಪ್ರಿನ್ಸಿಪಾಲರಾಗಿ ಬಂದ ಮೇಲೆ ಕನ್ನಡ ಕುಲೋದ್ಧಾರದ ಕಾರ್ಯವು ತೀವ್ರಗತಿಯಿಂದ ಪ್ರಾರಂಭವಾಯಿತು. ಅವರು ನಾರ್ಮಲ್ ಸ್ಕೂಲಿಗೆ ಮುಖ್ಯಾಧ್ಯಾಪಕರಾಗಿ ದೊರೆತುದುದು ಕನ್ನಡದ ಭಾಗ್ಯೋದಯವೆಂದೇ ಹೇಳಬೇಕು. ಈ ಟ್ರೇನಿಂಗ ಕಾಲೇಜಕ್ಕೆ ಒಂದು ಶತಮಾನದ ವರೆಗೆ ಕನ್ನಡಿಗರಿಗೆ ಸೇವೆ ಸಲ್ಲಿಸುವ ಉಜ್ವಲವಾದ ದೀರ್ಘಾಯುಷ್ಯ ಬಂದುದು ಚನ್ನಬಸಪ್ಪನವರ ಅವಿಶ್ರಾಂತ ಶ್ರಮವೇ ಎಂದು ಹೇಳಬಹುದು. ಅವರು ಪ್ರಥಮ ಪ್ರಿನ್ಸಿಪಾಲರಾಗಿ ಬಂದಾಗ್ಗೆ ಸ್ಕೂಲಿನಲ್ಲಿ ೯ ವಿದ್ಯಾರ್ಥಿಗಳೇ ಇದ್ದುದಲ್ಲದೆ ಜಿಲ್ಹೆಯಲ್ಲಿ ಹನ್ನೆರಡೇ ಕನ್ನಡ ಶಾಲೆಗಳಿದ್ದವು. ಇದನ್ನು ಕಂಡು ತಳಮಳವುಳ್ಳವರಾಗಿ ಉಪವಾಸವೇ ಊಟವೆಂದೂ, ಬಿಸಿಲೇ ಬೆಳದಿಂಗಳೆಂದೂ, ಕಾಯಕವೇ ಕೈಲಾಸವೆಂದೂ ತಮ್ಮ ಜೀವನದ ಸೂತ್ರವಾಗಿ ತಿಳಿದುಕೊಂಡು ದುಡಿದರು. ಅವರ ದೀರ್ಘ ಪ್ರಯತ್ನದಿಂದ ನಾರ್ಮಲ್ ಸ್ಕೂಲು ಕಾಲೇಜವಾಗಿ ನೂರಿನ್ನೂರರ ವರೆಗೆ ವಿದ್ಯಾರ್ಥಿಗಳ ಸಂಖ್ಯೆ ಬೆಳೆದು ಜಿಲ್ಹೆಯಲ್ಲಿ ೩೪೧ ಕನ್ನಡ ಶಾಲೆಗಳಾದವೆಂಬುದನ್ನು ತಿಳಿದರೆ ಎಲ್ಲರಿಗೂ ಅವರ ಯೋಗ್ಯತೆಯ ಅರಿವು ಸಹಜವಾಗಿಯೇ ಆಗುವದು. ಮುಂದೆ ಅವರಂತೆಯೇ ವೆಂಕಟರಂಗೋ ಕಟ್ಟಿಯವರು, ಗಂಗಾಧರ ಮಡಿವಾಳೇಶ್ವರರು, ದಿವಾನ್‌ಬಹಾದ್ದೂರ ರೊದ್ದರಾಯರು, ಮುಂದೆ ಶಿಕ್ಷಣ ಮಂತ್ರಿಗಳಾದ ಸರ್ ಎಸ್. ಟಿ. ಕಂಬಳಿಯವರೇ ಮೊದಲಾದವರು ಕಾಲೋಚಿತವಾಗಿ ಕಾಲೇಜದ ಪ್ರಗತಿಗೆ ಪ್ರಯತ್ನ ಮಾಡುತ್ತ ಬಂದುದರಿಂದಲೇ ಇಂದು ಕರ್ನಾಟಕದಲ್ಲಿಯೇ ಸರ್ವಾಂಗಸುಂದರವಾಗಿ ಬೆಳೆದ ಈ ಟ್ರೇನಿಂಗ ಕಾಲೇಜು ಕನ್ನಡವನ್ನುದ್ಧರಿಸಿದ ಅನೇಕ ಮಹನೀಯರನ್ನು ನಾಡಿಗೆ ನೀಡಿತು. ಇಂತಹ ಈ ಕಾಲೇಜವು ಅವ್ಯಾಹತವಾಗಿ ಸಾಗಿ ಬಂದು ಈಗ

ಆದರ ಶತಮಾನೋತ್ಸವವು ಜರುಗುತ್ತಿರುವದನ್ನು ನೋಡಿದರೆ ಯಾವ ಕನ್ನಡಿಗನಿಗೆ ಅಭಿಮಾನವು ಉಕ್ಕಿಬರಲಿಕ್ಕಿಲ್ಲ ? ಯಾವನಿಗೆ ಹೆಮ್ಮೆ ಎನಿಸಲಿಕ್ಕಿಲ್ಲ?

**? ಕ್ಷಣವೇ ಜೀವನದ ಅ[illegible].**

ಮಾನವನಿಗೆ ಮನುಷ್ಯತ್ವವು ಪ್ರಾಪ್ತವಾಗಬೇಕಾದರೆ ಶಿಕ್ಷಣವು ಅತ್ಯವಶ್ಯಕವಾಗಿರಬೇಕು. ಶಿಕ್ಷಣವೆಂದರೆ [illegible]ಸ್ಸು, ಬುದ್ಧಿ, ದೇಹಾದಿಗಳಿಗೆ ದೊರೆಯುವ ಸುಸಂಸ್ಕಾರವು. ಇಂತಹ ಸಂಸ್ಕಾರವು ಮನುಷ್ಯನಿಗೆ ಸಕಾಲದಲ್ಲಿ ದೊರೆಯದಿದ್ದರೆ ಅವನು ಸುಖ ಶಾಂತಿಗಳನ್ನನುಭವಿಸಲು ಸಾಧ್ಯವೇ ಇಲ್ಲ. ವ್ಯಕ್ತಿಯು ದೇಹ, ಬುದ್ಧಿ ಮತ್ತು ಆತ್ಮಗಳ ತ್ರಿಕೂಟವಾಗಿದ್ದಾನೆ. ಈ ತ್ರಿಕೂಟದ ಸಮ ಪ್ರಮಾಣದ ವಿಕಾಸವೇ ಶಿಕ್ಷಣದ ಪರಮ ಧ್ಯೇಯವಾಗಿದೆ. ಇವುಗಳಲ್ಲಿ ಒಂದು ಅಂಗ ಬೆಳೆಯದಿದ್ದರೂ ಶಿಕ್ಷಣವು ಅಪೂರ್ಣವೆನಿಸುತ್ತದೆ.

ಮನುಷ್ಯನು ಪಶುಪಕ್ಷಿಗಳಂತೆ ಕೇವಲ ಜನ್ಮವಿಶಿಷ್ಟವಾದ ಬುದ್ಧಿ ಸ್ವಭಾವಗಳಿಗೆ ಅನುಸರಿಸಿ ನಡೆಯತಕ್ಕವನಲ್ಲ. ಮೀನವು ಗೀಜಗ ಪಕ್ಷಿಯಂತೆ ಗೂಡು ಕಟ್ಟುವದನ್ನು ಕಲಿಯಲಾರದು. ಅದರಂತೆ ಗೀಜಗ ಪಕ್ಷಿಯು ಮೀನಿನಂತೆ ಈಸಲು ಕಲಿಯಲಾರದು. ಆದರೆ ಮನುಷ್ಯನು ಗೀಜಗನ [illegible] ಗೂಡು ಕಟ್ಟ ಬಲ್ಲ; ಮೀನಿನಂತೆ ಈಸಬಲ್ಲ. ಆಕಳು ಹುಲಿಯಂತೆ ಕ್ರೂರ ಪ್ರಾಣಿಯಾಗದು ಅದರಂತೆ ಹುಲಿಯೂ ಆಕಳಿನಂತೆ ಸಾಧು ಪ್ರಾಣಿಯಾಗಿರದು, ಆದರೆ ಮನುಷ್ಯನು ಹುಲಿಗಿಂತ ಕ್ರೂರನೂ, ಗೋವಿಗಿಂತ ಸಾಧು ಪ್ರಾಣಿಯೂ ಆಗಿರಲುಬಲ್ಲನು. ಆದ ಕಾರಣ ಮನುಷ್ಯೇತರ ಪ್ರಾಣಿಗಳಂತೆ ಮಾನವನ ಬುದ್ಧಿ ಗುಣ, ಸಾಮರ್ಥ್ಯಗಳು ಕೀಳುಮಟ್ಟದವಲ್ಲ. ಅಂದರೆ ಆತನಲ್ಲಿ ಸಹಜ ಪ್ರವೃತ್ತಿಗಳು ಮೇಲ್ಮೆಗೊಳ್ಳುವ ಪರಿಸ್ಥಿತಿ ( Sublimation of instincts ) ಯಿದೆ. ಅಂದರೆ ಮಾನವನ ಸಹಜ ಪ್ರವೃತ್ತಿಗಳು ಉತ್ತಮಗೊಳ್ಳುವವಾಗಿರುತ್ತವೆ. ಇದು ಯೋಗ್ಯ ಶಿಕ್ಷಣದಿಂದಲೇ ಸಾಧ್ಯ. ಇಂತಹ ಶಿಕ್ಷಣದಿಂದ ಅವುಗಳನ್ನು ಬೇಕಾದ ರೀತಿಯಲ್ಲಿ ಬೆಳಸಿಕೊಳ್ಳಲು ಶಕ್ಯವಿದೆ.

ಯಾರು ಸಕಾಲದಲ್ಲಿ ಶಿಕ್ಷಣವನ್ನು ಪಡೆದಿರುವದಿಲ್ಲವೋ ಅಂತಹವರ ಜೀವನವು ವ್ಯರ್ಥವು.

> ಶುನಃ ಪುಚ್ಛಮಿವ ವ್ಯರ್ಥಂ ಜೀವಿತಂ ವಿದ್ಯಯಾ ವಿನಾ ।
> ನ ಗುಹ್ಯ ಗೋಪನೇ ದಕ್ಷಂ ನಚ ದಂಶ ನಿವಾರಣೇ ।

ಎಂಬ ಶ್ಲೋಕಾರ್ಥವೂ ಕೂಡ ವಿದ್ಯೆ ಇಲ್ಲದವನು ಶುನಗನ ಬಾಲದಂತೆ ನಿರರ್ಥಕನಾಗುವದು. ಗುಹ್ಯಸ್ಥಾನ ಮುಚ್ಚಿಕೊಳ್ಳುವದಕ್ಕಾಗಿ ಮತ್ತು ದಂಶ ನಿವಾರಣೆಗಾಗಿ ಪಶುಗಳಿಗೆ ಬಾಲವಿರುವದು. ಆದರೆ ಇವೆರಕ್ಕೂ ನಾಯಿಯ ಬಾಲವು ಉಪಯೋಗಬೀಳುವದಿಲ್ಲ. ಆದುದರಿಂದ ಶಿಕ್ಷಣವೇ ಜೀವನದ ಜೀವಾಳವಿರುವದು. ಪ್ರತಿಯೊಂದು ದೇಶದ ಘನತೆ, ಮಹೋನ್ನತಿ, ಸಂಸ್ಕೃತಿಗಳ ಆದರ್ಶವು ಆ ದೇಶದ ಜನಾಂಗದ ಶಿಕ್ಷಣದ ತಳಹದಿಯ ಮೇಲೆಯೇ ಅವಲಂಬಿಸಿದೆ ಎಂದು ಬೇರೆ ಹೇಳಬೇಕಾಗಿಲ್ಲ. "Education is the foundation of life" ಎಂಬ ಆಂಗ್ಲ ಪಂಡಿತನೊಬ್ಬನ ಹೇಳಿಕೆಯು ನಿಜವಾಗಿದೆ.

## ಶಿಕ್ಷಣವು ಸಜೀವ ಶಿಕ್ಷಣವಾಗಿರಬೇಕು.

ಈಗ ಸ್ವತಂತ್ರ ಭಾರತದಲ್ಲಿ ಶಿಕ್ಷಣ ಕಾರ್ಯವು ಬಹು ಭರದಿಂದಸಾಗಿದೆ. ಒತ್ತಾಯದ ಶಿಕ್ಷಣ, ಪ್ರೌಢ ಶಿಕ್ಷಣ, ಬಾಲ ಶಿಕ್ಷಣ, ಸ್ತ್ರೀ ಶಿಕ್ಷಣ, ಕುರುಡರ, ಮೂಕರ ಶಿಕ್ಷಣಗಳು ನಡೆದಿವೆ. ಆದರೆ ಮನುಷ್ಯನಲ್ಲಿ ನಿಜವಾದ ಮಾನವತೆಯನ್ನು ಎಚ್ಚರಗೊಳಿಸುವ ಶಿಕ್ಷಣವು ನಡಿದಿದೆಯೇ ಎಂದು ಪ್ರಶ್ನಿಸಬಹುದಲ್ಲವೆ? ನಿಜವಾದ ಮಾನವತೆಯು ಅರಳದ ಹೊರತು ಶಾಶ್ವತವಾದ ಸುಖ ಶಾಂತಿ ಸಮಾಧಾನಗಳು ದೊರೆಯಲು ಸಾಧ್ಯವಿಲ್ಲ.

ಸ್ವಾತಂತ್ರ್ಯ, ಸ್ವರಾಜ್ಯಗಳನ್ನು ಎಷ್ಟೋ ವರ್ಷಗಳ ಹಿಂದೆಯೇ ದೊರಕಿಸಿಕೊಂಡ ಪರರಾಷ್ಟ್ರಗಳಲ್ಲಿ ಇಂದು ಸುಖ ಶಾಂತಿಗಳು ನೆಲೆಸಿರುವವೆ? ಅದರಂತೆ ನೂರಕ್ಕೆ ನೂರು ಜನ ಸಾಕ್ಷರರಾದ ದೇಶಗಳಲ್ಲಿ ಶಾಂತಿಮಯ ಜೀವನವು ಸಾಗಿದೆಯೆ ? ಎಲ್ಲೆಲ್ಲೂ ಕಳವಳ, ಅಸಹನೆ, ಅಶಾಂತತೆಗಳ ಕುತ್ತುಸುರುಗಳೇ ಕಾಣುತ್ತಿವೆ. ಸಾಕ್ಷರತೆಯಿಂದ ಮಾನವತೆ ಅರಳದಿದ್ದರೆ ಅದು ನಿರಕ್ಷರತೆಗಿಂತಲೂ ಭಯಂಕರವಾದಂತೆಯೇ ಎಂ.

ಸಾಕ್ಷರಾ ವಿಪರೀತಾಶ್ಚೇತ್ ರಾಕ್ಷಸಾ ಏವ ಕೇವಲಂ ।

ಎಂಬ ಶಾಸ್ತ್ರೋಕ್ತಿಯಂತೆ ರಾಕ್ಷಸವೃತ್ತಿಯೇ ಪ್ರಾರಂಭವಾಗಿ ದೇಶವೇ ರಸಾತಳಕ್ಕೆ ಇಳಿಯುವದು. ಆದುದರಿಂದ ವಿದ್ಯೆಯು ಕೂಡ ವಿಚಾರ ಬೆಳೆದು ಬರಬೇಕೆಂಬುದನ್ನು ಸುಶಿಕ್ಷಿತರೆಲ್ಲರೂ ನೆನಪಿಟ್ಟುಕೊಂಡಿರಬೇಕು. ವಿದ್ಯೆಯಿಂದ, ಭೌತಿಕ ವಿಜ್ಞಾನದಿಂದ, ಚಂದ್ರಾದಿ ಗ್ರಹಗಳವರೆಗೂ ಉಪಗ್ರಹಗಳನ್ನು ಕಳಿಸುವ ಸಾಮರ್ಥ್ಯ ಬಂದುದೂ ವಿಶ್ವವಿದ್ಯಾಲಯಗಳು ಇಮ್ಮಡಿ, ಮುಮ್ಮಡಿ,

ಪದವೀಧರರನ್ನು ಮಾಡುತ್ತಿರುವದೂ, ಸಾಕ್ಷರತೆಯ ಪರಿಣಾಮವಾದರೂ ನಿಜವಾದ ಮಾನವತೆಯನ್ನು ವಿಕಾಸಗೊಳಿಸಿಲ್ಲ. ಸಹನಾವವತು ಸಹನೌಭುನಕ್ತು ಎಂದು ಶ್ರುತಿಯು ಸಾರುತ್ತಿದ್ದರೂ ವಿದ್ಯಾವಂತರು ಹೆಚ್ಚಿದಷ್ಟು ಒಬ್ಬರಿಂದೊಬ್ಬರು ದೂರಾಗುತ್ತಾರೆಯೇ ಹೊರತು ಹತ್ತಿರವಾಗುತ್ತಿರುವದಿಲ್ಲ. ಸ್ವಾರ್ಥ, ಅತ್ಯಾಶೆ, ಅನರ್ಥ ಮೊದಲಾದ ಮಾನವತೆಯ ಅಪೂರ್ಣ ಲಕ್ಷಣಗಳೇ ಎದ್ದು ಕಾಣುತ್ತಿವೆ. ಮೊದಲು ಬ್ರಿಟಿಶರನ್ನು ಭಾರತದಲ್ಲಿ ಬೇರು ಬಿಡುವಂತೆ ಮಾಡಿದವರು ಸಾಕ್ಷರಿಗಳೋ, ನಿರಕ್ಷರಿಗಳೋ ? ಕೊನೆಯವರೆಗೂ ರಾಜನಿಷ್ಠರಾಗಿದ್ದು ಬ್ರಿಟಿಶರು ಯಾವಾಗಲೂ ಇಲ್ಲಿರಬೇಕೆಂದು ಹವಣಿಸಿದವರು ಸಾಕ್ಷರಿಗಳಲ್ಲವೆ? ಜಾತಿಜಾತಿಗಳಲ್ಲಿ ಜಗಳಗಳನ್ನು ಹುಟ್ಟಿಸಿದವರು ಹುಟ್ಟಿಸುತ್ತಿರುವವರು ಸಾಕ್ಷರಿಗಳಲ್ಲವೇ ? ಮಹಾತ್ಮಾ ಗಾಂಧೀಜಿ ಮೊದಲಾದ ಸತ್ಪುರುಷರನ್ನು ಕೊಲೆ ಮಾಡಿದವರು ಸಾಕ್ಷರಿಗಳಲ್ಲವೇ ? ಸ್ವರಾಜ್ಯ ಸ್ವಪ್ರಾಂತ ದೊರಕಿದ್ದರೂ, ಅದು ಸುರಾಜ್ಯವಾಗುವಂತೆ ಪ್ರಯತ್ನ ಮಾಡದೆ ಪಕ್ಷ ಪಂಗಡಗಳನ್ನು ಕಟ್ಟಿಕೊಂಡು ಹೊಡೆದಾಟ ಬಡಿದಾಟಗಳನ್ನು ನಡಿಸಿರುವವರು ಸಾಕ್ಷರಿಗಳಲ್ಲವೇ ? ಶಾಂತಿಯು ಕೇವಲ ಸಾಕ್ಷರತೆಯಿಂದ ಸಿಗದೆ ಶೀಲಯುಕ್ತ ಶಿಕ್ಷಣದಿಂದ, ನಿಜವಾದ ಮಾನವತೆಯಿಂದ ದೊರೆಯುವದು. ಶಿಕ್ಷಣವೆಂದರೆ ಮಾನವನ ವ್ಯಕ್ತಿತ್ವವನ್ನು ರೂಪಿಸಿಕೊಟ್ಟು ಅವನ ಒಳಗಣ್ಣನ್ನು ಅರಳಿಸಿ, ಅವನಲ್ಲಿ ಸಮತೆ, ಸ್ವಾವಲಂಬನಗಳಳವಡುವಂತೆ ಮಾಡುವದಾಗಿರುವದು. ಸಜೀವ ಶಿಕ್ಷಣದಿಂದ ವಿಶಾಲವಾದ ವಿಚಾರಗಳುಳ್ಳ ಯೋಗ್ಯ ಜನಾಂಗವನ್ನು ನಿರ್ಮಾಣಮಾಡಲು ಭಾರತಕ್ಕಿದ್ದಷ್ಟು ಸಂಸ್ಕೃತಿಯು ಇನ್ನಾವ ದೇಶಕ್ಕೂ ಇರುವದಿಲ್ಲ. ಆದರೆ ನಾವು ಪಾಶ್ಚಾತ್ಯರ ಅನುಕರಣೆ ಮಾಡಿ, ಬಡವ ಬಲ್ಲಿದರಲ್ಲಿ ಭೇದ ಹುಟ್ಟಿಸಿ ಹಳ್ಳಿಗರನ್ನು ಸುಲಿಯುವದಕ್ಕಾಗಿ ಬ್ರಿಟಿಶರು ರಚಿಸಿರುವ ಫ್ಯಾಕ್ಟರಿಗಳೆಂದು ಗಾಂಧೀಜಿಯವರು ಹೇಳಿದ ಶಿಕ್ಷಣದ ಬೆನ್ನುಹತ್ತಿದ್ದೇವೆ. ಇದು ಬದಲಾಗಬೇಕು

## ವೃತ್ತಿಮಯ ಶಿಕ್ಷಣವು

ಇದಕ್ಕೆಲ್ಲ ಪರಿಹಾರವೆಂದು ನಾವು ಅನುಸರಿಸಬೇಕಾದರೆ ಪ್ರಥಮ ಹೆಜ್ಜೆಯೆಂದರೆ ಸರ್ವೋದಯ ಸಮಾಜ ಕಟ್ಟಲು ಮಹಾತ್ಮಾ ಗಾಂಧೀಜಿಯವರು ಹೇಳಿಹೋದ ವೃತ್ತಿಮೂಲ ಶಿಕ್ಷಣವನ್ನೇ ತಳಹದಿಯಾಗಿಟ್ಟುಕೊಂಡು ಸಾಗಿದರೆ ಮಾತ್ರ ಸಜೀವ ಶಿಕ್ಷಣದ ಧ್ಯೇಯಗಳನ್ನು ಸಾಧಿಸಬಹುದೆಂದು ಹೇಳಬಹುದಾಗಿದೆ. ಇದು ಮಾನವನ ಮೂಲಭೂತ ಅಗತ್ಯಗಳಾದ ಆಹಾರ

ಆಚ್ಛಾದನ, ಆಶ್ರಯಗಳನ್ನು ಪೂರೈಸುವದಲ್ಲದೆ ಶಿಸ್ತು, ಸಹಜೀವನ, ಸದ್ಭಾವನೆಗಳನ್ನು ರೂಪಿಸಲು ಸಹಾಯಕಾರಿಯಾಗಬಹುದು. ಕೇವಲ ಪುಸ್ತಕೀಯ ವಿದ್ಯೆ ವಿದ್ಯೆ ಅಲ್ಲ. ಅಧ್ಯಯನದೊಡನೆ ಕಲೆ, ಕೈಗಾರಿಕೆ, ವ್ಯವಸಾಯ. ವೈದ್ಯ, ಶಸ್ತ್ರಾಸ್ತ್ರ, ಜ್ಯೋತಿಷ್ಯ ಮೊದಲಾದ ನಾನಾಮುಖದ ಶಿಕ್ಷಣ ಅವರವರ ವೃತ್ತಿ (ಇಚ್ಛೆ) ಗನುಸಾರವಾಗಿ ಕಲಿಸಿಕೊಡುವ ಏರ್ಪಾಡಾಗಬೇಕು. ಅಂದರೆ ಒಂದು ಪರಿಪೂರ್ಣ ಸಮಾಜ ರಚನೆಯಾಗಿ ಅದರ ಮುನ್ನಡೆ ಸುಗಮವಾಗುವದು. ಈಗ ಮನುಷ್ಯನಲ್ಲಿ ಶಾರೀರಿಕ ವ್ಯಂಗಗಳಿದ್ದರೂ ಅವುಗಳನ್ನು ಸರಿಪಡಿಸುವ ಉಪಾಯಗಳನ್ನು ಕಂಡುಹಿಡಿದಿರುವರೆಂಬ ಸಂಗತಿಯು ಎಲ್ಲರಿಗೂ ಗೊತ್ತಿದ್ದದ್ದೇ ಸರಿ. ಹೀಗಿರುವಾಗ ಮನುಷ್ಯನು ತನ್ನಲ್ಲಿರುವ ದುಷ್ಟ ಪ್ರವೃತ್ತಿಗಳನ್ನು ತೆಗೆದುಹಾಕಲು ಶಕ್ಯವಿದೆಯೇ? ಆಲಸ್ಯ, ಮಾತ್ಸರ್ಯ, ದುರಾಚಾರ, ಅಪ್ರಮಾಣಿಕತೆ, ಸ್ವೇಚ್ಛಾವೃತ್ತಿ ಮೊದಲಾದವುಗಳು ನಾಶವಾಗಿ ಶಿಸ್ತು, ಸದಾಚಾರ, ಸಭ್ಯತೆ, ಸಾಹಸಾದಿ ಸದ್ಗುಣಗಳುಂಟಾಗುವ ಶಿಕ್ಷಣವು ಎಲ್ಲ ವಿದ್ಯಾಲಯಗಳಲ್ಲಿ ಪ್ರಾರಂಭವಾಗಬೇಕು. ಈ ವಿಷಯವಾಗಿ ಮಹಾಭಾರತದ ಶಾಂತಿಪರ್ವದ ೧೨೪ನೇ ಅಧ್ಯಾಯದ ಶೀಲಾಖ್ಯಾನದಲ್ಲಿ ಹೇಳಿದ್ದನ್ನು ಎಲ್ಲರೂ ಸ್ಮರಣೆಯಲ್ಲಿಟ್ಟುಕೊಳ್ಳಬಹುದಾಗಿದೆ.

## ಶೀಲವಾನ್ ಭವ ಪುತ್ರಕ

ದುರ್ಯೋಧನನು ಧರ್ಮರಾಜನನ್ನು ಪರಾಜಿತನನ್ನಾಗಿ ಮಾಡಲು ಎಷ್ಟು ಪ್ರಯತ್ನ ಮಾಡಿದರೂ ಕೀರ್ತಿಯು ಧರ್ಮರಾಜನಿಗೆ, ಅಪಕೀರ್ತಿಯು ದುರ್ಯೋಧನನಿಗೆ ಈ ರೀತಿಯಾಗುತ್ತಿರುವದನ್ನು ನೋಡಿ ಚಿಂತಾಕ್ರಾಂತನಾಗಿ ಕುಳಿತಾಗ, ತಂದೆ ಧೃತರಾಷ್ಟ್ರನು ಚಿಂತೆಯ ಕಾರಣವನ್ನು ವಿಚಾರಿಸಿದನು. ದುರ್ಯೋಧನನು:— "ನಾನು ಮಾಡಿದರೂ ಧರ್ಮನ ಮಹತ್ವವು ಕಡಿಮೆಯಾಗಲೊಲ್ಲದು. ಅದಕ್ಕಾಗಿ ಚಿಂತೆ" ಎಂದನು ಆಗ ಧೃತರಾಷ್ಟ್ರನು— "ಬಾಳಾ ನೀನು ಧರ್ಮನಂತೆ ಕೀರ್ತಿವಂತನಾಗಬೇಕಾದರೆ, ಶೀಲವುಳ್ಳವನಾಗು. ಶೀಲದ ಬಲದಿಂದ ಜಗತ್ತನ್ನೇ ಜಯಿಸಲು ಶಕ್ಯವಿದೆ. ಈ ಶೀಲದ ಮಹಿಮೆಯನ್ನು ಎಷ್ಟು ಹೇಳಿದರೂ ಕಡಿಮೆಯೇ ಇದೆ." ಎಂದನು.

ಒಮ್ಮೆ ಶೀಲಸಂಪನ್ನನಾದ ಪ್ರಲ್ಹಾದನು ಇಂದ್ರನನ್ನು ಪರಾಭವಗೊಳಿಸಿ ಅವನ ರಾಜ್ಯವನ್ನು ಕೊಂಡನು. ರಾಜ್ಯಭ್ರಷ್ಟನಾದ ಇಂದ್ರನು ಕಳೆದ ರಾಜ್ಯವನ್ನು ದೊರಕಿಸಿಕೊಳ್ಳುವದಕ್ಕಾಗಿ ಪ್ರಯತ್ನ ನಡೆಸಿದನು. ಮೊದಲು ದೇವಗುರುವಾದ ಬೃಹಸ್ಪತ್ಯಾಚಾರ್ಯನ ಕಡೆಗೆ ಹೋದನು.

ಕಡೆಗೆ ವೇಷಾಂತರ ಮಾಡಿ ತನ್ನ ಶತ್ರುವಾದ ಪ್ರಹ್ಲಾದನ ಕಡೆಗೆ ಹೋಗಿ ೨೪ ವರ್ಷಗಳ ವರೆಗೂ ಉತ್ಕೃಷ್ಟವಾದ ಸೇವೆಯನ್ನು ಮಾಡಿ ಆತನ ಪ್ರಸನ್ನತೆಯನ್ನು ಸಂಪಾದಿಸಿದನು. ಆ ಕಾಲದ ಪದ್ಧತಿಯಂತೆ ಪ್ರಸನ್ನನಾದ ಪ್ರಹ್ಲಾದನು ಏನು ವರಬೇಕು ? ಬೇಡು ಎಂದು ಕೂತರೆ ವಟುವೇಷ ಧಾರಿಯಾದ ಇಂದ್ರನು ರಾಜ್ಯ ವೈಭವಾದಿಗಳನ್ನು ಬೇಡದೆ ಯಾವ ಶೀಲದ ಯೋಗದಿಂದ ಪ್ರಹ್ಲಾದನು ತ್ರೈಲೋಕ್ಯಾಧಿಪತ್ಯವನ್ನು ಪಡೆದಿದ್ದನೋ ಆ ಶೀಲವನ್ನೇ ಬೇಡಿದನು. ಪ್ರಹ್ಲಾದನು ಶೀಲವನ್ನು ಕೊಟ್ಟ ಬಗ್ಗೆ ಅವನ ಕೈಮೇಲೆ ಉದಕವನ್ನು ಬಿಡುತ್ತಿರುವಾಗಲೇ ಅವನ ಶರೀರದಿಂದ ಧರ್ಮ, ಸತ್ಯ, ಸದಾಚಾರ, ಬಲ ಮೊದಲಾದ ಸದ್ಗುಣಗಳು ತೇಜೋರೂಪದಿಂದ ಹೊರಬಿದ್ದು ಇಂದ್ರನ ಶರೀರದಲ್ಲಿ ಪ್ರವಿಷ್ಟವಾದವು ಕಡೆಗೆ ರಾಜ್ಯಲಕ್ಷ್ಮಿಯು ಕೂಡ ಇಂದ್ರನ ಕಡೆಗೆ ಹೋದಳು. ಪುನಃ ಇಂದ್ರನು ದೇವಲೋಕದ ಅರಸನಾದನು. ಆದುದರಿಂದ ಯಾರಾದರೂ ಯಾವ ಸಂಪತ್ತನ್ನೂ ಸಾಮರ್ಥ್ಯವನ್ನೂ ಪಡೆಯಬೇಕಾದರೆ ಶೀಲಸಂಪನ್ನರಾಗಬೇಕು.

## ಅಧ್ಯಾಪಕರ ಆಯ್ಕೆ.

ಸ್ವತಂತ್ರವಾದ ಭಾರತಕ್ಕೆ ಆದರ್ಶ ನಾಗರಿಕರು ಬೇಕಾಗಿದ್ದಾರೆ. ಸೇವೆ ಸಮತಾಭವ, ಸ್ವಾವಲಂಬನೆ, ಸಾಹಸ, ಸದ್ವಿದ್ಯೆ, ಶಿಸ್ತು, ಮಿತವ್ಯಯ, ಪರಮತ, ಸಹಿಷ್ಣುತೆ, ಗುರು-ಹಿರಿಯರಲ್ಲಿ ಪೂಜ್ಯಭಾವ. ವಿಚಾರಪೂರಿತವಾದ ರಾಜಕೀಯ ಚಾಣಾಕ್ಷತೆ ಮೊದಲಾದ ಉಚ್ಚ ಗುಣಗಳುಳ್ಳವರು ಬೇಕಾಗಿದ್ದಾರೆ. ಮಾನವನು ಸಮಾಜ ಜೀವಿಯು. ಎಲ್ಲರೂ ತನಗಾಗಿ, ತಾನು ಎಲ್ಲರಿಗಾಗಿ ಎಂಬ ಸಹಕಾರ ಬೀಜ ಮಂತ್ರವನ್ನು ಮನದಂದು ಸಮಾಜದ ಹೆಚ್ಚಳದಲ್ಲಿ ತನ್ನ ಅಭಿವೃದ್ಧಿಯನ್ನು ಕಂಡುಕೊಳ್ಳಬೇಕಾಗುತ್ತದೆ. ಸಮಾಜದ ಏಳಿಗೆಗಾಗಿ ಸಹಾಯವಾಗುವ, ತನ್ಮೂಲಕ ವ್ಯಕ್ತಿವಿಕಾಸವಾಗುವ ಶಿಕ್ಷಣವನ್ನು ಜೊತೆಯಾಗಿ ಪಡೆದುಕೊಳ್ಳಬೇಕಾಗುತ್ತದೆ. ಇಂತಹ ಜನಾಂಗವನ್ನು ನಿರ್ಮಾಣ ಮಾಡಬೇಕಾದರೆ ಯೋಗ್ಯ ಅಧ್ಯಾಪಕರೇ ಬೇಕು. ವಿದ್ಯಾರ್ಥಿಗಳು ಓದಿ ಕೇಳಿ ಕಲಿಯುವವಕ್ಕಿಂತಲೂ, ನೋಡಿಯೇ ಹೆಚ್ಚಾಗಿ ಕಲಿಯುವರು. ದಿನವೂ ನೋಡಿ ಅನುಕರಣ ಮಾಡುತ್ತಿರುವ ವಿದ್ಯಾರ್ಥಿಗಳಂತೂ ತುಂಬಾ ಶಿಕ್ಷಕರನ್ನೇ ಅನುಸರಿಸುತ್ತಿರುವದರಿಂದ, ಗುರುವಿನ ನಡತೆಯೇ ಶಿಷ್ಯನಿಗೆ ಮಾರ್ಗದರ್ಶನ ಮಾಡುತ್ತಿರುವಾಗ, ಆಚಾರ್ಯನಾದ

ವನು ತನ್ನ ವಿಚಾರ, ಉಚ್ಚಾರ, ಆಚಾರ, ಪ್ರಚಾರಗಳ ಬಗೆಗೆ ಬಹು ಎಚ್ಚರಿಕೆಯುಳ್ಳವನಾಗಿರಬೇಕಾದುದು ಅವಶ್ಯವೂ ಅನಿವಾರ್ಯವೂ ಆಗಿರುವದು ಇಂಥವರೇ ಅಧ್ಯಾಪಕರಾಗಲು ಯೋಗ್ಯರು.

## ಗುರುಸ್ಥಾನ ಗೌರವವುಳ್ಳದ್ದು.

ಶಿಕ್ಷಕರು ನಿರ್ಮತ್ಸರಿಗಳು, ವಿಚಾರಶೀಲರು, ವಿಶಾಲ ಭಾವವುಳ್ಳವರು ಪವಿತ್ರಾತ್ಮರು ಆಗಿರಬೇಕು. ವಿದ್ಯಾರ್ಥಿಗಳನ್ನು ಸಹಕಾರದಿಂದಲೂ ಸಹಜ ಪ್ರೇಮದಿಂದಲೂ ಕಾಣುತ್ತಿರಬೇಕು. ಸಮಾಜದಲ್ಲಿ ಅತ್ಯುಚ್ಚ ಕಾರ್ಯಗಳಿಗೆ ಸ್ಪರ್ಧೆಯ ಪರೀಕ್ಷೆಗಳನ್ನಿಟ್ಟು ಯೋಗ್ಯ ವ್ಯಕ್ತಿಗಳನ್ನು ಆರಿಸುತ್ತಿರುವಂತೆ, ಅಧ್ಯಾಪಕ ವರ್ಗಕ್ಕೂ ಉತ್ತಮ ವರ್ತನೆ, ಚಾಣಾಕ್ಷತೆಯುಳ್ಳವರನ್ನೇ ಆರಿಸುವ ಸಾಂಪ್ರದಾಯವನ್ನಿಟ್ಟರೆ ಮಾತ್ರ ಒಳ್ಳೇದಾಗುವದು. ಅವರ ಸಂಬಳವು ಕೂಡ ಆ ದೃಷ್ಟಿಯಿಂದ ಸ್ವಲ್ಪ ಆಕರ್ಷಣೀಯವಾಗಿರಬೇಕಾದುದು ಅಗತ್ಯವಾಗಿದೆ. ಏಕೆಂದರೆ ಕಾಳಿದಾಸನ ಮಾಲವಿಕಾಗ್ನಿ ಮಿತ್ರದಲ್ಲಿ-

> ಯದಾಸ್ತ್ವಯಾಜ್ಞಾನಮಶೇಷ | ಮಾಪ್ತ ಲೋಕೇನ
> ಚೈತನ್ಯ ಯಿವೋಷಣ, ರಶ್ಮ್ಯಃ ||

ಎಂಬುದಾಗಿ ಅಧ್ಯಾಪಕರ ಸ್ಥಾನ ಮಹತ್ವವನ್ನು ಹೊಗಳಿದ್ದಾನೆ. ಅಜ್ಞಾನವನ್ನು ನಾಶಮಾಡಿ ಮನುಷ್ಯನಿಗೆ ಹೊಸ ದೃಷ್ಟಿಯನ್ನು ಒದಗಿಸಿ ಕೊಡುವ ಶಿಕ್ಷಕನನ್ನು ಕತ್ತಲೆಯನ್ನು ನಾಶಮಾಡುವ ವಿಶ್ವಚೈತನ್ಯ ಸ್ವರೂಪನಾದ ಸೂರ್ಯನಾರಾಯಣನಿಗೆ ಹೋಲಿಸಿದ್ದಾನೆ. ಇದು ಸಮಂಜಸವಾದ ಸಂಗತಿಯೇ ಸರಿ.

## ಶಿಕ್ಷಕನು ಅರವಿನ ಆರಾಧನಾಗಿರಬೇಕು.

ಶಿಕ್ಷಕನು ವಿದ್ಯಾರ್ಥಿದೆಸೆಯಲ್ಲಿ ಎಲ್ಲವನ್ನು ಅಧ್ಯಯನ ಮಾಡಿರುವೆನೆಂದು ಓದುವ ಅಭ್ಯಾಸವನ್ನು ಬಿಡಬಾರದು. ಅರವಿಗಾಗಿ ತನ್ನ ದುಡಿತವನ್ನು ವಿನಿಯೋಗಿಸಬೇಕು. ಪುಸ್ತಕ ಪ್ರಪಂಚವು ವಿಶಾಲವಾದ ಇಂದಿನ ಸನ್ನಿವೇಶದಲ್ಲಿ ತನ್ನ ಜ್ಞಾನ ದೀವಿಗೆಯನ್ನು ಬೆಳಗಿಸಿಕೊಳ್ಳಬೇಕು. ಓದಿನ ದಾಹವನ್ನು ಹಚ್ಚಿಸಿಕೊಂಡು ವಿಷಯ ವಿಮರ್ಶಾತ್ಮಕತೆಯನ್ನು ಪ್ರಚೋದಿಸಿಕೊಂಡು ಜನತೆಯಲ್ಲಿ ಈ ವಿಷಯ ಶೀಲತೆಯನ್ನು ತೋರಿಸಿಕೊಳ್ಳಬೇಕು. ನಿತ್ಯವೂ ಯಾವ ವಿಷಯದ ಬಗೆಗಾಗಲಿ ಅಧ್ಯಯನ ನಡೆಸಿದ್ದಾದರೆ ಬುದ್ಧಿಯು ತೇಜಸ್ವಿಯಾಗುವದು. ಬುದ್ಧಿಯು ಕೂಡ ಕನ್ನಡಿ, ಕಂಚು ಮೊದಲಾದ ಧಾತುಗಳ ಪಾತ್ರೆಗಳಂತಿರುವದು, ನಿತ್ಯ ಕನ್ನಡಿಯ ಮೇಲೆ ಕೈಯಾಡಿಸಿದರೆ, ಪಾತ್ರೆಗಳನು ಬೆಳಗಿದರೆ, ದೀಪದ ಕುಡಿ ತೆಗೆದರೆ, ಹಲ್ಲು

ಗಳನ್ನುಜ್ಜಿದರೆ, ಕಸಗೂಡಿಸಿದರೆ, ಹೇಗೆ ಸ್ವಚ್ಛ ಕಾಣುವವೋ ಹಾಗೆ ನಿರಂತ ರಾಭ್ಯಾಸದಿಂದ ಬುದ್ಧಿಯು ಸಹ ಜಾಗ್ರತೆಯುಳ್ಳದ್ದಾಗಿರುವದು. ಅದಕ್ಕಾ ಗಿಯೇ ಶ್ರುತಿಯು ತೇಜಸ್ವಿನಾ ವಧೀತನಸ್ತು ಎಂದು ಸಾರಿದೆ.

## ಆದರ್ಶ ಅಧ್ಯಾಪಕನಾಗಬೇಕು.

ಐರೋಪ್ಯ ಪಂಡಿತ ಲಾಸ್ಕಿಯು ಹೇಳಿದಂತೆ ಶಾಲೆಯನ್ನೇ ತನ್ನ ಮನೆ ಯಾಗಿ ತಿಳಿದು ವಿದ್ಯಾರ್ಥಿಗಳನ್ನೇ ತನ್ನ ಮಕ್ಕಳೆಂದು ಭಾವಿಸುವವನೇ ಆದರ್ಶ ಅಧ್ಯಾಪಕನಾಗಿದ್ದಾನೆ. ಕೇವಲ ಕಾನೂನುಗಳನ್ನು ಮಾಡುವವರಿಂದ ಜನಾಂಗದ ಚಾರಿತ್ರ್ಯವು ಸುಧಾರಿಸುವದಿಲ್ಲ. ಯೋಗ್ಯರಾದ ಶಿಕ್ಷಕರಿಂದ ದೊರೆಯುವ ಶಿಕ್ಷಣದಿಂದಲೇ ಅದು ಸಾಧ್ಯವು. ಆಚಾರ್ಯವಿನೋಬಾಜಿಯವರು ಶಿಕ್ಷಣ ಕೊಡುವ ಶಿಕ್ಷಕನು ಮಗುವಾಗಬೇಕು. ಶಿಕ್ಷಣ ಪಡೆಯುವ ಮಗುವು ದೊಡ್ಡವ ನಾಗಬೇಕು. ಶಿಕ್ಷಕನು ಮಗುವಾಗದಿದ್ದರೆ ಅವನು ಯೋಗ್ಯ ಶಿಕ್ಷಣ ಕೊಡ ಲಾರನು. ಮಗುವು ದೊಡ್ಡವನಾಗದಿದ್ದರೆ ಶಿಕ್ಷಣ ಪಡೆಯಲಾರನೆಂದು ಶಿಕ್ಷಣ ಶಾಸ್ತ್ರದ ಸೂತ್ರವನ್ನೇ ಬಹು ಮಾರ್ಮಿಕವಾಗಿ ಪ್ರತಿಪಾದಿಸಿದ್ದಾರೆ.

ಇಂದಿನ ಮುಂದಿನ ಎಲ್ಲ ಶಿಕ್ಷಕ ಮಹಾಶಯರೇ ಮುಂದೆ ಹೇಳಲಿ ರುವ ವಿಷಯವನ್ನು ಚನ್ನಾಗಿ ಮನನ ಮಾಡಿಕೊಳ್ಳಿರಿ. ಭಾರತದ ಆದ ರ್ಶಾಧ್ಯಾಪಕರಾದ ವ್ಯಾಸ ಮಹರ್ಷಿಗಳು ಗುರುಕುಲದಲ್ಲಿ ತಮ್ಮ ಅಧ್ಯಯ ನವನ್ನೆಲ್ಲ ಪೂರೈಸಿ ಸ್ನಾತಕರಾಗಿ ಗುರುಕುಲದಿಂದ ಹೊರಡುವಾಗ ಗುರು ಗಳಿಗೆ ಬ್ರಹ್ಮಸೂತ್ರ ಭಗವದ್ಗೀತೆ ಭಾರತಾದಿ ಉದ್ಗ್ರಂಥಗಳನ್ನು ಬರೆ ಯಲು ಆಶೀರ್ವದಿಸಬೇಕೆಂದು ಕೇಳಿಕೊಂಡಾಗ್ಗೆ ಅವರು ಶಾಸ್ತ್ರಗಳ ರಹಸ್ಯ, ಧರ್ಮದ ಮರ್ಮವನ್ನು ತಿಳಿದಿದ್ದರೆ ಅವುಗಳ ಸಾರವನ್ನು ಒಂದೇ ವಾಕ್ಯ ದಲ್ಲಿ ಹೇಳು ಎಂದು ಅಪ್ಪಣೆ ಕೊಟ್ಟರಂತೆ. ಆಗ ವ್ಯಾಸರು "ಆತ್ಮನಃ ಪ್ರತಿ ಕೂಲಾನಿ ಪರೇಷಾಂ ನ ಸಮಾಚೇತ್" ಎಂಬುದಾಗಿ ಒಂದೇ ವಾಕ್ಯದಲ್ಲಿ ದಲ್ಲಿ ಸಮರ್ಪಕ ಉತ್ತರ ಕೊಟ್ಟು ಗುರುವಿನ ಅನುಗ್ರಹ ಪಡೆದರು. ಅವರು ಹೇಳಿದ ಉತ್ತರವು ಒಂದೇ ವಾಕ್ಯವಾಗಿದ್ದರೂ ಅದರಲ್ಲಿ ವಿಶ್ವಧರ್ಮಗಳ ಸಾರ ತುಂಬಿದೆ. ಯಾರಾದರೂ ನಮ್ಮ ಹೆಣ್ಣುಮಕ್ಕಳ ಕಡೆ ಪಾಪ ದೃಷ್ಟಿ ಯಿಂದ ನೋಡಿದರೆ, ಪಾಪ ಭಾವನೆಯನ್ನು ಪ್ರಕಟ ಮಾಡಿದರೆ, ಮತ್ತು ನಮಗೆ ಅಪಮಾನ ಮಾಡಿದರೆ, ಅಪಶಬ್ದಗಳನ್ನಾಡಿದರೆ, ಅನ್ಯಾಯವಾಗಿ ನಮ್ಮ ಸೊತ್ತನ್ನು ಅಪಹರಿಸಿದರೆ, ಸುಖರೂಪವಾಗಿ ನಡೆದಿರುವ ನಮ್ಮ ಬಾಳಿನಲ್ಲಿ ಅಡ್ಡಿ ಆತಂಕಗಳನ್ನು ತಂದೊಡ್ಡಿದರೆ, ನಮಗೆ ಹೇಗೆ ತಾಪ, ಕೋಪ, ತ್ರಾಸು

ಗಳಾಗುತ್ತವೆಯೋ ಹಾಗೆಯೇ ನಾವು ಕೂಡ ಇತರರಿಗೆ ಮಾಡಿದರೆ ಅವ ರಿಗೂ ನಮ್ಮಂತೆ ತ್ರಾಸಾಗುವದು, ದುಃಖವಾಗುವದು ಎಂದು ತಿಳಿದು ಹಾಗೆ ಆಚರಿಸುವದೇ ಧರ್ಮವೆಂದೂ ಧರ್ಮ ಗ್ರಂಥಗಳ ರಹಸ್ಯವೆಂದೂ ವ್ಯಾಸರ ಉತ್ತರದ ಅಭಿಪ್ರಾಯವಾಗಿದೆ. ಆದುದ್ದರಿಂದಲೇ ವ್ಯಾಸರು ಆದರ್ಶ ಗುರುಗಳಾ ದರು. ಅದರಂತೆ ತಾವುಗಳೆಲ್ಲರೂ ಆದರ್ಶ ಗುರುಗಳಾಗಿ ಈಗ ನಮಗೆ ದೊರೆ ತಿರುವ ಸ್ವರಾಜ್ಯವು ಸುರಾಜ್ಯವಾಗುವಂತೆ ಭವ್ಯವಾದ ಭಾರತದ ಭವಿತವ್ಯವು ಉಜ್ವಲವಾಗುವಂತೆ ಮಾಡಬೇಕೆಂದು ತಮ್ಮೆಲ್ಲರಿಗೆ ಅರಿಕೆಮಾಡಿಕೊಳ್ಳುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ರ್‍ಯಾಂಗ್ಲರ್ ಡಿ. ಸಿ ಪಾವಟೆಯವರ ಅಧ್ಯಕ್ಷತೆಯಲ್ಲಿ ನಡೆಯಲಿರುವ ಧಾರವಾಡದ ಸರಕಾರಿ ಟ್ರೇನಿಂಗ್ ಕಾಲೇಜದ ಶತಮಾನೋತ್ಸವವು ಜಯಪ್ರದವಾಗಿ ಜರುಗಲೆಂದು ಕೋರಿ, ಈ ಶತಮಾನೋತ್ಸವವು ಪ್ರಾರಂಭವಾಯಿತೆಂದು ಪ್ರಸಿದ್ಧಪಡಿಸಿ ನನ್ನ ಭಾಷಣವನ್ನು ಕೊನೆಗೊಳಿಸುತ್ತೇನೆ.



ಸಂಪುಟ ೪ ಸಂಖ್ಯೆ ೧೦

# ಶಿವಾನುಭವ



ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಏ. ಎಲ್; ಎಲ್. ಬಿ.
ವಿಜಾಪುರ.



ಏಪ್ರೀಲ ೧೯೫೮

ವಾರ್ಷಿಕ ಚಂದಾ ] [ ೫ರೂ. ೭೫ನ.ಪೈ.

# ವಿಷಯಾನುಕ್ರಮಣಿಕೆ.





# ಹಿಡಿದ ವ್ರತ ಬಿಡದವಂಗೆ ದಯತೋರುವನು ನಮ್ಮ ಈಶ

(ಲೇಖಕ:- ಶ್ರೀ ವಿರುಪಾಕ್ಷಯ್ಯ ನಾಗಯ್ಯ ಹಿರೇಮಠ ರಾಮಪುರ.)





ಶಿವತೀರ್ಥವೆಂಬ ಗ್ರಾಮದಲ್ಲಿ ಬಸವಕುಮಾರನೆಂಬ ಶಿವಭಕ್ತನಿದ್ದನು. ಆತನು ಯಾವಾಗಲೂ ಶಿವಾನುಭವ ಗೋಷ್ಠಿಯಲ್ಲಿಯೇ ಕಾಲ ಕಳೆಯುತ್ತಿದ್ದನು. ಬೇರೆ ಅಸತ್ಯ ವ್ಯವಹಾರಗಳ ಕಡೆಗೆ ಒಂದು ಕ್ಷಣವಾದರೂ ಲಕ್ಷಗೊಡುತ್ತಿರಲಿಲ್ಲ. ಮತ್ತೂ ಅಷ್ಟಾವರಣಗಳ ಮಹಿಮೆಯನ್ನು ಅರಿತವನಾಗಿದ್ದನು; ಅವುಗಳ ಅಮೃತ ಸವಿದು ಅಮರನಾಗಿದ್ದನು. ಅದು ಹೇಗಂದರೆ:

ಅಷ್ಟಾವರಣಗಳ ವಿವರಃ— (೧) ಗುರು (೨) ಲಿಂಗ (೩) ಜಂಗಮ (೪) ವಿಭೂತಿ (೫) ರುದ್ರಾಕ್ಷಿ (೬) ಪಾದೋದಕ (೭) ಪ್ರಸಾದ (೮) ಮಂತ್ರ ಇವು ಅಷ್ಟಾವರಣಗಳು. ಇನ್ನು ಇವುಗಳ ಮಹತ್ವ,

## ಗುರುವಿನ ಮಹತ್ವ

"ಶಿವತಾ ಭರಿತೇ ಭುವನತ್ರಯೇ ಶಿವ ತಾಂ ಜನತಾ ನ ತಥಾಪಿಗತಾ |
ಗುರುದರ್ಶನ ತಶ್ಶಿವತಾ ಮಗ ಮದ್ಗುರು ತಶ್ಶಿವತೋ ಗುರು ದೇವಗುರುಃ ||
—ಕಾರಣಾಗಮ

ಅರ್ಥಃ— ತ್ರಿಭುವನಗಳು ಶಿವನಿಂದ ಭರಿತವಾಗಿದ್ದರೂ ಆತನು ಅಗೋಚರನು. ಆತನ ವಿಷಯವಾಗಿ ಜನರಿಗೆ ಜ್ಞಾನವಾಗದು. ಆದರೆ ಗುರು ದರ್ಶನ ಮಾತ್ರದಿಂದ ಶಿವಜ್ಞಾನ ಉದಯವಾಗುವದು. . ಗುರುವಿನಿಂದಲೆ ಶಿವನು ದೊರೆಯುವನಾದ ಕಾರಣ ಗುರುವೇ ಶ್ರೇಷ್ಠನು. ಸರ್ವ ವಿದ್ಯೆಗಳು ಗುರುವಿನಿಂದಲೇ ಲಭಿಸತಕ್ಕವುಗಳಾಗಿವೆ. ಗುರುವಿನ ಸಹಾಯವಿಲ್ಲದೆ ಅವು ಎಂದೂ ದೊರಕಲಾರವು.

"ಗುರುರ್ದೇವೋ ಯತಸ್ಸಾಕ್ಷಾತ್ತದ್ಗೃಹಂ ದೇವ ಮಂದಿರಂ |
ಪಾಪೀನಾಂ ಚ ಯಥಾ ಸಂಗಾತ್ತತ್ಪಾಪ ಫಲಭಾಗ್ಭವೇತ್ |
ತದ್ವದಾಚಾರ್ಯ ಸಂಗೇನ ತದ್ಧರ್ಮ ಫಲಭಾಗ್ಭವೇತ್ |
ಯಥೇವಹ್ನಿ ಸಂಪರ್ಕಾನ್ಮಲಂ ತ್ಯಜತಿ ಕಾಂಚನಂ |
ತದ್ವೈವ ಗುರುಸಂಪರ್ಕಾತ್ಪಾಪಂ ತ್ಯಜತಿ ಮಾನವಃ ||
—ಕ್ರಿಯಾಸಾರ

ಇದರ ಭಾವಃ— ಗುರುವು ಪ್ರತ್ಯಕ್ಷ ದೈವವಾಗಿರುವದರಿಂದ ಆ ಗುರುವಿನ ಮನೆಯು ದೇವಾಲಯವಾಗಿರುವದು. ಪಾಪಿಗಳ ಸಹವಾಸದಿಂದ ಹೇಗೆ ಪಾಪವು ಸಂಘಟಿಸುವದೋ ಅದರಂತೆ ಗುರುವಿನ ಸಂಗದಿಂದ ಪುಣ್ಯ ಪ್ರಾಪ್ತಿಯಾಗುವದು. ಬೆಂಕಿಯ ಸಂಪರ್ಕದಿಂದ (ಸಂಗದಿಂದ) ಚಿನ್ನವು ತನ್ನಲ್ಲಿದ್ದ ದೋಷವನ್ನೆಲ್ಲಾ ಹೇಗೆ ಕಳೆದುಕೊಳ್ಳುವದೋ ಹಾಗೆಯೇ ಗುರು ಸಂಗದಿಂದ ಮಾನವನು ತನ್ನ ಪಾಪವನ್ನು ಸಂಶಯವಿಲ್ಲದೆ ಕಳೆದು ಕೊಳ್ಳುತ್ತಾನೆ.

ಇನ್ನು ಲಿಂಗ ಸ್ವರೂಪವೆಂತೆಂದರೆಃ—

ಸ್ಫಟಿಕಂ ಶೈಲಜಂ ಪಾಪಿ ಚಂದ್ರಕಾಂತ ಮಯಂತು ವಾ |
ಬಾಣಂ ವಾ ಸೂರ್ಯಕಾಂತಂ ವಾ ||

(ವೀ|| ಸಿ. ಶಿ. ೬೦)

ಇದರ ವಿಸ್ತಾರಃ— ಸ್ಫಟಿಕ ಶಿಲೆಯಿಂದ ಮಾಡಲ್ಪಟ್ಟಿದ್ದಾಗಲಿ, ಶ್ರೀಶೈಲಾದಿ ಮಹಾ ಪರ್ವತ ಶಿಲೆಯಿಂದ ಮಾಡಲ್ಪಟ್ಟಿದ್ದಾಗಲಿ, ಚಂದ್ರಕಾಂತ ಶಿಲಾನಿರ್ಮಿತವಾದುದಾಗಲಿ ಇರಬೇಕು. ಆಚಾರ್ಯನಿಂದ ವಿಧಿಪೂರ್ವಕವಾಗಿ, ಶಿವಕಲೆಯು, ಅದರಲ್ಲಿ ಆವ್ಹಾನಿಸಲ್ಪಟ್ಟಿರಬೇಕು.

ಲಿಂಗ ಧಾರಣವನ್ನು ಏತಕ್ಕೆ ಮಾಡಿಕೊಳ್ಳಬೇಕು ? ಅದರಿಂದ ಪ್ರಯೋಜನವೇನು ? ಪೂರ್ವದಲ್ಲಿ ಇದನ್ನು ಯಾರು ಮಾಡಿಕೊಂಡಿದ್ದಾರೆ ?

ಲಿಂಗಸ್ಯ ಧಾರಣಂ ಪುಣ್ಯಂ ಸರ್ವ ಪಾಪ ಪ್ರಣಾಶನಂ ।
ಆದೃತಂ ಮುನಿಭಿಸ್ಸರ್ವೈ ರಾಗಮಾರ್ಥ ವಿಶಾರದೈಃ ॥
(ವೀ. ಸಿ ಶಿ. ೬೧)

ಇದರ ವಿವರಃ— ಈ ಲಿಂಗಧಾರಣವು ಪರಿಶುದ್ಧವಾದದ್ದು. ಮತ್ತು ಸಕಲ ಪಾಪವಿನಾಶಕವಾದುದು. ಶಿವಾಗಮಾರ್ಥವನ್ನು ಬಲ್ಲ ಪಂಡಿತರೆಲ್ಲರೂ ಇದನ್ನಂಗೀಕರಿಸಿರುವರು.

ಲಿಂಗಧಾರಣವು ಎರಡು ಪ್ರಕಾರವಾಗಿರುವದುಃ— (೧) ಬಾಹ್ಯಲಿಂಗ ಧಾರಣವು. (೨) ಅಂತರ್ಲಿಂಗಧಾರಣವು.

ಅಂತರ್ಲಿಂಗವನ್ನು ಅನುಸಂಧಾನ ಮಾಡುವದಕ್ಕೆ ಶಕ್ತನಾಗಿರಲಿ, ಇಲ್ಲದೆ ಇರಲಿ. ವೀರಶೈವನಾದವನು ಆ ಅಂತರ್ಲಿಂಗದ ಸ್ಮರಣಾರ್ಥವಾಗಿ ಶಿಲಾದಿ ನಿರ್ಮಿತವಾದ ಬಾಹ್ಯಲಿಂಗವನ್ನು ಅಂತರ್ಲಿಂಗದ ಸ್ವರೂಪವೇ ಇದೆಂದು ನಿಶ್ಚಲ ಜ್ಞಾನದಿಂದ ಧರಿಸಬೇಕು. ಇನ್ನು ಅಂತರ್ಲಿಂಗ ಧಾರಣವೆಂಬುದು ಹೇಗೆ ?

ಸಕಲ ವಿಶ್ವೋತ್ಪತ್ತಿಗೆ ಕಾರಣವಾಗಿಯೂ, ಸಚ್ಚಿದಾನಂದಾತ್ಮಕವಾಗಿಯೂ ಇರುವ ಶಿವಸಂಬಂಧವಾದ ಯಾವ ಮಹಾಲಿಂಗ ಉಂಟೋ ಅದನ್ನು ತನ್ನ ಹೃದಯಕಮಲದಲ್ಲಿ ಧ್ಯಾನ ಮಾಡುವ ರೂಪದಿಂದ ಧರಿಸಿರುವದೇ ಅಂತರ್ಲಿಂಗ ಧಾರಣೆಯು.

(ವೀ. ಸಿ. ಶಿ. ೬೧)

ಮಹಾಲಿಂಗದಲ್ಲಿ ಮೂರು ಪ್ರಕಾರಗಳು ಉಂಟುಃ— (೧) ಸ್ಥೂಲ (೨) ಸೂಕ್ಷ್ಮ (೩) ಪರಾತ್ಪರ.

ಹೊರಗೆ ಸ್ಥೂಲ ಶರೀರದ ಮೇಲೆ ಯಾವದು ಧರಿಸಲ್ಪಡುತ್ತದೆಯೋ ಅದೇ ಇಷ್ಟಲಿಂಗವು. ಹೃದಯಕಮಲದಲ್ಲಿ ಯಾವದು ಭಾವನಾಗೋಚರ ವಾಗಿ ಸತ್ವರೂಪದಿಂದ ಇರುವದೋ ಅದೇ ಸೂಕ್ಷ್ಮವಾದ ಪ್ರಾಣಲಿಂಗವು. ಯಾವದು ಪರಾತ್ಪರವೆನಿಸಿಕೊಂಡಿರುವದೋ ಅದೇ ತೃಪ್ತಿಲಿಂಗವು.

(ವೀ. ಸಿ. ಶಿ. ೬೫)

ಇಷ್ಟಲಿಂಗ ಪೂಜಾ ವಿಧಿಃ— ನಿತ್ಯ ಶುಚಿಯಾಗಿರುವ ಲಿಂಗಧಾರಿಯು. ಮನೋಹರವಾದ ತನ್ನ ಇಷ್ಟಲಿಂಗವನ್ನು ತನ್ನ ಹಸ್ತರೂಪವಾದ ಪೀಠದ ಲ್ಲಿಟ್ಟು, ಗಂಧ ಪುಷ್ಪಾದಿ ದ್ರವ್ಯಗಳಿಂದ ಏಕಾಗ್ರಚಿತ್ತನಾಗಿ ಪೂಜಿಸ ಬೇಕು.

(ವೀ. ಸಿ. ಶಿ. ೬೬)

"ಅಂತರ್ಲಿಂಗ ಪೂಜಾವಿಧಿಯು ಗುರೂಪದೇಶ ಮುಖದಿಂದ ಅರಿಯು ತಕ್ಕಂಥದ್ದಾಗಿದೆ.

## ಜಂಗಮನ ಮಹತ್ವವು

ಜಂಗಮರೆಂದು ಯಾರಿಗೆ ಅನ್ನಬೇಕು ?

ತನ್ನ ಜ್ಞಾನ ಕ್ರಿಯಾ ಶಕ್ತಿಗಳಿಂದ ಜಗತ್ತನ್ನು ಬೆಳಗತಕ್ಕ ಪರಶಿವ ನಿಗಿಂತಲೂ ತಾನು ಬೇರೆಯಲ್ಲವೆಂದು ದೃಢವಾದ ನಂಬಿಗೆಯಿಂದ ಯಾರು ಸ್ವ ಸ್ವರೂಪವನ್ನು ತಿಳಿದುಕೊಂಡಿರುವರೋ ಅವರೇ ಜಂಗಮರು.

(ವೀರಶೈವ ಸಿದ್ಧಾಂತ ಶಿಖಾಮಣಿ ೧೫೦)

ಯಾವ ಜಂಗಮರು ಆಣವಾದಿ ಮಲಸಂಬಂಧವನ್ನು ಕಳೆದುಕೊಂಡು ಈ ದೃಶ್ಯಮಾನ ಚರಾಚರಾತ್ಮಕವಾದ ಪ್ರಪಂಚವನ್ನು ಶಿವಸಂಬಂಧದಿಂದ ಚಿತ್ಕ್ರಿಯಾರೂಪವಾಗಿರುವದೆಂದು ಅರಿಯುವರೋ ಅವರೇ ನಿಜವಾದ ಶಿವ ಯೋಗಿಗಳು.

ಅವರು ಕಾಮ, ಕ್ರೋಧ, ಮೋಹಗಳನ್ನು ಜಯಸಿದವರಾಗಿಯೂ ಮಣ್ಣುಹೆಂಟೆ, ಕಲ್ಲನ್ನೂ, ಬಂಗಾರವನ್ನು ಸಮನಾಗಿ ತಿಳಿಯುತಕ್ಕವರಾಗಿಯೂ ಸತ್ಪುರುಷರಾಗಿಯೂ, ಶತ್ರುವಿನಲ್ಲಿಯೂ, ಮಿತ್ರರಲ್ಲಿಯೂ, ಸಮಬುದ್ಧಿಯು ಳ್ಳವರಾಗಿಯೂ, ಪ್ರತ್ಯಕ್ಷ ಪರಶಿವರಾಗಿಯೂ, ಆಶಾ ಅಹಂಕಾರಗಳನ್ನು ತೊರೆ

ದವರಾಗಿಯೂ, ಇರುತ್ತಿರುವರು. ಇಂಥ ಜಂಗಮ ದೇವರುಗಳ ಪಾದದ ತುದಿಯಲ್ಲಿರುವ ಧೂಳಿಯು ಯಾವ ಮನೆಯಲ್ಲಿ ಬೀಳುವದೋ ಅಂಥವನ ಮನೆಯು ಪವಿತ್ರವಾದ ಪುಣ್ಯಕ್ಷೇತ್ರವೆನಿಸುವದು. ಅವರ ಸಂದರ್ಶನವು ಸಕಲೇಷ್ಟ ಪ್ರದಾಯಕವಾಗಿರುವದು. ಅವರ ಸೋಂಕುವಿಕೆಯು ಪಾಪ ನಾಶವನ್ನು ಮಾಡುವದು ಅವರ ಪೂಜೆಯು ಮುಕ್ತಿಯ ಫಲವನ್ನು ಕೊಡುವದು.

## ವಿಭೂತಿಯ ಮಹತ್ವ.

ಸಾಧಕ ಶ್ರೇಷ್ಠನಾದವನ ಜಲಮಿಶ್ರಿತವಾದ ಭಸ್ಮದಿಂದ ಪ್ರತಿ ದಿನವೂ ತನ್ನ ದೇಹದ ೧೫ ಸ್ಥಾನಗಳಲ್ಲಿ ತ್ರಿಪುಂಡ್ರ ಧಾರಣವನ್ನು ಮಾಡತಕ್ಕದ್ದು. ಆ ಸ್ಥಳಗಳು ಯಾವವೆಂದರೆಃ—

ಶಿರೋಲಲಾಟ ಕಂಠ ಸ್ಕಂಧ ವಕ್ಷಸ್ಥಲೇಷು ಕ್ರಿಯಾಯುಪತ್ರಿ ।
ಯಂಬಕೈಸ್ತ್ರಿ ಸ್ರೋರೇಖಾಃ ಕುರ್ವೀತ ವ್ರತ ಮೇತೆ ಚ್ಛಾಂಭವಂ ॥

ಅರ್ಥಃ— ತಲೆ, ಹಣೆ, ಕಿವಿಗಳೆರಡು, ಕತ್ತು, ಭುಜಗಳೆರಡು, ಎದೆ, ಹೊಕ್ಕಳು, ಬೆನ್ನು, ತೋಳುಗಳೆರಡು, ಹೆಕ್ಕತ್ತು, ಎರಡು ಮುಂಗೈಗಳು. ಈ ಸ್ಥಾನಗಳಲ್ಲಿ ಮೂಲ ಮಂತ್ರೋಚ್ಚಾರ ಪುರಸ್ಸರವಾಗಿ ತ್ರಿಪುಂಡ್ರಧಾರಣ ವನ್ನು ಸಾಧಕರು ಮಾಡಬೇಕು.

ಪ್ರಮಾಣಭೂತವಾದ ತ್ರಿಪುಂಡ್ರಧಾರಣಕ್ಕೆ ಮೂರು ರೇಖೆಗಳುಂಟು. ಹಣೆ ಮೊದಲಾಗಿ ನೇತ್ರ ಪರಿಯಂತರ ಹುಬ್ಬು ಮೊದಲಾಗಿ ಸೀಮೆಯ ವರೆಗೂ ಧರಿಸತಕ್ಕದ್ದು. ಪ್ರಥಮ ರೇಖೆಯು ಗಾರ್ಹಪತ್ಯ ಸಂಬಂಧವಾದದ್ದು. ರಜೋಗುಣ ಉಳ್ಳದ್ದು "ಅ" ಕಾರವರ್ಣ ಉಳ್ಳದ್ದು. ಭೂಲೋಕ ಸಂಬಂಧ ವಾದದ್ದು ಕ್ರಿಯಾಶಕ್ತಿ ವಿಶಿಷ್ಟವಾದದ್ದು. ಪ್ರಾತಸ್ಸವನ ಮಹೇಶ್ವರ ದೇವತಾ ಇವರಿಂದ ಕೂಡಲ್ಪಟ್ಟದೆ.

ದ್ವಿತಿಯಾ ರೇಖೆಯು ದಕ್ಷಿಣಾಗ್ನಿ ಸಂಬಂಧವಾದದ್ದು. ಸತ್ವಗುಣ ಉಳ್ಳದ್ದು. ''ಉ'' ಕಾರವರ್ಣದ್ದೂ. ಆಕಾಶ ಸಂಬಂಧವಾದದ್ದು. ಇಚ್ಛಾ ಶಕ್ತಿ ವಿಶಿಷ್ಟವಾದದ್ದು. ಮಧ್ಯಾಹ್ನ ವಸನ ಸದಾಶಿವ ದೇವತಾ ಇವರಿಂದ ಕೂಡಲ್ಪಟ್ಟದೆ.

ಮೂರನೇ ರೇಖೆಯು ಆಹವನೀಯ ಸಂಬಂಧವಾದದ್ದು "ಮ" ಕಾರ ವರ್ಣ ಉಳ್ಳದ್ದು. ತಮೋಗುಣ ಉಳ್ಳದ್ದು. ಅಧೋಲೋಕ ಸಂಬಂಧವಾದದ್ದು. ಜ್ಞಾನಶಕ್ತಿ ವಿಶಿಷ್ಟವಾದದ್ದು. ಸಾಯಂಸವನ–ಮಹಾದೇವ ದೇವತಾ ಇವರಿಂದ ಕೂಡಲ್ಪಟ್ಟಿದೆ.

## ರುದ್ರಾಕ್ಷಿಗಳ ಮಹತ್ವ.

ಪುರಾತ್ರಿಪುರ ವಧಾಯೋನ್ಮೀಲಿತಾ ಕ್ಷೇऽಹಂತೇಭ್ಯೋ ಜಲಬಿಂದ ।
ವೋಭೂ ಮೌ ಪತಿತಾಃ । ತೇರುದ್ರಾಕ್ಷಾಜಾತಾಃ ಸರ್ವಾನು
ಗ್ರಹಾರ್ಥಾಯ ।
ತೇಷಾಂ ನಾಮೋಚ್ಚಾರಣೇನ ದಶಶತ ಗೋದಾನ ಫಲಂ ಭವತಿ !
ದರ್ಶನ ಸ್ಪರ್ಶನಾಭ್ಯಾಂ ದ್ವಿಗುಣಂ ಫಲಂ ಭವತಿ ಅಥ ಊರ್ಧ್ವಂ
ವಕ್ತುಂನ ಶಕ್ಯಂ ॥

(ಬೃಹಜ್ಜಾ ಲೋಪನಿಷತ್)

ಇದರ ಭಾವ:— ಪರಮೇಶ್ವರನು ತ್ರಿಪುರ ಸಂಹಾರ ಕಾಲದಲ್ಲಿ ತನ್ನ ಅಗ್ನಿ ನೇತ್ರವನ್ನು ತೆರೆಯಲು ಆದರಿಂದ ಜಲಬಿಂದುಗಳು ಹೊರಟು ಭೂಮಿಯ ಮೇಲೆ ಬಿದ್ದು ಲೋಕ ಹಿತಕ್ಕಾಗಿ ಅವೇ ರುದ್ರಾಕ್ಷಿಗಳಾದವು. ಅವುಗಳ ಹೆಸರನ್ನು ಉಚ್ಚರಿಸಿದಮಾತ್ರಕ್ಕೆ ಸಾವಿರ ಗೋದಾನ ಫಲಪ್ರಾಪ್ತಿಯಾಗುವದು. ದರ್ಶನ ಸ್ಪರ್ಶನಮಾತ್ರದಿಂದ ಇಮ್ಮಡಿಯಷ್ಟು ಫಲದೊರಕುವದು. ಅವುಗಳ ಧಾರಣದಿಂದ ಇಷ್ಟೇ ಫಲಗಳಾಗುವವೆಂದು ಸಂಪೂರ್ಣವಾಗಿ ಹೇಳಲಿಕ್ಕೆ ಸಾಧ್ಯವಿಲ್ಲ. ರೋಗಾದಿಗಳು ಕೂಡಲೇ ಪರಿಹಾರವಾಗಿ ಆರೋಗ್ಯಾಭಿವೃದ್ಧಿಯಾಗುವದು. ಈ ರುದ್ರಾಕ್ಷಿಗಳಲ್ಲಿ ಮೂವತ್ತೆರಡು ಪ್ರಕಾರಗಳುಂಟು.

## ಪಾದೋದಕ ಮಹತ್ವ

"ಭಗವತಃ ಪಾದೌ ಪ್ರಕ್ಷಾಳ್ಯ ಶಂಖಂ ಪ್ರಪೂರ್ವ ಗಂಧ ಪುಷ್ಪಾ ।
ಕೃತಾದಿಭಿರಭ್ಯರ್ಚ್ಯಚರುಂಗಿವೇದ್ಯ। ಇಮಂಮೇ ಗಂಗೇ
ಯಮುನೇತ್ಯಭಿ ।
ಮಂತ್ರ್ಯಕದ್ರುದ್ರಾಯೇತಿ ಸನ್ಮಾರ್ಜನಂ ಕೃತ್ವಾಋತಗ್‌ಸತ್ಯಂ
ಪರಬ್ರಹ್ಮೇತಿ ಪ್ರಾಶಯೇತ್ ॥

(ಜಾಬಾಲ ಶಾಖಾ)

ಟೀಕಾಃ— ಭಗವತ್ಸ್ವರೂಪಿಯಾದ ಜಂಗಮನ ಪಾದವನ್ನು ತೊಳೆದು ಶಂಖಧ್ವಾನ ಘಂಟಾನಾದ ಪೂರ್ವಕವಾಗಿ ಗಂಧಾಕ್ಷತಾ ಪುಷ್ಪಗಳಿಂದ ಪೂಜಿಸಿ "ಇಮುಂಮೆ ಗಂಗೆ" ಎಂಬ ಮಂತ್ರದಿಂದ ಅಭಿಮಂತ್ರಿಸಿ "ತದ್ರುದ್ರಯ" ಎಂಬ ಮಂತ್ರವನ್ನು ಸ್ಮರಿಸಿ "ರುದ್ರ" ಎಂಬ ಮಂತ್ರದಿಂದ ವರಿಸಿ "ಋತಿ ಸಂಸತ್ಯಂ ಪರಬ್ರಹ್ಮ" ಎಂಬ ಮತದಿಂದ ಆ ಜಂಗಮ ಮೂರ್ತಿಯ ಪಾದೋದಕವನ್ನು ಸ್ವೀಕರಿಸಬೇಕು.

ನಿರ್ಮಲವಾಗಿಯೂ ಇಹಪರ ಭೋಗಂಗಳನ್ನು ಕೊಡುವಂಥದ್ದೂ ಭವಪಾಶಹರವಾದದ್ದೂ ಆದ ಜಂಗಮನ ಪಾದೋದಕವು ಸರ್ವಕಾಲದಲ್ಲಿಯೂ ಮುಕ್ತಿಯನ್ನು ಕೊಡತಕ್ಕದ್ದಾಗಿದೆ. ಗಣೋಚ್ಛಿಷ್ಟವು ಯಾವಾತನಿಂದ ಕುಡಿದುಲ್ಪಡುತ್ತದೆಯೋ ಆತನು ಮಾಯೆಯನ್ನು ದಾಟುತ್ತಾನೆ.

## ಪ್ರಸಾದದ ಮಹತ್ವ

ವೈರಾಗ್ಯಸಂಪದೋ ಮೂಲಂ ಮಹಾನಂದ ಪ್ರವರ್ಧನಂ ।
ದುರ್ಲಭಂ ಪಾಪಚಿತ್ತಾನಾಂ ಸುಲಭಂ ಶುದ್ಧಕರ್ಮಣಾಂ ।
ಪತ್ರಂ ಪುಷ್ಪಂ ಫಲಂ ತೋಯಂ ಯಚ್ಚಿವಾಯನಿವೇದಿತಂ ।
ತತ್ತತ್ ಸ್ವೀಕಾರ ಯೋಗೇನ ಸರ್ವ ಪಾಪ ಕ್ಷಯೋ ಭವೇತ್ ॥

ಇದರ ಅರ್ಥಃ— ಪ್ರಸಾದವು ವೈರಾಗ್ಯಸಂಪತ್ತನ್ನೀಯಲು ಮೂಲಭೂತವಾದುದು. ಮತ್ತೂ ನಿತ್ಯಾನಂದ ಪ್ರಕಾಶವಾದುದು. ಪಾಪಿಷ್ಠರಿಗೆ ದುರ್ಲಭವೂ ಪುಣ್ಯಾತ್ಮರಿಗೆ ಸುಲಭವೂ ಆಗಿರುವದು. ಶಿವನಿಗೆ ಪತ್ರಿ, ಹೂವು, ಹಣ್ಣು, ನೀರು ಮೊದಲಾದ ಯಾವ ಯಾವ ವಸ್ತುಗಳು ಅರ್ಪಿಸಲ್ಪಡುವವೋ ಅಂತಹ ಪ್ರಸಾದ ದ್ರವ್ಯವನ್ನೆಲ್ಲಾ ಭಕ್ತನು ಸ್ವೀಕರಿಸುವದರಿಂದ ಅವನ ಸಕಲ ಪಾಪಗಳು ನಾಶಹೊಂದುವವು.

## ಮಂತ್ರದ ಮಹತ್ವ

ವಿದ್ಯೆಗಳಲ್ಲಿ ಶ್ರುತಿಯೇ ಶ್ರೇಷ್ಠವು. ಆ ಶ್ರುತಿಯಲ್ಲಿ ಏಕಾದಶ ರುದ್ರವೇ ಶ್ರೇಷ್ಠವು. ಅದರೊಳಗೆ ಪಂಚಾಕ್ಷರಿ ಮಂತ್ರದೊಳಗೆ ಶಿವನೆಂಬ ಎರಡು ಅಕ್ಷರಗಳೇ ಶ್ರೇಷ್ಠವು. ಋಕ್, ಯಜು, ಸಾಮ ವೇದಗಳೊಳಗೆ ಶತರುದ್ರೀಯವು ಶ್ರೇಷ್ಠವಾದದ್ದು. ಆ ಶತರುದ್ರೀಯದಲ್ಲಿ ಎಂಟನೇ ಅನುವಾಕವು ಶ್ರೇಷ್ಠವು. ಆ ಎಂಟನೇ ಅನುವಾಕದಲ್ಲಿದ್ದ "ಪಂಚಾಕ್ಷರಿ" ಮಂತ್ರವೇ

ಶ್ರೇಷ್ಠವು. ಆ ಪಂಚಾಕ್ಷರಿ ಮಂತ್ರದಲ್ಲಿ ಮಹಾದೇವನು ಯಾವಾಗಲೂ ಪ್ರತಿಷ್ಠಿತನಾಗಿರುತ್ತಾನೆ.

ಈ ಪ್ರಕಾರವಾಗಿ ಬಸವಕುಮಾರನು ಅಷ್ಟಾವರಣದ ಮಹತ್ವವನ್ನು ಅರಿತವನಾಗಿದ್ದನು. ಹೀಗಿರಲಾಗಿ ಒಂದಾನೊಂದು ದಿವಸ ಅದೇ ಗ್ರಾಮದ ನಾಲ್ಕು ಜನ ಕಳ್ಳರು ಒಂದು ಗುಪ್ತ ಸ್ಥಳದಲ್ಲಿ ಕುಳಿತುಕೊಂಡು ಮಾತ ನಾಡುತ್ತಿದ್ದರು. ಏನೆಂದರೆ:— " ಈ ದಿವಸ ಈ ಗ್ರಾಮದ ಧನವಂತನ ಮನೆಗೆ ಕನ್ನವನ್ನು ಇಟ್ಟು ಈ ನಮ್ಮ ಶಿವಭಕ್ತನಾದ ಬಸವಕುಮಾರನ ಮನೆಗೆ ಹೋಗಿ ನಮ್ಮ ಕೂಡ ಕನ್ನ ಕಾರ್ಯಕ್ಕೆ ಬರಬೇಕು ಎಂದು ಹೇಳಿ ಕರೆದುಕೊಂಡು ಬರೋಣ. ಅವನು ಒಪ್ಪಿಗೆ ಕೊಡದಿದ್ದರೆ ಪ್ರತಿನಿತ್ಯ ಲಿಂಗ ಪೂಜೆಯಿಲ್ಲದೇ ಊಟ ಮಾಡುವದಿಲ್ಲ. ಕಾರಣ ಅವನನ್ನು ಲಿಂಗ ಕೊಡು ಎಂದು ಕೇಳೋಣ. ಅವನು ಲಿಂಗ ಕೊಡಲಾರದೆ ನಮ್ಮನ್ನು ಹಿಂಬಾಲಿಸು ವನು. ಆ ಮೇಲೆ ಕನ್ನವಿಕ್ಕಿದ ಮನೆಯಲ್ಲಿ ಅವನನ್ನು ಕಳಿಸೋಣ. ಮನೆ ಯವರ ಕೈಯಲ್ಲಿ ಸಿಕ್ಕರೆ ಅವನೇ ಸಿಗುವನು ಎಂದು ಮಾತನಾಡಿಕೊಂಡು ಶಿವಭಕ್ತನಾದ ಬಸವಕುಮಾರನ ಮನೆಗೆ ನಾಲ್ವರೂ ಧಾವಿಸಿ ನಡೆದರು. ಮನೆಗೆ ಹೋಗಿ ಬಸವಾ ಏನು ಮಾಡುವಿ ? ಎಂದು ಕೂಗಿ ಒಳನುಗ್ಗಿ ದರು. ಶಿವಭಕ್ತನು ಯಾವದನ್ನೂ ಅರಿಯದೆ ಬನ್ನಿರಿ ಎಂದು ಮರ್ಯಾದೆ ಯಿಂದ ಅವರನ್ನು ಆದರಿಸಿದನು. ಕಳ್ಳರು ಕುಳಿತು ಬಸವಾ ನೀನು ನಿತ್ಯ ದೂಜೆ ಗೈಯುವ ಇಷ್ಟಲಿಂಗವನ್ನು ಕೊಡುವೆಯೋ ಅಥವಾ ನಾವು ಹೇಳಿ ದಂತೆ ಕೇಳಿ ಕನ್ನದ ಕಾರ್ಯಕ್ಕೆ ಬರುವಿಯೋ ? ಎಂದು ಕೇಳಿದರು. ಆಗ ಬಸವಕುಮಾರನು ಹೌಹಾರಿ ಏನಯ್ಯ ಅಣ್ಣಗಳಿರಾ ಇದು ಹುಡು ಗಾಟವೋ ಹೇಗೆ? ಎಂದು ಘಾಬರಿಯಿಂದ ಕೇಳಿದನು. ಕಳ್ಳರು ಏನಯ್ಯಾ ಶಿವಭಕ್ತಾ ಇದು ಹುಡುಗಾಟವಲ್ಲ. ಸತ್ಯವಾಗಿ ಇಂದು ನೀನು ನಮ್ಮ ಸಂಗಡ ಕಳವಿಗೆ ಬರಲಿಕ್ಕೇಬೇಕು. ಇಲ್ಲವಾದರೆ ನಿನ್ನ ಇಷ್ಟಲಿಂಗವನ್ನು ಕಸಿದು ಕೊಂಡು ಹೋಗುತ್ತೇವೆ ಎಂದು ಲಿಂಗದ ಗಡಿಗೆಗೆ ಕೈಹಾಕಿದರು. ಆಗ ಶಿವ ಭಕ್ತನು ಘಾಬರಿಯಾಗಿ ಬಾಂಧವರೇ ನನ್ನ ಇಷ್ಟಲಿಂಗವನ್ನು ಮುಟ್ಟಬೇಡಿರಿ ನಿಮ್ಮ ಮಾತನ್ನು ಪಾಲಿಸುವೆನು. ಎಂದು ಚಿಂತಿಸತೊಡಗಿದನು. ದೇವಾ ದಯಾಘನಾ ಇಂದು ಎಂಥ ಪ್ರಸಂಗವನ್ನು ತಂದೊಡ್ಡಿದಿ ಇಂದು ಶಿವರಾತ್ರಿ ಶಿವಯೋಗ ಆನಂದದಿಂದ ನಿನ್ನ ನಾಮಸ್ಮರಣೆ, ನಿನ್ನ ಪೂಜೆ, ಜಾಗರಣೆ, ಭಜನಾ ಮಾಡುವ ಇದು ಶುಭತಿನ ಇದನ್ನು ಬಿಟ್ಟು ಕನ್ನವನ್ನಿಡಲು ಹೋಗ

ಬೇಕಾಯಿತೆ ಹೇ ದೇವಾ ಎಂಥ ಪಾಪಿಯು ನಾನು. ನಿನ್ನ ಪೂಜೆ ಜಾಗರಣೆ ಇಂದು ನನಗೆ ಇಲ್ಲವಾದಂತಾಯಿತಲ್ಲಾ ದೇವಾ ಹೇಗೆಮಾಡಲಿ ಒಲ್ಲೆನೆಂದರೆ ನನ್ನ ಒಡೆಯನಾದ ಸಕಲೈಶ್ವರ್ಯನಾದ ಲಿಂಗಮೂರ್ತಿಯನ್ನು ಕಸಿದುಕೊಂಡು ಹೋಗುವರಂತೆ. ಹೇ ದೇವಾ ದೀನ ರಕ್ಷಕಾ ಹೇಗೆ ಮಾಡಲಿ ಯಂದು ನಾನಾ ವಿಧವಾಗಿ ಹಂಬಲಿಸಿದನು. ಕಳ್ಳರು ಮತ್ತೆ ಗದ್ದರಿಸಿದರು. ಬಸವಕುಮಾರನು ಧೈರ್ಯತಾಳಿ ಕಳವಿಗೆ ಹೋದರೂ ಅಡ್ಡಿಯಿಲ್ಲಾ ನನ್ನ ಒಡೆಯನನ್ನು ಸರ್ವಥಾ ಅವರ ಕೈಗೆ ಮುಟ್ಟಿಸಬಾರದು ಎಂದು ಆ ಭಗವಂತನನ್ನು ಮನದಲಿ ಧ್ಯಾನಿಸಿ ಬಂಧುಗಳಿರಾ ನಡೆಯಿರಿ. ನಿಮ್ಮ ಸಂಗಡ ಬರುವೆನು ಎಂದು ಕಿರುಧ್ವನಿಯಲ್ಲಿ ಉಸುರಿಸಿ ಅವರ ಹಿಂದೆ ನಡೆಯುತ್ತಾ ಹೇ ದೇವನೆ ಎಲ್ಲವೂ ನಿನ್ನನ್ನೆ ಕೂಡಿದೆ ಯಂದು ದುಃಖಿಸುತ್ತ ಮನೆಬಿಟ್ಟನು. ಬಾಗಿಲು ದಾಟಿದಾಕ್ಷಣವೇ ಶ್ರೀ ಬಸವೇಶ್ವರ ದೇವಸ್ಥಾನದಲ್ಲಿ ಶಿವಯೋಗದ ಜಾಗರಣೆಯು ಒಳ್ಳೇ ವೈಭವದಿಂದ ಸಾಂಗವಾಗಿತ್ತು. ಶಿವ ಶಿವಾ ಎಂಬ ಶಿವನಾಮ ಕುಮಾರನ ಕಿವಿಯಲ್ಲಿ ಬಿದ್ದಿತು. ಕುಮಾರನು ದೇವಾ ನಿನ್ನ ಪಾದದಡಿಗೆ ಇಂದು ನನ್ನನ್ನು ಬರಮಾಡಿಕೊಳ್ಳಲಿಲ್ಲವೇ? ಎಂದು ದುಃಖಿಸುತ್ತ ಕೈಮುಗಿದು ಕಳ್ಳರಕೂಡ ಸಾಗಿದ.

ಕಳ್ಳರು ಕುಮಾರನನ್ನು ಹಿಂಬಾಲಿಸಿಕೊಂಡು ಬಂದು. ಅದೇ ಗ್ರಾಮದ ಶ್ರೀಮಂತನಾದ ಶಿವಭಕ್ತನ ಮನೆಗೆ ಕನ್ನವಿತ್ತರು. ಗುಮಾರನನ್ನು ಕರೆದು ನೀನು ಈ ಮನೆಯನ್ನು ಪ್ರವೇಶಿಸಿ ಖಜಾನೆಯ ಗೃಹವನ್ನು ಹುಡುಕಿ ಅಲ್ಲಿಯ ದ್ರವ್ಯವನ್ನು ತೆಗೆದುಕೊಂಡು ಬೇಗನೇ ಬಾ ಎಂದು ಹೇಳಿ ಗ್ರಹವನ್ನು ಪ್ರವೇಶಿಸಿದರು. ಎಂದೂ ಅರಿಯದ ಕುಮಾರನು ಮೆಲ್ಲಮೆಲ್ಲನೆ ಶಿವನಾಮ ಸ್ಮರಣೆಯನ್ನು ಮಾಡುತ್ತಾ ಅತ್ತಿತ್ತ ತಿರುಗಾಡುವಷ್ಟರಲ್ಲಿ ದೇವರ ಮನೆಯು ಸಿಕ್ಕಿತು. ಒಳಗೆ ಹೋಗಿ ನೋಡುತ್ತಾನೆ ಪಂಚಮುಖ ಸ್ಥಾಪಿತವಾದ ಶಿವಲಿಂಗ, ಆನಂದಭರಿತನಾಗಿ ಲಿಂಗ ಮೂರ್ತಿಯಾದ ಪರಶಿವನನ್ನು ಅಪ್ಪಿಕೊಂಡು ನಮಸ್ಕರಿಸಿ ಹೇ ದೇವಾ ಈ ಪಾಪಿಯನ್ನು ಪಾವನಗೊಳಿಸುವದಕ್ಕೋಸ್ಕರ ಇಲ್ಲಿ ಎನಗೆ ದರ್ಶನ ಕೊಟ್ಟೆಯಾ ಎಂದು ನೆನೆನೆನೆದು ಹಂಬಲಿಸಿ ಸುತ್ತು ಮುತ್ತು ನೋಡುವಷ್ಟರಲ್ಲಿ ತಂಬಿಗೆ ತುಂಬಿದ ಮಡಿ ವಸ್ತ್ರ ಹೊದಿಸಿದ ಉತ್ತಮ ಉದಕ, ವಿಭೂತಿ, ಹೂವು, ಪತ್ರಿ, ರುದ್ರಾಕ್ಷಿ

ಇವೆಲ್ಲವೂ ಸಿದ್ಧವಾಗಿದ್ದವು. ಇವೆಲ್ಲವುಗಳನ್ನು ಕುಮಾರನು ನೋಡಿ ನನ್ನ ಭಾಗ್ಯಕ್ಕೆ ಎಣೆಯಿಲ್ಲ, ಪರಮಾತ್ಮನ ಪೂಜೆ ದೊರೆಯಿತೆಂದು ಆನಂದ ಭರಿತನಾಗಿ ಭಸ್ಮಸ್ನಾನಮಾಡಿ ಪರಮೇಶ್ವರನ ಪೂಜೆಗೆ ಕುಳಿತನು.

ಇತ್ತ ಹೊರಗೆ ಕಳ್ಳರು ಏನು ಇದು ಎಷ್ಟು ಹೊತ್ತಾಯಿತು ಬಸವ ಇನ್ನು ಬರಲಿಲ್ಲವಲ್ಲ ಎಂದರು. ಒಬ್ಬನು ಬಸವ ಎಲ್ಲಾದ್ರವ್ಯವನ್ನು ಒಮ್ಮೆಲೆ ತರುವಂತೆ ತೋರುತ್ತದೆ ಎಂದನು ಹೀಗೆ ನುಡಿಯುತ್ತಾ ಕುಳಿತರು.

ಅತ್ತ ಕುಮಾರನು ಲಿಂಗ ಪೂಜೆಗೆ ಮಜ್ಜನಮಾಡಿ, ವಿಭೂತಿ, ಗಂಧ, ಶ್ರಿಧಳ, ಪುಷ್ಪಗಳನ್ನು ಧರಿಸಿ ಧೂಪ ದೀಪಾದಿಗಳನ್ನು ಸಮರ್ಪಿಸಿ ಆದೇವಾಧಿದೇವರ ಧ್ಯಾನದಲ್ಲಿ ಕಣ್ಣು ಮುಚ್ಚಿಕೊಂಡು ಕುಳಿತು ಬಿಟ್ಟನು.

ಇತ್ತ ಕಳ್ಳರು ಈ ಮಗನು ಇನ್ನೂ ವರೆಗೂ ಬರಲಿಲ್ಲ, ಇನ್ನೂ ಬೆಳಗಾಗುವದಕ್ಕೆ ನಾಲ್ಕು ತಾಸು ಮಾತ್ರ ರಾತ್ರಿ ಉಳಿಯಿತು, ಎಂದು ಕೋಪಗೊಂಡು ಒಳನುಗ್ಗಿ ನೋಡುತ್ತಾರೆ ಕಣ್ಣು ಮುಚ್ಚಿಕೊಂಡು ದೇವರ ಮುಂದೆ ಕುಳಿತು ಕೊಂಡಿದ್ದಾನೆ. ಕಳ್ಳರು ಕೋಪಗೊಂಡು ಅಳಿಗೊಂದೇಟು ಹೊಡೆಯಹತ್ತಿದರು ಕುಮಾರನು ಪೆಟ್ಟಿನ ನೋವು ತಾಳಲಾರದೆ ಮಗ್ಗಲಲ್ಲಿ ಇದ್ದ ನಗಾರಿಯ ಮೇಲೆ ಹೋಗಿ ಬಿದ್ದು ಬಿಟ್ಟನು. ಆ ನಗಾರಿಯ ಶಬ್ದಕ್ಕೆ ಮನೆಯ ಯಜಮಾನನು ಕಪ್ಪರಿಸಿ ಎದ್ದು ದೇವರ ಮನೆಯಲ್ಲಿ ನೋಡುತ್ತಾನೆ. ಓರ್ವ ಭಕ್ತ ಲಿಂಗ ಮೂರ್ತಿಯನ್ನು ನೋಡುತ್ತಾನೆ ಹೊಸ ಪುಜೆ ಏನಾಶ್ಚರ್ಯವೆಂದನು. ಮತ್ತೆ ಯೋಚಿಸಿ ಈತನು ಕಳ್ಳತನಕ್ಕೆ ಬಂದ ಕಳ್ಳನೆಂದು ಭಾವನೆಮಾಡಿ ಕೊಡಲಿಯೊಂದನ್ನು ತಂದು ಕುಮಾರನನ್ನು ಕಡಿಯುವಷ್ಟರಲ್ಲಿ ದಯಾವಯನಾದ ಪರಮಾತ್ಮನು ಲಿಂಗವಿಬ್ಭಾಗವಾಗಿ ನಿಜರೂಪದಿಂದ ತೋರಿ ಮನೆಯ ಯಜಮಾನನ ಕೈ ಹಿಡಿದನು. ಆಗ ಯಜಮಾನನು ಘಾಬರಿಯಾಗಿ ಕರಮುಗಿದು ನಿಂತುಕೊಂಡನು. ಆಗ ನಿಲಕಂಠನು ಏನಯ್ಯ ಕುಮಾರಾ ನಿನ್ನ ನಿಜವಾದ ಭಕ್ತಿಗೆ ಮೆಚ್ಚಿದೆನು ವರವನ್ನು ಕೇಳಿಕೋ, ಶೀಘ್ರದಲಿ ದಯಪಾಲಿಸುವೆನು ಎಂದು ಪ್ರೇಮದಿಂದ ನುಡಿದ ನುಡಿಯನ್ನು ಕುಮಾರನು ಕೇಳಿ ಆನಂದ ಭರಿತನಾಗಿ ದೇವಾ ನನಗೆ ಯಾವ ವರವು ಬೇಡ ಸದಾವ ಕಾಲದಲ್ಲಿ ಸದಾ ನಿನ್ನನ್ನು ಭಯ ಭಕ್ತಿಯಿಂದ ಸೇವೆ ಗೈಯ್ಯುವ ಈ ಮನೆಯ ಒಡೆಯನಿಗೆ ಮೋಕ್ಷ ಪದವಿಯನ್ನು ದಯಪಾಲಿಸು ಮತ್ತೂ ನಿನ್ನ ಸನ್ನಿಧಿಗೆ

ಕಳುಹಿದ ಆ ಮಹಾ ಪುಣ್ಯಾತ್ಮರಾದ ಕಳ್ಳರಿಗೆ ಸಾಯುಜ್ಯ ಪದವಿಯನ್ನು ದಯಪಾಲಿಸು. ಆ ಮೇಲೆ ಈ ದೀನನನ್ನು ತಮ್ಮ ಸನ್ನಿಧಿಯಲ್ಲಿ ಬರಮಾಡಿಕೋ ಎಂದು ಭಯಭಕ್ತಿಯಿಂದ ಕರಜೋಡಿಸಿ ಅನನ್ಯ ಭಾವದಿಂದ ಅರಿಕೆ ಮಾಡ ಲಾಗಿ ದಯಸಾಗರನು. ಕುಮಾರನ ಏಕ ಭಾವನೆಗೆ ಮೆಚ್ಚಿ ಸರ್ವರಿಗೂ ಮೋಕ್ಷ ಪದವಿಯನ್ನು ದಯಪಾಲಿಸಿ ಮಾಯವಾದನು.

ಈ ಪ್ರಕಾರ ಕುಮಾರನು ಹಿಡಿದ ನೇಮಾದಿಗಳನ್ನು ಕಡೆತನಕ ಕಡೆಗಾಣಿಸಿ ಕಡೆಗೊಂದುದಿನ ಈಶ್ವರನ ಪಾದವನು ಹೊಂದಿದನು. ಮಾನವನು ನಂಬಿ ನಡೆದರೆ ಯಾವದಕ್ಕೂ ಕುಂದು ಕೊರತೆಯಿಲ್ಲ, ಕುಂದು ಕೊರತೆ ಗಳು ಬಂದರೂ ಪರಿಹರಿಸುವ ಧೀರನಿರುವನು. ಕಾರಣ--ಹಿಡಿದ ವ್ರತವನು ಬಿಡದಾತನೇ ಶರಣ



# ಭಕ್ತಿಯೋಗ

( ಲೇಖಕರುಃ– ಶ್ರೀಯುತ ಮ. ಮಲ್ಲಪ್ಪ ಜ್ಞಾನಮಂದಿರ ಹಲಗೂರು. )



ಈ ನಶ್ವರ ಜಗತ್ತಿನಲ್ಲಿ ಜನ್ಮವೆತ್ತಿದ ಮನುಷ್ಯರೆಲ್ಲರೂ ಜನನ ಮರಣದ ರಾಟಾಳಯಿಂದ ಬಿಡುಗಡೆಯಾಗಿ ಮೋಕ್ಷವನ್ನು ಹೊಂದಲು ಪ್ರಯತ್ನಿಸು ತ್ತಾರೆ. ಜನಸಾಮಾನ್ಯರಿಗೆ ತಮ್ಮ ತಮ್ಮ ಉದ್ಧಾರವನ್ನು ಆತ್ಮೋದ್ಧಾರದ ಮೂಲಕ ಮಾಡಿಕೊಳ್ಳಲು ಭಕ್ತಿಯಲ್ಲದೆ ಮತ್ತೆ ಬೇರೆ ಹಾದಿಯಿಲ್ಲವು.

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯಯೇಽಪಿಸ್ಯುಃ ಪಾಪಯೋ ನಮಃ ।
ಸ್ತ್ರೀಯೋ ವೈಶ್ಯಾ ಸ್ತಥಾ ಶೂದ್ರಾಸ್ತ್ಯೇಽಪಿಯಾಂತಿ ಪರಾಂಗತಿಂ॥

**—ಗೀತೆ.**

ಅಲ್ಪರಿಗೆ, ಅಜ್ಞಾನಿಗಳಿಗೆ, ದಲಿತರಿಗೆ, ದರಿದ್ರರಿಗೆ, ದೀನರಿಗೆ ಭಕ್ತಿಯು ಸುಲಭವಾಗಿ ಜನಿಸುತ್ತದೆ. ತಮಗೆ ಭಗವಂತನೇ ಗತಿಯೆಂದು ಅರಿಯದೆ ಅವರಿಗೆ ಬೇರೆ ಮಾರ್ಗವಿಲ್ಲ.

“ ಸಾಧ್ಯವಿದ್ದ ಯಾವ ಕರ್ಮವೂ ಜೀವನ ಕಷ್ಟವನ್ನು ಪರಿಹರಿಸಿ ದಾಗಲೂ, ಗೊತ್ತಿದ್ದ ಯಾವ ಜ್ಞಾನವೂ ದಿನಚರಿಯ ಸುಖದುಃಖಗಳನ್ನು ಕಳೆಯದಾಗಲೂ, ನಿಶ್ಶಕ್ತರು ಮತ್ತು ಅಲ್ಪಮತಿಗಳು ಪ್ರಪಂಚವನ್ನು ನಡೆ ಯಿಸುತ್ತಿರುವ ಮಹಾಶಕ್ತಿಗೆ ಮರೆಬೀಳುವರು. ಆತನೇ ಪರಮೇಶ್ವರ. ಜೀವ ನದಲ್ಲಿ ಸಂಕಟವು ಒದಗಿದ ವೇಳೆಯಲ್ಲಿ ಆಳುವರ ಮೇಲೆ ಆಳುವನೊಬ್ಬನು ಇರಲೇಬೇಕೆಂದು ಸ್ವಭಾವವಾಗಿ ಸಂಕಲ್ಪವು ಸಾವರಿಸಿ ಆ ಮಹಾ ಯಜ ಮಾನನನ್ನು ನೆನೆದು ಅತ್ತಿತ್ತ ತೂಗಾಡುವ ಮನಸ್ಸನ್ನು ಒಂದೆಡೆಗೆ ತಂದ್ಯು ನಿಲ್ಲಿಸುತ್ತಾನೆ. ತನ್ನನ್ನೂ, ತನ್ನ ಸರ್ವಸ್ವವನ್ನೂ ಭಗವಂತನಿಗಾಗಿ ಸಮರ್ಪಿಸಿ ಗಳಿಗೆಯನ್ನು ಕಳೆಯತಕ್ಕವನೇ ಶರಣ. ಭಕ್ತ, ದಾಸನು ಈ ಬಗೆಯ ನೆನಪೂ, ಅನುಭವವೂ ಸಂತತವಾಗಿರಬೇಕಾದರೆ ಮಾನವನ ಚಿತ್ತವೂ ಆಚ ರಣೆಯೂ ಪರಿಶುದ್ಧವಾಗಿರಬೇಕಾಗುತ್ತದೆ. ಈ ಅನುಭವದಲ್ಲಿ ಆತನು ಅರಿ ತಿದ್ದೇ ಜ್ಞಾನ. ಈ ವೇಳೆಯಲ್ಲಿ ಆತನು ಆಚರಿಸಿದ್ದೇ ಕರ್ಮ. ಇದರಲ್ಲಿ

ಆತನು ಅನುಭವಿಸಿದ ಸುಖದುಃಖ ಭಾವನಾ ಜಗತ್ತೆಲ್ಲವೂ ಭಕ್ತಿ ಆಗುತ್ತದೆ. ಈ ಹಾದಿಯಲ್ಲಿ ಪೌರುಷದ ಮುಸೆದಾಟವಾಗಲೀ, ತರ್ಕದ ಎಳೆದಾಟವಾಗಲೀ ಇರುವದಿಲ್ಲ. ಅದು ಸಾಮಾನ್ಯರಿಗೆ ಸಾಧ್ಯವೂ ಆಗುವದಿಲ್ಲ. ಹೃದಯದಲ್ಲಿ ಬೇರು ಬಿಡುವ ಈಶ್ವರ ಭಾವನೆಯು ಭಕ್ತರ ಜ್ಞಾನದಲ್ಲಿ ಹೂವಾಗಿ ಅವರ ಕರ್ಮದಲ್ಲಿ ಹಣ್ಣಾಗುತ್ತದೆ.

ಚತುರ್ವಿಧ ಪುರುಷಾರ್ಥಗಳಿಗಿಂತಲೂ ಅತ್ಯಂತ ಶ್ರೇಷ್ಠವಾದ ಪಂಚಮ ಪುರುಷಾರ್ಥವು ಭಕ್ತಿಯು ಎಂದು ಶಾಸ್ತ್ರಕಾರರು ಎತ್ತಿ ಹಿಡಿದಿದ್ದಾರೆ.

ಧರ್ಮಾದಿ ಪುರುಷಾರ್ಥಾಣಾಂ ಚತುರ್ಣಾಂ ಪರತಃ ಪರಾ ।
ಪಂಚಮಃ ಪುರುಷಾರ್ಥೋ ಹಿ ಭಕ್ತಿ ರ್ಶೈವೀ ಸನಾತನೀ ॥
—ಅನುಭವ ಸೂತ್ರ

ಭಕ್ತಿಚೈತನ್ಯದಿಂದ ಒಡಗೂಡಿದ ಕರ್ಮದಿಂದ ಶಿವಶರಣರೂ, ಹರಿದಾಸರೂ, ಸಂತರೂ, ಸಾಧುಗಳೂ, ಭಾಗವತರೂ ಮೋಕ್ಷವನ್ನು ಹೊಂದಿದ್ದಾರೆ. ಪಾಪಿಗಳಿಗೆ ಕಲ್ಮಶ ಹೃದಯಿಗಳಿಗೆ ಭಕ್ತಿಯು ದುರ್ಲಭವಾಗಿದೆ. ಪರಿಪಕ್ವಾಂತಃಕರಣ ಶೀಲರಿಗೆ ಭಕ್ತಿಯು ಬೇಗನೆ ಅಳವಡುತ್ತದೆ. ಭಕ್ತಿಯಿಲ್ಲದ ಕರ್ಮ, ಧರ್ಮ, ದಾನ ಎಲ್ಲವೂ ವ್ಯರ್ಥ. ಭಕ್ತಿಯೊಂದು ಇಲ್ಲದಿದ್ದರೆ ಸಕಲ ಸದ್ಗುಣಗಳೂ ಬತ್ತಿದ ಕೊಳದಂತೆ ನಿಷ್ಪ್ರಯೋಜನ. ಸಂಸಾರಿಕ ವಿಷಯಗಳಲ್ಲಿ ಪ್ರವಹಿಸುತ್ತಿರುವ ಪ್ರೇಮಧಾರೆಯನ್ನು ಪರಮಾತ್ಮನಲ್ಲಿ ನೆಲೆಗೊಳಿಸಿದರೆ ಭಕ್ತರಿಗೆ ಜಗತ್ತಿನಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ.

ಸತಿಯರಾದಡೇನು ಸುತರಾಗಿ ಫಲವೇನು ।
ಶತಕೋಟಿ ಧನವ ಗಳಿಸೇನು ಭಕ್ತಿಯ ।
ಸ್ಥಿತಿಯಿಲ್ಲದನಕ ಸರ್ವಜ್ಞ ॥

ಹೆಂಡತಿಯ ಮೇಲಿಟ್ಟ ಪ್ರೇಮವೇ ಮೋಹ. ಮನೆ ದನ-ಕರುಗಳ ಮೇಲಿಟ್ಟರೆ ಮಮಕಾರ, ಮಕ್ಕಳ ಮೇಲಾದರೆ ವಾತ್ಸಲ್ಯ, ದೀನ ದಲಿತರ ಮೇಲಾದರೆ ದಯೆ, ತನ್ನ ದೊಡ್ಡಸ್ತಿಕೆಯ ಮೇಲಾದರೆ ಅಹಂಕಾರ, ಧನದ ವಿಷಯದಲ್ಲಾದರೆ ಲೋಭ, ಧೂಮ್ರಪಾನ ಮತ್ತು ಕಾಫೀ ಟೀ ನಶ್ಯಗಳ ಮೇಲಾದರೆ ಚಟ, ಪರಮಾತ್ಮನ ಮೇಲಾದರೆ ಅದು ಭಕ್ತಿ ಎಂದು ಪ್ರೇಮವು ಕರೆಯಿಸಿಕೊಳ್ಳುತ್ತದೆ, ಜಗದೀಶ್ವರನನ್ನು ಮನಃಪೂರ್ವಕವಾಗಿ

ಪರಿಶೋಭಿಸುವುದು. ಪ್ರೇಮದಲ್ಲಿ ಪ್ರಾರಂಭವಾಗಿ, ಪ್ರೇಮದಲ್ಲಿಯೇ ವರ್ಧಿಸಿ, ಪ್ರೇಮದಲ್ಲಿಯೇ ಮುಕ್ತಾಯವಾಗುವುದು ಭಕ್ತಿಯೋಗ. ಪ್ರಪಂಚವು ಪ್ರೇಮದ ಆಕರ್ಷಣ ಶಕ್ತಿ.

ಪ್ರೇಮ ವಿಶ್ವಾಸ ನಂಬಿಕೆಗಳಿಂದ ಪರಮಾತ್ಮನಿಗೆ ಸರ್ವ ಸಮರ್ಪಣ ಮಾಡಿ ಆತನಿಗೆ ಶರಣು ಹೋಗುವುದೇ ಭಕ್ತಿಯೋಗವು. ಪಿಪೀಲಿಕೆಯಿಂದ ಬೆಳೆಯುತ್ತ ಏರುತ್ತ ಪ್ರವೃದ್ಧಿ ಪಡೆಯುತ್ತಾ ಕ್ರಾಂತಿ ಉತ್ಕ್ರಾಂತಿಯುತನಾಗುತ್ತಾ ಪರಿಪೂರ್ಣನಾಗುತ್ತಾ ಮನುಜನಾಗಿ ದೇವಮಾನವನಾಗುವದೇ ಈ ಬಾಳಿನ ಗುರಿಯಾಗಿದೆ. ದೇವನ ದರ್ಶನವು ದೃಢಭಕ್ತಿಯಿಂದಲೇ ಸಾಧ್ಯ. ದೃಢಭಕ್ತಿಗೆ ಧ್ಯಾನ ಬಲಿಯಬೇಕು. ಧ್ಯಾನ ಬಲಿಯಬೇಕಾದರೆ ಇಂದ್ರಿಯ್ರಗಳೆಲ್ಲವೂ ಪರಮಾತ್ಮನ ಸಂಬಂಧ ಕ್ರಿಯೆಗೆ ವಿನಿಯೋಗವಾಗಬೇಕು. ಮನುಷ್ಯನು ಭಕ್ತಿಯನ್ನು ವ್ಯಯ ಮಾಡಬೇಕಾದರೆ ಯಾವ ಧನವೂ ಬೇಕಿಲ್ಲ. ತನ್ನ ಚಪಲ ಚಿತ್ತವನ್ನು ಹತೋಟಿಯಲ್ಲಿಟ್ಟು ಹಿಡಿದು ತನ್ನ ಮನಸ್ಸನ್ನು ಪರಿಶುದ್ಧವಾಗಿರಿಸಿಕೊಳ್ಳಬೇಕು. ಮನಸ್ಸನ್ನು ಶುದ್ಧಿಪಡಿಸಿದರೆ ಆತ್ಮವು ಶುದ್ಧವಾದಂತೆಯೇ. ಭಕ್ತಿಗೆ ಮೂಲ ಕಾರಣವಾದ ಮನಸ್ಸು ಪವಿತ್ರವಾಗಿದ್ದು, ಪರಮಾತ್ಮನನ್ನು ಧ್ಯಾನಿಸಿದರೆ ಸಂಕಲ್ಪಗಳು ನೆರವೇರುವದರಲ್ಲಿ ಯಾವ ಸಂಶಯವೂ ಇಲ್ಲವು. ವಿಶ್ವದ ಸಕಲ ಕಾರ್ಯ ಕಲಾಪಗಳನ್ನು ನಿರ್ವಹಿಸುವ ಸಾಮರ್ಥ್ಯವಿರುವ ಶಕ್ತಿಯೊಂದು ವಿಶ್ವಕ್ಕೆ ಆಧಾರವಾಗಿರುತ್ತದೆ. 'ಈಶಾವಾಸ್ಯಮಿದಂ ಸರ್ವಂ' ಎಂಬ ಈಶಾವಾಸ್ಯೋಪನಿಷತ್ತಿನ ಮಂತ್ರದಂತೆ ಪ್ರಪಂಚದಲ್ಲಿನ ಸ್ಥಾವರ ಜಂಗಮ ಪದಾರ್ಥಗಳಲ್ಲಿಯೂ ಆ ಶಕ್ತಿಯು ತನ್ನ ಕರ್ತವ್ಯ ಲೀಲೆಯಿಂದ ಧಾರಣೆ ಮಾಡಿರುವ ಬಗೆಬಗೆಯ ರೂಪಗಳಾಗಿರುತ್ತವೆ. ಅದರ ಪ್ರೇರಣೆಯಿಂದಲೇ ಜಗತ್ತಿನ ಸಕಲ ಕಾರ್ಯ ಕಲಾಪಗಳು ನಡೆದಿರುತ್ತವೆ. ಈ ಅತರ್ಕ್ಯ ಶಕ್ತಿಯನ್ನೇ ಭಗವಂತ, ಈಶ್ವರ, ಲಿಂಗ, ಪರಮಾತ್ಮ ಎನ್ನುತ್ತಾರೆ. ಒಂದು ತೃಣವೂ ಸಹ ಈ ಅತರ್ಕ್ಯ ಶಕ್ತಿಯ ಪ್ರೇರೇಪಣೆಯಿಲ್ಲದೆ ಚಲಿಸುವದಿಲ್ಲ ಎಂಬ ಅರಿವು ಮಾನವನ ಬುದ್ಧಿಯಲ್ಲಿ ಸ್ಥಿರವಾಗಿದ್ದರೆ ಆಗ ಆತನ ಮನಸ್ಸಿನಲ್ಲಿ ಯಾವ ಭಾವನೆಯು ನಿರ್ಮಾಣವಾಗುವದೋ ಅದೇ ಭಕ್ತಿಭಾವವು. ಉನ್ನತಿಯ ವೇಳೆಯಲ್ಲಿ ಉನ್ಮತ್ತನಾಗದಂತೆ ಆಪತ್ತಿನ ಸಮಯದಲ್ಲಿ ಅಳುಕಿನ ಎದೆಯುವನಾಗದಂತೆ ಮಾಡಿ ಧೈರ್ಯ ಸ್ಥೈರ್ಯ ಶಾಂತ್ಯಾದಿಗಳನ್ನು ಕೊಟ್ಟು ಮನುಜನ ಉತ್ಸಾಹವನ್ನು ಹೆಚ್ಚಿಸುವುದರಲ್ಲಿ ಭಕ್ತಿಭಾವದಂತಹ ಸುಲಭಾಂಜನವು ಮತ್ತೊಂದಿಲ್ಲ.

ನಂಬುನಂಬಲಿ ಮನವೆ । ಹಂಬಲಿಸದಿರು ಬರಿದೆ ।
ನಂಬಿಗೆಯೆ ಕಾರಣವು । ಸಾಂಬನೊಲಿವುದಕೆ ॥

—ಸರ್ಪಭೂಷಣಶಿವಯೋಗಿ.

ಮನುಷ್ಯನು ಮಾಯಾಬಂಧನದಿಂದ ಮುಕ್ತನಾಗಲು ಹಾಗೂ ಸತ್ಯವೂ, ಶಾಶ್ವತವೂ ಆದ ಸುಖಶಾಂತಿ ಸಮಾಧಾನಗಳನ್ನು ಪಡೆಯಲು ಹಿಂದೂ ಧರ್ಮದಲ್ಲಿ ಮಾರ್ಗತ್ರಯಗಳೇ ಪ್ರಧಾನವಾದವುಗಳೆಂದು ಶ್ರುತಿಯ ನಿಯಮವಿದೆ. ಕರ್ಮ, ಭಕ್ತಿ, ಜ್ಞಾನಯೋಗ–ಇವುಗಳಲ್ಲಿ ಭಕ್ತಿಯೋಗವು ಸುಲಭವೂ ಸರಳವೂ ಆಗಿರುವುದಲ್ಲದೆ ಮನುಜನು ಅಂತ್ಯಕ್ಕೆ ಯಾವ ಗುರಿಯನ್ನು ಮುಟ್ಟಬೇಕಾಗಿರುವುದೋ ಅಂತಹ ಪರಂಧಾಮಕ್ಕೆ ಕರವಿಡಿದು ಕರೆದು ಒಯ್ಯುವ ಸಹಜ ಹಾದಿಯು.

ಕಿಂಕುರ್ವಾಣ ಮುಂಬಲಿದು ಗುರುಲಿಂಗ ಮುಖಂಚರಲಿಂಗ ವೆಂದುನಿಃ ।
ಶ್ಯಂಕತೆಯಿಂ ಸುವರ್ಣ ವಸನಾನ್ನ ಪರಸ್ಪರ ವಸ್ತುವಾಹನಾ॥
ಲಂಕರಣಗಳಂ ಸತಿ ಸಮರ್ಪಿಸಿ ವೀರ ಶಿವಾಗಮೋಕ್ತಚಿ ।
ಹ್ನಾಂಕಿತರ್ಗೆ ಮಣಾವಂತುಟಿ ಭಕ್ತಿ ಪದವಂಶಿ ಮಾಧವಾ ॥

ಮತ್ತೊಬ್ಬರ ಮನಸ್ಸನ್ನು ಪ್ರಸನ್ನಗೊಳಿಸಲು ಮಾಡುವ ಸೇವೆಯೇ ಭಕ್ತಿಯು ನಾರದರು ಇಂತು ವಿವರಣೆಮಾಡಿದ್ದಾರೆ.

" ಸ ಈಶ್ವರಂಃ ಅನಿರ್ವ ಚನೀಯ ಪ್ರೇಮಸ್ವರೂಪಃ ॥ "

ಭಕ್ತಿಯ ಶಕ್ತಿಯು ಭಗವಂತನಿಗೆ ಶರಣಾಗುವುದು. ಅನುರಕ್ತಿಯೇ ಭಕ್ತಿಯಾಗುವದು. ತನ್ನನ್ನು ತಾನು ಮರೆತು ಪರಮನಲ್ಲಿ ಬೆರೆಯುವಿಕೆಯು ಅಸಾಧ್ಯವನ್ನು ಸಾಧ್ಯಮಾಡುತ್ತವೆ, ಸುಖ ದುಃಖಗಳ ತಾರತಮ್ಯವನ್ನು ಶೂನ್ಯವಾಗಿರಿಸುತ್ತವೆ. ವಿನಯ ವಿವೇಕವು ಚೈತನ್ಯ ಯಜಮಾನನ ಶುನಕನು. ಈ ಶುನಕನ ಅನುರಾಗವೇ ಭಕ್ತಿ ಎಂಬುದನ್ನು ನಿಜಗುಣರು ವಿವರಿಸಿದ್ದಾರೆ.

ಆವಕಾಲ ದೊಳು ಬಳಿಕಾವ ದೇಶದೊಳು ಬೇ ।
ರಾವ ವಸ್ತುವಿನೊಳಿಡೆ ಮೆರೆಯದತಿ ಮಮತೆ ।
ಆವ ಪರಿಯೊಳು ತನ್ನ ಮೇಲಿರ್ಪು ದಂತೆ ಗುರು
ದೇವತೆ ಯೊಳನು ರಾಗ ವಿಹುದೆ ನಿಜಭಕ್ತಿ ॥

ಇದರ ಪ್ರಧಾನ ಧ್ಯೇಯವು ಈ ಜಗತ್ತಿನ ಭೋಗವಲ್ಲ; ಶಾಶ್ವತವಾದ ಮುಕ್ತಿ. ಅನುರಕ್ತಿ, ಶಕ್ತಿ ಇವೆರಡೂ ಪ್ರಧಾನವಾಗಿರಬೇಕು. ಭಗವಂತನಲ್ಲಿನ ಅನನ್ಯವಾದ ಪ್ರೀತಿಯೇ ಅನುರಕ್ತಿಯು.

'ಸಾಪರಾನುಕ್ತಿರೀಶ್ವರ' —ಶಾಂಡಿಲ್ಯ ಮಹರ್ಷಿ.

ಈ ಅನುಕ್ತಿಯನ್ನು ಅನುವರಿತು ಅಳವಡಿಸಿಕೊಂಡು ಪರಿಪಕ್ವ ಮಾಡಿಕೊಳ್ಳಲು ವಿನಿಯೋಗಿಸುವ ಯತ್ನವೇ ಶಕ್ತಿಯು. ಮಾನವ ಹೃದಯವು ಸತತವೂ ತನ್ನ ಭೋಗದಲ್ಲಿ ಸಹಯೋಗ ನೀಡಬಹುದಾದಷ್ಟೇ ಹಾಗೂ ದುಃಖದಿಂದ ತನ್ನನ್ನು ಬಿಡುಗಡೆ ಮಾಡಬಹುದಾದ ಒಂದು ಮಹತ್ತರವಾದ ಶಕ್ತಿಯನ್ನು ಹುಡುಕುತ್ತಿರುತ್ತದೆ. ಯಾವ ಕಾರ್ಯವನ್ನು ಮಾಡಿದರೂ ಭಗವಂತನಿಗಾಗಿ ಎನ್ನುತ್ತಾ, ಏನು ಬಂದರೂ ಅವೆಲ್ಲ ಭಗವಂತನ ದಯೆಯಿಂದ ಎಂದು ತಿಳಯುತ್ತಾ, ಸಂಕಟ ಬಂದರೂ ಆತನ ಇಚ್ಛೆ ಎಂದೇ ಅರಿತು ಅನುಭವಿಸುತ್ತಾ ಬದುಕಿರುವುದು ಆತನಿಗಾಗಿ, ಆತನ ಸೇವೆಗಾಗಿ ಎಂದು ಹೇಳುತ್ತಾ, ಸರ್ವೋತ್ತಮನಾದ, ಜಗದ್ಕರ್ತೃವಾದ ಆಪದ್ಬಾಂಧವನಾದ ಭಗವಂತನನ್ನು ಭಜಿಸಬೇಕು. ಸ್ವಾರ್ಥನಾದ ಭಕ್ತನಿಗೆ ಮೋಕ್ಷವನ್ನು ಹೊಂದುವ ಯೋಗ್ಯತೆ ಇಲ್ಲ. ಆತನು ಕೈಕೊಳ್ಳುವ ಯತ್ನವು ಹೊಳೆಯಲ್ಲಿ ಹುಣಿಸೆಹಣ್ಣು ಹರಡಿದ ಹಾಗೆ ಆತನು ಪಡೆಯುವ ಪ್ರಯೋಜನವು ಇದ್ದೂ ಇರದ ಬಿಸಿಲ್ಗುದುರೆಯ ಹಾಗೆ.

ಭಕ್ತಿಯ ಬಲ್ಲವರು ನಚ್ಚಿ ಮಚ್ಚಿ ಮನವನೊಚ್ಚತಗೊಡುವರು
ಭಕ್ತಿಯನರಿಯದ ಬಲುಪಾಪ ಜೀವಿಗಳು ಕಚ್ಚುವರು
ಬಗಳುವರು ರಾಮನಾಥಾ.

ಮನುಷ್ಯನ ದೃಷ್ಟಿಯು ವ್ಯಕ್ತವಾದ ಲೌಕಿಕದ ಅನೇಕ ಹಾದಿಗಳನ್ನು ಬಿಟ್ಟು, ಅವ್ಯಕ್ತನಾದ ಈಶ್ವರನ ಕಡೆಗೆ ಹೊರಳಿ ಆ ಮಹಾಮಹಿಮನ ಸಾನ್ನಿಧ್ಯವನ್ನು ಸೇರಿ ಅಲ್ಲಿ ನೆಲಸಿ ಜನ್ಮಸಾರ್ಥಕ್ಯವನ್ನು ಪಡೆಯಲು ಸಹಕಾರಿಯಾಗಿರುವಂತೆ ಪುರಾತನ ಪುಂಗವರು ಒಂದು ಹಂತದ ಹದ್ದುಬಸ್ತನ್ನು ಸಿದ್ಧಮಾಡಿರುವುದೇ ಭಕ್ತಿಯು. ಇದರಲ್ಲಿ ಒಂಬತ್ತು ಮೆಟ್ಟಲುಗಳಿವೆ.

ಶ್ರವಣಂ ಕೀರ್ತನಂ ಶಂಭೋ ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮ ನಿವೇದನಂ ॥

ಕ್ರಮಕ್ರಮವಾಗಿ ಒಂದರ ಅನಂತರ ಒಂದಾಗಿ ಅವುಗಳನ್ನು ದಾಟಿ ಹೋದರೆ ಮಾತ್ರ ಸ್ವಾಮಿಯ ಸಾನ್ನಿಧ್ಯವು ಸಿಗುತ್ತದೆ. ವೇದಶಾಸ್ತ್ರಪುರಾಣ

ಕಥೆ ಪ್ರಸಂಗಗಳ ಮೂಲಕ ಭಗವಂತನ ಸೃಷ್ಟಿ ಚಮತ್ಕಾರಗಳನ್ನೂ, ಅಗಾಧ ಕಾರ್ಯಗಳನ್ನೂ, ದಿವ್ಯ ಸಂಗತಿಗಳನ್ನೂ ಕೇಳುವುದು ಶ್ರವಣ. ಅನಂತರ ಶ್ರವಣ ಮಾಡಿದುದನ್ನು ಯಾವಾಗಲೂ ಮನಸ್ಸಿನ ಇದುರಿನಲ್ಲಿ ಇರಿಸಿಕೊಂಡು ಆ ಆಲೋಚನೆಯಲ್ಲಿಯೇ ಪಂಚೇಂದ್ರಿಯಗಳೂ ಒಂದುಗೂಡುವಂತೆ ಸ್ತೋತ್ರ ಮಾಡುವದು ಕೀರ್ತನೆಯು. ಶ್ರವಣ ಕೀರ್ತನೆಗಳ ಪರಿಪಾಕವಾದ ಪರಮಾತ್ಮನ ವಿಚಾರಗಳು ಚಿತ್ತಕಾಸಾರದಲ್ಲಿ ಬೇರುಬಿಡುವಂತೆ ಮಾಡಲು ಅವುಗಳನ್ನೇ ಯಾವಾಗಲೂ ಧ್ಯಾನ ಮಾಡುತ್ತಿರುವುದೇ ಸ್ಮರಣವು. ಸತತ ಸ್ಮರಣೆಯಿಂದ ಪರಮಾತ್ಮಕ ವಿಚಾರವನ್ನು ಆರ್ಜಿಸಿದ ಮನಸ್ಸಿನಲ್ಲಿ ವಿನಯ ವಿಧೇಯತಾದಿಗುಣಗಳು ಅಭ್ಯಾಸವಾಗುವಂತೆ ಎಡೆಬಿಡದೆ ಅಭಿಷೇಕಾದಿಗಳಿಂದಲೂ ಪುಣ್ಯ ಕ್ಷೇತ್ರಾದಿಗಳ ಯಾತ್ರೆಯಿಂದ ಸ್ವಾಮಿಯ ಸೇವೆ ಮಾಡುವುದು ಪಾದ ಸೇವನೆ. ನಿಯಮ ನಿಷ್ಠೆಗಳು ತುಂಬಿದ ಪದಾರ್ಥದಲ್ಲಿ ಮನೋದಾರ್ಢ್ಯವೂ ಏಕಾಗ್ರತೆಯೂ ಉಂಟಾಗುವಂತೆ ಪತ್ರೆ ಪುಷ್ಪಾದಿಗಳನ್ನು ಸ್ವಾಮಿಗೆ ಸಮರ್ಪಿಸಿ ಪೂಜೆ ಮಾಡುವುದೇ ಅರ್ಚನೆ. ಇಂದು ಪೂಜಿಸಿದುದಕ್ಕೆ ನಾಳೆಯೇ ಪ್ರಯೋಜನವು ಸಿಗದಿದ್ದರೆ ಬೇಜಾರಾಗಿ ದಿನ ದಿನಕ್ಕೆ ಒಂದೊಂದು ಧ್ಯೇಯ ಮೂರ್ತಿಗಳನ್ನು ಕೈಗೊಳ್ಳದಂತೆ ತನ್ನ ಮನೋ ದೇವರನ್ನೇ ಬಿಟ್ಟರೆ ಬೇರೆ ಹಾದಿ ಕಾಣನೆಂಬ ಮನೋಭಾವದಿಂದ ನಮಸ್ಕರಿಸುವುದೇ ನಮಸ್ಕಾರವು. ಮುಂದೆ ಅಭಿಮಾನವು ಅಳಿದು ದಂಭ ದರ್ಪಗಳ ಸೊಲ್ಲು ಅಡಗಿ ಅಹಂ ಅಳಿದು ಸರ್ವೇಶ್ವರನ ಸಕಲ ಸ್ವಾತಂತ್ರ್ಯವನ್ನು ಸ್ಥಾಪಿಸುವಂತೆ ಉಚ್ಚನೀಚ ಭಾವನೆಗಳನ್ನು ಮರೆತು ವಿನಮ್ರನಾಗಿ ಒಡೆಯನಿಗೆ ಕಿಂಕರರ ಕಿಂಕರನನ್ನಾಗಿಯೋ ಎಂಬಂತೆ ಸಕಲ ಬಗೆಯ ಸೇವೆಗಳನ್ನು ಸಲ್ಲಿಸುವುದೇ ದಾಸ್ಯ. ತನ್ನ ಮನೋ ದೈವವನ್ನು ಕಂಡರೆ ಮಾತ್ರ ಉಳಿಯುದೆ, ಇಲ್ಲದಿದ್ದರೆ ನಾಶವಾಗುದೆ ಎಂಬಷ್ಟರ ಮಟ್ಟಿನ ಅಕೃತ್ರಿಮ ಮನೋಭಾವದಿಂದ ಜನನಿ ಮಕ್ಕಳಲ್ಲಿ ನಾಯಕ ನಾಯಕಿಯರಲ್ಲಿ, ತಂದೆ ಮಕ್ಕಳಲ್ಲಿ ಕಾಣಬರುವಂತಹ ದರ್ಶನಾಭಿಲಾಷೆಯಿಂದ ಮನೋದೈವ ಸಂದರ್ಶನವನ್ನು ಆಶಿಸುವುದೇ ಸಖ್ಯ. ತನ್ನ ಹೃದಯೇಶನಿಗೆ ಸ್ವಕೀಯವಾದ ಸರ್ವಸ್ವವನ್ನೂ ಸಮರ್ಪಿಸಲು ಸತತವೂ ಸಿದ್ಧನಾಗಿರುವುದೇ ಆತ್ಮನಿವೇದನ.

ದೈವಶಕ್ತಿಯು ಉತ್ತಮೋತ್ತಮವೆಂದು ಮಹಾವಿಭೂತಿಗಳೆಲ್ಲರೂ ಒಪ್ಪಿದ್ದಾರೆ. ಭಗವದ್ಭಕ್ತಿಯಿಂದ ಮನಸ್ಸಿನ ಅಂಧಕಾರವು ದೂರವಾಗುತ್ತದೆ. ಮನುಜ ಹೃದಯವು ಭಗವಂತನ ಧ್ಯಾನದಲ್ಲಿ ಪ್ರವೃತ್ತವಾಗಿ ಸಂಸಾರ ಯಾತನೆ

ಯನ್ನು ಮರೆತು ಬಿಡುತ್ತದೆ. ಮನಸ್ಸಿನಲ್ಲಿ ಸಹೃದಯತೆಯು ಉಂಟಾಗಿ ಕೊಳೆಯು ಕಳೆದು ಹೋಗುತ್ತದೆ. ಒಂದು ಬಗೆಯ ಆನಂದದ ಅನುಭವವು ಆಗುತ್ತದೆ. ಪರಮಾತ್ಮನ ನಾಮಸ್ಮರಣೆಯಿಂದ ಹೃದಯದಲ್ಲಿ ಆನಂದದ ಅಲೆಗಳೆದ್ದು ವಿಶ್ವದ ರಚನೆಯೆಲ್ಲವೂ ಮರೆತು ಹೋಗುತ್ತದೆ. ಇದೇ ಭಗವ ದ್ಭಕ್ತಿಯ ಮಹಿಮೆಯು. ಪರಮಾತ್ಮನ ಪ್ರೀತಿಗೆ ಪ್ರಧಾನವಾದ, ಸುಲಭವಾದ ಸಾಧನವು, ಭಕ್ತಿಯು.

ಯೋಗ ವಿಚಾರ ವಿರಾಗ ವಿದ್ಯಾ ಕರ್ಮ ।
ಪೋಗಾವಿ ಬಹು ಕೋಟಲೆ ಗಳನು ।
ನೀಗಿ ನಿರ್ಮಳ ಶಿವಭಕ್ತಿ ಯೊಂದಿದೆ ಮುಕ್ತ ।
ನಾಗುವ ನಿದು ಪರಮಾರ್ಥ ।
ಮೋಕ್ಷ ಸಾಧನ ಸಾಮಗ್ಯ್ರಾಂ ಭಕ್ತಿರೇವ ಗರೀಯಸಿ ॥

ನಿಜಗುಣಶಿವಯೋಗಿ ಸಾಮಾನ್ಯರಾದವರು ಕಷ್ಟವೇಳೆಯಲ್ಲಿ ಏನು ಮಾಡುವುದು ಎಂದು ಕುಳಿತಾಗ ಭಕ್ತಿಮಾರ್ಗವು ಅವರ ಸಹಾಯಕ್ಕೆ ಬರು ತ್ತದೆ. ಸೃಷ್ಟಿಯಲ್ಲಿ ಭಯಂಕರ ವಸ್ತುಗಳನ್ನು ನೋಡಿದಾಗ ಉಂಟಾದ ಭೀತಿಯ ಮೂಲಕ ಜನಿಸಿದ ಭಕ್ತಿಯು ವೇದ, ಉಪನಿಷತ್ತು ಮತ್ತು ಭಗ ವದ್ಗೀತೆಯ ಕಾಲದಲ್ಲಿ ಪ್ರವಹಿಸಿ ಬಂದು ಎಲ್ಲೆಡೆಯಲ್ಲಿಯೂ ಹರಿದು ತಾನೇ ತಾನಾಗಿ ನಲಿದಾಡಿ ಇತಿಹಾಸದಲ್ಲಿಯೂ ಸಹ ಒಂದು ಬಗೆಯ ಬೆಳಕನ್ನು ಹರಡಿದೆ. ಭಾರತದಲ್ಲಿ ಜೈನ ಬೌದ್ಧಧರ್ಮಗಳ ಅನಂತರ ಮುಸಲ್ಮಾನ ಧರ್ಮದ ಪ್ರಾಬಲ್ಯವೂ ಹೆಚ್ಚಿ ಕೊನೆಗೆ ಜನರ ಕಣ್ಣು ತೆರೆಯುವಂತಾಗಿ ಭಕ್ತಿಯ ಬಾಗಿನವನ್ನು ಅಜನ್ಮ ಸೊತ್ತನ್ನಾಗಿ ಮಾಡಿಕೊಂಡರು. ಹದಿನೈದ್ರ ಹದಿನಾರನೆ ಶತಮಾನಗಳು ಧಾರ್ಮಿಕ ಅಶಾಂತಿಯ ಕಾಲವು. ಹಿಂದೂ ಧರ್ಮದ ವಿಚಾರಗಳು ಕಾಲಚಕ್ರಕ್ಕೆ ಸಿಕ್ಕ ಬಹಳವಾಗಿ ಸಂಕುಚಿತವಾಗು ತ್ತಿದ್ದವು. ತಿಳಿವಳಿಕೆ ಇಲ್ಲದ ಯಾವ ಹಿಂದೂವಾದರೂ ಕೊಂಚ ತಪ್ಪು ಮಾಡಿದನು ಎಂದರೆ ಪತಿತನೆಂದು ಬಹಿಷ್ಕರಿಸಲ್ಪಡುತ್ತಿದ್ದನು. ಹಿಂದೂ ಗಳು ತಮ್ಮ ಮುಂದೆಯೇ ತಮ್ಮ ಸೋದರ ಸೋದರಿಯರು ಮುಸಲ್ಮಾನ ರಾಗುತ್ತಿರುವುದನ್ನು ನೋಡುತ್ತಿದ್ದರು. ಆದರೆ ಅವರಿಗೆ ಪ್ರಾಯಶ್ಚಿತ್ತ ಮಾಡಿಸಿ ತಮ್ಮಲ್ಲಿ ಸೇರಿಸಿಕೊಳ್ಳುವ ಸಹನೆಯು ಇರಲಿಲ್ಲ. ಈ ವೇಳೆಯಲ್ಲಿ ಉದಾರ ಭಾವನೆಯ ಹೃದಯಕ್ಕೆ ಅವಕಾಶವಾಗಿ ನೀಚರಿಗ ಪತಿತರಿಗೆ ಮತ್ತು ಅಧರ್ಮಿ ಗಳಿಗೆ ಪ್ರೀತಿಯ ಪರಮಾನ್ನವನ್ನು ಬಡಿಸಿ, ಭಕ್ತಿಯ ಬೆಳೆಯ ಹುಲುಸಿಗೆ

ಹಾದಿಹಾಕಿಕೊಟ್ಟರು. ಕುರುಬನಾದ ಕನಕ, ಚಮ್ಮಾರನಾದ ದೈದಾಸ, ಮುಸಲ್ಮಾನನಾದ ಕಬೀರ, ಅಸ್ಪೃಶ್ಯನಾದ ತಿರುಪಾಣಿ ಮುಂತಾದವರನ್ನು ಭಗವಂತನಲ್ಲಿ ಭಕ್ತಿಪ್ರದರ್ಶಿಸುವ ಅಧಿಕಾರಿಗಳೆಂದು ಸಾರಿತು. ಈ ಭಕ್ತಿಭಾವನೆಯಿಂದ ಅಕ್ಬರನಂತಹ ಗುಣಗ್ರಾಹಿ ಮುಸಲ್ಮಾನನೂ ಹಿಂದುಗಳ ಭಕ್ತಿಗೆ ಬೆರಗಾದುದಲ್ಲದೆ ಅನೇಕ ಮುಸಲ್ಮಾನರು ರಾಧಾಕೃಷ್ಣ ಪ್ರೇಮಿಗಳಾದರು. ಅನಂತರ ರಾಮಕೃಷ್ಣ ಪರಮ ಹಂಸರ ಪ್ರಭಾವದಿಂದ ಭಾರತದಲ್ಲಿ ಭಕ್ತಿಯು ಭದ್ರವಾಗುವಂತಾಯಿತು. ಭಕ್ತಿಯು ಇತಿಹಾಸದ ಮಾತಾಗಿದೆ. ಇಂದಿನ ಜೀವನದ ಕಥೆಯಾಗಿ ಕರ್ನಾಟಕವು ಭಕ್ತಿಯ ತವರು ಎನ್ನುವಂತೆ ಕರ್ನಾಟಕದ ಭಕ್ತಿ ಪಂಥವು ಮಾಡಿತು. ಕರ್ನಾಟಕದ ಶಿವ ಶರಣರು ತಮ್ಮ ಭಕ್ತಿಯ ಯುಕ್ತಿಯಿಂದ ಕೈಲಾಸವನ್ನೇ ಕಲ್ಯಾಣಕ್ಕೆ ತರಲು ಮಾಡಿದ ಅದ್ಭುತ ಸಾಧನೆಯು ಕರ್ನಾಟಕದ ಭಾರತದ ಅಷ್ಟೇಕೆ ಇಡೀ ಜಗತ್ತಿನಲ್ಲಿ ಹಿರಿದಾಗಿ ನಿಂತಿತು. ಶಿವಭಕ್ತಿಯ ಭಂಡಾರವನ್ನು ಕಲ್ಯಾಣದಲ್ಲೊಡೆದು ಕರ್ನಾಟಕದ ತುಂಬೆಲ್ಲ ಅದನ್ನು ಸೂರೆ ಮಾಡಿದವರು ಬಸವೇಶ್ವರರು. ಸ್ವಕೀಯ ಸಂಸಾರದೊಳಗಿನ ಕಾರ್ಯಗಳೆಲ್ಲವನ್ನೂ ಈಶ್ವರಾರ್ಪಣ ಭಾವದಿಂದಲೇ ಮಾಡಿದರೆ ಮಾತ್ರ ಭಕ್ತಿ ಭಾವದ ಬೆಳಕು ಎಂಬುದನ್ನು ಭಗವದ್ಗೀತೆಯು ಆಡಿ ತೋರಿಸಿದಂತೆಯೇ ಬಸವ ಗೀತೆಯು ಮಾಡಿ ತೋರಿಸಿತು. ಹೊಲೆ ಹದಿನೆಂಟು ಜಾತಿಯವರು ಬಲ್ಲಿದ ಒಡನರು, ಪತಿತ ಪಾವನರು, ಹೆಂಗಸು ಗಂಡಸರೂ ಸಕಲರೂ ಶಿವಭಕ್ತಿಯ ಮಹಾಪೂರದಲ್ಲಿ ಮುಳುಗಿ ಮುಕ್ತರಾದವರ ಇತಿಹಾಸವು ಅದ್ಭುತವೂ, ಮನ ಮೋಹಕವೂ ಆಗಿದೆ. ಹರಿಯ ಮಹಿಮೆಯನ್ನು ಕಂಡು ಆನಂದಿಸಿ ನಲಿದು ಅದನ್ನು ಪರರಿಗೆ ತಿಳಿಸಲು ಊರಿಂದ ಊರಿಗೆ ಹೋಗಿ ಸುತ್ತಿ ಸುಳಿದಾಡಿ ಪರಮಾತ್ಮನ ಕರುಣೆ ಪಡೆಯುವ ಬಗೆಯನ್ನು ತೋರಿಸುವುದರ ಮೂಲಕ ಜಾತಿ ಕುಲಗಳ ಭೇದವಿಲ್ಲದೆ ಉದ್ಧಾರ ಮಾರ್ಗಕ್ಕೆ ಕೈಹಾಕಿ, ಜನರ ಸಂಸ್ಕೃತಿಯನ್ನು ಮೇಲ್ಮಟ್ಟಕ್ಕೆ ಕರುವುದಕ್ಕಾಗಿ ಕಾರ್ಯಗೈದ ಹರಿದಾಸರು ಸಫಲರಾದರು. ಇಂದಿನ ಯುಗದಲ್ಲಿ ಗಾಂಧಿ, ರವೀಂದ್ರ, ರಮಣಋಷಿ, ಅರವಿಂದ ಮಹರ್ಷಿ ಇವರೆಲ್ಲರೂ ಇಡೀ ಭಾರತದಲ್ಲಿ ಭಕ್ತಿಯ ಬೆಳೆಸನ್ನು ಜನತೆಗೆ ಕೊಟ್ಟರು.

ಮಯ್ಯೇವ ಮನ ಆಧತ್ಸ್ವ ಮಯಿಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತಊರ್ಧ್ವಂ ನಸಂಶಯಃ ॥

—ಭಗವದ್ಗೀತೆ.

———

# ಲಿಂಗಾಷ್ಟಕಂ.

(ಸಂಗ್ರಾಹಕಕಃ— ಬಸವನ ಬಳಗ– ಗೋಕಾಕ)



ಬ್ರಹ್ಮ ಮುರಾರಿ ಸುರಾರ್ಚಿತ ಲಿಂಗಂ ।
ನಿರ್ಮಲ ಭಾಷಿತ ಶೋಭಿತ ಲಿಂಗಂ ॥

ಜನ್ಮಜ ದುಃಖ ವಿನಾಶಿತ ಲಿಂಗಂ ।
ತತ್ಪ್ರಣಮಾಮಿ ಸದಾಶಿವ ಲಿಂಗಂ ॥

ದೇವ ಮುನಿ ಪ್ರವರಾರ್ಚಿತ ಲಿಂಗಂ ।
ಕಾಮದಹನ ಕರುಣಾಕರ ಲಿಂಗಂ ॥

ರಾವಣದರ್ಪ ವಿನಾಶಿತ ಲಿಂಗಂ ।
ತತ್ಪ್ರಣಮಾಮಿ ಸದಾಶಿವ ಲಿಂಗಂ ॥

ಸರ್ವ ಸುಗಂಧ ಸುಲೇಪಿತ ಲಿಂಗಂ ।
ಬುದ್ಧಿ ವಿವರ್ಧನ ಕಾರಣಲಿಂಗಂ ॥

ಶಿದ್ಧ ಸುರಾಸುರ ವಂದಿತ ಲಿಂಗಂ ।
ಕನಕ ಮಹಾಮಣಿ ಭೂಷಿತ ಲಿಂಗಂ ॥

ಫಣಿಪತಿವೇಷ್ಟಿತ ಶೋಭಿತ ಲಿಂಗಂ ।
ದಕ್ಷ ಸುಯಜ್ಞ ವಿನಾಶಿತ ಲಿಂಗಂ ॥

ತತ್ಪ್ರಣಮಾಮಿ ಸದಾಶಿವಲಿಂಗಂ ।
ಕುಂಕುಮ ಚಂದನಲೇಪಿತ ಲಿಂಗಂ ।

ಪಂಕಜಹಾರ ಸುಶೋಭಿತ ಲಿಂಗಂ ॥
ಸಂಚಿತಪಾಪ ವಿನಾಶಿತ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ದೇವ ಗಣಾರ್ಚಿತ ಶೋಭಿತ ಲಿಂಗಂ ॥

ಭಾವೈಕ ಭಕ್ತಿ ಭಿರೇವಚನ ಲಿಂಗಂ ।
ದಿನಕರ ಕೋಟಿ ಪ್ರಭಾಕರ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಅಷ್ಟದಳೋಪರಿವೇಷ್ಟಿತ ಲಿಂಗಂ ॥

ಸರ್ವಸಮುದ್ಭಾ ಕಾರಣ ಲಿಂಗಂ ।
ಅಷ್ಟದರಿದ್ರ ವಿನಾಶಿತ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಸುರ ಗುರು ಸುರವರ ಪೂಜಿತ ಲಿಂಗಂ ॥

ಸುರವನ ಪುಷ್ಪ ಸದಾರ್ಚಿತ ಲಿಂಗಂ ॥
ಪರಂಪರಂ ಪರಮಾತ್ಮಕ ಲಿಂಗಂ ॥

ತತ್ಪ್ರಣಮಾಮಿ ಸದಾಶಿವಲಿಂಗಂ ।
ನೇಮ ಹೋಮ ಧೂಮ ಕಾಮಿತ ಲಿಂಗಂ ॥

ನಾಮರೂಪ ಕ್ರಿಯಾ ರಹಿತದ ಲಿಂಗಂ ।
ಕ್ಷೇಮ ಪ್ರೇಮರವಿ ನೇಯುವ ಲಿಂಗಂ ।

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಧರ್ಮ ಪರಿತ್ರಾಯ ಧರಿಸಿದ ಲಿಂಗಂ ॥

ಕರ್ಮ ಕನಾತ್ರಯ ಕರಸಿದ ಲಿಂಗಂ ।
ಕೂರ್ಮವರ ನರಸಿಂಹ ಹರಿಸಿದ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಏಕಮೇವ ನಿಜಾಂಶು ಲೋಕದ ಲಿಂಗಂ ॥

ಏಕಮೇವ ವಿಶ್ವಾರೂಪದ ಲಿಂಗಂ ।
ತತ್ಪ್ರಣಮಾಮಿ ಸದಾಶಿವಲಿಂಗಂ ॥

ಆಕಾರ ನಿರಾಕಾರ ಏಕದ ಲಿಂಗಂ ।
ಶಿವಶಕ್ತಿ ದ್ವಂದ್ವದ ಸುಂದರ ಲಿಂಗಂ ॥

ದ್ವೈತಾದ್ವೈತದ ಮುಖ್ಯದ ಲಿಂಗಂ ।
ತತ್ಪ್ರಣಮಾಮಿ ಸದಾಶಿವಲಿಂಗಂ ॥

ಮೂರು ಕಾಲದಿ ಸೇರಿದ ಲಿಂಗಂ ।
ಮೂರು ಲೋಕದಿ ತೋರಿದ ಲಿಂಗಂ ॥

ಮೂರು ಮೂರ್ತಿಯ ಮೀರಿದ ಲಿಂಗಂ ।
ತತ್ಪ್ರಣಮಾಮಿ ಸದಾಶಿವ ಲಿಂಗಂ ॥

ನಾಲ್ಕು ದಿಕ್ಕಿನೊಳು ತೋರಿದ ಲಿಂಗಂ ।
ನಾಲ್ಕು ಆಕಾರ ಮೀರಿದ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಪಂಚಭೂತದಿ ಸೇರಿದ ಲಿಂಗಂ ॥

ಪಂಚಕೋಶದಿ ತೋರಿದ ಲಿಂಗಂ ।
ಪಂಚ ಬ್ರಹ್ಮನ ಮೀರಿದ ಲಿಂಗಂ ॥

ತತ್ಪ್ರಣಮಾಮಿ ಸದಾಶಿವಲಿಂಗಂ ।
ಆರು ಮೂರುಗುಣ ಊರಿದ ಲಿಂಗಂ ॥

ಆರು ಮೂರು ಮುಖ ತೋರಿದ ಲಿಂಗಂ ।
ಆರು ಮೂರು ಗೃಹ ದ್ವಾರದ ಲಿಂಗಂ ॥

ತತ್ಪ್ರಣಮಾಮಿ ಸದಾಶಿವಲಿಂಗಂ ।
ಸಪ್ತಸಾಗರದೊಳಗಿರುತಿರುವ ಲಿಂಗಂ ॥

ಸಪ್ತಪಾತಾಳಕ್ಕೆಳದಿಹರು ಲಿಂಗಂ ।
ಸಪ್ತಸ್ವರ ತಾಳಮೇಳದ ಲಿಂಗಂ ॥

ತತ್ಪ್ರಣಮಾಮಿ ಸದಾ ಶಿವಲಿಂಗಂ ।
ಅಷ್ಟೈಶ್ವರ್ಯದ ವೃಷ್ಟಿಯಲಿಂಗಂ ॥

ಅಷ್ಟಾವರಣ ದೃಷ್ಟಿಯ ಲಿಂಗಂ ।
ತತ್ಪ್ರಣಮಾಮಿ ಸದಾ ಶಿವಲಿಂಗಂ ॥

ನವರತ್ನ ಮಣಿಗಳ ಕೆತ್ತಿದ ಲಿಂಗಂ ।
ನವಖಂಡ ಪೃಥ್ವಿಯ ಸುತ್ತಿದ ಲಿಂಗಂ ॥

ತತ್ಪ್ರಣಮಾಮಿ ಸದಾ ಶಿವಲಿಂಗಂ ।
ದೇಶದಿಬ್ಲಾದಿ ಬೆಳಗುವ ಲಿಂಗಂ ॥

ದೇಶವಿಧ ನೌಭತ್‌ನಾದದ ಲಿಂಗಂ ।
ದಶಕಂಠ ಕಾಶೀ ಈಶ್ವರ ಲಿಂಗಂ ॥

ತತ್ಪ್ರಣಮಾಮಿ ಸದಾ ಶಿವಲಿಂಗಂ ।
ಸ್ತೋತ್ರ ಧ್ಯಾನದ ಸೊತ್ತದ ಲಿಂಗಂ ॥

ಕ್ಷೇತ್ರ ಯಾತ್ರೆಯ ಗಾತ್ರದ ಲಿಂಗಂ ।
ಅರ್ಚನೆ ಯಾರುತಿ ನೇತ್ರದ ಲಿಂಗಂ ॥

ತತ್ಪ್ರಣಮಾಮಿ ಸದಾ ಶಿವಲಿಂಗಂ ।
ಸಿಂಧುವು ತಾನು ಶಿವ ಸಿದ್ಧ ಲಿಂಗಂ ॥

ಚಂದ್ರಮೌಳಿ ಕಂದು ಗೊರಳದ ಲಿಂಗಂ ॥
ಮಂದರ ವಾಸದ ಮಹಾಲಿಂಗಂ ।

ತತ್ಪ್ರಣಮಾಮಿ ಸದಾ ಶಿವಲಿಂಗಂ ।
ಅಂತು ಗೈಪ ಕ್ರಾಂತಿ ಕಾಂತಿಯಲಿಂಗಂ ॥

ಅಂತಕ ನಂತರ ಶಾಂತಿಯ ಲಿಂಗಂ ।
ಅನಂತ ರೂಪದ ಆದಿಯ ಲಿಂಗಂ ॥

ತತ್ಪ್ರಣಮಾಮಿ ಸದಾ ಶಿವ ಲಿಂಗಂ ।
ಆದಿ ಅನಾದಿ ಭೇದದ ಲಿಂಗಂ ॥

ವೇದಾಗಮಗ ಮೋಹದ ಲಿಂಗಂ ।
ಅನುಭವ ಗೊಂದಿಹ ಅಮೃತ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಲಿಂಗ ಸೊತ್ತಿದ ಅರ್ಥಿಯ ಲಿಂಗಂ ॥

ಸಂಗಮೋಕ್ಷ ಪದ ನೀಯುವ ಲಿಂಗಂ ।
ಮಂಗಲಾಂಗ ಮಹಾ ಮಹಿಮದ ಲಿಂಗಂ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ।
ಸರಸಿಜಾ ಪುಷ್ಪ ಸಾಮರ್ವತ ಲಿಂಗಂ ॥

ಸೃಷ್ಟಿಯಲ್ಲಿಯ ಸ್ಥಿತಿ ಕಾರಣ ಲಿಂಗಂ ।
ದುಷ್ಟವ್ಯಾಧಿ ವಿನಾಶಿತ ಲಿಂಗ ॥

ತತ್ಪ್ರಣಮಾಮಿ ಸದಾಶಿವ ಲಿಂಗಂ ॥

———————

# ಪ್ರಸಾದ ಸಹಸ್ರ

( ಸಂಗ್ರಾಹಕಃ- ಕೈ. ವಾ. ಸಿ. ಚ. ಪುರಾಣಿಕಮಠ. )

" ಧರ್ಮಏವಹತೋ ಹಂತ ಧರ್ಮೋ ರಕ್ಷತಿ ರಕ್ಷತಃ

—ಶ್ರುತಿ.

ವೀರಶೈವ ಧಾರ್ಮಿಕ ಗ್ರಂಥಗಳ ಸಂಶೋಧನ ಹಾಗು ಪ್ರಚಾರ ಈ ಕಾರ್ಯಗಳ ಜಾಗ್ರತೆಯು ಇತ್ತೀಚೆಗೆ ಆಗ ಹತ್ತಿದೆ. ರಾ. ಬಾ. ಮಲ್ಲಪ್ಪನವರು ವಾರದ ಸೊಲ್ಲಾಪುರ, ಶ್ರೀಯುತ ವಾಯ. ವೀರಸಂಗಪ್ಪನವರು ಮೈಸೂರ ಇವರು ಪ್ರಥಮದಲ್ಲಿ ಕೈಕೊಂಡು ಬಹಳ ಕೆಲಸಗಳನ್ನು ಮಾಡಿದರು. ಇವರು ಅಚ್ಚು ಹಾಕಿಸಿದ ಗ್ರಂಥಗಳೇ ಎಲ್ಲರ ಕೈಗಳಲ್ಲಿ ಓಡಾಡುತ್ತಿರುವವು. ಇವರಂತೆ ರಾವಸಾಹೇಬ ಪಿ. ಜಿ. ಹಳಕಟ್ಟಿಯವರು "ಶಿವಾನುಭವ" ವೆಂಬ ಮಾಸ ಪತ್ರಿಕೆಯ ಮುಖಾಂತರ ಅನೇಕ ವೀರಶೈವ ಧಾರ್ಮಿಕ ಗ್ರಂಥಗಳನ್ನು ಪ್ರಸಿದ್ಧಿಸಿರುವರು. ಇದು ಒಳ್ಳೇ ಸ್ತುತ್ಯವಾದ ಕೆಲಸವು.

ನಮ್ಮ ಈ ವೀರಶೈವ ಧರ್ಮವು ಅನಾದಿ ಸಂಸಿದ್ಧವಾದ ಧರ್ಮವಾಗಿದೆ. ಇದರ ಅನಾದಿ ಕಾಲದ ಸಂಸ್ಕೃತಿಗಳನ್ನು ತಿಳಿದುಕೊಳ್ಳಲಿಕ್ಕೆ ಹಲವು ಸಾಧನ ಸಾಧನಗಳಿದ್ದರೂ ಅವೆಲ್ಲವುಗಳಲ್ಲಿ ಗ್ರಂಥಗಳು ಬಹು ಮಿಗಿಲಾದವುಗಳಾಗಿವೆ. ವಿದ್ವಾಂಸರು ಈ ಕಾರ್ಯ ಗೌರವವನ್ನು ಅನುಲಕ್ಷಿಸಿ ಧಾರವಾಡ, ಬೆಂಗಳೂರ, ಮೈಸೂರ ಮುಂತಾದ ಸ್ಥಳಗಳಲ್ಲಿ ಪ್ರಯತ್ನಿಸಹತ್ತಿದ್ದಾರೆ. ಪ್ರತಿಯೊಬ್ಬರೂ ತಂತಮ್ಮ ಎಡಬಲಗಳಲ್ಲಿರುವ ಗುರುಸ್ಥಲ ಅಥವಾ ಷಟಸ್ಥಲ ಮಠಗಳಲ್ಲಿ ಇಲ್ಲವೆ ಭಕ್ತರಲ್ಲಿ ದೊರೆಯುತ್ತಿರುವ ಪೂರ್ವ ಕಾಲದ ಹೊತ್ತಿಗೆಗಳನ್ನು ಶೋಧಿಸಿ ಹೊರಗೆ ತೆಗೆಯಿಸಲಿಕ್ಕೆ ಪ್ರಯತ್ನಿಸಿದರೆ ಬಹಳ ಕೆಲಸಗಳಾಗ ಬಹುದೆಂದು ನಂಬಿಗೆಯದೆ.

ನಮ್ಮ ಪೂರ್ವಜರು ನಿವೃತ್ತಿ ಮಾರ್ಗಾವಲಂಬಿಗಳಾಗಿದ್ದರೆಂದೂ ಅವರುಗಳು ರಚಿಸಿದ ವಿವಿಧ ಗ್ರಂಥಗಳು ಅಲ್ಲಲ್ಲಿ ಹುಳಹತ್ತಿ ಹೋಗುತ್ತಿರುವವೆಂದೂ ವಾಡಿಕೆಯಲ್ಲಿ ರೂಢವಾಗಿದೆ. ಇದು ಕೆಲವಂಶದಿಂದ ನಿಜವಾಗಿ

ಈ ದುಃಸ್ಥಿತಿಯು ಇನ್ನೂ ಕೆಲವು ಕಾಲ ನಮ್ಮ ಧರ್ಮ ದಲ್ಲುಳಿದರೆ ಓಡುತ್ತಿರುವ ಜಗತ್ತಿನಲ್ಲಿ ನಾವು ಬಹುದೂರು ಹಿಂದೆ ಉಳಿಯ ಬೇಕಾಗುವದು. ಆದ್ದರಿಂದ ಆಧುನಿಕ ಪ್ರಾಜ್ಞರು ಈ ದುರ್ದೋಷವನ್ನು ಕಿತ್ತೊಗೆಯಲು ಪ್ರಯತ್ನಿಸುವದು ಸ್ತುತ್ಯವಾಗಿದೆ.

ಈ ಪ್ರಸಾದ ಸಹಸ್ರವೆಂಬ ಗ್ರಂಥವು ಇಲ್ಲಿಯ ಶಿ| ಸಂಗಯ್ಯನವರು ಸಾರಂಗಮಠ (ಹಿರೇಮಠ) ಎಂಬವರ ಸಂಗ್ರಹದಲ್ಲಿತ್ತು. ಇದನ್ನು ಇವರ ಅಳಿಯಂದಿರಾದ ಶಿ. ಶಿವಸಂಗಯ್ಯಾನವರು ಅರಳೆಲೆಮಠ ಚಳಗೇರಿ. ಎಂಬವರಿಂದ ದೊರೆಯಿತು. ಇದು ಶಿವ ಸಹಸ್ರ, ಗಣಸಹಸ್ರ. ದೇವಿಸಹಸ್ರ ವೊದಲಾದ ಗ್ರಂಥಗಳಂತೆ ನಾಮಾವಳಿಯಿಂದ ತುಂಬಿಕೊಂಡಿರುವದಿಲ್ಲ. ವೀರಶೈವ ಧರ್ಮದ ಬಹು ಗಟ್ಟಿಮುಟ್ಟಾದ ತಳಹದಿರೂಪ ಷಟ್‌ಸ್ಥಳ ಕ್ರಮದಲ್ಲಿ ವಿವರಿಸಲ್ಪಟ್ಟದೆ. ಓದುವದರಿಂದ ಆಯಾಸ್ಥಳಗಳ ಮಹತ್ವವೂ ತತ್ವಗಳ ವಿವರಣೆಯೂ ಕ್ರಮವೂ ಸಂಕ್ಷೇಪವಾಗಿ ಬಹುಬೇಗ ತಿಳಿಯುತ್ತದೆ.

ಈ ಗ್ರಂಥವನ್ನು ಆಮೂಲಾಗ್ರವಾಗಿ ತಿರಿವಿ ಹಾಕಿದರೂ ಗ್ರಂಥ ಕರ್ತರ ಹೆಸರು ದೊರೆಯಲಿಲ್ಲ. ಆದರೂ ಈ ಗ್ರಂಥದ ಕಡೆಯ ಭಾಗದಲ್ಲಿದ್ದ ಕಂದ ಪದ್ಯದ "ಬಂದೊದಗುವದು ನೈಜದಿಂ| ದಾಮಹಾಂತ ಚನ್ನ ಬಸವನದಯದಿಂ||" ಎಂಬ ಅಂಶದಿಂದ (ಕ್ರಿ.ಶ.೧೨) ಚನ್ನಬಸವೇಶ್ವರರ ಕಾಲಕ್ಕೆ ಈ ಗ್ರಂಥವು ರಚಿಸಲ್ಪಟ್ಟಿರಬೇಕೆಂದು ತಿಳಿಯ ಬರುತ್ತದೆ. ಇದರಲ್ಲಿಯ ೭೨ದ್ರಿಂದ ೧೧೦, ೩೯೧ದಿಂದ ೪೩೦, ೬೭೧ದಿಂದ ೬೭೩. ೬೪೯ದಿಂದ ೭೧೦ ಈ ಕ್ರಮಾಂಕಿಗಳ ಪುಟಗಳು ಎಷ್ಟು ಪರಿಶ್ರಮ ಪಟ್ಟರೂ ಇವರ ಸಂಗ್ರಹದಲ್ಲಿ ದೊರೆಯಲಿಲ್ಲ. ಆದ್ದರಿಂದ ಅವನ್ನು ಕೊಟ್ಟಿಲ್ಲ. ಈ ಗ್ರಂಥದ ಪ್ರತಿಯು ಯಾರಲ್ಲಾದರೂ ಇದ್ದರೆ ಅದನ್ನು ಶಿವಾನುಭವ ಆಫೀಸಿಗೆ ಕಳಿಸಬೇಕು. ಅದನ್ನು ಅವರು ನೋಡಿಕೊಂಡು ಪರತ ಕಳಿಸುವರು ಹಾಗು ಮುಂದಿನ ಸಂಚಿಕೆಯಲ್ಲಿ ಅವನ್ನು ಪ್ರಸಿದ್ಧಿಸುವದಲ್ಲದೆ ಈ ಗ್ರಂಥವೂ ಪೂರ್ತಿಯಾಗುವದು.

ನಮ್ಮ ಪೂರ್ವಜರು ಅಷ್ಟಾವರಣ ಷಟ್‌ಸ್ಥಳ ಇವುಗಳ ಮರ್ಮಗಳನ್ನರಿತು ಒಳ್ಳೇ ಬಂಧುರವಾಗಿ ಆಚರಿಸಿದ್ದಾರೆ. ಒಂದೊಂದು ಸ್ಥಳದಲ್ಲಿ ಒಂದೊಂದು ಪವಾಡಮಾಡಿ ತೋರಿಸಿದ್ದಾರೆ. ಅಂಥ ಐತಿಹಾಸಿಕ ಸ್ಥಳಗಳು ಬಹಳ ಕಡೆಯಲ್ಲಿರುತ್ತವೆ. ಆದರಂತೆ ಪೂರ್ವಕಾಲದ ಯಾವನೊಬ್ಬ ವೀರಶೈವ ಮಹಾತ್ಮನು ಪ್ರಸಾದ ಮಹಿಮೆಯನ್ನು ಮಾಡಿ ತೋರಿಸಿ ಈ ಗ್ರಂಥ

ವನ್ನು ರಚಿಸಿದಂತೆ ಮಾತ್ರ ಭಾಸವಾಗುತ್ತದೆ. ವಾಚಕರೆ! ಈ ಭಾಸವು ಸಟೆಇರಲಿ. ದಿಟವಿರಲಿ ಯಾವತ್ತು ವೀರಶೈವರು ಮೇಲಿನ ಶ್ರುತಿ ವಾಕ್ಯದಂತೆ ತತ್ವಗಳನ್ನು ಅರಿತುಕೊಂಡು ಅಚ್ಚು ಕಟ್ಟಾಗಿ ಆಚರಿಸಿ ಪುನೀತರಾಗಬೇಕೆಲ್ಲವೆ?

ಈ ಗ್ರಂಥವನ್ನು ಒದಗಿಸಿಕೊಟ್ಟವರನ್ನೂ ಪ್ರಸಿದ್ಧ ಪಡಿಸಲಿಚ್ಛಿಸಿದ ಶಿವಾನುಭವ ಚಾಲಕರನ್ನೂ ಪುನಃ ಪರಮಾತ್ಮನನ್ನೂ ಸ್ಮರಿಸಿ ಪರಿಶೋಧಕನು ಪ್ರಸ್ತಾವನೆಯನ್ನು ಮುಗಿಸುವನು.

ಶ್ರೀಗುರು ದಕ್ಷಿಣಾಮೂರ್ತಯೇನಮಃ

## ಷಟ್-ಸ್ಥಲ ಮಾಲಿಕಾ.

ಕಂದ:— ಶ್ರೀಮದ್ವೀರಶೈವ ಧರ್ಮದ
ಭೂಮಿಕೆ ಸುವಿಚಾರ ಸಾರ ಷಟ್‌ಸ್ಥಲ ಕ್ರಮುಮುಂ ||
ಕಾಮಿಪ ಪ್ರಸಾದ ಫಲಮುಂ |
ನೇಮದಿ ಚಿಂತಿಪುದು ಮುದದಿ ಪ್ರಸಾದ ಸಹಸ್ರಂ ||೧||

## ಭಕ್ತಸ್ಥಲ

ಕಂದಃ— ಜಗದೀಶ ನಾಶ ರಹಿತಂ |
ಸೊಗಯಿಪ ಪರಮಾರ್ಥ ರೂಪಕಾರಣ ಕರ್ತಂ ||
ಮಿಗಿಲಾದ ಭಾವತೆರದಿಂ |
ಸಗುಣಾನ್ವಿತ ನಿರುತ ಧ್ಯಾನ ಧಾರಣ ಭಕ್ತಿಂ ||೨||

## ಮಹೇಶ್ವರ ಸ್ಥಲ

ಕಂದಃ— ಮುಂದಿನ ವಿನುತ ಮಹೇಶ್ವರ |
ಬಂಧುರ ಸ್ಥಲವರಿತು ಧರಿಸಿ ಚರಿಸಲ್‌ನಿರುತಂ
ವಂದಿತ ಸನ್ನುತ ಹರುಷಂ |
ಬಂದುದು ಮಿಗೆಭಾವ ಜನಿತ ನಿರ್ಮಲಸೌಖ್ಯಂ ||೩||

## ಪ್ರಸಾದಿ ಸ್ಥಲ.

ಕಂದ;— ಮರೆಯದು ಮುಂದಿನ ವಿವರಂ |
ತೊರೆಯದು ಘನ ಮಹಿಮೆ ಸತ್ಪ್ರಸಾದಸ್ಥಲಮುಂ |
ಚರಿಪುದು ನಿರುತಂಮನದಿಂ |
ಬರುವದು ಶಂಕರನ ಸೌಖ್ಯ ಸಂಪದಸಾರಂ ||೪||

## ಪ್ರಾಣಲಿಂಗಿ ಸ್ಥಲ.

ಕಂದ:— ಪ್ರಣವು ದೊಳಡಗಿದ ಲಿಂಗಂ ।
ತೃಣಗಿರಿಯೂಕಾಶ ತೇಜ ಭೂತಳ ಭರಿತಂ ॥
ತಣಿಯದೆ ತಿಳಿಯಲು ಮನದಿಂ ।
ಗುಣ ಸಂಪ್ರಾಪ್ತಿ ಪ್ರಾಣಲಿಂಗಿಗೆ ಸರ್ವಂ ॥೫॥

## ಶರಣ ಸ್ಥಲ

ಕಂದ:— ಮಿಗಿಲಾದ ನಲ್ಮೆ ಭಾವದಿ ।
ಸೊಗಯಿಪ ಮನದಂತರಂಗ ನಿರ್ಮಲ ಪೂತ್ರಂ ॥
ಜಗದೀಶತತ್ವ ಗುಣಿಗಂ ।
ಬಗೆಸಲ್ವುದು ವಿನುತ ಶರಣ ಸಂಪದ ಸ್ಥಾನಂ ॥೬॥

## ಐಕ್ಯಸ್ಥಲ

ಕಂದ:— ಮಹಿಮರಿಗತಿ ಪಿರಿದೆನಿಸಿದ ।
ಬಹುವಿಧದಾನಂದ ಜ್ಯೋತಿ ಪೂಜ್ಯದ ಸ್ಥಾನಂ ॥
ಗುಹೆ ಜನಕವಾಸ ವೈಕ್ಯಂ ।
ವಿಹಿತರಿಗನುಕೂಲತತ್ವ ಜೀವನ್ಮುಕ್ತಿಂ ॥ ॥೭॥

"ಮಾಪುರೇಶ"

# ಪ್ರಸಾದ ಸಹಸ್ರ

ಕಂದ॥ ಮಹಾಘನ ಪ್ರಸಾದ ಸಹಸ್ರನಾಮ ।
ಇಹ ಪ್ರಸಾದ ಭಾಗದೊಳ್ ಸ್ಮರಿಸಲ್ ।
ಬಹ ನಿಜಪದಾದಿ ಸಕಲೈಶ್ವರ್ಯ ಸಂಪ್ರಾಪ್ತಿಃ ॥

ಓಂ ಘನ ಮಹದೈಶ್ವರ್ಯ ಪ್ರಕಾಶ ಪ್ರಸಾದವೇನಮ :
ಓಂ ನಿಜಾನಂದ ಪರಿಪೂರ್ಣೈಶ್ವರ್ಯ ಪ್ರಸಾದವೇನಮ :
ಓಂ ನಿತ್ಯಾನಂದ ನಿಜೈಶ್ವರ್ಯ ಪರಮ ಪ್ರಸಾದವೇನಮ :
ಓಂ ನಿತ್ಯಾನಂದ ಸದಮಲ ಸುಖ ಪ್ರಸಾದವೇನಮ :
ಓಂ ಅನಾದಿ ಸಂಸಿದ್ಧ ಸರ್ವೈಶ್ವರ್ಯ ಪ್ರಸಾದವೇನಮ :
ಓಂ ಸಹಜ ಬ್ರಹ್ಮಾನಂದ ಪರಿಪೂರ್ಣ ಪ್ರಸಾದವೇನಮ :

ಓಂ ನಿರುಪಮ ಬ್ರಹ್ಮಾನಂದ ನಿಜ ಪ್ರಸಾದವೇನಮಃ
ಓಂ ನಿರವಯ ಜ್ಞಾನಾನಂದ ಪೂರ್ಣ ಪ್ರಸಾದವೇನಮಃ
ಓಂ ಪರಿಪೂರ್ಣ ಜ್ಞಾನಾನಂದ ಮಯ ಪ್ರಸಾದವೇನಮ :
ಓಂ ಪರಮಜ್ಞಾನ ಪರಿಪೂರ್ಣ ಪ್ರಸಾದವೇನಮಃ
ಓಂ ಪರಮ ನಿರಂಜನ ಪ್ರಸಾದವೇನಮ :
ಓಂ ಮಹಾಶೂನ್ಯ ತೇಜೋಮಯ ಪ್ರಸಾದವೇನಮಃ
ಓಂ ನಿಷ್ಕಲಾನಂದ ತೇಜೋಮಯಾತ್ಮಕ ಪ್ರಸಾದವೇನಮ :
ಓಂ ನಿಜಚಿಚ್ಚೈತಾಂನ್ಯಾತ್ಮಕ ಪ್ರಸಾದವೇನಮಃ
ಓಂ ಚಿತ್ಪರಮ ಚೈತನ್ಯ ಪ್ರಸಾದವೇನಮಃ
ಓಂ ಚಿನ್ಮಯ ಮೂರ್ತಿ ಚಿರಪ್ರಸಾದವೇನಮಃ
ಓಂ ಚಿನ್ನಾದಮಯ ಪ್ರಸಾದವೇನಮಃ
ಓಂ ಚಿದ್ಬಿಂದು ಮೂರ್ತಿ ಪ್ರಸಾದವೇನಮಃ
ಓಂ ಚಿತ್ಕಲಾನ್ವಿತ ಪ್ರಸಾದವೇನಮ :
ಓಂ ಚತುರ್ವಿಧಾತ್ಮಕ ಪ್ರಶಾದವೇನಮ :
ಓಂ ಪರಶಕ್ತಿ ಪ್ರಸನ್ನ ಪ್ರಸಾದವೇನಮ :
ಓಂ ಪರನಾದಮಯ ಪ್ರಸಾದವೇನಮ :
ಓಂ ಪರಬಿಂದು ಮಯ ಪ್ರಸಾದವೇನಮ :
ಓಂ ಪರ ಕಳಾ ಮಯ ಪ್ರಸಾದವೇನಮಃ
ಓಂ ತ್ರಿವಿಧೈಕಮಯ ಮೂರ್ತಿ ಮಹಾಲಿಂಗ ಪ್ರಸಾದವೇನಮ :
ಓಂ ಚಿಚ್ಛಕ್ತಿ ಮಯ ಪ್ರಸಾದವೇನಮ :
ಓಂ ಶಿವಶಕ್ತಿ ಸಂಧಾನ ಮುಖ ಪ್ರಸಾದವೇನಮ :
ಓಂ ಶಿವ ಸಕಲಾತ್ಮಕ ಪ್ರಸಾದವೇನಮ :
ಓಂ ಶಿವಸರ್ವ ಸೃಷ್ಟ್ಯರ್ಥ ಪ್ರಸಾದವೇನಮ :
ಓಂ ಶಿವಸರ್ವ ಜಗತ್ಪ್ರಭಾ ಪ್ರಸಾದವೇನಮ :
ಓಂ ಸಕಲ ನಿಷ್ಕಲ ಸಂಬಂಧ ಪ್ರಸಾದವೇನಮ :
ಓಂ ಸಚರಾಚರಾತ್ಮಕ ಪ್ರಸನ್ನ ಪ್ರಸಾದವೇನಮ :
ಓಂ ನಿಜ ಪಿಂಡಸ್ಥಲಾನ್ವಿತ ಪ್ರಸಾದವೇನಮ :
ಓಂ ಮಹಾ ಪಿಂಡಸ್ಥಲಾಕೃತ ಪ್ರಸಾದವೇನಮ :
ಓಂ ಶಿವ ಪಿಂಡಮಯ ಪ್ರಸಾದವೇನಮ :

ಓಂ ಚಿತ್ಪಿಂಡತನು ಪಿಂಡಸ್ತ ಪ್ರಸಾದವೇನಮ:
ಓಂ ಘನಪಿಂಡ ಪಿಂಡಸ್ತಮಯ ಪ್ರಸಾದವೇನಮ:
ಓಂ ಮಹಾಪಿಂಡ ಪಿಂಡಸ್ತಮಯ ಪ್ರಸಾದವೇ ನಮ:
ಓಂ ಘನ ಮಹಾಪಿಂಡ ಪಿಂಡಸ್ತಮಯ ಪ್ರಸಾದವೇ ನಮ:
ಓಂ ಮಹಾಮನ ಲೋಪಾನ್ವಿತ ಪ್ರಸಾದವೇ ನಮ:
ಓಂ ಘನಭಾವ ಲೋಪಾನ್ವಿತ ಪ್ರಸಾದವೇ ನಮ:
ಓಂ ಶಿವಶಿವ ಲೋಪಾಯುತ ಪ್ರಸಾದವೇ ನಮ:
ಓಂ ಶಿವ ಜ್ಞಾನೋದಯಾತ್ಮಕ ಪ್ರಸಾದವೇ ನಮ:
ಓಂ ಸುಜ್ಞಾನ ಮಯಾನ್ವಿತ ಪ್ರಸಾದವೇ ನಮ:
ಓಂ ಶಿವ ಸಂಸ್ಕಾರ ಮಯ ಪ್ರಸಾವವೇ ನಮ:
ಓಂ ಸ್ವೇಚ್ಛಾಗಮನಾಂಕಿತ ಪ್ರಸಾದವೇ ನಮ:
ಓಂ ಅಮಳ ಭಾವಿತ ಪ್ರಸಾದವೇ ನಮ:
ಓಂ ನಿರ್ಮಳ ಪ್ರಕಾಶಾಂತ ಪ್ರಸಾದವೇ ನಮ:
ಓಂ ನಿಜ ಪ್ರಸನ್ನಾಹ್ವಾಹನ ಪ್ರಸಾದವೇ ನಮ:
ಓಂ ಚಿದೋದಿತ ಚಿದ್ಛವಿ ಪ್ರಸಾದವೇ ನಮಃ
ಓಂ ಜ್ಞಾನಾಂಗ ವಿಖ್ಯಾತ ಪ್ರಸಾದವೇ ನಮ:
ಓಂ ಜ್ಞಾನ ಕಲಾತ್ಮಮಯ ಪ್ರಸಾದವೇ ನಮ:
ಓಂ ಅಜ್ಞಾನ ಖಂಡಣ ಪ್ರಸಾದವೇ ನಮ:
ಓಂ ಅವಿದ್ಯಗಮನ ವಿಭಂಗ ಪ್ರಸಾದವೇ ನಮ:
ಓಂ ಮಾಯಾ ವಿಡಂಬನ ಪ್ರಸಾದವೇ ನಮಃ
ಓಂ ಅಂತಸ್ತಾಮಸ ವಿನಾಶ ಪ್ರಸಾದವೇ ನಮ:
ಓಂ ಸಂಸಾರ ದೂರ ನಾರಾಯ ಪ್ರಸಾದವೇ ನಮ:
ಓಂ ಮಿಥ್ಯಸಾರ ಖಂಡಣ ಪ್ರಸಾದವೇ ನಮಃ
ಓಂ ಅತಥ್ಯ ಕಳಾಭಾವ ನಾಶ ಪ್ರಸಾದವೇ ನಮ:
ಓಂ ಅನೃತಾದಿ ಕಳಂಕಗತಿ ವಿನಾಶ ಪ್ರಸಾದವೇ ನಮ:
ಓಂ ತ್ರಿಮಲ ರತಿ ಬದ್ಧಭಂಗ ಪ್ರಸಾದವೇ ನಮ:
ಓಂ ಪಂಚಾದಶ ಮಾಯಾಪಟಲಿ ರತಿ ವಿರಹಿತ ಪ್ರಸಾದವೇ ನಮ:
ಓಂ ಸದ್ಗುರು ಕೃಪಾಧಾರಾತ್ಮಕ ಪ್ರಸಾದವೇ ನಮಃ

ಓಂ ಗುರು ಕಾರುಣ್ಯ ಪ್ರಸನ್ನಮುಖ ಪ್ರಸಾದವೇನಮ :
ಓಂ ನಿಜಾವ್ಹಾಹನ ವಿರಳ ಪ್ರಸನ್ನ ಪ್ರಸಾದವೇ ನಮ :
ಓಂ ವೇದದೀಕ್ಷಾಯುತ ಪ್ರಸಾದವೇ ನಮ :
ಓಂ ಮಂತ್ರದೀಕ್ಷ ಸ್ವಾಯುತ ಪ್ರಸಾದವೇ ನಮ :
ಓಂ ಕ್ರೀಯಾ ದೀಕ್ಷೆ ಸನ್ನಿಹಿತ ಪ್ರಸಾದವೇ ನಮ :
ಓಂ ಸರ್ವ ಕಲಾಭಿಜ್ಞತೆ ಮುಖ ಪ್ರಸಾದವೇ ನಮಃ
ಓಂ ವಿದ್ಯಾವಿನಯ ಸಂಪನ್ನತೆ ವಕ್ತ್ರ ಪ್ರಸಾದವೇ ನಮ :
ಓಂ ವೀರಶೈವಪ್ರೋತ್ತು ಮತಿ ವದನ ಪ್ರಸಾದವೇ ನಮ :
ಓಂ ಅಷ್ಟಾವರಣಾಂಗ ಪ್ರಭಾ ಪ್ರಸಾದವೇ ನಮಃ
ಓಂ ಪಂಚಾಚಾರ ಪ್ರಾಣ ಪ್ರಕಾಶ ಪ್ರಸಾದವೇ ನಮಃ
ಓಂ ಸತ್ಯಾಚಾರ ನಿತ್ಯಾನಂದ ಮಯ ಪ್ರಸಾದವೇ ನಮಃ
ಓಂ ಭವಿಗತಿ ವಿನಾಶ ಪ್ರಸಾದವೇ ನಮ :
ಓಂ ಅಂಗಭವಿ ಯತಿದೂರ ಪ್ರಸಾದವೇ ನಮ :
ಓಂ ಮನಭವಿನಷ್ಟ ಪ್ರಸಾದವೇ ನಮ :
ಓಂ ಪ್ರಾಣಭವಿ ದಗ್ಧ ಪ್ರಸಾದವೇ ನಮ :
ಓಂ ಆತ್ಮಭವಿ ಭಂಗೆ ಪ್ರಸಾದವೇ ನಮಃ
ಓಂ ಸತ್ಕರ್ಮ ಕಾಯ ಪ್ರಸಾದವೇ ನಮ :
ಓಂ ಸುಜ್ಞಾನಮನ ಪ್ರಸಾದವೇ ನಮ :
ಓಂ ಸದ್ಧರ್ಮಪ್ರಾಣ ಪ್ರಸಾದವೇ ನಮಃ
ಓಂ ಸದಭಕ್ತಿ ಸಂಪತ್ತು ಸುಖ ಪ್ರಸಾದವೇ ನಮ :
ಓಂ ಆಚಾರ ವಿಚಾರ ವಿನೋದ ಪ್ರಸಾದವೇ ನಮಃ
ಓಂ ಅಂಗ ಲಿಂಗ ಪ್ರಾಣ ಜಂಗಮ ಪ್ರಸಾದವೇ ನಮಃ
ಓಂ ಉಭಯಾನಂದ ವಿನೋದ ಪ್ರಸಾದವೇ ನಮಃ
ಓಂ ಗುಡಿಲಿಂಗ ಗಡಿಜಂಗಮ ಪ್ರಸಾದವೇ ನಮ:
ಓಂ ಕಾಯ ಮಾಟಕಂಗಳನೋಟ ಸಂವಿತ್ಕಟ ಪ್ರಸಾದವೇ ನಮ:
ಓಂ ಉಭಯ ಶೀಲಾ ಮೋದಾತ್ಮಕ ಪ್ರಸಾದವೇ ನಮಃ
ಓಂ ಲಿಂಗ ಜಂಗಮ ಪ್ರಸಾನ ಸಂಪತ್ತು ಸಹಜ ಪ್ರಸಾದವೇ ನಮಃ
ಓಂ ತ್ರಿವಿಧೇಕ ಸುಖಮಯ ಪ್ರಸಾದವೇ ನಮ:
ಓಂ ಕ್ರಿಯಾನಂದ ಶಾಂತ ಪ್ರಸಾದವೇ ನಮ:

ಓಂ ಜ್ಞಾನಾನಂದ ಸುಶಾಂತ ಪ್ರಸಾದವೇ ನಮಃ
ಓಂ ಭಾವಾನಂದ ಪರಿಪೂರ್ಣಶಾಂತ ಪ್ರಸಾದವೇ ನಮಃ
ಓಂ ಸತ್ಯ ವೀರಸಮಯಾತ್ಮಕ ಪ್ರಸಾದವೇ ನಮಃ
ಓಂ ನಿತ್ಯ ನಿರ್ಮಳ ನಿರುಪಮ ಪ್ರಸಾದವೇ ನಮಃ
ಓಂ ಸಾರಾಯಚತುರ್ವಿಧಾಯತಃ ಪ್ರಸಾದವೇನಮಃ
ಓಂ ಅಂಗಮನ ಪ್ರಾಣಭಾವ ಗುಣವಿರಹಿತ ಪ್ರಸಾದವೇ ನಮಃ
ಓಂ ಪರಿಪೂರ್ಣ ಗುರುಲಿಂಗ ಜಂಗಮ ಪ್ರಸಾದವೇ ನಮಃ
ಓಂ ಶುದ್ಧಸಿದ್ಧ ಪ್ರಸಿದ್ಧ ಪರಮಾನಂದ ಪ್ರಸಾದವೇ ನಮಃ
ಓಂ ಪರವಧು ಗಮನವಿರಹಿತ ಪ್ರಸಾದವೇ ನಮಃ
ಓಂ ಪರಧನ ಮಪಾಹರಣಭಂಗ ಪ್ರಸಾದವೇ ನಮಃ
ಓಂ ಅಭಕ್ಷ್ಯ ಭಕ್ಷಣ ವಿಹೀನ ಪ್ರಸಾದವೇ ನಮಃ
ಓಂ ಪರಹಿಂಸಾ ವಿನಾಶ ಪ್ರಸಾದವೇ ನಮಃ
ಓಂ ಅಶುದ್ಧಕಾಯ ದಹನ ಪ್ರಸಾದವೇ ನಮಃ
ಓಂ ಪರಿಶುದ್ಧ ಕಾಯ ಪ್ರಸನ್ನ ಪ್ರಸಾದವೇ ನಮಃ
ಓಂ ಲೋಕಪಾವನ ಪ್ರಕಾಶ ಪ್ರಸಾದವೇ ನಮಃ
ಓಂ ಧರ್ಮೋಪಕಾರ ಕಳಾನಂದ ಪ್ರಸಾದವೇ ನಮಃ
ಓಂ ಶರಣಾಗತ ರಕ್ಷಾಮಣಿ ಪ್ರಸಾದವೇ ನಮಃ
ಓಂ ಭಕ್ತ ವತ್ಸಲಾನ್ವಿತ ಪ್ರಸಾದವೇ ನಮಃ
ಓಂ ಅಪಕಾರ ವಿನಾಶಗತಿ ಪ್ರಸಾದವೇ ನಮಃ
ಓಂ ಕೃಪಾವಲೋಕನ ಪ್ರಸಾದವೇ ನಮಃ
ಓಂ ದಯಮುಖನಿಧಿ ಪ್ರಸಾದವೇ ನಮಃ
ಓಂ ನಿರ್ದಯ ವಿರಹಿತಾಂತ ಪ್ರಸಾದವೇ ನಮಃ
ಓಂ ತಪ್ಪಿಗಜನ ರೊಪ್ಪಿಗ ಘನ ಪ್ರಸಾದವೇ ನಮಃ
ಓಂ ಒಪ್ಪುರಹಿತಾಂತ ಪ್ರಭಾಮಯ ಪ್ರಸಾದವೇ ನಮಃ
ಓಂ ನಿರೂಪಾಧಿ ನಿಜ ಪ್ರಸಾದವೇ ನಮಃ
ಓಂ ಉಪಾಧಿ ಖಂಡಣ ನಿರುತಾಂತ ಪ್ರಸಾದವೇ ನಮಃ
ಓಂ ಡಂಭಕತ್ವ ಗತಿವಿದಗ್ಧ ಪ್ರಸಾದವೇ ನಮಃ
ಓಂ ಅಟಮಟ ನಟನಿ ವಿನಾಶ ಪ್ರಸಾದವೇ ನಮಃ
ಓಂ ಸ್ವಯಂ ಪೋಷಣ ಭಾವದಹನ ಪ್ರಸಾದವೇ ನಮಃ

ಓಂ ವೀರಶೈವಾಚಾರಘನ ಪ್ರಸಾದವೆ ನಮಃ
ಓಂ ಪರಮ ವೀರಶೈವ ಪ್ರಕಾಶ ಪ್ರಸಾದವೇ ನಮಃ
ಓಂ ಘನವೀರಶೈವ ವಿಸಿಯಾತ್ಮಕ ಪ್ರಸಾದವೇ ನಮ:
ಓಂ ಅನುಪಮ ಚಾರಿತ್ರೆ ಪ್ರಭಾ ಪ್ರಸಾದವೇ ನಮಃ
ಓಂ ಉಪಮಾತೀತ ಗಮನಾನಂದ ಪ್ರಸಾದವೇ ನಮಃ
ಓಂ ಸಹಜಸುಖ ಸುಲಲಿತಾಂತ ಪ್ರಸಾದವೇ ನಮ:
ಓಂ ಸ್ವಯ ಸಮ್ಮುಖ ವಿರಹಿತ ಪ್ರಸಾದವೇ ನಮಃ
ಓಂ ಭಾವಾ ಭಾವ ವಿನಾಶ ವಿನೋದಿ ಪ್ರಸಾದವೇ ನಮ:
ಓಂ ನೋಟಾ ನೋಟ ಕೂಟ ವಿಲಕ್ಷ ಪ್ರಸಾದವೇ ನಮಃ
ಓಂ ಮಾಟಸುಖ ವಿಳಂಬ ವಿನೋದಿ ಪ್ರಸಾದವೇ ನಮ:
ಓಂ ಮಾಟರತಿ ವಿರತಿ ಗತ ಪ್ರಸಾದವೇ ನಮ:
ಓಂ ನೋಟರತಿಹಿತ ವಿದೂರ ಪ್ರಸಾದವೇ ನಮಃ
ಓಂ ಕೂಟರತಿ ಕೂರ್ಮೆಗತ ಪ್ರಸಾದವೇ ನಮಃ
ಓಂ ನಿಜಮಾಟ ನಿರುತಾನಂದ ಪ್ರಸಾದವೇ ನಮ:
ಓಂ ಸಮರಸ ಭಕ್ತಿ ಅನಹತ ಪ್ರಸಾದವೇ ನಮಃ

ಕಂದ॥ ಇಂತಮಳ ಭಕ್ತಿ ಪ್ರಕಾಶಮೂಲಪ್ರ ।
ಶಾಂತ ಪ್ರಸಾದ ಪರಿನಾಮವಳಿಯಂ
ಅಂತಶುದ್ಧ ವಿರಳಾನಂದ ಮುಖನೂರೆಂಬತ್ತರಿಂ
ಸಂತಸ ಸೇವಿಸಲನುಪಮೈಶ್ವರ್ಯ ಸಂಪ್ರಾಪ್ತಿ ಸಸ್ಸುಖಮಕ್ಕುಂ

## ಮಹೇಶ್ವರಸ್ಥಳ

ಕಂದ॥ ಮುಂದಣ ಮಹೇಶ್ವರಸ್ಥಲನಿರ್ಮ ।
ಳಂದವನರಿದರಿದವ ಧರಿಸಿ ಶರಣಜನ।
ವೃಂದ ಮುಖ ಹರುಷದೊಲಿದುಲ್ಲಾಸದಿ ।
ಸಂದಪ್ರಸಾದ ಸವಿಸವಿದುರುತರ ಸುಖಮಂ
ಪಡೆವುದು ನಿತ್ಯಂ ॥

ಕ ದ॥ ಆ ಮಹಾಮಹೇಶ್ವರಸ್ಥಲದೊಳ್ ।
ಕ್ಷೇಮನಿಧಿ ಪ್ರಸಾದಾಖ್ಯ ಸುರಾಮ ।
ದ್ವೀಶತದೆಪ್ಪತ್ತರಿಂ ಪರಮಾಮೃತವ ।
ಸ್ವೀಕರಿಸಲ್ ಇಷ್ಟಾರ್ಥ ಸಿದ್ಧಿಯಕ್ಕುಂ ॥

ಶ್ರೀಮದ್ವೀರ ಮಾಹೇಶ್ವರ ಸ್ಥಲಾಂಕ ಪ್ರಸಾದವೇನಮಃ
ಓಂ ನಿಷ್ಠಾಭಕ್ತಿ ನಿರುತಾನಂದಮಯ ಪ್ರಸಾದವೇನಮಃ
ಓಂ ತಾಮಸ ಮಹೇಶ್ವರಾಚಾರ ನಿರಸನ ಪ್ರಸಾದವೇನಮಃ
ಓಂ ಪರದೈವ ಭಜನೆ ಭಾವಭಂಗ ಪ್ರಸಾದವೇ ನಮಃ
ಓಂ ಪರಸಮಯಹತಿ ವಿನಾಶ ಪ್ರಸಾದವೇ ನಮಃ
ಓಂ ಪರಧನದಾಸೆ ವಿಹೀನ ಪ್ರಸಾದವೇ ನಮಃ
ಓಂ ಪರಸ್ತ್ರೀಕಾಂಕ್ಷೆ ವಿಲಕ್ಷ ಪ್ರಸಾದವೇ ನಮಃ
ಓಂ ಪರನಿಂದಾ ಲಕ್ಷಮುಖ ಪ್ರಸಾದವೇ ನಮಃ
ಓಂ ಪರಹಿಂಸೆ ಭಾವದಗ್ಧ ಪ್ರಸಾದವೇನಮಃ
ಓಂ ಪರಮವೈರಾಗ್ಯ ವಿರಾಜ ಪ್ರಸಾದವೇ ನಮಃ
ಓಂ ಶಿವನಿಷ್ಠೆ ಸನುಮತ ಪದಾತ್ಮಕ ಪ್ರಸಾದವೇ ನಮಃ
ಓಂ ಪಂಚಾಚಾರ ಮುಖಪ್ರಕಾಶ ಪ್ರಸಾದವೇ ನಮಃ
ಓಂ ಭಕ್ತಿಜ್ಞಾನ ವಿರಾಗತ್ರಿವಿಶೇಷ ಪ್ರಸಾದವೇ ನಮಃ
ಓಂ ನಿರ್ವಾಣ ಭರಿತಾಂತ ಜ್ಯೋತಿ ಪ್ರಸಾದವೇ ನಮಃ
ಓಂ ಷಡ್ವ್ರತ ವ್ರತಾಪಾಯತ ಪ್ರಸಾದವೇ ನಮಃ
ಓಂ ಷಟ್ಶೀಲ ಗುಣ ಶೌರವ ಪ್ರಸಾದವೇ ನಮಃ
ಓಂ ಷಟ್ಶೀಲ ಗುಣ ಶೌರವ ಪ್ರಸಾದವೇ ನಮಃ
ಓಂ ಷಟ್ಸ್ಥಲಾಚಾರ ಪ್ರಮುಖ ಪ್ರಸಾದವೇ ನಮಃ
ಓಂ ಷಡ್ಗುಣೈಶ್ವರ್ಯ ವಿಖ್ಯಾತ ಪ್ರಸಾದವೇ ನಮಃ
ಓಂ ಷಡಕ್ಷರ ಸರ್ವಾವಧಾನ ಸುಖಮಯ ಪ್ರಸಾದವೇ ನಮಃ
ಓಂ ಪೂರ್ವಭಾವ ದಹನ ಪ್ರಸಾದವೇ ನಮಃ
ಓಂ ಷಡ್ವರ್ಗ ಗಮನ ವಿಭಂಗ ಪ್ರಸಾದವೇ ನಮಃ
ಓಂ ಷಡೂರ್ಮಿ ಭಾವ ವಿಡಂಬನ ಪ್ರಸಾದವೇ ನಮಃ
ಓಂ ಷಡ್ಭಾವ ವಿಕಾರ ವಿನಾಶ ಪ್ರಸಾದವೇ ನಮಃ
ಓಂ ಷಟ್ಸಮಯ ಗಮನಾತೀತ ಪ್ರಸಾದವೇ ನಮಃ

ಓಂ ತ್ರಿವಿಧಾರ್ಪಣಂತ ಪ್ರಕಾಶ ಪ್ರಸಾದವೇ ನಮಃ
ಓಂ ಷಡ್ವಿಧಾರ್ಪಣ ಸುಖಪ್ರಸನ್ನ ಪ್ರಸಾದವೇ ನಮಃ
ಓಂ ನವವಿಧಾರ್ಪಣ ನಿರುತಾನಂದ ಪ್ರಸಾದವೇ ನಮಃ
ಓಂ ದ್ವಾದಶ ಅರ್ಪಣವಿತಥಾನ್ವಿತ ಪ್ರಸಾದವೇ ನಮಃ
ಓಂ ನಿಷ್ಕಾಕಾರ್ಯ ಕಾರಣಾತ್ಮಕ ಪ್ರಸಾದವೇ ನಮಃ
ಓಂ ಶಬ್ದಾಡಂಬರಾಂತ ಖಂಡಣ ಪ್ರಸಾದವೇ ನಮಃ
ಓಂ ಅನುಚಿತ ನಿಚಯುಗುಣನಷ್ಟ ಪ್ರಸಾದವೇ ನಮಃ
ಓಂ ಪ್ರೇಶೂಲ ವಾಕ್ತೂರ್ಯ ವದನ ಪ್ರಸಾದವೇ ನಮಃ
ಓಂ ನಿಷ್ಠುರ ನುಡಿ ವಿಡಂಬನ ಪ್ರಸಾದವೇ ನಮಃ
ಓಂ ವಾಕ್ಪಟ ವಿನಾಶ ಪ್ರಸಾದವೇ ನಮಃ
ಓಂ ನಿಃಶಬ್ದನಿಧಿ ಮುಖಾಮೋದ ಪ್ರಸಾದವೇ ನಮಃ
ಓಂ ಸಿದ್ಧಾಂತಿಗತಿ ವಿಭಂಗ ಪ್ರಸಾದವೇನಮು :
ಓಂ ವೇದಾಂತಿಗಮನ ವಿಲಕ್ಷ ಪ್ರಸಾದವೇನಮು :
ಓಂ ಯೋಗಿ ಯೋಗಿತ ಗಮನ ಭಂಗ ಪ್ರಸಾದವೇನಮು :
ಓಂ ಭಿನ್ನ ಭಾವ ಭಜನಾವಿರಹಿತ ಪ್ರಸಾದವೇನಮು :
ಓಂ ಅಹಂಭಾವ ದನುವಿಹೀನ ಪ್ರಸಾದವೇನಮು :
ಓಂ ದ್ವೈತಚರಿ ಖಂಡಣ ಪ್ರಸಾದವೇನಮು :
ಓಂ ಅದ್ವೈತ ಚರಿಯಲಕ್ಷ ಪ್ರಸಾದವೇನಮು :
ಓಂ ಕಾಯಭಾವ ದುಸ್ಸಾರಾಯ ದೂರ ಪ್ರಸಾದವೇನಮು :
ಓಂ ಜೀವಭಾವದನು ವಿದಗ್ಧ ಪ್ರಸಾದವೇನಮು :
ಓಂ ಸತ್ಕ್ರಿಯಾ ಮೋದಾನ್ವಿತ ಪ್ರಸಾದವೇನಮು :
ಓಂ ಸಮ್ಯಜ್ಞಾನ ಕಳಾಭರಿತಾಂತ ಪ್ರಸಾದವೇನಮು:
ಓಂ ಮಹಾಜ್ಞಾನ ಪ್ರಭಾಮೂರ್ತಿ ಪ್ರಸಾದವೇನಮು :
ಓಂ ಅಂಗಲಿಂಗ ಭಾವಭಂಗ ಪ್ರಸಾದವೇನಮು :
ಓಂ ಆಹ್ವಾಹನ ವಿಸರ್ಜನ ವಿಭೇದ ಪ್ರಸಾದವೇನಮು :
ಓಂ ಪೃಥ್ವಿದೆರೆ ಭಾವನಾಸ್ತಿ ಪ್ರಸಾದವೇನಮು :
ಓಂ ಆಪಪೆ ಭಾವನಾಶ ಪ್ರಸಾದವೇ ನಮು :
ಓಂ ಪಾವಕ ಘನಭಾವ ವಿನಾಶ ಪ್ರಸಾದವೇ ನಮು :
ಓಂ ಪವನ ಕರ್ತುರತಿ ದಹನ ಪ್ರಸಾದವೇ ನಮು:

ಓಂ ಅಂಬರ ದೇವತ್ವ ಗುಣ ಖಂಡಣ ಪ್ರಸಾದವೇ ನಮ :
ಓಂ ಆತ್ಮದೊರೆಭಾವ ದಗ್ಧ ಪ್ರಸಾದವೇ ನಮ :
ಓಂ ದಿವಾಕರ ಘನನೋಟ ರಹಿತ ಪ್ರಸಾದವೇ ನಮ :
ಓಂ ನಿಶಾಕರ ನಿರುತಾಂತ ಭಗ್ನ ಪ್ರಸಾದವೇ ನಮ :
ಓಂ ಅಷ್ಟತನು ಮೂರ್ತಿ ತಥ್ಯವಕಥ್ಯ ಪ್ರಸಾದವೇ ನಮ
ಓಂ ಸರ್ವ ಶಿವಮಯ ಕಾರ್ಯ ತಥ್ಯ ಪ್ರಸಾದವೇ ನಮ
ಓಂ ಅಣೋರಣೀಯಾನ್ಮಹತೋಮಹೀಯಾನ್ ಪ್ರಸಾದವೇ ನಮ ಃ
ಓಂ ಕಾರ್ಯ ಕಾರಣ ಭಾವ ವಿರಹಿತ ಪ್ರಸಾದವೇ ನಮ :
ಓಂ ಕರ್ತೃಶಿವರೂಪ ಪ್ರಸಾದವೇ ನಮ ಃ
ಓಂ ಭೃತ್ಯ ಶಿವಾನ್ವಿತ ಪ್ರಸಾದವೇನಮ :
ಓಂ ಕರ್ತೃಭೃತ್ಯ ಸ್ವಯಾನಂದ ಪ್ರಸಾದವೇನಮ ಃ
ಓಂ ದೃನ್ಮಯಾನಂದ ಶಿವ ಪ್ರಸಾದವೇನಮ :
ಓಂ ದೃಶ್ಯಮಯಾತ್ಮಕ ಶಿವ ಪ್ರಸಾದವೇನಮ ಃ
ಓಂ ನಶ್ಶಿವಸ್ಥಲಂ ನಾಸ್ತಿ ಪ್ರಸಾದವೇನಮ :
ಓಂ ಸಶ್ಶಿವಾನಂದ ಲೀಲಾಂಕ ಪ್ರಸಾದವೇನಮ ಃ
ಓಂ ಸರ್ವಗತ ವಿಸರ್ಜನ ಪ್ರಸಾದವೇನಮ :
ಓಂ ಅನಾಚಾರ ನಶ್ಶಿವ ಪ್ರಸಾದವೇನಮ ಃ
ಓಂ ದುರಾಚಾರ ಭುವನ ಲಿಂಗ ಪ್ರಸಾದವೇನಮ ಃ
ಓಂ ನಿಯತಾಚಾರಂಗ ಪೂರ್ಣಲಿಂಗ ಪ್ರಸಾದವೇನಮ :
ಓಂ ಜಡಾತ್ಮಾಂಗಲಿಂಗ ನಾಸ್ತಿ ಪ್ರಸಾದವೇನಮ :
ಓಂ ಅಜಡಾನಂದಂಗ ಪರಿಪೂರ್ಣಲಿಂಗ ಪ್ರಸಾದವೇನಮ :
ಓಂ ಅಸಹಜ ನಿಲುಲಿಂಗ ವಿಹೀನ ಪ್ರಸಾದವೇನಮ ಃ
ಓಂ ಸಹಜನಿಲುಲಿಂಗ ಮಯ ಪ್ರಸಾದವೇನಮ ಃ
ಓಂ ದ್ವಂದ್ವ ಕರ್ಮ ನಿಲುವಿರಹಿತ ಶಿವ ಪ್ರಸಾದವೇನಮ ಃ

## ಪ್ರಸಾದಿ ಸ್ಥಳ

ಕಂದ॥ ಮುಂದೆಸೆವ ಪ್ರಸಾದಿಸ್ಥಲದೊಳ್ ।
ಬಂದೊಸರಿ ಸುಖದೋರ್ಪ ಪ್ರಸಾದ ಸಂದಾನ ।
ಸೌಖ್ಯ ಶರಧಿಯೊಳು ಮಿಂದು ಪಡೆವುದಿಷ್ಟಾರ್ಥ ಸಿದ್ಧಿ ಸಿರಿಯಂ ॥

ಕಂದ॥ ಘನಮಹಾ ಪ್ರಸಾದಿಯ ಸ್ಥಲದೋ ।
ಅನುಪಮ ಷಡಾಚಾರ ಮಹಾತ್ಮೆಯಂ ।
ಮನದುಂಬಿಪತ್ತು ಬಗೆನಾಮಶುದ್ಧಿ ।
ವಿನಯದಿ ಸ್ವೀಕರಿಸಲಘಹರಸುಖಮಕ್ಕುಂ ॥

ಓಂ ಭಕ್ತ ದೇಹಿಕ ದೇವ ಪ್ರಸಾದವೇ ನಮಃ
ಓಂ ಕಾಯಲಿಂಗ ಪ್ರಾಣಭಕ್ತ ಪ್ರಸಾದವೇ ನಮಃ
ಓಂ ಪ್ರಾಣಲಿಂಗ ಕಾಯಭಕ್ತ ಪ್ರಸಾದವೇ ನವಃ
ಓಂ ಆಧಾರ ಜಂಗಮ ಚೈತನ್ಯಭಕ್ತ ಪ್ರಸಾದವೇ ನಮಃ
ಓಂ ಅಂಗಶ್ರದ್ಧೆ ಆತ್ಮನಿಷ್ಠೆ ಪ್ರಸಾದವೇ ನಮಃ
ಓಂ ಆತ್ಮಶ್ರದ್ಧೆ ಅಂಗನಿಷ್ಠೆ ಪ್ರಸಾದವೇ ದಮಃ
ಓಂ ಭಕ್ತಿ ಜ್ಞಾನ ಗರ್ಭ ಪ್ರಸಾದವೇ ನಮಃ
ಓಂ ಜ್ಞಾನ ಭಕ್ತಿ ಗರ್ಭ ಪ್ರಸಾದವೇ ನಮಃ
ಓಂ ಭಕ್ತಿಜ್ಞಾನ ವೈರಾಗ್ಯ ಗರ್ಭ ಪ್ರಸಾದವೇ ನಮಃ
ಓಂ ಪರಿಪೂರ್ಣ ಪರಮ ಪ್ರಸಾದಿ ಪ್ರಸಾದವೇ ನಮಃ
ಓಂ ತಾಮಸ ಗುಣಗಣ ವಿನಾಶ ಪ್ರಸಾದವೇ ನಮಃ
ಓಂ ಸಂಕಲ್ಪ ವಿಕಲ್ಪ ದಹನ ಪ್ರಸಾದವೇ ನಮ;
ಓಂ ಅರಿವು ಮರಿವು ಉಚ್ಚಾದನ ಪ್ರಸಾದವೇ ನಮಃ
ಓಂ ಶೋಕ ಮೋಹ ನಾಸ್ತಿ ಪ್ರಸಾದವೇ ನಮಃ
ಓಂ ವಿಧಿ ನಿಷೇಧ ವಿಭಂಗ ಪ್ರಸಾದವೇ ನಮಃ
ಓಂ ಪುಣ್ಯಪಾಪ ವಿರಹಿತ ಪ್ರಸಾದವೇ ನಮಃ
ಓಂ ಲಿಂಗಾರ್ಪಿತ ಪ್ರಕಾಶ ಪ್ರಸಾದವೇ ನಮಃ
ಓಂ ಸಾವಧಾನ ಸನ್ನಿಹಿತ ಪ್ರಸಾದವೇ ನಮಃ
ಓಂ ಸುಯಿದಾನ ಸುಲಲಿತ ಪ್ರಸಾದವೇ ನಮಃ
ಓಂ ಸದ್ಗುರು ಕಾರುಣ್ಯ ನಿಧಿ ಸುಖಮಯ ಪ್ರಸಾದವೇ ನಮಃ
ಓಂ ಅಂತಃಕರುಣ ಕಟಾಕ್ಷ ಮೂಲಗುರು ಪ್ರಸಾದವೇ ನಮಃ
ಓಂ ಶಾಂತಮಯ ದೀಪ್ತಿದೇಶಿಕ ಪ್ರಸಾದವೇ ನಮಃ
ಓಂ ಅವಿರಳ ಶಿವಜ್ಞಾನ ಕೃಪಾರ್ಯ ಪ್ರಸಾದವೇ ನಮಃ
ಓಂ ನಿಜಮೋಕ್ಷಾಂಬುಧಿ ದೇಶಿಕೇಂದ್ರ ಪ್ರಸಾದವೇ ನಮಃ

ಓಂ ಸಕಲಗುಣ ಶಿವಾರ್ಪಿತ ಮೂಲ ಪ್ರಸಾದವೇ ನಮಃ
ಓಂ ಸತ್ಯಸದ ಮಲಮುಖ ಪ್ರಸಾದವೈ ನಮಃ
ಓಂ ಅತ್ಯಂತ ದಯುಮುಖ್ಯಮಣಿ ಪ್ರಸಾದವೇ ನಮಃ
ಓಂ ಶರಣಾಗತ ರಕ್ಷಾಮಣಿ ದೇಶಕ ಪ್ರಸಾದವೇ ನಮಃ
ಓಂ ಸಾಕ್ಷಾತ್ ಶಿವಗುರು ಪ್ರಸಾದವೇ ನಮಃ
ಓಂ ನಾದಬಿಂದು ಕಳಾತೀತಶಿವ ಪ್ರಸಾದವೇ ನಮಃ
ಓಂ ಸತ್ಕ್ರಿಯಾನಂದ ಕಳಾಶಿಪ ಪ್ರಸಾದವೇ ನಮಃ
ಓಂ ಭಕ್ತಾಂಗಸಂಗ ಸೌಖ್ಯಾತ್ಮಕ ಪ್ರಸಾದವೇ ನಮಃ
ಓಂ ಸರ್ವೇಂದ್ರಿಯ ಸಂಗ ಸಂಪದ ಪ್ರಸಾದವೇ ನಮಃ
ಓಂ ಕರಣ ನಿಳಯಾನಂದ ಮೂರ್ತಿ ಪ್ರಸಾದವೇ ನಮಃ
ಓಂ ಸಕಳನಿಃ ಕಳಾನಂದ ಸತ್ಯಶಿವ ಪ್ರಸಾದವೇ ನಮಃ
ಓಂ ಸಕಳನಿಃ ಕಳಾ ತೀತ ಶಿವ ಪ್ರಸಾದವೇ ನಮಃ
ಓಂ ಅತ್ಯತಿ ಷ್ಠದ್ದಶಾಂಗುಲ ಶಿವ ಪ್ರಸಾದವೇ ನಮಃ
ಓಂ ಅಖಂಡ ರಾಜತೇಜೋಮೂರ್ತಿ ಪ್ರಸಾದವೇ ನಮಃ
ಓಂ ಅನುಪಮ ಸುವಿಲಾಸ ಶುದ್ಧ ಪ್ರಸಾದವೇ ನಮಃ
ಓಂ ಅವಿರಳ ತೇಜಃಪುಂಜ ಪ್ರಸಾದವೇ ನಮಃ
ಓಂ ನಸ್ವಯ ಜಂಗಮವೇಷ ರಹಿತ ಪ್ರಸಾದವೇ ನಮಃ
ಓಂ ನಚರ ಜಂಗಮವೇಷ ವಿರಹಿತ ಪ್ರಸಾದವೇ ನಮಃ
ಓಂ ನಪರ ಜಂಗಮವೇಷ ನಾಸ್ತಿ ಪ್ರಸಾದವೇ ನಮಃ
ಓಂ ಜಡೆ ಜಂಗಮಸ್ಥಲ ವಿನೋದಿ ಪ್ರಸಾದವೇ ನಮಃ
ಓಂ ಮುಡಿ ಜಂಗಮಸ್ಥಲ ವಿಶಾಲ ಪ್ರಸಾದವೇ ನಮಃ
ಓಂ ತುರುಬು ಜಂಗಮಸ್ಥಲ ಗುಣಾಢ್ಯ ಪ್ರಸಾದವೇ ನಮಃ
ಓಂ ಲೋಚು ಜಂಗಮಸ್ಥಲ ಸೌಖ್ಯ ಪ್ರಸಾದವೇ ನಮಃ
ಓಂ ಬೋಳುಜಂಗಮಸ್ಥಲ ವನಾರ್ಗ ಪ್ರಸಾದವೇ ನಮಃ
ಓಂ ದಿಗಂಬರ ಜಂಗಮಸ್ಥಲ ಮೋದ ಪ್ರಸಾದವೇ ನಮಃ
ಓಂ ಗುರುವಂಚನೆ ಭಾವನಷ್ಟ ಭಕ್ತಿ ಪ್ರಕಾಶ ಪ್ರಸಾದವೇ ನಮಃ
ಓಂ ಲಿಂಗವಂಚನೆ ಭಾವನಾಶ ಭಕ್ತಿಪ್ರಕಾಶ ಪ್ರಸಾದವೇ ನಮಃ
ಓಂ ಚರವಂಚನೆ ಭಾವನಾಶ ಭಕ್ತಿಪ್ರಕಾಶ ಪ್ರಸಾದವೇ ನಮಃ
ಓಂ ಸದ್ಗುರು ಕೃಪಾನಂದ ಪ್ರಸನ್ನ ಪ್ರಸಾದವೇ ನಮಃ

ಓಂ ಚಿಲ್ಲಿಂಗ ಸುಖಾನಂದ ಪ್ರಸನ್ನ ಪ್ರಸಾದವೇ ನಮ :
ಓಂ ಮಹಾನುಭಾವ ಪರಿಣಾಮ ಜಂಗಮ ಪ್ರಸನ್ನ ಪ್ರಸಾದವೇನಮ :
ಓಂ ಅನಾದಿ ಸಂಸಿದ್ಧ ನಿರಂಜನಭಕ್ತಿ ಪ್ರಸಾದವೇ ನಮ :
ಓಂ ಆದಿಗಾಧಾರ ಅನುಪಮಭಕ್ತಿ ಪ್ರಸಾದವೇ ನಮ :
ಓಂ ಸರ್ವಾಧಾರ ಸದಭಕ್ತ ಮೂರ್ತಿ ಪ್ರಸಾದವೇ ನಮ :
ಓಂ ನಿತ್ಯ ಮಹತ್ವಾತಿಶಯ ಭಕ್ತ :ಪ್ರಸಾದವೇ ನಮ :
ಓಂ ಶರಣ ಮಹಾತ್ಮೆ ನಿತ್ಯನಿರ್ಮಲ ಪ್ರಸಾದವೇ ನಮ :
ಓಂ ಶರಣಾಂಗ ಕಲ್ಪವೃಕ್ಷ ಪ್ರಸಾದವೇ ನಮ :
ಓಂ ಶರಣಾಂತ ಕಾಮಧೇನು ಪ್ರಸಾದವೇ ನಮ :
ಓಂ ಶರಣಾತ್ಮಕ ಚಿಂತಾಮಣಿ ಪ್ರಸಾದವೇ ನಮ :
ಓಂ ಶರಣ ಚಾರಿತ್ರ ಸಕಲೈಶ್ವರ್ಯಸಮೃದ್ಧಿ ಪ್ರಸಾದವೇ ನಮ :
ಓಂ ಶರಣ ಕೃಪಾಪ್ರಸನ್ನ ಸೌಭಾಗ್ಯನಿಧಿ ಪ್ರಸಾದವೇ ನಮ :
ಓಂ ನಿಶ್ಚಿಂತ ಶರಣ ನಿರ್ಮಲಾನಂದ ಪ್ರಸಾದವೇ ನಮ :
ಓಂ ಶರಣ ಮಹಾಘನ ಗಂಭೀರ ಪ್ರಸಾದವೇ ನಮ :
ಓಂ ಪರಮ ಪರಿಣಾಮಿ ಶರಣ ಪ್ರಸಾದವೇ ನಮ :
ಓಂ ನಿತ್ಯ ಪರಮಸುಖ ಪ್ರಸನ್ನಶರಣ ಪ್ರಸಾದವೇ ನಮ :
ಓಂ ನಿತ್ಯಾನಂದ ನಿಜಸುಖ ಪ್ರಸಾದವೇ ನಮ :
ಓಂ ಸತ್ಯಾನಂದ ಸದಮಲ ಪ್ರಸಾದವೇ ನಮ :
ಓಂ ಸಕಾಲ ನಿಃಕಲ ಸಂಪತ್ತು ಪ್ರಸಾದವೇ ನಮ :
ಓಂ ಸಕಲಗುಣ ಶಿವಾನಂದ ಪ್ರಸಾದವೇ ನಮ :
ಓಂ ಸತ್ಕ್ರಿಯ ಪ್ರಸನ್ನ ಪ್ರಸಾದವೇ ನಮ :
ಓಂ ಸುಜ್ಞಾನ ಪ್ರಸನ್ನ ಪ್ರಸಾದವೇ ನಮ :
ಓಂ ಮಹಾಜ್ಞಾನ ಪ್ರಸನ್ನ ಪ್ರಸಾದವೇ ನಮ :
ಓಂ ಗುರು ದಯಾದಿ ಪ್ರಸಾದವೇ ನಮ :
ಓಂ ಶಿವಪ್ರಸನ್ನಾದಿ ಪ್ರಸಾದವೇ ನಮ :
ಓಂ ಜಂಗಮಾನು ಭಾವಮೂಲ ಪ್ರಸಾದವೇ ನಮ:

## ಪ್ರಾಣಲಿಂಗಿ ಸ್ಥಳ.

ಕಂದ|| ಮುಂದೆಸೆವಸು ಪ್ರಾಣಲಿಂಗಿಯ ಸ್ಥಲ |
ವೃಂದ ನಿಜಚಾರಿತ್ರ ಸಾರಾಯಮೋ |
ದಂದವನು ಚಿದ್ಹೃದಯದೊಳಿಂಬಿಡ |
ಲಂದವರಿಗೈಶ್ವರ್ಯ ಪ್ರಾಪ್ತಿಯಕ್ಕುಂ ||

ಕಂದ|| ಇಂತಪ್ಪ ಪ್ರಾಣಲಿಂಗಿಯ ಸ್ಥಲ |
ದಂತ ಪ್ರಭಾತೇಜಃ ಪುಂಜಸ್ಸುಖ |
ಶಾಂತಿಮಣಿ ಐವತ್ತರನುಡಿವ |
ಸಂತಸದಿ ಸವಿದರ್ಗ್ಯೈಷ್ಟೈಶ್ವರ್ಯ ಸಂಪ್ರಾಪ್ತಿ: ||

ಓಂ ಪ್ರಾಣಲಿಂಗಿಯ ಸ್ಥಲಾತ್ಮಕ ಪ್ರಸಾದವೇನಮು ಃ
ಓಂ ಪಿಂಡ ಪ್ರಕಾಶ ಜ್ಞಾನ ಪ್ರಸಾದವೇನಮು ಃ
ಓಂ ಜ್ಞಾನ ಪ್ರಕಾಶ ವೈರಾಗ್ಯ ಪ್ರಸಾದವೇನಮು ಃ
ಓಂ ವೈರಾಗ್ಯ ಪ್ರಕಾಶ ಶ್ರೀಗುರು ಪ್ರಸಾದವೇನಮು :
ಓಂ ಗುರು ಪ್ರಕಾಶಲಿಂಗ ಪ್ರಶಾದವೇನಮು :
ಓಂ ಲಿಂಗ ಪ್ರಕಾಶ ಜಂಗಮು ಪ್ರಸಾದವೇನಮು :
ಓಂ ಜಂಗಮು ಪ್ರಕಾಶ ಮಹಾನುಭಾವ ಪ್ರಸಾದವೇನಮು:
ಓಂ ಮಹಾನುಭಾವ ಪ್ರಕಾಶ ಪರಮಾನಂದ ಪ್ರಸಾದವೇನಮು:
ಓಂ ಪರಮಾನಂದ ಪ್ರಕಾಶ ಪರಿಪೂರ್ಣ ಪ್ರಸಾದವೇನಮು:
ಓಂ ಪರಿಪೂರ್ಣ ಪ್ರಕಾಶ ನಿಜ ಪ್ರಸಾದವೇ ನಮುಃ
ಓಂ ಪ್ರಾಣಲಿಂಗಾರ್ಚನೆಯಾನಂದ ಪ್ರಸಾದವೇನಮುಃ
ಓಂ ಭಿನ್ನಕ್ರಿಯಾ ತೀತಗುರು ಪ್ರಸಾದವೇನಮು:
ಓಂ ಭಿನ್ನಭಾವ ವಿನಾಶ ಚರ ಪ್ರಸಾದವೇ ನಮುಃ
ಓಂ ಅಭಿನ್ನ ಕ್ರಿಯಾನುಭಾವ ಲೀಲಾ ಪ್ರಸಾದವೇನಮು:
ಓಂ ಅತ್ಯಂತ ಜ್ಞಾನಾನುಭಾವ ಲೀಲಾ ಪ್ರಸಾದವೇ ನಮು:
ಓಂ ಸಾಮರಸ್ಯ ಜ್ಞಾನಾನುಭಾವ ಲೀಲಾ ಪ್ರಸಾದವೇ ನಮುಃ
ಓಂ ಹೃದಯಾರ್ಚನೆ ಸುಖ ಪ್ರಸನ್ನ ಪ್ರಸಾದವೇ ನಮುಃ
ಓಂ ತ್ರಿಕೂಟಾರ್ಚನೆ ಪರಿಣಾಮು ಪ್ರಸನ್ನ ಪ್ರಸಾದವೇ ನಮುಃ
ಓಂ ಬ್ರಹ್ಮರಂಧ್ರ ಅರ್ಚನೆ ಸಮರಸ ಸುಖಪ್ರಸನ್ನ ಪ್ರಸಾದವೇನಮುಃ

ಓಂ ಸಿದ್ಧಾಂತಿ ಯೋಗ ವಿಯೋಗ ಪ್ರಸಾದವೇನಮು :
ಓಂ ಇಷ್ಟಲಿಂಗ ಸಂಬಂಧ ಸುಖಾನಂದ ಪ್ರಸಾದವೇನಮಃ
ಓಂ ವೇದಾಂತಿ ಯೋಗ ವಿಯೋಗ ಪ್ರಸಾದವೇನಮು :
ಓಂ ಪ್ರಾಣಲಿಂಗ ಪ್ರಸನ್ನ ಪರಮಾನಂದ ಪ್ರಸಾದವೇನಮು ಃ
ಓಂ ಯೋಗಮಾರ್ಗೀವಿಚಾರ ವಿಹೀನ ಪ್ರಸಾದವೇ ನಮಃ
ಓಂ ಭಾವಲಿಂಗ ಸಂಯೋಗ ಸಂಪತ್ತು ಪ್ರಸಾದವೇ ನಮಃ
ಓಂ ಷಡುದರ್ಶನ ಯೋಗ ಭಂಗ ಪ್ರಸಾದವೇ ನಮಃ
ಓಂ ಷಟಸ್ಥಲ ಸಂಬಂಧ ಸೌಖ್ಯ ಪ್ರಸಾದವೇ ನಮಃ
ಓಂ ಷಟ್ ಶಿವ ಸಂಯೋಗ ವಿಯೋಗ ಪ್ರಸಾದವೇ ನಮು:
ಓಂ ಷಟ್ ಲಿಂಗ ಸಂಗ ಸಮರಸಾನಂದ ಪ್ರಸಾದವೇ ನಮು:
ಓಂ ತ್ಯಾಗಾಂಗ ನಿಳಯ ಪ್ರಭಾಮೂರ್ತಿ ಪ್ರಸಾದವೇ ನಮಃ
ಓಂ ಭಾಗಾಂಗ ಲಯಾನಂದ ಮೂರ್ತಿ ಪ್ರಸಾದವೇ ನಮು:
ಓಂ ಯೋಗಾಂಗ ಧಾಮ ಪರಿಣಾಮ ಮೂರ್ತಿ ಪ್ರಸಾದವೇ ನಮು:
ಓಂ ಹೃದಯ ಪ್ರಕಾಶ ಪೀಠ ಮೂರ್ತಿ ಪ್ರಸಾದವೇ ನಮಃ
ಓಂ ಭೃಮಧ್ಯ ಕಳಾಪೀಠ ಮೂರ್ತಿ ಪ್ರಸಾದವೇ ನಮಃ
ಓಂ ಬ್ರಹ್ಮರಂಧ್ರ ತೇಜಃಪುಂಜ ಪ್ರಸಾದವೇ ನಮಃ
ಓಂ ಸೂರ್ಯಮಂಡಲ ಮುಖದ ಪ್ರಸಾದವೇ ನಮಃ
ಓಂ ಚಂದ್ರ ಮಂಡಲ ಬಿಂಬ ಪ್ರಸಾದವೇ ನಮು:
ಓಂ ಅಗ್ನಿಮಂಡಲ ಮಣಿ ಪ್ರಸಾದವೇ ನಮು:
ಓಂ ಸರ್ವೇಂದ್ರಿಯ ಮುಖ ಪ್ರಕಾಶ ಪ್ರಸಾದವೇ ನಮು:
ಓಂ ಘ್ರಾಣ ಮುಖ ಆಚಾರ ಲಿಂಗಾರ್ಪಿತ ಪ್ರಸಾದವೇ ನಮು ಃ
ಓಂ ಜಿಂಹ್ವೆಮುಖ ಗುರುಲಿಂಗಾರ್ಪಿತ ಪ್ರಸಾದವೇ ನಮಃ
ಓಂ ನೇತ್ರಮುಖ ಶಿವಲಿಂಗಾರ್ಪಿತ ಪ್ರಸಾದವೇ ನಮು:
ಓಂ ಸ್ಪರ್ಶಮುಖ ಜಂಗಮಲಿಂಗಾರ್ಪಿತ ಪ್ರಸಾದವೇ ನಮು:
ಓಂ ಶ್ರೋತ್ರ ಮುಖ ಪ್ರಸಾದಲಿಂಗಾರ್ಪಿತ ಪ್ರಸಾದವೇ ನಮು:
ಓಂ ಹೃದಯಮುಖ ಮಹಾಲಿಂಗಾರ್ಪಿತ ಪ್ರಸಾದವೇ ನಮಃ
ಓಂ ರೂಪಾನ್ವಿತ ಇಷ್ಟಲಿಂಗಾರ್ಪಿತ ಪ್ರಸಾದವೇ ನಮು:
ಓಂ ರುಚಿಯಾತ್ಮಕ ಪ್ರಾಣಲಿಂಗಾರ್ಪಣ ಪ್ರಸಾದವೇ ನಮು:
ಓಂ ಪರಿಣಾಮಭಾವ ಲಿಂಗಾರ್ಪಣ ಪ್ರಸಾದವೇನಮು:
ಓಂ ಪರಿಪೂರ್ಣ ಲಿಂಗಾರ್ಪಣ ಪ್ರಸಾದವೇ ನಮು:

## ಶರಣಸ್ಥಳ

ಕಂದ|| ಶರಣಸ್ಥಲದಂಶಃ ಸಾರಾಯದಸ |
ಚ್ಚಿರ ಪ್ರಸಾದ ಪರಿವಿಡಿಯಿಂದೆಸೆವ |
ಪರಮು ನಾಲ್ವತ್ತು ಬಗೆ ನಾಮಾಮೃತ |
ದಿರವ ಸವಿದು ಸದ್ಭಕ್ತ ಜನರಿಗಿಷ್ಟಾರ್ಥಂ ||

ಕಂದ|| ಮೇಲಣ ಶರಣಸ್ಥಲದನುಭಾವವು |
ರೇಲಿಸಿದ ನಾಮಾಮೃತವನೊಶೆದು ಮಹಾ |
ಮೇಲದ್ವಾರದಿ ಸವಿದು ಸುಖಿಸಿರಿ ಶರಣರ್ |
ಕಾಲಕರ್ಮಾತೀತ ಪ್ರಸಾದವನರಿದಂ ||

## ಐಕ್ಯಸ್ಥಲ

ಕಂದ|| ಮುಂದೆಸೆವ ನಿಜೈಕ್ಯಪದದ ಪರಮಾ |
ನಂದ ಪ್ರಸಾದ ಪರಿಚರಿಯ ಸರ |
ಸಿಂದರಿದು ಸುಖಿಸಿದ ಮಹಿಮರಿ |
ಗಿಂದು ನಿತ್ಯತ್ವ ನಿಜಪದ ಸಿದ್ಧಿಯಕ್ಕುಂ ||

ಕಂದ|| ಘನಮಹಾಲಿಂಗೈಕ್ಯ ಪದಾನಂದ |
ದನುಭವ ಪ್ರಸಾದದ ಮಳಸುಖ ಶುದ್ಧಿ |
ಯನು ಸು ನಾಲ್ವತ್ತು ತೆರದಿಂದರಿ |
ದನುಭವಿಸಿದಮಲ ಭಕ್ತರ್ಗೆ ಸಂಪದತ್ವಂ ||

ಓಂ ಮೂರರಾಪ್ಯಾಯನ ವಿಭಂಗ ಪ್ರಸಾದವೇ ನಮಃ
ಓಂ ಪಂಚ ಬೆಟ್ಟಭಾವ ಭಗ್ನ ಪ್ರಸಾದವೇ ನಮಃ
ಓಂ ಅಷ್ಟಾಂಗಯೋಗ ಭೋಗ ನಾಶ ಪ್ರಸಾದವೇ ನಮಃ
ಓಂ ಅರಿವು ಮರವು ವಿನಾಶ ಪ್ರಸಾದವೇ ನಮಃ
ಓಂ ಮಿಥ್ಯ ಪರವಶ ಭವರಹಿತ ಪ್ರಸಾದವೇ ನಮಃ
ಓಂ ಭಾವ ಭ್ರಾಂತ ನಾಸ್ತಿ ಪ್ರಸಾದವೇ ನಮಃ
ಓಂ ಕಾಯಲಿಂಗೈಕ್ಯ ಕರ್ಮನಷ್ಟ ಪ್ರಸಾದವೇ ನಮಃ
ಓಂ ಪ್ರಾಣಲಿಂಗೈಕ್ಯ ಪ್ರಪಂಚನಷ್ಟ ಪ್ರಸಾದವೇ ನಮಃ

ಓಂ ಮನಲಿಂಗೈಕ್ಯ ಮಹಾಂತ ಪ್ರಸಾದವೇ ನಮಃ
ಓಂ ಆತ್ಮಲಿಂಗೈಕ್ಯ ಅಸಾಧ್ಯ ಪ್ರಸಾದವೇ ನಮಃ
ಓಂ ನಿಜಲಿಂಗೈಕ್ಯ ನಿತ್ಯ ಪ್ರಸಾದವೇ ನಮಃ
ಓಂ ಕಾಯ ಕರ್ಮ ಸಂಪತ್ತು ಪ್ರಸಾದವೇನಮ:
ಓಂ ಮನಜ್ಞಾನ ಸಂಪತ್ತು ಪ್ರಸಾದವೇ ನಮ:
ಓಂ ಪ್ರಾಣಪ್ರಸಾದ ಸಂಪತ್ತು ಸುಖ ಪ್ರಸಾದವೇ ನಮ:
ಓಂ ಘ್ರಾಣವಾಚಾರಲಿಂಗ ಪರಿಣಾಮಿ ಪ್ರಸಾದವೇ ನಮ:
ಓಂ ಜಿಂಹ್ವೆ ಗುರುಲಿಂಗ ವಿನೋದಿ ಪ್ರಸಾದವೇ ನಮಃ
ಓಂ ನೇತ್ರ ಶಿವಲಿಂಗ ಸಂಪತ್ತು ಪ್ರಸಾದವೇ ನಮಃ
ಓಂ ತ್ವಕ್ಕು ಚರಲಿಂಗ ವಿಶಾಲಮುಖಿ ಪ್ರಸಾದವೇ ನಮಃ
ಓಂ ಶ್ರೋತ್ರ ಶೇಷಲಿಂಗ ಸೌಖ್ಯಮಯ ಪ್ರಸಾದವೇ ನಮಃ
ಓಂ ಹೃದಯ ಮಹಾಲಿಂಗ ಮಯಾನಂದ ಪ್ರಸಾದವೇ ನಮ:
ಓಂ ಸರ್ವಾಚಾರ ಸಂಬಂಧ ವಿಲಾಸ ಪ್ರಸಾದವೇ ನಮಃ
ಓಂ ಭಕ್ತಲಿಂಗಾರ್ಪಿತ ವಿನೋದ ಘ್ರಾಣ ಪ್ರಸಾದವೇ ನಮಃ
ಓಂ ಮಹೇಶ್ವರ ಲಿಂಗಾರ್ಪಿತ ಸುಖ ಜಿಂಹ್ವೆ ಪ್ರಸಾದವೇ ನಮ:
ಓಂ ಪ್ರಾಣಲಿಂಗಿ ಲಿಂಗಾರ್ಪಣ ಪ್ರಭಾತ್ವಕ್ಕು ಪ್ರಸಾದವೇ ನಮ:
ಓಂ ಶರಣಲಿಂಗಾರ್ಪಣ ಪರಿತೋಷ ಶ್ರೋತ್ರ ಪ್ರಸಾದವೇ ನಮಃ
ಓಂ ಐಕ್ಯಲಿಂಗಾರ್ಪಣ ಸೌಖ್ಯ ಹೃದಯ ಪ್ರಸಾದವೇ ನಮಃ
ಓಂ ನಿಷ್ಕಲಲಿಂಗಾರೋಗಣಿ ತೃಪ್ತಿ ಬ್ರಹ್ಮರಂಧ್ರ ಪ್ರಸಾದವೇ ನಮಃ
ಓಂ ನಿಃಶೂನ್ಯ ಲಿಂಗಾರೋಗಣಿ ತೃಪ್ತಿಉನ್ಮನಿ ಪ್ರಸಾದವೇ ನಮ:
ಓಂ ನಿರಂಜನ ಲಿಂಗಾರೋಗಣಿ ತೃಪ್ತಿಪಶ್ಚಿಮ ಪ್ರಸಾದವೇ ನಮ:
ಓಂ ಏಕಭಾಜನ ಸುಖಾನಂದ ಮಯ ಪ್ರಸಾದವೇ ನಮಃ
ಓಂ ಭಕ್ತಲಿಂಗೈಕ್ಯ ಸದಾನಂದ ಪ್ರಸಾದವೇ ನಮಃ
ಓಂ ಮಹೇಶ್ವರ ಲಿಂಗೈಕ್ಯ ನಿತ್ಯಾನಂದ ಪ್ರಸಾದವೇ ನಮಃ
ಓಂ ಪ್ರಸಾದಿ ಲಿಂಗೈಕ್ಯ ಪೂರ್ಣಾನಂದ ಪ್ರಸಾದವೇ ನಮಃ
ಓಂ ಪ್ರಾಣಲಿಂಗಿಯ ಲಿಂಗೈಕ್ಯ ಪರಮಾನಂದ ಪ್ರಸಾದವೇ ನಮಃ
ಓಂ ಶರಣಲಿಂಗೈಕ್ಯ ನಿಜಾನಂದ ಪ್ರಸಾದವೇ ನಮಃ
ಓಂ ಐಕ್ಯ ಶಿವಸಂಗ ಘನಾನಂದ ಪ್ರಸಾದವೇ ನಮಃ
ಓಂ ತ್ಯಾಗಿ ಲಿಂಗ ಸಂಗ ಸಂಪತ್ತು ಪ್ರಸಾದವೇ ನಮಃ

ಓಂ ಭೋಗಿ ಲಿಂಗ ಸಂಯೋಗ ಸುಖ ಪ್ರಸಾದವೇ ನಮಃ
ಓಂ ಯೋಗಿಲಿಂಗ ಸಮರಸಾನಂದ ಪ್ರಸಾದವೇ ನಮ:

## ಅಂಗ ಸ್ಥಲ

ಕಂದ॥ ಅಂಗಸ್ಥಲ ನಾಲ್ವತ್ತುನಾಲ್ಕು ।
ಲಿಂಗಸ್ಥಲೈವತ್ತೇಳರಭಾವದ ।
ಮಂಗಲ ಪ್ರಸಾದನು ಸಾರಾಯು ।
ವಂಗದಿ ಧರಿಸುವದು ಲಿಂಗಶರಣರೊಲಿದಂ ॥

ಓಂ ದೀಕ್ಷಾಪ್ರಕಾಶ ಪ್ರಸನ್ನ ಪ್ರಸಾದವೇನಮ:
ಓಂ ಗುರುಕರುಣ ಕಳಾನಂದ ಪ್ರಸಾದವೇನಮ:
ಓಂ ದೀಕ್ಷಾಗುರು ದಯಾನಂದ ಪ್ರಸಾದವೇನಮ:
ಓಂ ಕ್ರಿಯಾಗುರು ಮೂರ್ತಿ ಪ್ರಸಾದವೇನಮ:
ಓಂ ಕರುಣ ಕಟಾಕ್ಷ ಮೂರ್ತಿ ಪ್ರಸಾದವೇನಮ:
ಓಂ ಆದಿ ಪ್ರಸಿದ್ಧ ಪ್ರಭಾವಮೂರ್ತಿ ಪ್ರಸಾದವೇನಮ:
ಓಂ ಅಸಾಧ್ಯ ಸಾಧ್ಯ ಕಾರಣ ಪ್ರಸಾದವೇನಮ:
ಓಂ ಅಂತಾಮೋದನ ವನಧಿ ಪ್ರಸಾದವೇನಮ:
ಓಂ ಅಮೃತನಿಧಿ ಕ್ರೋಶಮುಖ ಪ್ರಸಾದವೇನಮ:
ಓಂ ಅಪ್ರಮಾಣ ದಯಾನಿಧಿ ಪ್ರಸಾದವೇನಮ:
ಓಂ ಶಿಕ್ಷಾಗುರು ಸ್ಥಲಕತ್ಮಕ ಪ್ರಸಾದವೇನಮ:
ಓಂ ಸದ್ಬೋಧಾನಂದ ಮುಖ ಪ್ರಸಾದವೇ ನಮ:
ಓಂ ಪರಿಬೋಧ ನಿಧಿ ನಿವಾಸ ಪ್ರಸಾದವೇ ನಮ:
ಓಂ ಸಕಲಗುಣ ಸಂಹಾರಿ ಪ್ರಸಾದವೇ ನಮ:
ಓಂ ಸರ್ವಗುಣ ನಿಜಸಂಧಾನ ಕೃಪಾ ಪ್ರಸಾದವೇ ನಮ:
ಓಂ ತ್ರಿವಿಧಾಂಗ ಲಿಂಗಸಂಗ ಕೃಪಾ ಪ್ರಸಾವವೇ ನಮ:
ಓಂ ತ್ರಿವಿಧಲಿಂಗ ಸಂಪತ್ ಕೃಪಾ ಪ್ರಸಾದವೇ ನಮ:
ಓಂ ಸರ್ವ ಸಂಪತ್ತು ಹೃದಯನಿಧಿ ಪ್ರಸಾದವೇ ನಮ:
ಓಂ ನಿತ್ಯಾಂತಃ ಕರಣ ಕೃಪಾ ಪ್ರಸಾದವೇ ನಮಃ
ಓಂ ಅತ್ಯಂತ ಸುಖಮುಖ ರಮಣ ಪ್ರಸಾದವೇ ನಮ:

ಓಂ ಮೋಕ್ಷಾಗುರು ಸ್ಥಲಾಂಕ ಮೂರ್ತಿ ಪ್ರಸಾದವೇ ನಮಃ
ಓಂ ಜ್ಞಾನ ದೇಶಿಕ ದಯವಾರಿಧಿ ಪ್ರಸಾದವೇ ನಮ:
ಓಂ ಮಹಾಜ್ಞಾನ ಕೃಪಾಕರ ಪ್ರಸಾದವೇ ನಮಃ
ಓಂ ಮೃತ್ಯುಂಜಯ ಪ್ರಕಾಶ ಪ್ರಸಾದವೇನಮ:
ಓಂ ಸರ್ವೇಂದ್ರಿಯ ಜಿತು ಪ್ರಸಾದವೇನಮಃ
ಓಂ ಸರ್ವಕರಣ ಜಿತು ಪ್ರಸಾದವೇನಮಃ
ಓಂ ಸಕಲ ವಿಷಯಾತೀತ ಪ್ರಸಾದವೇ ನಮ:
ಓಂ ಘನ ಹರುಷ ಪರುಷಮುಖ ಪ್ರಸಾದವೇ ನಮ:
ಓಂ ಸಹಜ ಘನಾನಂದತೇಜ ಪ್ರಸಾದವೇ ನಮ:
ಓಂ ಘನಶಾಂತ ನಿಭ್ರಾಂತಮಯ ಪ್ರಸಾದವೇ ನಮ:
ಓಂ ಘನಲಿಂಗ ಪ್ರಸನ್ನ ಪ್ರಸಾದವೇ ನಮಃ
ಓಂ ಪಂಚಾಚಾರಲಿಂಗ ಮೂರ್ತಿ ಪ್ರಸಾದವೇ ನಮಃ
ಓಂ ಅನಿಷ್ಟನಷ್ಟ ಮೂರ್ತಿ ಪ್ರಸಾದವೇ ನಮಃ
ಓಂ ಆಗಮಗತಿ ವಿಚಕ್ಷಣ ಪ್ರಸಾದವೇ ನಮಃ
ಓಂ ಅಬದ್ಧ ಗಮನಾತೀತ ಮೂರ್ತಿ ಪ್ರಸಾದವೇ ನಮ:
ಓಂ ಸುಬದ್ಧ ಸಗುಣಾನಂದ ಮುಖ ಪ್ರಸಾದವೇ ನಮಃ
ಓಂ ಸುಚರಿತ್ರ ಶುಭಮಯ ಪ್ರಸಾದವೇ ನಮಃ
ಓಂ ಅಮಳ ಶ್ರೀವದಲಿಂಗ ಪ್ರಸಾದವೇ ನಮಃ
ಓಂ ಸತ್ಕ್ರಿಯಾ ಗಂಭೀರ ಪ್ರಭಾ ಪ್ರಸಾದವೇ ನಮಃ
ಓಂ ಅನಾಚಾರ ವಿನಾಶ ಪ್ರಸನ್ನ ಪ್ರಸಾದವೇ ನಮಃ
ಓಂ ಅಸಂತಾಪ ಮನೋಮೂರ್ತಿಲಿಂಗ ಪ್ರಸಾದವೇ ನಮಃ
ಓಂ ಸಂತಾಪ ಸಂಹಾರ ಲಿಂಗ ಪ್ರಸಾದವೇ ನಮಃ
ಓಂ ದುಃಖದೂರ ವರ್ಜಿತಲಿಂಗ ಪ್ರಸಾದವೇ ನಮಃ
ಓಂ ತಾಪತ್ರಯ ನಾಶನಲಿಂಗ ಪ್ರಸಾದವೇ ನಮಃ
ಓಂ ನಿಶ್ಚಿಂತಮಯಮೂರ್ತಿ ಪ್ರಸಾದವೇ ನಮಃ
ಓಂ ಸಕಲಮದ ಸಂಹಾರ ತೇಜ ಪ್ರಸಾದವೇ ನಮ:
ಓಂ ನಿರ್ಮದ ನಿರಂತರಾತ್ಮಕ ಪ್ರಸಾದವೇ ನಮ:
ಓಂ ದಶಾವಸ್ತಿವಿನಾಶ ಬ್ರಹ್ಮ ಪ್ರಸಾದವೇ ನಮಃ
ಓಂ ನಿರ್ಮಲ ಧ್ಯಾನಾಂಂದ ಪ್ರಭಾ ಪ್ರಸಾದವೇ ನಮಃ

ಓಂ ನಿಃಕಾಮ ಮುಖ ವಿಕಸನ ಪ್ರಭಾ ಪ್ರಸಾದವೇ ನಮಃ
ಓಂ ಪರಿಪೂರ್ಣಾನಂದ ಮಯಲಿಂಗ ಪ್ರಸಾದವೇ ನಮಃ
ಓಂ ತೇಜೋಮೂರ್ತಿ ಲಿಂಗ ಪ್ರಸಾದವೇ ನಮಃ
ಓಂ ಅಖಂಡ ಮಯಾನಂದ ಪ್ರಸಾದವೇ ನಮಃ
ಓಂ ಅಖಂಡ ಪ್ರಕಾಶ ಮೂರ್ತಿಲಿಂಗ ಪ್ರಸಾದವೇ ನಮಃ
ಓಂ ಭಾವ ಪ್ರಕಾಶ ಪೂರ್ಣಲಿಂಗ ಪ್ರಸಾದವೇ ನಮಃ
ಓಂ ಜ್ಞಾನಾನಂದ ಪ್ರಭಾಮಯ ಲಿಂಗ ಪ್ರಸಾದವೇ ನಮಃ
ಓಂ ದಿವ್ಯಜ್ಞಾನ ಲಿಂಗಮೂರ್ತಿ ಪ್ರಸಾದವೇ ನಮಃ
ಓಂ ರಾಜತೇಜಾನಂದ ಲಿಂಗಮೂರ್ತಿ ಪ್ರಸಾದವೇ ನಮಃ
ಓಂ ಅಹಂಕಾರತ್ರಯ ಭಂಗಮೂರ್ತಿ ಪ್ರಸಾದವೇ ನಮಃ
ಓಂ ಅತ್ಯಂತ ಸುಖಮಯ ಮೂರ್ತಿ ಪ್ರಸಾದವೇ ನಮಃ
ಓಂ ಸ್ವಯಾನಂದ ಜಂಗಮಮೂರ್ತಿ ಪ್ರಸಾದವೇ ನಮಃ
ಓಂ ಸದ್ಗೃಹ ಭಕ್ತಿ ಪ್ರಸನ್ನ ಪ್ರಸಾದವೇ ನಮಃ
ಓಂ ಇಚ್ಛಾಲೀಲಾನಂದ ಮಯ ಪ್ರಸಾದವೇ ನಮಃ
ಓಂ ದುರ್ವರ್ತನ ಖಂಡಣ ಪ್ರಸಾದವೇ ನಮಃ
ಓಂ ಸಾಕಾರ ಜಂಗಮ ಸ್ಥಲಾತ್ಮಕ ಪ್ರಸಾದವೇ ನಮಃ
ಓಂ ಸಾವಧಾನ ಮುಖ ಮಣಿ ಪ್ರಸಾದವೇ ದಮಃ
ಓಂ ಘನಲಿಂಗ ಜಂಗಮಾ ಮೂರ್ತಿ ಪ್ರಸಾದವೇ ನಮಃ
ಓಂ ಸ್ವಸ್ಥಲ ವಿರಾಜ ಜಂಗಮ ಪ್ರಸಾದವೇ ನಮಃ
ಓಂ ಸ್ವಧರ್ಮಾಚಾರ ಪ್ರಕಾಶ ಪ್ರಸಾದವೇ ನಮಃ
ಓಂ ನಿಜಸ್ಥಲ ನಿರ್ಮಾಯ ಜಂಗಮ ಪ್ರಸಾದವೇನಮಃ
ಓಂ ಚರಜಂಗಮಸ್ಥಲಾನ್ವಿತ ಪ್ರಸಾದವೇನಮಃ
ಓಂ ಚರ ಪ್ರಕಾಶ ಮಯಾರೂಢ ಪ್ರಸಾದವೇನಮಃ
ಓಂ ದೇಶಾಂತರ ಪ್ರಭಾನಂದ ಪ್ರಸಾದವೇನಮಃ
ಓಂ ದೇಶಾ ವಿನೋದಿ ಜಂಗಮ ಪ್ರಸಾದವೇನಮಃ
ಓಂ ಸುಬೋಧ ಕರ್ತೃಘಮಯ ಪ್ರಸಾದವೇನಮಃ
ಓಂ ಚಿದ್ಬೋಧ ಭರಿತಾಂತ ಪ್ರಸಾದವೇ ನಮಃ
ಓಂ ಅಗಮ್ಯ ಚಾರಿತ್ರ ವಿನೋದಿ ಪ್ರಸಾದವೇ ನಮಃ
ಓಂ ಸಂವಿಶಾಲಕೀರ್ತಿಮಯ ಪ್ರಸಾದವೇ ನಮಃ

ಓಂ ಸತ್ಕೀರ್ತಿ ಶುಭಾನಂದ ಮೂರ್ತಿ ಪ್ರಸಾದವೇ ನಮಃ
ಓಂ ಅವಿಚಾರಗಮನ ವಿಭಂಗ ಪ್ರಸಾದವೇ ನಮಃ
ಓಂ ಪರಜಂಗಮ ಸ್ಥಲಾಯುತ ಪ್ರಸಾದವೇ ನಮಃ
ಓಂ ಜ್ಞಾನ ಜಂಗಮ ಪ್ರಭಾಮೂರ್ತಿ ಪ್ರಸಾದವೇ ನಮ:
ಓಂ ಅಜ್ಞಾನ ವಿಡಂಬನ ಮೂರ್ತಿ ಪ್ರಸಾದವೇ ನಮಃ
ಓಂ ನಿಜಾಚಾರ ಮುಖ ವಿನೋದಿ ಪ್ರಸಾದವೇ ನಮಃ
ಓಂ ನಿತ್ಯಾನಂದ ಸುಲಲಿತ ಪ್ರಸಾದವೇ ನಮಃ
ಓಂ ನಿರ್ಭಾವ ತೇಜಾತ್ಮಕ ಪ್ರಸಾದವೇ ನಮಃ
ಓಂ ಪರಮಾನಂದ ಭರಿತ ಪ್ರಸಾದವೇ ನಮಃ
ಓಂ ಸುಖಶುದ್ಧ ನಿಧಿನಿವಾಸ ಪ್ರಸಾದವೇ ನಮಃ
ಓಂ ಘನ ಗಂಭೀರ ಗತಿ ಮತಿವಿಶಾಲ ಪ್ರಸಾದವೇ ನಮಃ
ಓಂ ಅನಂತ ಸುಖಸುಯಿಧಾನಿ ಪ್ರಸಾದವೇ ನಮಃ

## ಆಚಾರ ಲಿಂಗಸ್ಥಲ

ಕಂದ|| ಆಚಾರ ಲಿಂಗಸ್ಥಲ ನವವಿಧದಿಂ |
ಪ್ರಾಚೀನ ಪ್ರಸಾದ ಸಹಸ್ರದೋ |
ಳ್ಸೂಚಿಸಿದನುಭವ ತೊಂಬತ್ತರಶುಧಿಯ |
ತೋಚನಾಗ್ರದಿ ಸ್ವಿಕರಿಸಲೈಶ್ವರ್ಯ ಸಿದ್ಧಿಂ ||

ಓಂ ಕ್ರಿಯಾಗಮ ಮೂರ್ತಿ ಪ್ರಕೀರ್ತಿ ಪ್ರಸಾದವೇ ನಮಃ
ಓಂ ಸತ್ಯಾಚಾರ ನಿತ್ಯನಿರ್ಮಲ ಪ್ರಸಾದವೇ ನಮ:
ಓಂ ಅಸತ್ಯ ಗತಿವಿನಾಶಮಣಿ ಪ್ರಸಾದವೇ ನಮಃ
ಓಂ ನಿಜ ನಿರ್ಮಲಾನಂದ ಗಮ್ಯ ಪ್ರಸಾದವೇ ನಮ:
ಓಂ ದು:ಶೀವ ಗಮನ ವಿನಾಶ ಪ್ರಸಾದವೇ ನಮ:
ಓಂ ವೀರಶೈವಾಚಾರ ಪ್ರಸಿದ್ಧ ಪ್ರಸಾದವೇ ನಮಃ
ಓಂ ದುರ್ವಿಷಯ ಗಮನಾತೀತ ಪ್ರಸಾದವೇ ನಮಃ
ಓಂ ಸದಾಚಾರ ವಿಷಯ ವಿನೋದ ಪ್ರಸಾದವೇ ನಮಃ
ಓಂ ಕ್ಷುದ್ರಗಮನ ವಿಲಕ್ಷ ಪ್ರಸಾದವೇ ನಮಃ
ಓಂ ಸಚ್ಛಿದ್ರಸಂಧಾನ ಪ್ರಸನ್ನ ಪ್ರಸಾದವೇ ನಮಃ

ಓಂ ಸದಾ ಗಂಭೀರಮುಖ ಪ್ರಸಾದವೇ ನಮಃ
ಓಂ ಜ್ಞಾನಾಗಮ ಪ್ರಕಾಶ ಪ್ರಸಾದವೇ ನಮಃ
ಓಂ ವಿದ್ಯಾಗಮಾನಂದ ಮೂರ್ತಿ ಪ್ರಸಾದವೇ ನಮಃ
ಓಂ ವೀರಗಮನ ವಿಶಾಲ್ಯ ಪ್ರಸಾದವೇ ನಮಃ
ಓಂ ಅಷ್ಟಾಂಗಯೋಗ ವಿರಹಿತ ಪ್ರಸಾದವೇ ನಮಃ
ಓಂ ಅನಿತ್ಯ ಕರ್ಮಭಗ್ನ ಪ್ರಸಾದವೇ ನಮಃ
ಓಂ ಅನಿಷ್ಟಭಕ್ತಿಚ್ಛೇದನ ಪ್ರಸಾದವೇ ನಮಃ
ಓಂ ನಿಷ್ಠಾಭಕ್ತಿ ನಿಯತ ಪ್ರಸಾದವೇ ನಮಃ
ಓಂ ಸದ್ವಿಚಾರ ಸಂಪತ್ತ ಪ್ರಸಾದವೇ ನಮಃ
ಓಂ ಅನುವಿಷ ಲೀಲಾನಂದ ಪ್ರಸಾದವೇ ನಮಃ
ಓಂ ಭಾವಾಗಮ ಭರಿತ ಪ್ರಸಾದವೇ ನಮಃ
ಓಂ ಚಿನ್ಮಯಗತಿ ಗರ್ಭವಿನೋದಿ ಪ್ರಸಾದವೇ ನಮಃ
ಓಂ ಪರನಾದಗತಿ ಗಂಪು ಪ್ರಸಾದವೇ ನಮಃ
ಓಂ ಪರಬಿಂದು ಮತಿಗಂಪು ಪ್ರಸಾದವೇ ನಮಃ
ಓಂ ಪರಕಳಾ ರತಿಯಿಂಪು ಪ್ರಸಾದವೇ ನಮಃ
ಓಂ ಸದ್ಭಾವ ವಿರತಿ ವಿಶೇಷ ಪ್ರಸಾದವೇ ನಮಃ
ಓಂ ಪರಮರತಿ ವಿಶಾಲಭದ್ರ ಪ್ರಸಾದವೇ ನಮಃ
ಓಂ ವಿಮಲಮತಿ ಸಧೃತಿ ಪ್ರಸಾದೇವೇ ನಮಃ
ಓಂ ಅಭಿನ್ನ ವೃತ ಸೌಖ್ಯ ಪ್ರಸಾದವೇ ನಮಃ
ಓಂ ಅವಿರಳ ಶೀಲಾನಂದಭದ್ರ ಪ್ರಸಾದವೇ ನಮಃ
ಓಂ ಸಕಾಯ ಸದ್ರುಚಿ ಪ್ರಸಾದವೇ ನಮಃ
ಓಂ ದುಷ್ಟನಿಗ್ರಹ ಶಾಂತಾತ್ಮಕ ಪ್ರಸಾದವೇ ನಮಃ
ಓಂ ಶುದ್ಧಮನಭದ್ರ ಮಹಂತ ಪ್ರಸಾದವೇ ನಮಃ
ಓಂ ಕ್ಷುದ್ರ ಕಲ್ಪ ಖಂಡಣಾಚಾರ ಪ್ರಸಾದವೇ ನಮಃ
ಓಂ ಸರ್ವಸನುಮತ ಗಮ್ಯ ಪ್ರಸಾದವೇ ನಮಃ
ಓಂ ಸತ್ಕ್ರಿಯಾಧಾರ ಸಂಧರ ಪ್ರಸಾದವೇ ನಮಃ
ಓಂ ಭಕ್ತಿನಿಷ್ಠಿ ಸಂಧಾನ ಪ್ರಭಾ ಪ್ರಸಾದವೇ ನಮಃ
ಓಂ ಜ್ಞಾನನಿಷ್ಠಿ ಸುಯಿಧಾನ ಪ್ರಸಾದವೇ ನಮಃ
ಓಂ ವೈರಾಗ್ಯನಿಷ್ಠಿ ವೃದ್ಧಾಪರ ಪ್ರಸಾದವೇ ನಮಃ
ಓಂ ವೀರವಿಗ್ರಹ ವಿನೋದಿ ಪ್ರಸಾದವೇ ನಮಃ

ಓಂ ಅಕಾಯ ಪ್ರಸಿದ್ಧ ಪ್ರಸಾದವೇ ನಮಃ
ಓಂ ನಿಃಕಾಯ ನಿಜಾತ್ಮಕ ಪ್ರಸಾದವೇ ನಮಃ
ಓಂ ಮನೋ ಮಹಗಮ್ಯ ಪ್ರಸಾದವೇ ನಮಃ
ಓಂ ಸದಾ ನಿಶ್ಚಿಂತ ವಿಗ್ರಹ ಪ್ರಸಾದವೇ ನಮಃ
ಓಂ ಶಕ್ತಿ ದೃಢಮಯ ಪ್ರಸಾದವೇ ನಮಃ
ಓಂ ಸತ್ಕರುಣ ಶಿವಕಿರಣ ಪ್ರಸಾದವೇ ನಮಃ
ಓಂ ಸುಜ್ಞಾನ ಪ್ರಭಾನಿಳಯ ನಿತ್ಯ ಪ್ರಸಾದವೇ ನಮಃ
ಓಂ ಗುರು ಸಾಹಿತ್ಯ ಪ್ರಸಾದವೇ ನಮಃ
ಓಂ ಲಿಂಗ ಸಾಹಿತ್ಯ ಪ್ರಸಾದವೇ ನಮಃ
ಓಂ ಜಂಗಮ ಸಾಹಿತ್ಯ ಪ್ರಸಾದವೇ ನಮಃ
ಓಂ ಪರ ಕಾಯ ಪ್ರಭಾಮೂರ್ತಿ ಪ್ರಸಾದವೇ ನಮಃ
ಓಂ ಕಾಯ ಕಲ್ಪಿತ ನಾಸ್ತಿ ಪ್ರಸಾದವೇ ನಮಃ
ಓಂ ಕಾಯ ಕರ್ಮದಗ್ಧ ಪ್ರಸಾದವೇ ನಮಃ
ಓಂ ಕಾಯ ಮೋದ ವಿಹೀನ ಪ್ರಸಾದವೇ ನಮಃ
ಓಂ ಸತ್ಕಾಯ ಸಮಯ ವಿನೋದಿ ಪ್ರಸಾದವೇ ನಮಃ
ಓಂ ಪರಮಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಅವಿರಳ ಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಇಂದ್ರಿಯ ಸಂಚ ಶಿವಸಂಚ ಪ್ರಸಾದವೇ ನಮಃ
ಓಂ ಪ್ರಾಣಸಂಚ ಮಹಾಸಂಚ ಪ್ರಸಾದವೇ ನಮಃ
ಓಂ ಭಾವಸಂಚಸು ಪ್ರಭಾಸಂಚ ಪ್ರಸಾದವೇ ನಮಃ
ಓಂ ಸಧರ್ಮಗತಿ ವಿನೋದಿ ಪ್ರಸಾದವೇ ನಮಃ
ಓಂ ಏಕಾಗ್ರಚಿತ್ತ ಪ್ರಸನ್ನಪ್ರಸಾ
ಓಂ ಸರ್ವಜೀವ ಹಿಂಸಾಭಂಗ ಪ್ರಸಾದವೇ ನಮಃ
ಓಂ ಸಕಲಜನ ಮನೋಪ್ರೀತ ಪ್ರಸಾದವೇ ನಮಃ
ಓಂ ದ್ವಂದ ಕರ್ಮ ನಿಜಾಚಾರ ಗರ್ಭ ಪ್ರಸಾದವೇ ನಮಃ
ಓಂ ಅಸಂತಾಪ ಅನುಮಿಷ ಪ್ರಸಾದವೇ ನಮಃ
ಓಂ ಅಂತಃಶಾಂತಮಯ ಮೂರ್ತಿ ಪ್ರಸಾದವೇ ನಮಃ
ಓಂ ಸಕಲ ಗತಿಮತಿ ಶಾಂತಮಯ ಪ್ರಸಾದವೇ ನಮಃ
ಓಂ ನಿತ್ಯಾಂತಃಕರುಣ ನಿರುತ ಪ್ರಸಾದವೇ ನಮಃ

ಓಂ ಸತ್ಕ್ರ್ಯೋತ್ತಮ ಸಮತಾನಂದ ಪ್ರಸಾದವೇ ನಮಃ
ಓಂ ಜ್ಞಾನಾ ಚಾರಾಯತ ಪ್ರಸನ್ನ ಪ್ರಸಾದವೇ ನಮ:
ಓಂ ವಿನಯಗುಣನಿಧಿ ಪ್ರಸಾದವೇ ನಮಃ
ಓಂ ಸದ್ವಿನಯ ಸಂಪನ್ನತ್ವ ಪ್ರಸಾದವೇ ನಮ:
ಓಂ ಚಿದ್ವಿಲಾಸ ಸೌರಭ ಸುಖ ಪ್ರಸಾದವೇ ನಮ:
ಓಂ ದುಃಸಂಭ್ರಮದೂರ ಪ್ರಸಾದವೇ ನಮಃ
ಓಂ ಮೃತಕಾಯ ಗತಿ ವಿಡಂಬನ ಪ್ರಸಾದವೇ ನಮ;
ಓಂ ಚೇಷ್ಟಾಭಾವ ವಿನಾಶ ಪ್ರಸಾದವೇ ನಮಃ
ಓಂ ವಿಚಕ್ಷಣ ಭಾವ ಶುದ್ಧಿ ಪ್ರಸಾದವೇ ನಮಃ
ಓಂ ಸಮತಾನಂದ ಭಾವ ಪ್ರಸನ್ನ ಪ್ರಸಾದವೇ ನಮ:
ಓಂ ಸಮಯಸುಖ ಸುಲಲಿತ ಪ್ರಸಾದವೇ ನಮಃ
ಓಂ ಅನುಭಾವಾಚಾರ ಪ್ರಸನ್ನ ಪ್ರಸಾದವೇ ನಮ;
ಓಂ ಕ್ರಿಯಾಲಿಂಗ ಸಂಬಂಧ ಸುಲಲಿತ ಪ್ರಸಾದವೇ ನಮಃ
ಓಂ ಮಹಾಜ್ಞಾನಲಿಂಗ ಸಂಗ ಶುಭಾತ್ಮಕ ಪ್ರಸಾದವೇ ನಮಃ
ಓಂ ಮನ ಘನ ಮಹಾಂತ ಪ್ರಸಾದವೇ ನಮ:
ಓಂ ಮಹಿಮಾತಿಶಯ ಪ್ರಸನ್ನ ಪ್ರಸಾದವೇ ನಮಃ
ಓಂ ಅತಿಶಯ ರತಿ ಸಂಬಂಧ ಪ್ರಸಾದವೇ ನಮಃ
ಓಂ ನಿರತಿಶಯಾನಂದ ನಿಧಿ ಪ್ರಸಾದವೇ ನಮ:
ಓಂ ಪರಮೈಶ್ವರ್ಯಗರ್ಭಪ್ರಭಾ ಪ್ರಸಾದವೇನಮಃ
ಓಂ ಪರಮಾನಂದ ಪೀಠ ಪ್ರಸಾದವೇ ನಮಃ

## ಗುರುಲಿಂಗಸ್ಥಲ

ಕಂದ|| ಮುದದಿ ಮುಂದೆಸೆವ ಗುರುಲಿಂಗಸ್ಥಲದೊ |
ಳೊದಗುಮಹಾಪ್ರಸಾದದನುಭವ ಶುದ್ಧಿಯಂ ||
ಹೃದಯಮುಖದಿ ಸೇವಿಸಿದ ಶರಣಜನ |
ರ್ಗದಿರಿಟ್ಟಹ ಮಹಾಘನೈಶ್ವರ್ಯಸಿದ್ಧಿಂ ||

ಕಂದ|| ಶ್ರೀಗುರುಲಿಂಗಸ್ಥಲ ನವವಿಧದೊಳ್ |
ಭಾಗಭಾಗನವಿನಾನು ಭಾವಶೇಷ |
ಭೋಗತೊಂಬತ್ತುತೆರದಿಂದರಿವರಿ |
ದಾಗಳನುಪಮೈಶ್ವರ್ಯಪದನಿಧಿಯಕ್ಕುಂ ||

ಓಂ ಕಾಯಾನುಗ್ರಹಪದ ಪ್ರಸಾದವೇ ನಮಃ
ಓಂ ಸತ್ಯಕಾಯ ಶಿವಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ನಿತ್ಯಕಾಯ ಜ್ಞಾನಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ನಿರ್ಮಲಕಾಯ ನಿಜಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಕ್ರಿಯಾಕಾಯ ಲಿಂಗಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಭಕ್ತಿಕಾಯ ನಿತ್ಯಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಜ್ಞಾನಕಾಯ ಮಹಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಸ್ಥೂಲ ತ್ಯಾಗಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಸೂಕ್ಷ್ಮ ಭೋಗಾನುಭಾವ ಪ್ರಸಾದವೇ ನಮಃ
ಓಂ ಕಾರಣ ಯೋಗಾನುಭಾವ ಪ್ರಸಾದವೇ ನಮಃ
ಓಂ ಶುದ್ಧಾದರಾತ್ಮಕ ಪ್ರಸಾದವೇ ನಮಃ
ಓಂ ನಿರ್ವಿಷಯಾನಂದ ಪ್ರಸಾದವೇ ನಮಃ
ಓಂ ನಿರ್ಗಮನ ಮುಖ ಪ್ರಸಾದವೇ ನಮಃ
ಓಂ ಸದಾದಾನ ಸಂಪತ್ತು ಪ್ರಸಾದವೇ ನಮಃ
ಓಂ ಸದಾವಾಕ್ ಶುದ್ಧಿಮಯ ಪ್ರಸಾದವೇ ನಮಃ
ಓಂ ನಾಸಿಕ ಶಿವಾನುಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ರಸನಿ ಶಿವಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ನೇತ್ರಲಿಂಗಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ತ್ವಕ್ ಕ್ರಿಯಾಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಶ್ರೋತೃಜ್ಞಾನಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಉದಾನ ಸಧರ್ಮ ಸಮೇತ ಪ್ರಸಾದವೇ ನಮಃ
ಓಂ ಸಮಾನ ಸಂವಿತ್ ಪ್ರಭಾ ಪ್ರಸಾದವೇ ನಮಃ
ಓಂ ನಾಗ ನವಿನ ಭಾವ ಪ್ರಸನ್ನ ಪ್ರಸಾದವೇ ನಮಃ
ಓಂ ಕರ್ಮಾ ನಿರ್ಮಲಾನಂದ ಪ್ರಸಾದವೇ ನಮಃ
ಓಂ ಕೃಕರ ವಿಕಾರ ವಿನಾಶ ಪ್ರಸಾದವೇ ನಮಃ
ಓಂ ದೇವದತ್ತ ಸಾವಧಾನ ಸಂವಿತ್ತು ಪ್ರಸಾದವೇ ನಮಃ
ಓಂ ಧನಂಜಯ ಅನುಭಾವಾಂತ ಪ್ರಸಾದವೇ ನಮಃ
ಓಂ ಭೋಜ್ಯ ವಾಚಾರ ಲಿಂಗಾರ್ಪಿತ ಪ್ರಸಾದವೇ ನಮಃ
ಓಂ ಪಾನ್ಯ ಗುರುಲಿಂಗಾರ್ಪಿತ ಪ್ರಸಾದವೇ ನಮಃ

ಓಂ ಭಕ್ಷ್ಯ ಶಿವಲಿಂಗಾರ್ಪಿತ ಪ್ರಸಾದವೇ ನಮಃ
ಓಂ ಚೋಹ್ಯ ಜಂಗಮಲಿಂಗಾರ್ಪಿತ ಪ್ರಸಾದವೇ ನಮಃ
ಓಂ ತಿಹ್ಯ ಪ್ರಸಾದ ಲಿಂಗಾರೋಗಣಿ ಪ್ರಸಾದವೇ ನಮಃ
ಓಂ ತೃಪ್ತಿಮಹಾಲಿಂಗಾರೋಗಣಿ ಪ್ರಸಾದವೇ ನಮಃ
ಓಂ ರೂಪ ಇಷ್ಟಲಿಂಗಾರ್ಪಣ ಪ್ರಸಾದವೇ ನಮಃ
ಓಂ ರುಚಿಪ್ರಾಣಲಿಂಗಾರ್ಪಣ ಪ್ರಸಾದವೇ ನಮಃ
ಓಂ ಶಿಷ್ಯ ಲೀಲಾತ್ಮಕ ಪ್ರಸಾದವೇ ನಮಃ
ಓಂ ಅಂತ್ಯವಾಸಿ ಮುಖ ವಿನೋದಿ ಪ್ರಸಾದವೇ ನಮಃ
ಓಂ ಜ್ಞಾನ ಕಲಾತ್ಮಾಯತ ಪ್ರಸಾದವೇ ನಮಃ
ಓಂ ಭಕ್ತಿತೂರ್ಯಾನ್ವಿತ ಪ್ರಸಾದವೇ ನಮಃ
ಓಂ ನಿಜವಿಕಳ ಅವಸ್ಥಾತ್ಮಕ ಪ್ರಸಾದವೇ ನಮಃ
ಓಂ ಸಕಲ ಗುಣಸಾರ ನಿರ್ಪಾಣ ಪ್ರಸಾದವೇನಮಃ
ಓಂ ಸರ್ವಸಂಸಾರ ವಿಸರ್ಜನ ಮುಖ ಪ್ರಸಾದವೇನಮಃ
ಓಂ ನಿರ್ಮಳ ಮುಖಿ ಪ್ರಸಾದವೇನಮಃ
ಓಂ ಊರ್ಧ್ವ ಚಿತ್ರಭಾ ಮೂರ್ತಿ ಪ್ರಸಾದವೇನಮಃ
ಓಂ ಗುರುಸೇವಾ ವಿನೋದಿ ಪ್ರಸಾದವೇನಮಃ
ಓಂ ಗು ದಯಾಂತ ಸುಖಿ ಪ್ರಸಾದವೇನಮಃ
ಓಂ ಸತ್ಸೇವಾನಂದ ಮುಖಿ ಪ್ರಸಾದವೇ ನಮಃ
ಓಂ ಗುರುಸಂದರ್ಶನ ಪ್ರಭಾ ಪ್ರಸಾದವೇ ನಮಃ
ಓಂ ಗುರುಪಾದಸ್ಪರ್ಶನ ಪ್ರಸಾದವೇ ನಮಃ
ಓಂ ಸದ್ಗುರೋಕ್ತಿ ಸಂಭಾಷಣಾನ್ವಿತ ಪ್ರಸಾದವೇ ನಮಃ
ಓಂ ನಿಜಾರ್ಯ ಸೇವಾನುಕೂಲಿ ಸುಖಿ ಪ್ರಸಾದವೇ ನಮಃ
ಓಂ ಕರ್ತೃಭೃತ್ಯ ಸಮಯಾನಂದ ಪ್ರಸಾದವೇ ನಮಃ
ಓಂ ದೇಶಿಕಮುಖ ಪ್ರಭಾ ಪ್ರಸಾದವೇ ನಮಃ
ಓಂ ರಾಜೋತ್ತಮ ಮೂರ್ತಿ ಪ್ರಸಾದವೇ ನಮಃ
ಓಂ ಉತ್ತಮೋತ್ತಮ ರಾಜ ಪ್ರಸಾದವೇ ನಮಃ
ಓಂ ಗುರು ಮಹತ್ವಗರ್ಭ ಪ್ರಸಾದವೇ ನಮಃ
ಓಂ ಗುರುಸೋಂಕಿ ಗುರುರೂಪ ಪ್ರಸಾದವೇ ನಮಃ
ಓಂ ಭ್ರಮರ ಕೀಟಕನ್ಯಾಯ ಪ್ರಸಾದವೇ ನಮಃ

ಓಂ ಶಿಷ್ಯಗುರು ಸಂಬಂಧ ಪ್ರಸಾದವೇ ನಮಃ
ಓಂ ಎಂತು ದೇಶಿಕನಂತು ಶಿಷ್ಯ ಪ್ರಸಾದವೇ ನಮಃ
ಓಂ ಗುರುಶಿಷ್ಯ ಶಿಷ್ಯಗುರು ಭಾವ ಪ್ರಸಾದವೇನಮ:
ಓಂ ನಿತ್ಯಾರ್ಯ ಸತ್ಯಶಿಷ್ಯ ಪ್ರಸಾದವೇ ನಮಃ
ಓಂ ಸತ್ಯಾರ್ಯ ನಿತ್ಯಶಿಷ್ಯ ಪ್ರಸಾದವೇನಮ:
ಓಂ ಸೇವ್ಯಗುರುವಂತ ಪ್ರಕಾಶ ಶಿಷ್ಯ ಪ್ರಸಾದವೇನಮಃ
ಓಂ ದ್ವಂದಭಾವವೇಕ ಪ್ರಭಾ ಪ್ರಸಾದವೇ ನಮಃ

## ಶಿವ-ಲಿಂಗಪ್ರಸಾದಸ್ಥಲ

ಕಂದ|| ಮತ್ತೆಸೆವ ಶಿವಲಿಂಗ ಸ್ಥಲನವವಿ |
ಚಿತ್ರ ಭಾವಾಂತ ಪ್ರಸಾದವನರಿ |
ದುತ್ತಮ ಸುಖ ಪಡೆದು ಬಾಳುವದುಸ |
ಚಿತ್ತಾನಂದ ಶಿವಭಕ್ತ ಶರಣ ಜನರು ||

ಕಂದ|| ಶಿವಲಿಂಗಸ್ಥಲ ನವವಿಧ ದಂತರ |
ಸುವಿವೇಕ ಶುದ್ಧ ಪ್ರಸಾದದನಿಲುವಂ |
ಶಿವಶರಣ ಭಕ್ತಜನರರಿದುಸವಿಯು |
ಲ್ಕವಿರಳ ಪದಸಂಪತ್ತು ಸಂಪ್ರಾಪ್ತಿ:||

ಓಂ ಜೀವಾತ್ಮ ಸುಪ್ರಕಾಶ ಪ್ರಸಾದವೇನಮ:
ಓಂ ಸಜ್ಜೀವ ಸದಾತೇಜ ಪ್ರಸಾದವೇ ನಮ:
ಓಂ ವಿಶ್ವ ಇಷ್ಟಲಿಂಗ ಆನಂದ ಪ್ರಸಾದವೇ ನಮಃ
ಓಂ ತೈಜಸ ಪ್ರಾಣ ಲಿಂಗಾಯತ ಪ್ರಸಾದವೇ ನಮ:
ಓಂ ಪ್ರಾಗ್ನ ಭಾವಲಿಂಗ ಸಂಪತ್ತು ಪ್ರಸಾದವೇ ನಮ:
ಓಂ ಗುರುಕೃಪಾ ಪ್ರಸನ್ನ ಜೀವ ಪ್ರಸಾದವೇ ನಮಃ
ಓಂ ಲಿಂಗ ಲೀಲಾನಂದ ಜೀವ ಪ್ರಸಾದವೇನಮ:
ಓಂ ಜಂಗಮಾನು ಭಾವ ಜೀವ ಪ್ರಸಾದವೇ ನಮಃ
ಓಂ ಆಚಾರ ಸಂಪತ್ ಸದಾಜೀವ ಪ್ರಸಾದವೇ ನಮಃ
ಓಂ ಸುವಿಚಾರ ಸುಲಲಿತ ಜೀವ ಪ್ರಸಾದವೇ ನಮಃ
ಓಂ ಅಂತರಾತ್ಮ ಅವಿರಳ ಲೀಲಾ ಪ್ರಸಾದವೇ ನಮಃ

ಓಂ ಶುದ್ಧ ಪ್ರಸಾದಿ ಅಂತಃ ಪ್ರಸಾದವೇನಮಃ
ಓಂ ಅಂತ್ಯ ಪ್ರಸಾದಿಯಾತ್ಮಕ ಪ್ರಸಾದವೇ ನಮಃ
ಓಂ ಸಿದ್ಧ ಪ್ರಸಾದಿಯಂಕಾವೋದ ಪ್ರಸಾದವೇ! ನಮಃ
ಓಂ ಶಿವಲಿಂಗ ಪ್ರಸಾದಿ ಪರಿಣಾಮ ಪ್ರಸಾದವೇ ನಮಃ
ಓಂ ನಿರ್ಗುಣ ಪ್ರಸಾದಿ ಪ್ರಸನ್ನ ಪ್ರಸಾದವೇ ನಮಃ
ಓಂ ಚಿತ್‌ಬಿಂದು ಪ್ರಸಾದಿ ಪ್ರಸನ್ನ ಪ್ರಸಾದವೇ ನಮಃ
ಓಂ ಚಿತ್‌ವಿಲಾಸ ಪ್ರಸಾದಿ ಪ್ರಸನ್ನ ಪ್ರಸಾದವೇ ನಮಃ
ಓಂ ಚಿತ್ ರುಚಿಕರಾತ್ಮಕ ಪ್ರಸನ್ನ ಪ್ರಸಾದವೇ ನಮಃ
ಓಂ ಚಿತ್ ಲೀಲಾಂಗ ಪ್ರಸನ್ನ ಪ್ರಸಾದವೇ ನಮಃ
ಓಂ ವಿಚಿತ್ರ ವಿಶಾಲಮಯ ಪ್ರಸಾದವೇ ನಮಃ
ಓಂ ವಿಮಳಾಂಗ ಮಹಿಮಾತ್ಮಕ ಪ್ರಸಾದವೇ ನಮಃ
ಓಂ ಸೇವ್ಯ ಪ್ರಸಾದಿಯತ್ವ ಪ್ರಸನ್ನ ಪ್ರಸಾದವೇ ನಮಃ
ಓಂ ನಿಜಾಂಗ ಪ್ರಸನ್ನ ಪ್ರಸಾದವೇ ನಮಃ
ಓಂ ನಿರ್ಮಳ ನಿಶ್ಚಿಲಾನಂದ ಪ್ರಸಾದವೇನಮಃ
ಓಂ ಜ್ಞಾನಾಂಗ ನಿಧಿ ಪ್ರಸನ್ನ ಪ್ರಸಾದವೇನಮಃ
ಓಂ ಘನ ತೇಜಾಂಗ ಪ್ರಭಾ ಪ್ರಸಾದವೇನಮಃ
ಓಂ ಸರ್ವಸುಖ ಮಯಾಂಗ ಪ್ರಸಾದವೇ ನಮಃ
ಓಂ ನಿರ್ವಯಲಾಂಗ ಪ್ರಸಾದವೇ ನಮಃ
ಓಂ ನಿರ್ಭಾವಂಗ ನಿತ್ಯ ಪ್ರಸಾದವೇ ನಮಃ
ಓಂ ಘನ ಗಂಭೀರಂಗ ಪ್ರಸಾದವೇ ನಮಃ
ಓಂ ಅವಿರಳ ತೇಜಾಂಗ ಪ್ರಸಾದವೇ ನಮಃ
ಓಂ ದೀಕ್ಷಾಪಾದೋದಕ ಸ್ಥಲಾನ್ವಿತ ಪ್ರಸಾದವೇ ನಮಃ
ಓಂ ಗುರುಪಾದ ಜಲವಿನೋದ ಪ್ರಸಾದವೇ ನಮಃ
ಓಂ ಕರುಣ ಜಲ ವಿಶಾಲ ಪ್ರಸಾದವೇ ನಮಃ
ಓಂ ಸದ್ವೀರ ಪದಾಂಬು ಪ್ರಸಾದವೇ ನಮಃ
ಓಂ ಪರಮ ಪದಾಂಬು ಪ್ರಸಾದವೇನಮಃ
ಓಂ ಶುದ್ಧೋದಕ ಪರಮ ಪ್ರಸಾದವೇನಮಃ
ಓಂ ಅಮೃತೋದಕ ಮಯ ಪ್ರಸಾದವೇನಮಃ
ಓಂ ಸಂಪೂರಿತ ಸುಖೋಪನಿಜ ಪ್ರಸಾದವೇ ನಮಃ
ಓಂ ಕ್ರಿಯಾ ಪಾದೋದಕ ಪ್ರಸನ್ನ ಪ್ರಸಾದವೇ ನಮಃ
ಓಂ ಶಿಕ್ಷಾ ಪಾದೋದಕಮಯ ಪ್ರಸಾದವೇ ನಮಃ

From
*Shivanubhava*
*Office*
BIJAPUR

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇಮಿ
ಮು— ಬನ್ನಟ್ಟಿ
ತಾ— ಜಮುಖಂಡಿ

---

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ,
ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೩. ಮನೆ ನಂ
೧೩೬೮ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ
ಅಚ್ಚಿಯೇ ಪ್ರಸಿದ್ಧಿಸಿದರು.

ಸಂಚಿಕೆ ೫ ಸಂಪುಟ ೩

# ಶಿವಾನುಭವ



ಸಂಪಾದಕರು

ಡಾ. ರಾ ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.



ಮೇ ೧೯೫೮

ವಾರ್ಷಿಕ ಚಂದಾ ] [ ೫ರೂ. ೭೫ನ.ಪೈ.

# ವಿಷಯಾನುಕ್ರಮಣಿಕೆ.



—....೦....—



# ಚಿಕ್ಕಬೆಣಕಲ್ಲು

(ತಾಲೂಕ- ಗಂಗಾವತಿ ಜಿಲ್ಹಾ- ರಾಯಚೂರ)

# ಶಿವಶರಣ ಲಿಂಗಪ್ಪನವರ ಚರಿತ್ರೆ.

(ಲೇ:—ಶ್ರೀ ದೊಡ್ಡನಗೌಡ ಪಾಟೀಲ ವಕೀಲ, ಪಂಚಿನಾಳ-ಕುಷ್ಟಗಿ)

---



ಜಗದೀಶ್ವರನಿಂದ ಜಗತ್ತಿನ ಜೀವನಕೋಟಿಗಳಿಗೆ ಸುಖಾಪೇಕ್ಷೆಯನ್ನು ಕೊಡಲು ಅವತಾರವನ್ನು ಧರಿಸಿದ ಮಂತ್ರ ಮೂರ್ತಿಗಳು ಅಥವಾ ಜಗಜ್ಯೋತಿಗಳಾದ ವಿಭೂತಿಗಳು. ಎಷ್ಟೋ ಮಂದಿ ಮಹಾತ್ಮರಾಗಿರುವರು. ಆದರೆ ಆ ಮಹಿಮರ ವಿಷಯದಲ್ಲಿ—

ಆವ ಮಹಿಮನ ನಾಮಮಾತ್ರದೊಳಾವ ಪೂರ್ವದಿಗೈದ ದುಷ್ಕೃತ ।
ಮಾವಬಲದಿಂ ಕಾಡುತಿರ್ದೊಡೆಯುದರ ಬಲವಡಿಗಿ॥ ಸಾವಕಾಶದಿಸುಕೃ
ತವನುಪಡೆ । ದೀ ವಸುಂಧರೆಯಲ್ಲಿ ನಿಜಸುಖ । ಮಾ ವಿಲಾಸದಿಪೊವ್ಮಿ
ಶಿವಪದ ಸೇರಿಪುದರಿಂದ ॥

ಎಂಬುಕ್ತಿಯಂತೆ ಮಹಾನುಹಿಮರ ದಿವ್ಯ ನಾಮವನ್ನು ಯಾವನು ಭಕ್ತಿಯಿಂದ ಪಠಿಸುವನೋ ಅವನಿಗೆ ಇಹಲೋಕದಲ್ಲಿ ಸೌಖ್ಯವೂ, ಪರಲೋಕ ದಲ್ಲಿ ಮೋಕ್ಷವೂ ಲಭಿಸುತ್ತವೆ. ಇದಕ್ಕೆ ನಿಜಗುಣಶಿವಯೋಗಿಗಳು ಪುರಾತನರ ತ್ರಿವಿಧಿಯಲ್ಲಿ ಮಿಸುನಿವಡೆವೆನಿಸಿ ಬಹುಪೆಸರುದಳೆದಂತೆ ಭಾವಿಸಿನೋಡಲ ಭವನಖಿಳರೆಂದೆನಿಪಗಣವಿಕರವೆಲ್ಲಕ್ಕೈನತನಪ್ಪೆಯೆಂದು ಉಲ್ಲೇಖಿಸಿರುವದರಿಂದ ಭಂಗಾರ ಒಂದೇ, ಆಭರಣಗಳು ನಾನಾಪ್ರಕಾರವಾದಂತೆ ಶಿವನು ಒಬ್ಬನೇ ಇದ್ದು ಅನಂತ ಲೀಲಾ ಘನದಿಂದ ಪ್ರಮಥನಾಗಿಯೂ ಆಚಾರ್ಯನಾಗಿಯೂ ಶಿವಯೋಗಿಯಾಗಿಯೂ, ಪರಬ್ರಹ್ಮನಾಗಿಯೂ, ದೇಶಿಕನಾಗಿಯೂ, ಆರೂ ಢನಾಗಿಯೂ, ಗುರುವಾಗಿಯೂ, ಶರಣನಾಗಿಯೂ ಆಗಿರುವಂತೆಯೇ ಈ ನಮ್ಮ ಚಿಕ್ಕಬೆಣಕಲ್ಲು ಶಿವಶರಣ ಶ್ರೇಷ್ಠ ಲಿಂಗಪ್ಪನವರ ಜೀವನ ಚರಿತ್ರೆ ಮಹಿ ಮೆಯನ್ನು ನಾವು ಯಥಾಮತಿಗೆ ಯೋಗ್ಯವಾಗಿ ಚರಿತ್ರನಾಯಕನ ವರ್ಣನೆ ಯನ್ನು ಬಲ್ಲನುಭವಿಗಳಿಂ ತಿಳಿದು ಸದ್ಯ ಬರೆಯಲೆತ್ನಿಸಿದ್ದೇವೆ. ಈ ಮಹಾತ್ಮರ ಚರಿತ್ರೆಯನ್ನು ಯಾರು ಸದ್ಭಕ್ತಿಯಿಂದ ಶುಶ್ರೂಷೆ ಮಾಡಿಕೊಳ್ಳುವರೋ ಯಾರು ವಿಶ್ವಾಸದಿಂದ ಪಾರಾಯಣರೂಪ ಪಠಿಸಿ ಪೂಜಿಸುವರೊ ಅವರ ವರಿಷ್ಠಾನುಸಾರದಂತೆ ಕಾಮಿತಾರ್ಥಗಳು ಸತ್ಯವಾಗಿಯೂ ಸಿದ್ಧಿಸುವದ ರಲ್ಲಿ ಸಂದೇಹವಿಲ್ಲ. ಯಾತಕ್ಕೆಂದರೆ,

ಅಂದಿಂದು ಮುಂದೆ ಫಲ। ಒಂದಾಚರಣೆಯೇ ನಿಂದು ಶೇಖರನ ಗಣಾ
ವಳಿಯ। ನೆಂದೆಂದುಪಾಡಿದವ ಮುಕ್ತನು॥

ಎಂತೆಂಬ ಶ್ರೀನಿಜಗುಣರುಕ್ತಿಯಂತೆ ನಡೆನುಡಿಯಿಂ ಶುಧವಾದ ಮಹಿ ಮರ ನಾಮಸ್ಮರಣೆಯಿಂದ ಲಾಭವಾಗದೆ ಎಂದೂ ಇರಲಾರದು. ಅಂತೇ ಶಿವಶರಣ ಶ್ರೇಷ್ಠ ಲಿಂಗಜ್ಜನ ಚರಿತ್ರೆಯನ್ನು ಬರೆದು ಶರಣ ಕೃಪೆಯನ್ನು ಪಡೆ ಯಬೇಕೆಂದೆನಗೆ ಹಿಂದುಮುಂದು ನಿಂದಿಸುವ ಸೂಕರರಿಂದ ನನಗಾಗುವ ಅನರ್ಥವೇನು; ದಯಾಘನನಾದ ಸ್ವಾಮಿ ಕೃಪೆಯು ನನಗಿರುತ್ತಿರಲು ಅಲ್ಪ ಜ್ಞರಾದ ಪಾಮರರು ಪಳಿದರೆ ಸುಜ್ಞಾನಿಗೆ ಚ್ಯುತಿಯೇ? ಜ್ಞಾನಿಗಳು ಮಾತ್ರ ನನ್ನೀ ಚರಿತ್ರೆಯನ್ನು ನೋಡಿ ಆನಂದಿಸದೆ ಇರರು. ತಸ್ಮಾತ್‌: ಜಗಜ್ಜ್ಯೋತಿಗ ಳಾದ ನಮ್ಮೀ ಶರಣರ ಪೂರ್ವವೃತ್ತಾಂತದಕಡೆಗೆ ನಿರೀಕ್ಷಿಸುವಸದ್ಯ: ಈ ನಮ್ಮ ಚರಿತ್ರನಾಯಕನು ದಕ್ಷಿಣ ಹಿಂದುಸ್ಥಾನ ತುಂಗಭದ್ರಾ ತೀರದುತ್ತರದಿಶೆಯ ಲ್ಲಿರುವ ರೋಡಕುಂದಿಯೆಂಬ ಹಳ್ಳಿಯೇ ಇವರ ಪೂರ್ವ ವಾಸಸ್ಥಾನ.

ಆದರೆ ಇತ್ತೀಚೆಗೆ ಇವರ ತಂದೆಯಾದ (ಕುಂಬಾರ) ಗುಂಡಪ್ಪನೆಂಬಾತನು ಸಹಧರ್ಮಿಣಿಯಾದ ಸಂಗಮ್ಮನೆಂಬ ಕುಟುಂಬಿಯೊಡನೆ ಕಾಲಗತಿಗೆ ಸರಿಯಾಗಿ ಹಂಪೀ ಕ್ಷೇತ್ರಕ್ಕೆ ಸಮನಿಸಿದ ಆ ನಾಗುಂದಿ ನರಶ್ರೇಷ್ಠ ಪಂಪಾಪತಿ ರಾಜೇಂದ್ರ ಒಡೆಯರ್ ಇವರ ಸ್ಥಳಕ್ಕೆ ಬಂದು ಹೊಲಮನೆಗಳನ್ನು ಸಂಪಾದಿಸಿಕೊಂಡರು. ಇವರ ಮಕ್ಕಳೇ ನಮ್ಮ ಚರಿತ್ರನಾಯಕರು. ಇವರು ಬಾಲ್ಯದಲ್ಲಿಯೇ ಶಿವಪೂಜೆ, ಶಿವಧ್ಯಾನ ಮಾಡುತ್ತ ಜನರಿಗೆ ಚಿತ್ತಾಕರ್ಷಕ ಪ್ರೇಮವನ್ನು ಬೀರುತ್ತಿದ್ದರು. ಹೀಗೆ ಕೆಲವು ವರ್ಷಗಳು ಗತಿಸಲಾಗಿ ಇವರ ಮಾತಾ-ಪಿತೃಗಳು ಶಿವಾಧೀನರಾದರು. ಆಗ ಇವರಿಗೆ ಅಣ್ಣತಮ್ಮಂದಿರು ಸಣ್ಣ ಪವಾಡೆಪ್ಪ ಹಾಗು ಹಿರೇ ಪವಾಡೆಪ್ಪ ಈ ಉಭಯತರು ತಮ್ಮ ಪಾಲಿನ ಭಾಗವನ್ನು ಕೇಳಲು ಪ್ರಾಮುಖ್ಯವಾಗಿ ವಿಭಾಗ ಮಾಡಿಸಿಕೊಟ್ಟರು. ನಂತರ ತನ್ನ ಕುಲಕಸಬು ಅಂದರೆ ಕುಂಬಾರಿಕೆಯ ಉದ್ಯೋಗದಿಂದಲೇ ಬಂದ ಉತ್ಪನ್ನದಿಂದ ಗುರುಲಿಂಗಜಂಗಮ ಸೇವೆಯನ್ನು ಉಪಚರಿಸುತ್ತಿದ್ದರು. ಹೀಗೆ ವೈರಾಗ್ಯದಿಂದ ಆಚರಿಸುತ್ತಿರುವ ಇವರಿಗೆ ಮಹಾರಾಜರ ಕಡೆಯಿಂದ ದಾಸೋಹ ಸಲುವಾಗಿ ವರುಷಾಶನವು ದೊರೆಯುತ್ತಿತ್ತು. ಇವರು ಒಮ್ಮೊಮ್ಮೆ ಗಂಗಾವತಿ ಹಣವಾಳ ಮಠದ ದಾಸೋಹ ಮೂರ್ತಿ ಶರಭಪ್ಪನವರ ಸನ್ನಿಧಿಗೆ ಬರಹೋಗುವ ಪರಿಪಾಠವಿತ್ತು. ಶರಬಪ್ಪನವರಾದರೂ ಹಂಪಿಯಲ್ಲಿ ಪ್ರತಿವರ್ಷ ದಾಸೋಹವಿಟ್ಟು ದಿಗಂತ ಕೀರ್ತಿಶಾಲಿಗಳಾಗಿದ್ದರಷ್ಟೆ. ಇವರಿಗೆ ಎಲಿಗಾರ ವೀರಪ್ಪಾ, ಜವಳಿ ಲಿಂಗಪ್ಪ ಹಾಗೂ ದೊಡ್ಡಬಸಯ್ಯ ಮುಂತಾದವರು ಮಕ್ಕಳಾಗಿದ್ದರು. ಅಲ್ಲದೆ ಸದ್ವರ್ತನದಿಂದ ಲಿಂಗಾಂಗ ಸಮರಸ ಭಾವದಿಂದಿರುವ ಇವರ ವಿಷಯವನ್ನು ಕಂಡು ನಮ್ಮ ಲಿಂಗಪ್ಪನವರು ಅವರ ಸೇವೆಯನ್ನು ಮಾಡುತ್ತ ತತ್ ಕೃಪೆಗೆ ಪಾತ್ರರಾದಲ್ಲಿ ಇವರಿಗೆ ಇಂಥ ಅಮೋಘವಾದ ಮಹಿಮೆಯು ವ್ಯಾಪಕವಾಯಿತೆಂದು ಊಹಿಸುವಲ್ಲಿ ನಿಸ್ಸಂಶಯವಲ್ಲದೆ ಬೇರೆಯೇ ? ಈ ಪ್ರಕಾರ ಇರುತ್ತಿರುತ್ತ ನಮ್ಮ ಚರಿತ್ರನಾಯಕನು ಸದರಿ ಆನೆಗುಂದಿಯನ್ನು ಬಿಟ್ಟು ಸ್ವಸ್ಥಲವಾದ ಕಾಡಕುಂದಿಯನ್ನು ಸೇರಿದನು. ಅಲ್ಲಿ ಅವರ ಬಂಧುವರ್ಗದವರೂ ಇದ್ದರು. ಅವರ ಜೊತೆಯಲ್ಲಿಯೇ ಇದ್ದುಕೊಂಡು ಸ್ವ ಕುಲೋದ್ಯೋಗದಿಂದಲೆ ಸದರಿ ಜನರ ಪಾಲನಪೋಷಣವನ್ನು ಮಾಡುತ್ತ ಅದೇ ಗ್ರಾಮದ ಮಠಾಧಿಕಾರಿಗಳಾದ ಅಡವೆಯ್ಯನವರ ಸನ್ನಿಧಿಗೆ ಹೋಗಿ ಪ್ರತಿದಿನದಲ್ಲೂ ಅವರ ಸೇವೆಯನ್ನು ಮಾಡುತ್ತ ಶಿವಶುಶ್ರೂಷೆಯಲ್ಲಿ ತತ್ಪರರಾಗಿದ್ದರು. ಹೀಗೆ ಮೂರು ನಾಲ್ಕು ವರ್ಷ

ಗತಿಸಲಾಗಿ ಆಗ ಅಡಿವೆಪ್ಪನವರು ಈತನ ಗುಣಕ್ಕೂ ಸದ್ವರ್ತನಕ್ಕೂ ನಲಿ
ನಲಿದು ತಲೆದೂಗಿದರು. ಪ್ರೇಕ್ಷಕರೇ, ಸ್ವಭಾವಸಿದ್ಧವಾಗಿ ಜನ್ಯ ಸಂಸ್ಕಾರವು
ವೈರಾಗ್ಯ ಸ್ಥಿತಿಯಲ್ಲಿ ಲೀನವಾಗಲು ಪ್ರಾಕೃತವಲ್ಲದೆ ಬೇರಿಹುದೆ? ಈ
ಲಿಂಗಪ್ಪನವರು ಅಡವೀಶನನ್ನಭಿನಮಿಸಿ ಹೊರಡಲು ಸಿದ್ಧರಾದಾಗ ಲಿಂಗಣ್ಣಾ
ನನ್ನು ಕುರಿತು ಮಗುವೇ; ನಿನ್ನ ಸೇವೆಗೆ ಸರಿಯಾದ ಪ್ರತಿಫಲವು ನಾಳಿನ
ದಿನ ಕೈಗೂಡುವದೆಂದು ತಿಳಿಸಿದರು. ಆಗ ಈ ಲಿಂಗಪ್ಪನು ಪ್ರಫುಲ್ಲಿತ
ವದನಾರವಿಂದವುಳ್ಳವನಾದನು. ಮಾರನೆಯ ದಿನ ಬ್ರಾಹ್ಮೀ ಮುಹೂರ್ತ
ದಲ್ಲಿ ದರ್ಶನಾನಂತರ ಮಂಗಲಸ್ನಾನ ಗೈದು ಸಕಲ ಪೂಜಾ ಕಾರ್ಯಗ
ಳಿಗೆ ಶಾಸ್ತ್ರೋಕ್ತ ವಿಧಿವತ್ ಮಂತ್ರೋಪದೇಶವನ್ನು ಪಡೆದುಕೊಂಡನು.
ಆಗಿನ ಆನಂದಮಯವನ್ನು ಬಣ್ಣಿಸಲು ಸಾಧ್ಯವೇ? ನಂತರ ನಮ್ಮ ಚರಿತ್ರ
ನಾಯಕನು ಸ್ವಬಾಂಧವ್ಯರೊಡನಿದ್ದರೂ ತನ್ನ ವ್ಯಾಪಾರದಿಂದಲೇ ಗೃಹ
ಕೃತ್ಯಕ್ಕೂ, ಜಂಗಮಸೇವೆಗೂ ಸಾಕಷ್ಟು ಧನವನ್ನು ವಿನಿಯೋಗಿಸುತ್ತ
ಇದ್ದರು. ಇದರಂತೆ ನಾಲ್ಕಾರು ವರ್ಷಗಳು ಗತಿಸಲಾಗಿ ಇವರ ಕುಟುಂಬಿ
ಯಾದ ಲಿಂಗಮ್ಮನೆಂಬಾಕೆಯು ಕೈಲಾಸವಾಸಿಯಾದಳು. ಆಗ್ಗೆ ಇವರು
ಲೌಕಿಕರಂತೆ ದುಃಖೋದ್ಗಾರದಲ್ಲಿ ಬೀಳದೆ ಹರ್ಷಾನಂದ ತುಂದಿಲರಾದರು.
ಅಸ್ತು. ಇವರ ಹೃದಯದಲ್ಲಿ ಹಂಪವ್ವನೆಂಬ ಹೆಣ್ಣು ಮಗುವು ಮಾತ್ರ ೭-೮
ವರ್ಷದ್ದಿತ್ತು. ಅದು ಮುಗ್ಧೆಯೂ, ಶಾಂತ ಗುಣದ್ದೂ ಇತ್ತಂತೆ. ಹೀಗೆ
ವರ್ತಿಸುತ್ತ ಇವರು ಮಗಳನ್ನು ಕರೆದುಕೊಂಡು ಗಂಗಾವತಿಯ ಶರಭಪ್ಪನ
ವರ ಮಠಕ್ಕೆ ಬಂದರು. ಆಗ್ಗೆ ಪ್ರಮಥರನ್ನು ನಮಸ್ಕರಿಸಿ, ಕುಳಿತ ಲಿಂಗಪ್ಪ
ನವರ ಮುಖವನ್ನು ನಿರೀಕ್ಷಿಸಿ ಇವರ ಲಕ್ಷಣವನ್ನು ಕಂಡು— "ಲಿಂಗಣ್ಣಾ,
ಇಂದಿಗೆ ನೀನು ಧನ್ಯನಾದೆ. ಇನ್ನು ಮೇಲೆ ನಿನ್ನ ಕೀರ್ತಿಯು ದಿಗಂತರ
ಪ್ರಸಾರವಾಗತಕ್ಕದ್ದಿದೆ. ಆದರೆ ದಾಸೋಹತೆಯನ್ನು ಮಾತ್ರ ಮರೆಯಲಾ
ಗದು. ಹೂಂ ತಿಳಿಯಿತೆ?" ಎಂದು ಉಲಿಯಲು ನಮ್ಮೀ ಚರಿತ್ರಪುಂಗ
ವನು, ಒಳ್ಳೇದು ಸ್ವಾಮಿ ಹಾಗಾದರೆ ನಾನು ಚಿಕ್ಕ ಬೆಣಕಲ್ಲಿಗೆ ಹೋಗಲೋ
ಎಂದು ಪ್ರಶ್ನೆ ಮಾಡಿದನು. ಅದಕ್ಕವರು ಆಗಲಿ. ನಿನ್ನ ಲಿಂಗಾನಂದವಿ
ದ್ದರೆ ಅಲ್ಲಿಯೇ ವಾಸಿಸಬಹುದು. ಅಲ್ಲದೇ ಅಲ್ಲಿಯೂ ದಿಗ್ವಿಜಯವಿದೆ ಎಂದು
ಹೇಳಿ ಮನಾನಂದಪಡಿಸಿದರು. ಇತ್ತ ಲಿಂಗಪ್ಪನವರಾದರೂ ಜಂಗಮಮುಖ
ದಿಂದ ಶುಭವಾಯಿತೆಂದು ಫಲಾಶೀರ್ವಾದವ ಗ್ರಹಿಸಿ ತನ್ನ ಪುತ್ರಿಯನ್ನು
ಕರೆದುಕೊಂಡು ಚಿಕ್ಕ ಬೆಣಕಲ್ಲು ಗ್ರಾಮಕ್ಕೆ ದಯಮಾಡಿಸಿದರು. ಆಗ್ಗೆ

ಇವರ ವಯಸ್ಸು ಬಹುತೇಕ ೩೦–೩೧ ವರ್ಷಗಳು ಅಂದಾಜು ಮಾತ್ರ ಇರಬಹುದು. ವಾಚಕರೇ, ನಮ್ಮ ಚರಿತ್ರೆ ಪುಂಗವರು ಈ ಗ್ರಾಮಕ್ಕೆ ಬಂದಾಗ್ಗ ಮಠಮಾನ್ಯಗಳಿದ್ದಿಲ್ಲ. ಸಣ್ಣದೊಂದು ಕಟ್ಟೆಯ ಮೇಲೆ ಈಶ್ವರ ಮೂರ್ತಿ ಮಾತ್ರ ಇತ್ತಂತೆ. ಅದರ ಉತ್ತರಕ್ಕೆ ಹೊಂದಿದ ೧೦೦ ಮೊಳ ಚಚ್ಚೌಕಿನಿಂದ ಶೋಭಿಸುವ ಬಯಲಿನಲ್ಲಿ ಇವರು ಸಣ್ಣದೊಂದು ಕುಟೀರ ವನ್ನು ನಿರ್ಮಿಸಿ ಅದರಲ್ಲಿ ತಮ್ಮ ಕುಲದುದ್ಯಮ (ಕುಂಬಾರ ಕಸಬು) ದಿಂದ ಗಡಗಿ ಮಡಿಕೆಗಳ ಮಾಡಿ ಮಾರಿ ಬಂದ ಹಣದಿಂದಲೇ ದಾಸೋಹ ವ್ರತ ವನ್ನು ನೇಮಕ ಮಾಡಿಕೊಂಡಿದ್ದರು. ಒಂದು ಸಾರೆ ಈ ನಿಯಮಿತ ವ್ರತ ಸಹಾಯಕ್ಕಾಗಿ ಅಡಿಗೆ ಮಾಡಲು ಇದೇ ಗ್ರಾಮದಲ್ಲಿ ಇರುವ ವೀರಶೆಟ್ಟಿ ಅಯ್ಯಮ್ಮನನ್ನು ಬರಮಾಡಿಕೊಂಡು ಅವ್ವಾ, ನಿನಗೂ ಈ ಸೇವೆಯಿಂದ ಸುಖವಿದೆ ಕೇಳು. ಅತಿಥಿಸತ್ಕಾರಕ್ಕಿಂತಲೂ ಹೆಚ್ಚಿನ ಸೌಕರ್ಯವು ಜಗತ್ತಿನಲ್ಲುಂಟೇ ? ಇದಕ್ಕಾಗಿ – “ನಹಿ ನಹಿ ನಹಿ ತುಲ್ಯಂ ಅನ್ನದಾನ ಸಮಾನಂ” ಎಂಬಂತೆ ನೀನೇ ಸ್ವತಃ ದೇಹವಂ ದಂಡಿಸಿ, ಪಾಕವಂ ಸಿದ್ಧಗೊಳಿಸಿ ನೀಡಲಾಗಿ ಪರಮೇಶ್ವರನು ನಿನಗೆ ಕಲ್ಯಾಣವನ್ನುಂಟುಮಾಡುವನು. ಎಂದು ಹೇಳಿದರು. ಆಗ ಅವಳು ಸ್ವಾಮೀ ನನಗೊರ್ವ ಮಗನಿದ್ದಾನೆ. ಈ ಹುಡುಗನ ಪಾಲನಪೋಷಣ ಒಂದಲ್ಲದೆ ಬೇರೆ ಏನೂ ಇಲ್ಲ. ನಾನೋರ್ವಳೇ ಇದ್ದರೆ ತಮ್ಮಿಷ್ಟದಂತೆ ವರ್ತಿಸಲು ಸಿದ್ಧವಾಗಿಯೇ ಇದ್ದೆ. ಆದರೆ ಮಾಡಬೇಕೇನು ? ಎನ್ನುವದರೊಳಗಾಗಿ ಶರಣರು ಆಗಲಿ ಸಂತೋಷ. ನನಗೋರ್ವ ಮಗಳಿದ್ದಾಳೆ. ಆ ಮಗಳ ಕೂಡ ನಿನ್ನ ಮಗನನ್ನು ಜೋಪಾನ ಮಾಡಿ ಶರಣಸೇವೆಯನ್ನು ಮಾಡುತ್ತ ಬಾ ಎಂದು ನುಡಿದರು. ಆಗ ಅವಳು ಪ್ರೀತಿಯಿಂದ ಲಿಂಗಜ್ಜನ ಸೇವೆಯಲ್ಲಿ ನಿರತಳಾದಳು.

ಈ ಲಿಂಗಪ್ಪನವರಾದರು ಬಡವರಲ್ಲಿಯೂ ಶ್ರೀಮಂತರಲ್ಲಿಯೂ ಸಮತೋಲನ ಬುದ್ಧಿಯಿಂದ ಅವರವರ ಹಿತಚಿಂತನವನ್ನು ಬಯಸುತ್ತಿದ್ದರು. ಅಂತೆಯೇ ಜನಾಂಗವು ಇವರಲ್ಲಿ ವಿಶ್ವಾಸದಿಂದಲೂ ನಂಬಿಗೆಯಿಂದಲೂ ನಡೆದುಕೊಳ್ಳಹತ್ತಿದರು. ಹೀಗಾಗುವದರೊಳಗಾಗಿ ಜನರ ವಸತಿಯು ಬರ ಬರುತ್ತ ಹೆಚ್ಚಾಗಹತ್ತಿತು. ಆಗ ಇವರು ತಮ್ಮ ಮನಸ್ಸಿನಲ್ಲಿ ಬಯಸಿಕೊಂಡ ಬಯಕೆಯು ಕೈಗೂಡಿತೆಂದರೆ ಬೇಡಿಕೊಂಡ ಹರಿಕೆಗಳನ್ನು ಮುಟ್ಟಿಸುತ್ತಿದ್ದರು. ಹೀಗೆ ೩–೪ ವರ್ಷಗಳಲ್ಲಿಯೇ ೨೦–೨೫ ಆಕಳಗಳು, ಎರಡು

ಎಮ್ಮೆ, ೭-೮ ಕರಗಳು ಒಂದು ಕುದುರೆ, ಎರಡು ಎತ್ತುಗಳು, ಹೀಗೆ ಜಗತ್ಕುಟುಂಬಿಗನ ಪ್ರಪಂಚವು ಊರ್ಜಿತವಾಯಿತು. ಈ ಎಲ್ಲ ದನಕರುಗಳನ್ನು ಮೇಯಿಸುವ ವ್ಯವಸ್ಥೆಯನ್ನು ಇದೇ ಗ್ರಾಮದ ಗೊಲ್ಲರ ತಿರ್ಲ್ಯಪ್ಪನು ಮಾಡುತ್ತಿದ್ದನು. ಈ ಆಕಳ ಹಾಲನ್ನು ಅವನಾದರೂ ಮಠಕ್ಕೆ ಮುಟ್ಟಿಸುತ್ತಿದ್ದನು, ಎಂದಬಳಿಕ ಅತಿಥಿಸತ್ಕಾರದ ಉಪಚಾರಕ್ಕೆ ಕೊರತೆಯುಂಟಾದೀತೇ? ನಮ್ಮ ಶರಣರಿಗೆ ರಾಗಿಯ ಮುದ್ದೆ, ಕಾರದ ಬೇಳೆ, ತುಪ್ಪ ಇಷ್ಟಾದರೇನೆ ಅವರಿಗೆ ಸವಿಯೂಟು. ನಿತ್ಯಕೃತದ ಊಟವೆಂದರೆ ರಂಜಳಿಗೆ ಶಿವದಾನ ಇದಕ್ಕಿಂತಲೂ ಹೆಚ್ಚಿನ ವಸ್ತುವಾವುದಯ್ಯಾ ಎಂದೆನ್ನುತ್ತಿದ್ದರು. ಇದಲ್ಲದೇ ಭಕ್ಷಭೋಜ್ಯ ಚೋಹ್ಯಲೇಹ್ಯ ಮೊದಲಾದ ಷಡ್ರಸ ಆಹಾರಗಳನ್ನು ಮಾಡಿಸಿ ನೀಡಿದರೂ ಅದರ ಮೇಲೆ ನಿರಾಪೇಕ್ಷೆಯಿತ್ತು. ಹೀಗೆ ಕೆಲವರ್ಷಗಳು ಗತಿಸಲಾಗಿ ತೋಟ ದಡ್ಡಿಗಳನ್ನು ಮಾಡಿಕೊಂಡು ಒಂದು ಹೊಲವನ್ನು ಹಿಡಿದುಕೊಂಡರು. ಇವುಗಳಿಂದ ಉತ್ಪನ್ನವು ಹೆಚ್ಚಾಗಹತ್ತಿತು. ಜನವಸತಿಗೂ ಪುರಾಣ ಶ್ರವಣಕ್ಕೂ ಜಾಗವು ಪ್ರಶಸ್ತವಾಗುವದರ ಮೂಲಕ ಐದು ಅಂಕಣದ ಗೃಹವನ್ನೂ ಒಂದು ಪಾಕ ಶಾಲೆಯನ್ನೂ ವಿರಚಿಸಿ ಐದು ಬಲ್ವಸಿಗಳನ್ನು ಸ್ಥಾಪಿಸಿದರು. ಅದರಲ್ಲಿ ಈಗ ಎರಡೇ ಉಳಿದಿವೆ. ಹೀಗೆ ಇವರ ನಾಮವೂ ನಾಲ್ಕುನಿಟ್ಟಿನ ಕಡೆಗೆ ಹಬ್ಬುತ್ತಿರಲಾಗಿ ಕಿನ್ನಾಳು ಉಪ್ಪಾರ ಕೊರಪ್ಪ ಹಾಗೂ ಬಿಳೆಮುಖದ ಚಿನ್ನಪ್ಪ ಎಂಬುಭಯರು ಈತನಲ್ಲಿ ಬಂದು ಅನುಗ್ರಹಹೊಂದಿದರು. ಆಗಂತೂ ಶರಣರ ಪ್ರಭೆಯು ದಿಕ್ತಟವನ್ನು ವ್ಯಾಪಿಸಿತು. ಇಷ್ಟೇ ಅಲ್ಲ, ಇವರು ನಾಲ್ಕೆಂಟು ಜನರು ಕೂತಾಗ್ಗೆ ಇಂತಿಂಥ ಈ ಜನರೇ ನಾಳೆಗೆ ಬರುತ್ತಾರೆಂದು ಭವಿಷ್ಯವನ್ನು ಹೇಳುತ್ತಿದ್ದರಂತೆ. ಅದರಂತೆ ಅವರಾದರೂ ಬಂದೇಬರುತ್ತಿದ್ದರು, ಎಂದಬಳಿಕ ಈ ಲಿಂಗಪ್ಪನವರಲ್ಲಿ ಜನರು ಶ್ರದ್ಧೆಯನ್ನು ತೋರಿಸಿ ಅದರಂತೆ ವರ್ತಿಸುತ್ತಿದ್ದರು. ಒಂದುಸಾರೆ ಲಿಂಗಪ್ಪನವರು ಅಯ್ಯಮ್ಮನ ಮಗನಾದ ಮುಕ್ಕುಂದೆಪ್ಪನ ಲಗ್ನದ ಬಗ್ಗೆ ಸಮ್ಮತಿಯನ್ನು ಪಡಿಸಿದರೂ ಕೇಳದಾದನು. ಆಗ ಅವರನ್ನು ಕುರಿತು ಸದರಿ ಮುಕ್ಕುಂದಪ್ಪನು ವಿನಯದಿಂದ ಕೈಜೋಡಿಸಿ ಸ್ವಾಮಿ ನಾನು ದೇಸಿಕನಾಗುತ್ತೇನೆ. ಕಾರಣ ಲಗ್ನವೇ ಬೇಡೆಂದನು. ಒಳ್ಳೇದು ಹೀಗೆಯೇ ಕೇಳು, ಮಾಯೆಯಂ ಜಯಿಸುತ್ತೇನೆಂದು ನಾರದನು ಹರಿರೂಪವಂ ಬೇಡಿ ಕೋತಿಯಾದನು. ಸ್ತ್ರೀ ಎಂಬದೇ ನನಗಾಗಬಾರದೆಂದ ಉದ್ದಾಲಕನು ಮೊದಲು ಪುತ್ರಸಂತಾನವಂ ಪಡೆದನಂತರ ವಿವಾಹವಂ ಮಾಡಿಕೊಂಡನು. ಭವಾಂಬು

ಧಿಯೆಂಬ ಸಮುದ್ರಕ್ಕೆ ಬಡಬಾಲನಂತೆ ಕೋಲಾಹಲ ಬ್ರಹ್ಮನೆಂದೆನಿಸಿಕೊ ಳ್ಳಬೇಕೆಂದು ನಿರ್ಧರಿಸಿದ ವಶಿಷ್ಠನು ಚಾಂಡಾಲನಿಯನ್ನು ಲಗ್ನವಾದನು. ಆಕೆಯೇ ಅರುಂಧತಿಯಲ್ಲವೇ ಬಾಳಾ ಉದ್ದಾಲಕನಿಂದೊಗೆದ ಪುತ್ರನೇ ನಚಿಕೇತನು. ಆತನ ಮಗನೇ ಸಾನಂದಗಣೇಶನು. ಹೀಗೆ ಹೀಗೆ ತ್ರಿಪುಟಿ ಯಾದೀ ಜಗತ್ತಿನಲ್ಲಿ ಮಾನವಗೆ ಸಾಧ್ಯವೇ ? ಇದಲ್ಲದೆ ವಿಶ್ವಾಮಿತ್ರನು ರಾಜ್ಯವನ್ನೇ ತ್ಯಜಿಸಿ ತಪಶ್ಚರ್ಯದಿಂದ ತೇಜಃಪುಂಜನಾದರೂ ಊರ್ವಸಿ ಯನ್ನು ಮೋಹಿಸಿ ಪುತ್ರಿಯಾದ ಶಕುಂತಲೆಯಿಂ ಪಡೆದು ದುಷ್ಯಂತ ಚಕ್ರ ವರ್ತಿಗೆ ಧಾರೆಯನ್ನೆರಿಸಿ ಕೊಡಿಸಿದನು. ಪುತ್ರಾ ನೀನು ಇನ್ನೂ ಚಿಕ್ಕ ವನು. ಕಾರಣ ವಿಚಾರಿಸಿ ನೋಡು? ಸದ್ಯಕ್ಕೆ ಆನಂದವನ್ನುಂಟು ಮಾಡಿ ದರೂ ನಡೆನುಡಿಗಳಲ್ಲಿ ಒಂದಾದ ಮನೋನಿಗ್ರಹವೇ ಮುಖ್ಯವು. ಇದಕ್ಕಾಗಿ ಮನುಷ್ಯಣಾಂ ಕಾರಣಂ ಬಂಧಮೋಕ್ಷಯೋಃ ) ಎಂಬ ಮನುಸ್ಮೃತಿ ಯಂತೆ ಮನಸ್ಸನ್ನು ಸ್ಥಿರಪಡಿಸಿದರೆ ಸದ್ಗತಿಯು ಸೀಮೆಯದ್ನು ಮುಟ್ಟಿ ಮುಕ್ತಾಂಗನೆಯ ಕೈಹಿಡಿದು ನಲಿದಾಡಲು ಸಮರ್ಥನಾಗುವಲ್ಲಿ ಸಂಶಯ ವಿಲ್ಲೆಂದು ತಿಳಿಸಿದರು.

ವಾಚಕರೇ! ಈ ಕಡೆ ಲಕ್ಷಿಸಿರಿ ? ದ್ವಾಪರಾಂತ್ಯದಲ್ಲಿ ಪಾರ್ಥನ ಶಿರ ಹರಿದು ಹೋದಾಗ್ಗೆ ಇದೇ ಶ್ರೀಕೃಷ್ಣನು ತನ್ನ ಚಕ್ರಕ್ಕೆ ಅಪ್ಪಣೆಯನ್ನು ಇತ್ತುದೇನಂದರೆ ನಾನು ನಿತ್ಯ ಬ್ರಹ್ಮಚಾರಿಯಾದರೆ ಅರ್ಜುನನ ಶಿರ ಬರಲಿ. ಇಲ್ಲವಾದರೆ ಇಲ್ಲವೆಂದಿದ್ದನಷ್ಟೇ ಪ್ರೇಕ್ಷಕರೇ ಎಂಟುಮಂದಿ ಪಟ್ಟದ ಭಾರ್ಯೆ ಯರು ಹದಿನಾರು ಸಹಸ್ರ ಗೋಪಿಕಾಸ್ತ್ರೀಯರಲ್ಲಿ ರಮಿಸಿದರಿಂದ ಜನಿತರಾದ ೬೦ ಸಹಸ್ರ ಸುತರು ಅಲ್ಲದೇ ಸಾಂಬಾದಿ ಮನ್ಮಥರೂ ಮುಂತಾದ ಮಕ್ಕ ಳೊಂದಿಗತಾನಿದ್ದು ಹೀಗೆ ಹೇಳಲು ಅವನ ಮನಸ್ಸು ಹೇಗೆ ಅಚಲಿತ ಭಾವದಿಂದಿತ್ತೋ ಅಂತೆಯೇ ನಿಮ್ಮ ಮನವಾದರೂ ಮೇಲುದಹರಿಸಿದಂತೆ ವ್ಯಕ್ತವಾಗಲು ಚತುರ್ವಿಧ ಪುರುಷಾರ್ಥಗಳನ್ನು ಧಿಕ್ಕರಿಸಿ ನಿತ್ಯಾನಂದ ಪರ ಬ್ರಹ್ಮ ಪದವಿಯಂ ಪಡೆಯಲು ಇನ್ನನುಮಾನವೇ ? ವಸ್ತುತಃ ಶ್ರದ್ಧಾದಿ ನಿಗ್ರಹವೇ ಕಾರಣವು. ಹೀಗೆಂದು ಸಾರ್ವಜನಿಕರಿಗೆ ಬೋಧಾಶಕ್ತಿಯಿಂದಲೇ ಧನ್ಯರನ್ನಾಗಿ ಇವರು ಮಾಡುತ್ತಿದ್ದರು.

ಒಮ್ಮೆ ಇವರಿದ್ದೆಡೆಗೆ ಭರ್ಮಸಾಗರದ ಶಿದ್ಧಯ್ಯನೆಂಬುವನು ಅಲ್ಪಸ್ವಲ್ಪ ಜೋತಿಷ್ಯವನ್ನು ಕಲಿತು ಅಲ್ಲಲ್ಲಿ ಹೇಳಿ ಉಪಜೀವಿಕೆಯನ್ನು ಸಾಗಿಸಿಕೊಳ್ಳ

ಹತ್ತಿದನು. ಅವನು ಇಲ್ಲಿಗೆ ಬಂದು ಇವನಲ್ಲೇನವೆ ? ಮೊದಲೇ ಜನ್ಮತಃ ಕುಂಬಾರನು ಎಂದಲ್ಲಿ ಕೇಳುವದೇನು ? ಹೋಗಲಿ. ನನ್ನಲ್ಲಿ ಬೇಕಾದದ್ದನ್ನು ಕೇಳಿಕೊಳ್ಳಲಿ. ಗ್ರಹದೆಸೆ, ಅಂತರ್ದಶ, ದಿನಚರಿ, ಆಯುಃಪರಿಜ್ಞಾನ, ಶಾಂತಿ ದೂದಲಾದವುಗಳನ್ನು ಮಾಡಿಸಿ, ಹೇಳಿ ಧನ್ಯರಂ ಮಾಡುತ್ತೇನೆ. ಜಗತ್ತಿನಲ್ಲಿ ಸಕಲಶಾಸ್ತ್ರ ಸುಳ್ಳಾದರೂ ಜೋತಿಷ್ಯ ಭಾಗವು ಎಂದೆಂದಿಗೂ ಸಟಿಯಾಗಲಾರದು. ಇದಕ್ಕೆ ಗತಗ್ರಹಣಾದಿಗಳೇ ಸಾಕ್ಷಿ ಎಂದು ಹೇಳುವದರೊಳಗಾಗಿ ಕಂಪ್ಲಿಕೋರಿ ದೊಡ್ಡ ಬಸಪ್ಪನೆಂಬಾತನು ಅಲ್ಲಿಯೇ ನಿಂತಿದ್ದನಷ್ಟೇ. ಆಗ ಅವನು ಏನು ಸ್ವಾಮೀ ? ನೀನೋರ್ವನೆ ಭವಿಷ್ಯ ಹೇಳುವವನೋ ? ಹಾಗೆಂದು ತಿಳಿಯಬಾರದು. ಯಾಕೆಂದರೆ ಇವರು ಜ್ಯೋತಿಷ್ಯದ ಬಲವತ್ತರವಿಲ್ಲದ ಕ್ರಿಯಾಸಿದ್ಧಿಯ ಚೈತನ್ಯದಿಂದ ಹೇಳುತ್ತಾರೆ, ಎನ್ನುವಷ್ಟರಲ್ಲಿಯೇ ಹತಭಾಗ್ಯನಾದ ಶಿದ್ದಯ್ಯನೆಂಬ ಕಡು ಮೂರ್ಖನು, ಆಗಲಿ ! ಹಾಗಾದರೆ ನಾನೆಂದು ಸಾಯುತ್ತೇನೆ ಎಂಬುದರ ಭವಿಷ್ಯವನ್ನು ಹೇಳಲಿ ? ಎಂದುಚ್ಚರಿಸಿದರೊಳಗಾಗಿಯೇ ಶರಣರು ಸಮೀಪಕ್ಕೆ ಬಂದಿದ್ದರಿಂದ, ಆಗದು ಇವರ ಕಿವಿಗೆ ಬಿದ್ದಿತು. ಆಗ ಇವನನ್ನು ಕುರಿತು ಅಯ್ಯೋ ನಿನಗೆ ಭವಿಷ್ಯ ಬೇಕೆ ? ನಿನ್ನ ಮರಣವು ಈ ದಿನವೇ ಸಿದ್ಧವಾಗಿದೆ ಎಂದು ಹೇಳಿ ಹೊಂಟು ಹೋದರು. ಇವನಾದರೂ ಹಟ ಹಿಡಿದು ಕೂತನು. ಆಗ ಮಧ್ಯಾಹ್ನ ೬ ತಾಸು ಆಗಿರಬಹುದು. ಅಷ್ಟರಲ್ಲಿ ಗುಡ್ಡಕ್ಕೆ ಹೋದ ದನಕರುಗಳು ನೀರು ಕುಡಿಯಲಿಕ್ಕೆ ಧಾವಿಸುತ್ತ ಬಂದವು. ಆಗಿವನನ್ನು ಅವು ಸುತ್ತುಗಟ್ಟುವ ಪ್ರಸಂಗವು ಇದೆ ಎಂದು ಬೆದರಿ ಜಾಗವಂ ಬಿಟ್ಟು ಕದಲಬೇಕೆಂದು ಹೋಗುವಷ್ಟರಲ್ಲಿಯೇ ಒಂದಕ್ಕೊಂದು ಕಾದಾಡಲು ಪಾದತಪ್ಪಿ ಕಾಲೊಳಗೆ ಬಿದ್ದು ಪ್ರಾಣವಂ ಕೊಟ್ಟನು. ನೆರೆದ ಜನರು ಭೀತರಾಗುವದಲ್ಲದೇ ನೋಡಿ ಪರಮಾಶ್ಚರ್ಯಬಟ್ಟು ಶವಸಂಸ್ಕಾರವ ಮಾಡಿಸಿದರು. ಇರಲಿ. ವಾಚಕರೇ, ಶರಣರಂ ಪರಿಕಿಸುವ ಬುದ್ಧಿಯಾದರೂ ಈ ಮಂದ ಜ್ಞಾನಿಗಳಿಗೆ ಸಾಧ್ಯವೇ ? ಒಮ್ಮೆ ಇದೇ ಗ್ರಾಮದಲ್ಲಿರುವ ನಾಡಿಗರ ಹಸುಮಪ್ಪನೆಂಬ ತಳವಾರನ ಮನೆಗೆ ಬರಗಾಲದಲ್ಲಿ ಬದುಕಲಿಕ್ಕಾಗಿ ನರಸಪ್ಪನೆಂಬವನು ಬಂದಿದ್ದನು. ಆಗ ನೆರೆದ ಜನರಲ್ಲಿಯೂ ಇವನಿದ್ದನು. ಆದರೆ ಅವನಿಗೆ ಎರಡೂ ಕಣ್ಣು ಹೋಗಿ ೩-೪ ವರ್ಷಗಳಾಗಿತ್ತು. ಇವನು ಆ ಜನರನ್ನು ಕುರಿತು ಇವರೇ ಮಹಾತ್ಮರಾದರೆ ಕಣ್ಣುಗಳನ್ನು

ಕೊಡುತ್ತಾರೆಯೋ ? ಕೊಡಲಿ, ಅಂದರೆ ಲೀಲಾ ವಿಗ್ರಹಧಾರಕರೆಂದೇ ತಿಳಿಯುತ್ತೇನೆ, ಎಂದೆನ್ನುವಷ್ಟರಲ್ಲಿಯೇ ಶರಣರು ಅಲ್ಲಿಯೇ ಇದ್ದರು. ಪಾಪ ! ಕಾಂಬನಿಗೆ ತಿಳಿಯುವ ಬಗೆಯಾವರೂ ಹೇಗೆ? ಆಗ ಶರಣರು ಮುಂದೆ ಬಂದು ಓರ್ವ ಭಕ್ತನನ್ನು ಕರೆದು ಈ ಆಧಾರವನ್ನು ಅಡವೀಶ್ವರನ ಹೆಸರಿನಿಂದ ಇವನ ಒಲಗಣ್ಣಿಗೊಂದೇ ಲೇಪಿಸೆಂದಾಜ್ಞೆಮಾಡಲು ಅವನು ಅದರಂತೆಯೇ ಲೇಪಿಸಿದನು. ಆಗ ಅದು ಮೊದಲಿನಂತೆಯೇ ಆಯಿತು. ಅವನು ಶರಣರನ್ನು ಕುರಿತು ವಿಧವಿಧವಾಗಿ ಬೇಡಿಕೊಂಡು ಶರಣುಹೋದನು. ಅದಕ್ಕವರು ಈ ಮೂಳನಲ್ಲೇನದೆ ಇದಕ್ಕೆ ಅಡವೀಶನೇ ಸಾಕ್ಷಿಯು. ಯಾಕಂದರೆ ಸತ್ವವನ್ನುಳಿಸಬೇಕೆಂದು ಬಂದಿರುವ ನಿನ್ನ ಪರೀಕ್ಷೆಗಾಗಿ ಒಂದೇ ಕಣ್ಣು ಪ್ರಾಪ್ತವಾಯಿತು. ನೀನು ಭಕ್ತಿಯಿಂದಾತನಿಗೆ ಶರಣು ಬಂದಿದ್ದರೆ ನಿನಗೆ ಎರಡೂ ನೇತ್ರಗಳು ದಯಪಾಲಿಸುತ್ತಿದ್ದನಲ್ಲವೇ ಎಂದು ಹಲವು ಬಗೆಯಿಂದ ಛೀ ಹಾಕಿದರು. ಇತ್ತ ಅವನ ಕಣ್ಣು ಹಾಗೆಯೇ ಉಳಿದು ಕಡೆತನಕ ನೆನಸಿ ಬಾಳುವೆ ಮಾಡುತ್ತ ಕಾಲಾಂತರ ಮಡಿದನು.

ದೈವಜ್ಞರಾದ ಶರಣರಲ್ಲಿಯೂ ಕೂಡ ಈಗಿನ ಆಧುನಿಕ ದುರ್ಜನರ ಅಟ್ಟಹಾಸ ಉಂಟು. ಇವರ ಸ್ಥಾನಕ್ಕೆ ಪ್ರತಿ ಸೋಮವಾರ ಆರಹಾಳು ರುದ್ರಸ್ವಾಮಿ, ಮುಕುಂಪಿ ರಂಗನಗೌಡರು, ಲಿಂಗದಳ್ಳಿ ಪರಶುರಾಮಪ್ಪ, ಬಾಲಪ್ಪ ಮುಂತಾದ ಶರಣ ಸಂತತಿಯವರು ಕೂಡುತ್ತಿದ್ದರು. ಹೀಗೆ ಶಿವೋಪಾಸನ ಪರಬ್ರಹ್ಮ ಚಿಂತನಾಸಕ್ತರಾದ ಇವರ ಸನ್ನಿಧಿಯಲ್ಲಿ ನೆರೆದ ಜನರ ಸುಕೃತದ ಮುಂದೆ ಸುಕೃತವೇ ಇಲ್ಲ. ಇವರೇ ಧನ್ಯ ಧನ್ಯರು. ಹೀಗಿದ್ದಾಗ ಒಮ್ಮೆ ದರೋಜ ಶೇಷಯ್ಯನೆಂಬ ವೈಶ್ಯನು ಗಂಗಾವತಿಯಿಂದ ಕೊಪ್ಪಳಕ್ಕೆ ಹೋಗಿ ಬರುವಾಗ್ಗೆ ರಾತ್ರಿವೇಳೆಯಾದ್ದರಿಂದ ಸದರೀ ಗ್ರಾಮದಲ್ಲಿ ವಸತಿ ಮಾಡುವ ಪ್ರಸಂಗ ಬಂದಿತಷ್ಟೆ. ಲಿಂಗಪ್ಪನವರು ಕಟ್ಟಿಸಿದ ಚಾಕಿಯ ಬಾವಿಯ ಹತ್ತಿರವೇ ಇಳಿದುಕೊಂಡರು. ಆಗಿವರ ಕಿವಿಗೆ ಭಜನೆಯ ಶಬ್ದವು ಇಂಪಾಗಿ ಬಿದ್ದದ್ದರಿಂದ ಆ ಕ್ಷಣವೇ ಶರಣರ ಬಳಿಗೆ ಹೋದನು. ಕನಕನಗೌಡನು ಕುಳಿತಿದ್ದನು. ಆತನು ಈತನಿಗೆ ಪರಿಚಯಸ್ತನಾದುದರಿಂದ ಸ್ವಲ್ಪ ಹೊತ್ತು ಕೂತು ಕೇಳಿ, ನಂತರ ಸ್ವಾಮಿಯ ಸುದ್ದಿಯನ್ನು ಆ ಮೂಲಕ ತಿಳಿದುಕೊಂಡನು. ಆಗ ವೇಳೆಯಾಗಿರುವ ಕಾರಣ ಸ್ವಸ್ಥಾನಕ್ಕೆ ತೆರಳಿದರು. ಕೆಲವರು ಅಲ್ಲಿಯೇ ಮಲಗಿದರು. ಮಾರನೆಯ

ದಿನ ಉದಯಕ್ಕೆ ಈ ಶೇಷಪ್ಪನು ಮುಖಮಜ್ಜನಗೈದು ತೆಂಗಿನ ಫಲವನ್ನು ಕೊಂಡು ಸ್ವಾಮಿಯ ಮುಂದಿಟ್ಟು ನಮಸ್ಕರಿಸಿ, ಪೂಜ್ಯರೇ ನನಗೆ ಹನುಮಂತನೆಂಬೋರ್ವ ಮಗನಿದ್ದಾನೆ. ಅವನಿಗೆ ರೋಗವು ದಿನೇ ದಿನೇ ಅಭಿವೃದ್ಧಿಯಾಗುತ್ತಾ ಬಂದು ಕ್ಷೀಣಿಸಹತ್ತಿದ್ದಾನೆ. ದೊಡ್ಡ ದೊಡ್ಡ ವೈದ್ಯರ ಸತ್ವವು ನಿಂತು ಹೋಯಿತು. ಅನ್ನೋದಕವಿಲ್ಲದೆ ಇಂದಿಗೆ ಎಂಟು ತಿಂಗಳುಗಳಾದವು. ಇನ್ನು ನಾನು ಮಾಡಿದ ವ್ಯಾಪಾರದಲ್ಲಿ ಒಂದು ಸಹಸ್ರ ರೂಪಾಯಿಗಳು ನಷ್ಟವಾಗುತ್ತಲಿವೆ. ಪ್ರಯುಕ್ತ ಉಭಯ ಸಂಕಟ ಚಿಂತಾಹರವು ತಮ್ಮಿಂದಲೆ ಗುಣಹೊಂದಿದರೆ ನಿಮ್ಮ ದಾಸೋಹಕ್ಕೆ ಐದುಗೂಡ ನೆಲ್ಲು, ಒಂದು ಹೇರು ಬೆಲ್ಲವನ್ನು ಮುಟ್ಟಿಸುತ್ತೇನೆ. ಬಡವನ ಭಕ್ತಿಯು ತಮ್ಮ ಪಾದಕ್ಕೆ ಸಲ್ಲಲೆಂದು ಬೇಡಿಕೊಂಡನು. ಆಗ ಲಿಂಗಜ್ಜನು ಒಳ್ಳೆಯದು. ನಿನ್ನ ಮಗನು ಆರೋಗ್ಯವಂತನಾಗುವನು. ನಿನ್ನ ವ್ಯಾಪಾರದಲ್ಲೂ ಅದರ ಇಮ್ಮಡಿ ಧನ ಸಂಗ್ರಹವು ದೊರೆಯುತ್ತದೆ. ಇವೆರಡಕ್ಕೂ ಕ್ಷೇಮ ಬಯಸುವ ಅಡವೀಶ್ವರನು ಸಮರ್ಥನಿರುವನು ನಡೆ. ಎಂದು ಆಶೀರ್ವದಿಸಿ ಕಳುಹಿಕೊಟ್ಟರು.

ಆಗ ಸ್ವ ಗ್ರಾಮಕ್ಕೆ ಮುಟ್ಟಿದ ಶೇಷಪ್ಪನು ತನ್ನ ಕುಟುಂಬಿಯ ಮುಂದೆ ಸಕಲ ಸಮಾಚಾರ ತಿಳಿಸಿದನು. ಆಗ ಸಾಧ್ವಿಯಾದರೂ ಕೇವಲ ಆನಂದಭರಿತಳಾದಳು. ಮಗನಾದರೂ ದಿನ ಕ್ರಮೇಣ ಅಲ್ಪಸ್ವಲ್ಪ ಆಹಾರ ತೆಗೆದುಕೊಳ್ಳುತ್ತಾ ಸದೃಢ ಶರೀರಿಯಾದನು. ಇತ್ತ ಶೇಷಪ್ಪನ ಅಂಗಡಿಗೆ ರಾಯಚೂರವರು ನೆಲ್ಲು ಬೆಲ್ಲದ ವ್ಯಾಪಾರಕ್ಕೆ ಬಂದಾಗ ೪ ಸಹಸ್ರ ರೂ.ಗಳ ಲಾಭವಾಯಿತಂತೆ. ಇದೆಲ್ಲ ಒಂದು ಮಾಸದೊಳಗಾಗಿಯೇ ಆಯಿತು. ಆಗ ಅವನು ಬೇಡಿಕೊಂಡಂತೆ ಸ್ವಾಮಿಯ ಮಠಕ್ಕೆ ಸಮರ್ಪಿಸಿದನು. ವಾಚಕರೇ, “ ಶ್ರದ್ಧಾವಾನ್ ಲಭತೇ ಫಲಂ ” ಎಂಬ ಉಕ್ತಿಯಂತೆ ಶ್ರದ್ಧಾದಿಗೆ ಅಂಕುರಿಸಿ ಯಾವ ಮಾತಿನಲ್ಲಿ ನಿಜವಾಗಿ ಬೇರೂರುವದೋ ಅಲ್ಲಿಯೇ ಸರ್ವಾರ್ಥ ಸಿದ್ಧಿಯು ಮುಖ್ಯವಾಗಿ ಭಕ್ತಿಯೇ ಕಾರಣವೆಂದು ಭಾವವು. ವಾಚಕರೇ, ಹೊಸೂರಲ್ಲಿರುವ ಮಾಳಗಿ ಕರಿಬಸಪ್ಪನೆಂಬಾತನು ದೇವಾಂಗ ಮತದವನಿದ್ದು ಇವರ ದರುಶನಕ್ಕೆ ಬಂದಾಗ್ಗೆ ತನ್ನ ಬಡತನವನ್ನು ಸ್ವಾಮಿಯ ಮುಂದೆ ಬಿನ್ನವಿಸಿಕೊಂಡನಂತೆ. ಆಗ ಇವರು ತೆಂಗಿನ ಫಲವನ್ನು ದಯಪಾಲಿಸಿ, ಇಗೋ! ನಿನ್ನ ಗರ್ಭಸಂಜಾತನಿಗೆ ದಶವಂತನೆಂದು ನಾಮದಾಶೀರ್ವದಿಸಿ ಕಳುಹಿದರು. ಆಗ ಅವನು ಸ್ವ ಗ್ರಾಮ ಸೇರಿದ

ವರ್ಷಾವಧಿಯಲ್ಲಿಯೇ ಪುತ್ರೋತ್ಪತ್ತಿಯಾಗಲು ದಶವಂತನೆಂದೇ ನಾಮವ
ನ್ನಿಟ್ಟನು. ಅಂದಿನಿಂದ ಸಕಲ ಸಂಪದವನ್ನು ಪಡೆದು ಯಶಸ್ವಿಯಾದನು.
ಈಗ ಅವರ ಮನೆತನವು ಸಾಧಾರಣ ಸ್ಥಿತಿಯಲ್ಲಿ ಇದೆಯಂತೆ. ವಾಚಕರೇ,
ನಮ್ಮ ಶರಣರಿರುವ ಗ್ರಾಮಕ್ಕೆ ಕಾಲರಾ, ಪ್ಲೇಗು, ಇನ್‌ಫ್ಲೇಂಜ ಮೊದ
ಲಾದ ದುಷ್ಕಾರಿಷ್ಟ ಪೀಡೆಗಳು ಮೇಲಿಂದ ಮೇಲೆ ಬಾಧಿಸಹತ್ತಿದರೆ ೧೧
ದಿನಗಳ ವರೆಗೆ ದೀಪೋತ್ಸವವನ್ನು ಮಾಡಿಸಿ, ಪ್ರತಿದಿನ ಶಿವಭಜನೆಯನ್ನು
ನಡೆಸುತ್ತಿದ್ದರು. ಹೀಗೆ ನಿಶ್ಚಯಿಸಿದ ದಿನಗಳ ವರೆಗೆ ಮಾಡಿ ಕಡೆಗೆ ಭಾರೀ
ಸಮಾರಾಧನೆಯನ್ನು ಮಾಡಿಸುತ್ತಿದ್ದರು. ಇಷ್ಟಕ್ಕೆ ತಾನೇ ಗ್ರಾಮಕ್ಕೆ ಕ್ಷೇಮ
ವಾಗುತ್ತಿತ್ತು. ದರ್ಶಕರೇ, ಅವರು ನಡಸಿದ ವ್ರತವನ್ನು ಈಗಿನವರಾದರೂ
ಎಂಥ ಇಕ್ಕಟ್ಟಿನ ಪ್ರಸಂಗದಲ್ಲಿಯೂ ನಂದಾದೀಪವನ್ನು ಹಾಗು ಶಿವಭಜನೆ
ಯನ್ನು ಕ್ರಮವಾಗಿ ಮಾಡಿ ಗಣಾರಾಧನೆಯನ್ನು ಮಾಡುತ್ತಾರೆ ಇಷ್ಟ
ಕ್ಕೇನೆ ಗ್ರಾಮಕ್ಕೆ ಸುಖಸಂತೋಷಗಳು ಕೊಡುವವು. ಇದಲ್ಲದೇ ಮಹಾತ್ಮ
ರಿರುವ ಗ್ರಾಮದಲ್ಲಿ ಇಂದಿನ ವರೆಗೂ ಯಾವ ಕಷ್ಟಾತಿಶಯಗಳನ್ನು ಬಾ
ಗೊಡದೆ ಸುಖರೂಪದಿಂದ ನಿರೀಕ್ಷಿಸುತ್ತಿಹನು. ಒಂದು ಸಾರೆ ಡೋಣಿ
ವೆಂಕಟಾಪುರದ ಬಸಪ್ಪನೆಂಬಾತನು ತೀರ್ಥಯಾತ್ರೆಗಳನ್ನು ಮಾಡುತ್ತ ಹಂಪೆ
ಮೊದಲಾದ ಪುಣ್ಯಕ್ಷೇತ್ರಗಳನ್ನು ನೋಡಿ ಇನ್ನು ಮುಂದೆ ಕನಕಗಿರಿಯಿಂದ
ಕಾಲಕಾಲೇಶ್ವರನ ದರ್ಶನ ಪಡೆದು ತನ್ನ ಸ್ವಗ್ರಾಮಕ್ಕೆ ಹೋಗುಪವನಿದ್ದನು.
ಇವನಾದರೂ ವಿಶೇಷತಃ ಬಡತನದಿಂದಲೇ ಜೀವನೋಪಾಯವನ್ನು ಸಾಗಿಸಿ
ಕೊಳ್ಳುತ್ತಬಂದಿದ್ದರೂ ಇವನಿಗೆ ನಾಲ್ಕಾರು ಮಕ್ಕಳಿದ್ದರಂತೆ. ಇವನು
ಈ ಗ್ರಾಮಕ್ಕೆ ಬಂದಾಗ ಲಿಂಗಜ್ಜನನ್ನು ನಮಸ್ಕರಿಸಿ, ಅಲ್ಲಿಯೇ
ಒಂದೆಡೆಯ ಮೂಲೆಯಲ್ಲಿ ಕುಳಿತುಕೊಂಡನು. ಆಗ ಶರಣರು ಕೆಲ ಜನರೊ
ಡನೆ ಮಾತಾಡುತ್ತ ಕುಳಿತಾಗ ಸದು ಮುಬಸಪ್ಪನನ್ನು ಕಂಡು ತಮ್ಮಾ
ಏನು ವ್ಯಸನವನ್ನು ಮಾಡುತ್ತಿರುವಿ ಎಂದು ಕೇಳಿದರು. ಆದಕ್ಕೆ ಅವನು
ಸ್ವಾಮಿ ದರಿದ್ರ ವಿಮೋಚನೆಯಲ್ಲದೇ ಬೇರಿಲ್ಲವೆಂದು ನುಡಿದನು. ಒಳ್ಳೇದು
ಹಾಗಾದರೆ ನಾಳಿಗೆ ಹೊರಡು. ನಿಮ್ಮ ದೊಡ್ಡಪ್ಪನು ಮಾರೀಬೇನೆಯಿಂದ
ಸತ್ತದ್ದಕ್ಕೆ ನೀನು ವಾರಸದಾರನು ಇದ್ದದ್ದಕ್ಕೆ ಮಾಮಲೇದಾರರಿಂದ ೫ ಕೂರಿಗೆ
ಭೂಮಿಯು ಖಾತೆಯಾಗಿದೆ ಇನ್ನು ನಿನ್ನ ದರಿದ್ರ ವಿಮೋಚನೆಯಾಯಿತು.
ಎಂದೊಡನೆಯೇ ಶರಣರಿಗೆ ನಮಿಸಿ ಸ್ವಸ್ಥಲಕ್ಕೈದಿದನು. ಅಲ್ಲಿಯಾದರೂ ಶರ
ಣರು ನುಡಿದಂತೆಯೇ ಇತ್ತು. ಅವನು ಸಂಪದ್ಯುಕ್ತನಾದ ಬಳಿಕ ಒಂದು

ಖಂಡಗ ಧಾನ್ಯ ಸಂಗ್ರಹವನ್ನು ಶರಣರ ಮಠಕ್ಕೆ ಮುಟ್ಟಿಸಿ ತದಾಶೀರ್ವಾದಕ್ಕೆ ಪಾತ್ರನಾದನು. ಶರಣರು ಯಾರ ಹೊಲಕ್ಕಾದರೂ ಹೋದಾಗ್ಗೆ ಮಾರ್ಗಸ್ಥರು ಹೊಲದವರಿಗೆ ನೀರು ಬೇಡಿದರೆ ಬರಿಯ ಕೊಡವಿದೆಯೆಂದು ತಿಳಿಸಲು ಶರಣರು ಬೆದರಿಸಿ ಅವೇ ಹಣಿಸಿರೆಂದು ಹೇಳಲು, ಆ ಬರಿಯ ಕೊಡವಲ್ಲಿ ನೋಡಲಾಗಿ ನೀರು ಇರುತ್ತಿದ್ದವಂತೆ? ಒಮ್ಮೆ ತಿರ್ಲ್ಯಪ್ಪನಿಗೆ ಮೋತಿ ಬಡಿಗೆ ತರಹೇಳಿದರು. ಡೊಂಕವಿದ್ದದ್ದು ತಂದಿದ್ದನು. ಆಗ ಇವರು ನಿನ್ನ ಅಂಗವು ಡೊಂಕಾಗುತ್ತದೆಂದು ಹೇಳಿದರು. ಕಡೆತನಕ ಡೊಂಕಾಗಿಯೇ ಹೋಯಿತು. ಒಂದು ದಿನ ನಾಗಲಾಪೂರ ವೈಶ್ಯರ ವೆಂಕಣ್ಣನು ಇಲ್ಲಿಗೆ ಬಂದು ಪುತ್ರಸಂತಾನ ಇಲ್ಲೆಂದು ಬೇಡಿಕೊಂಡದ್ದಕ್ಕೆ ತೀರ್ಥವನ್ನು ಕೊಡ ಹೋದರು. ಸ್ವಾಮಿ ನಾವು ವೈಶ್ಯರೆಂದು ಹಿಂದೆ ಸರಿದನು. ವೆಂಕಣ್ಣ ನೀನು ಬರಬಾರದಿತ್ತು. ಬಂದರೂ ಉದಾಸೀನವೇ ನಿನಗೆ ಲಿಂಗಾಂಗಿಗಳು ನಿನಗೆ ಯೋಗ್ಯರಾದವರು ಸ್ಮಾರ್ತ ಶ್ರೇಷ್ಠ ಅಪ್ಪಯ್ಯದೀಕ್ಷಿತ ಪಂಡಿತರು. ಶಿವಾಧಿಕ್ಯವನ್ನು ಮಾಡಿಲ್ಲವೇ ? ಸದ್ಯಃ ಶೃಂಗೇರಿಯಲ್ಲಿ ಚಂದ್ರಮೌಳ ಈಶ್ವರ ಲಿಂಗ, ಹಂಪೀ ವಿರೂಪಾಕ್ಷನ ಪೂಜೆ ಈ ಎರಡು ಸದರೀ ಜಗದ್ಗುರುಗಳ ವತಿಯಿಂದಲ್ಲವೇ ? ಶ್ರೀರಾಮನು ಬ್ರಹ್ಮಹತ್ಯ ನಿವಾರಣೆಗೆ ರಾಮೇಶ್ವರ ಲಿಂಗ ನಿರ್ಮಿಸಲಿಲ್ಲವೇ ? ನಿನ್ನಧಿದೈವವು ನಗರೇಶ್ವರನು ಈರೀತಿ ಮಾಡಬಾರದಿತ್ತು. ದುರ್ದೈವಕ್ಕೆ ಯಾರೇನು ಮಾಡುವದದೆ, ಎನ್ನಲು ಕ್ಷಮೆ ಬೇಡಿದನು. ಆದರೂ ವ್ಯರ್ಥವಾಗಿ ಕಡೆಗೆ ಪುತ್ರ ಸಂತಾನವಾಗದೆ ಸಂಪದಕ್ಕೂ ಚ್ಯುತಿ ಬಂದಿತು. ಈ ಊರ ಜನರು ಸ್ವಾಮಿಯೆಡೆಗೆ ಬಂದು ಮಳೆ ಕೇಳಿದರೆ ಆಗ ಇವರು ನಾನೇನು ವರುಣನೇ ಅಥವಾ ದೇವೇಂದ್ರನೇ ? ನಿಮ್ಮ ಭಕ್ತಿಯಿದ್ದರೆ ಬಂದೆವೆಂದುಲಿಯಲು ಆಗಲಿ ಬರುವ ಹೊತ್ತಾಗಿದೆ. ನಿಮ್ಮ ನಿಮ್ಮ ಸ್ಥಲಕ್ಕೆ ಹೋಗಿರಿ ಎಂದಾಗ್ಗೆ ಆ ಕ್ಷಣವೇ ಭಯಂಕರವಾದ ಮಳೆಗರಿದು ಎಲ್ಲಕಡೆಗೂ ನೀರೇ ನೀರಾಗಿ ಜನಾಂಗಕ್ಕೆ ಪ್ರೇಮೋದ್ಗಾರವನ್ನು ಬೀರಿತು. ಸದ್ಯದ ವಾತಾವರಣದಲ್ಲಿ ಪ್ರತ್ಯಕ್ಷವನ್ನೇ ಅಂಗೀಕೃತ ಮಾಡುವ ಮುಂಜಾಗ್ರತರು ವಿಫಲರಾಗುವರು. ಇವರೆಡೆಗೆ ಗುರುಗಳಾದ ಅಡಿವೆಪ್ಪನವರು ವರ್ಷಕ್ಕೊಂದೆರಡು ಸಲ ಬರುತ್ತಿದ್ದರು. ಅವರು ಬಂದಾಗ್ಗೆ ಜನಜಾತ್ರೆಯೇ ಕೂಡುತ್ತಿತ್ತು. ಇವರ ಕಡೆಯಿಂದ ಸದರಿ ಗ್ರಾಮದ ಬಸವನಗೌಡರು, ಮರೆಮ್ಮ, ಬೀಳೂರ ಬಾಲಣ್ಣ, ಓಹನುಮವ್ವ ಈ ಮುಂತಾದವರು ಮಕ್ಕಳಾಗಿದ್ದರು. ಹನುಮವ್ವನು ಇವರ

ದರ್ಶನಕ್ಕೆ ಬಂದಾಗ್ಗೆ ಮಧ್ಯದಲ್ಲಿ ಕಳ್ಳರು ಸಾಮಾನಗಳನ್ನು ಕಸಿದುಕೊಂಡ ದ್ದಕ್ಕೆ ಲಿಂಗಜ್ಜಾ ಎಂದು ಉಸುರ್ಗರಿಯೇ ಕಳ್ಳರಕಣ್ಣು ಕಾಣದಾದವು. ಆಗ ಅವರು ಕ್ಷಮೆ ಬೇಡಲು ಅಪ್ಪಣೆಕೊಟ್ಟು ಮುಂದೆ ಸಾಗಿದಳು. ಆಗ ಶರಣರಿಕೆಯಂ ಕಂಡು ಮುಂಚೆಯೇ ಕಳವಿನ ಸುದ್ದಿ ಹೇಳಿದರು. ಆಕೆಯು ಕೆಲವು ದಿನವಿದ್ದು ಹೊರಟುಹೋದಳು. ಅಂದಿನಿಂದ ಕಡೆತನಕ ಒಡವೆಗ ಳನ್ನಿಡಲಿಲ್ಲವಂತೆ. ಸದರಿ ಬೆಣಕಲ್ಲಗೌಡರು ಕಳುವು ಮಾಡುತ್ತಾರೆಂದು ಜೇಲಿನಲ್ಲಿಟ್ಟಾಗ್ಗೆ ಲಿಂಗಜ್ಜನನ್ನು ಧ್ಯಾನಿಸಲು ಕಠಿಣ ಶಿಕ್ಷೆಯನ್ನು ಜಜ್ಜರು ಬರೆದಿದ್ದರೂ ಮಾರನೇ ದಿನ ಬೆಳಗ್ಗೆ ಸದರಿ ಡೈರಿಯಲ್ಲಿ ಖಾರೀಜ್ ಕಂಡ ದ್ದಕ್ಕೆ ಇವರನ್ನು ಬಿಡುಗಡೆ ಮಾಡಿದರಂತೆ. ಇವರ ಸ್ಥಲಕ್ಕೆ ಬೆಟ್ಟದಪ್ಪನೆಂಬ ವರೆಂಬ ಪ್ರಮಥರು ಇಲ್ಲಿಗಾಗಮಿಸಿದರು. ಲಿಂಗಜ್ಜನು ಅವರನ್ನು ಕ್ರಿಯಾ ಮೂರ್ತಿಯನ್ನಾಗಿ ಮಾಡಿಕೊಂಡನು. ಇವರೇ ಕಲ್ಯಾಣದ ರೇಚಣ್ಣರಿದ್ದು ಅಡವೇಶನೆಂದು ಬೆಟ್ಟದೇಶನೆಂದು ದಿಗ್ವಜಯವಂತರು ಇವರಲ್ಲಿಗೆ ೧೯ ಸಮಾ ಧಿಗಳನ್ನು ಕಳೆದು ಇನ್ನುಮೇಲೆ ಬೆಣಕಲ್ಲೂ ಹಾಗೂ ಗೋವಿಂದ, ಹೊಸ ಹಳ್ಳಿ ಎಂಬೆರಡು ಗ್ರಾಮಗಳಲ್ಲಿ ಗದ್ದುಗೆಗಳಾದರೆ ೨೧ ಕ್ಕೆ ಜನ್ಮಸಂವತ್ ೮೫ ವರುಷಗಳಾಗುವವೆಂದು ಹೇಳಿದರಂತೆ. ಅಂದಿನಿಂದ ಗ್ರಾಮದಲ್ಲಿ ಮಹಿಮೆ ಗಳು ಒಂದಿಲ್ಲೊಂದು ಜರುಗುತ್ತಿದ್ದವು. ಇವರು ಬಂದಬಳಿಕ ಲಿಂಗಜ್ಜನು ಖಾಡಕುಂದಿಗೆ ಹೋಗಿ ಒಂದೆರಡು ದಿನ ತಡವಾದರೆ ಪ್ರಮಥರು ಲಿಂಗಾ ಎಂದು ಕರೆದರೆ ಪ್ರತಿಧ್ವನಿಯಾಗುತ್ತಿತ್ತು. ನಂತರ ಅದರು ಮಾರನೆಯ ದಿನ ಬರುತ್ತಿದ್ದರು. ಕ್ರಿಯಾಸಿದ್ಧಿಯ ಬಲವೇ ಬಲವು. ಈ ನಮ್ಮ ಚರಿತ್ರೆ ನಾಯಕರು ಸರ್ವರನ್ನು ಬರಿಸಿ ಶಕೆ ೧೮೧೩ನೇ ಫಾಲ್ಗುಣ ಬಹುಳ ೮ ರಲ್ಲಿ ಹೇಳಿಕೇಳಿ ಸದರೀ ಪ್ರಮಥರಿಂದ ತೀರ್ಥಾಂಬುವಂ ಸೇವಿಸಿ ಪತ್ರಿಗಿಡದ ಮುಂಬದಿಯೇ ಗದ್ದುಗೆಯನ್ನು ರಚಿಸಿರೆಂದು ಆಜ್ಞಾಪಿಯಲು ಸರ್ವರು ಜಯ ನಾದಗೈದರು. ನಂತರ ಇವರು ಸೋಹಂಭಾವದುನ್ಮನಿಯನ್ನು ಸೇರಿ ಸಮಾಧಿಗ್ರಸ್ಥರಾದರು. ಸಂತರ ಮಂಗಲವಾದ್ಯಾದಿ ಭಜನಾಸಂಘದಿಂದ ಉತ್ಸವ ಮಾಡಿ ಸಮಾಧಿಕ್ರಿಯೆಗೈದು ಗಣತೃಪ್ತಿಪಡಿಸಿದರು. ಇದೇ ದಿನಕ್ಕೆ ರಥೋತ್ಸವವಂ ಮಾಡುತ್ತಾರೆ. ಈ ರಥವನ್ನು ಕಿನ್ನಾಳ ಸದ್ಭಕ್ತರೇ ಮಾಡಿಸಿ ಪುಣ್ಯವ್ಯಕ್ತಿಗಳಾದರು. ಈ ಜಾತ್ರೆಯ ಜನವೆಲ್ಲಕ್ಕೆ ಇಡೀ ಮೂರೂ ದಿನ ಪಂಚ ಪಕ್ವಾನ್ನವನ್ನು ಕೊಡುತ್ತಾರೆ. ಈ ಶರದ ಆಶೀರ್ವಾದಕ್ಕೆ ಪಾತ್ರ

ರಾದವರೇ ಧನ್ಯ ಧನ್ಯರು. ಇತ್ತ ಬಿಟ್ಟಿದಪ್ಪನವರು ಅಮಾನುಷ ಕಾರ್ಯ ಗಳನ್ನು ಮಾಡಿ ಭಕ್ತರನ್ನು ರಕ್ಷಿಸಲು ಭರ್ಮನಗೌಡ, ಗೌಡರ ಮರಿಮ್ಮ ಬಸಯ್ಯ, ಕನಕಗೌಡ ಮುಂತಾದವರು ಮಕ್ಕಳಾಗಿದ್ದರು. ಇದರಂತೆ ಅವರು ಕೆಲವು ಕಾಲವಿದ್ದು ಸಕಲರನ್ನು ಬರಮಾಡಿ, ಶಕೆ ೧೬೨೬ ನೇ ಪೌಷ್ಯ ಬಹುಳ ದ್ವಾದಶಿಯಲ್ಲಿ ಶಿವೈಕ್ಯರಾದರು. ಇವರ ಗುಡಿಗೋಪುರ ವನ್ನು ಹಾಗೂ ರಥೋತ್ಸವವನ್ನೂ ಯಾಲಾಜಾಗಳೇದ ಆದಿಮುನಿ ಬಸಯ್ಯ ನವರೆ ಇವರ ಮಕ್ಕಳಾದುದರಿಂದ ಪೂಜಾದಿ ವೈಭವಕ್ಕೆ ದರ್ಶಕರಾದರು. ಲಿಂಗಪ್ಪನವರ ಮಠವನ್ನಾದರೂ ಕೊಂಪ್ಪ, ಕನಕಗೌಡ ಈ ಉಭಯತರಿಂದ ನಿರ್ಮಿಸಲ್ಪಟ್ಟಿತು. ಹೀಗೆ ಈ ಉಭಯ ಶರಣಶ್ರೇಷ್ಠರ ಗದ್ದುಗೆಯ ಮಹಿ ಮೆಗಳು ನಡೆದು ಇನ್ನೂ ನಡೆಯುತ್ತಲಿರುವವು. ಅಂತೆಯೇ ನರಸ್ತೋತ್ರ ಕ್ಕಿಂತ ಶರಣ ಸ್ತೋತ್ರ ಅತ್ಯಧಿಕವೆಂದೇ ನನ್ನ ಈ ಜನ್ಮವ ಸಫಲಗೊಳಿಸ ಲೋಸುಗ ಜಗದ್ವಿಭೂತಿಗಳಾದ ಮಹಿಮರ ಚರಿತ ಪ್ರಬಂಧವನ್ನು ಲೋಕೋ ಪಕಾರಾರ್ಥವಾಗಿ ವಿರಚಿರಿ. ಶಿವಶರಣ ಸೇವೆಯನ್ನು ಕೈಕೊಂಡು ಗುರುನಾಮ ಸಂಕೀರ್ತನದಿಂದ ಪೂರ್ತಿಗೊಳಿಸಲ್ಪಟ್ಟಿದೆ.

ಈಗಲೂ ಇವರ ಜಾತ್ರೆಯು ಪ್ರತಿವರುಷ ಫಾಲ್ಗುಣ ಬಹುಳ ೮ ಕ್ಕೆ ಬಹಳ ದೊಡ್ಡ ಪ್ರಮಾಣದಲ್ಲಿ ಜರಗುತ್ತಾ ಅದೆ. ಎರಡು ಮೂರು ಸಾವಿರ ಬರಿ ಚಕ್ಕಡಿ ಗಾಡಿಗಳು ಬರುತ್ತವೆ. ಹತ್ತು ಎಂಟು ಸಾವಿರ ಜನರು ಕೂಡುವರು. ಎಲ್ಲರಿಗೂ ಭೂರೀ ಭೋಜನದ ದಾಸೋಹ ಆಗುವದು. ಮತ್ತು ದರ ತಿಂಗಳ ಅಮಾವಾಸಿಗೆ ಈಗ್ಯೂ ಜನರು ಪ್ರಸ್ತ, ಹಂಕೆ ಮುಂತಾದುದನ್ನು ಮುಟ್ಟಿಸಲು ಘನವಾಗಿ ಕೂಡುತ್ತಲಿರುವರು.

———

# ಬಸವಣ್ಣನವರು ಭಾರತದ ಮಹಾಭಾಗ್ಯ ವಸ್ತು

(ಹಿಂದಿನ ಸಂಚಿಕೆಯಿಂದ)

(ಲೇಖಕರು:— ಶ್ರೀ ಸ್ವಾಮಿ ದಯಾನಂದ ದೇವರು ವಿರಕ್ತಮಠ ಯರನಾಳ)

---

## ಮಾನವನ ಮುಕ್ತಿಮಾರ್ಗ ಧ್ಯೇಯದಲ್ಲಿ
## ಶರಣರ ಸಾಂಪ್ರತ ಜೀವನ.

ಮಾನವ ಜನಾಂಗವನ್ನೆಲ್ಲ ತನ್ನ ಕುಟುಂಬವೆಂದು ತಿಳಿದು, ಲೋಕವೇ ತನ್ನ ಮನೆಯಾಗಿ ತಿರುಗುವ ಜಂಗಮರು, ಲೋಕೋಪಕಾರಕ್ಕಾಗಿ ಯಾವ ಪರಮಾತ್ಮನ ಚರಿಸುವ ಸಾಕ್ಷಾತ್ ಶಿವಸ್ವರೂಪಿಗಳಾಗಿದ್ದಾರೆ. ಆದಕ್ಕಾಗಿ ಶಿವಶರಣರಲ್ಲಿ ಜಂಗಮರು ಅತ್ಯಧಿಕರಾಗಿದ್ದಾರೆ. ಜಂಗಮನು ಜಾತಿ, ಸೂತಕ, ಲಿಂಗ, ವಯೋಬೇಧಗಳಿಂದ ರಹಿತನೂ, ಸಂಸಾರದಲ್ಲಿರದಿದ್ದರೂ ಸಂಸಾರ ಜಂಜಡವನ್ನು ಕಳೆಯುವನೂ ಆಗಿದ್ದಾನೆ. ಮಾನವನ ನಿಜವಾದ ಧ್ಯೇಯವಾದ ಶಾಂತಿ ಸುಗಮ ವಿಲೋಕಿತ ಮುಕ್ತಿಯನ್ನು ಅನುಸರಿಸುವದರಲ್ಲಿದೆ. ಶಿವಶರಣರಿಗೆ ದೇವಲೋಕ ಮರ್ತ್ಯಲೋಕವೆಂಬವು ಬೇರಿಲ್ಲ. ಅವರು ಅವುಗಳನ್ನೆಲ್ಲ ನಂಬುವದಿಲ್ಲ. ಆಧುನಿಕ ಯುಗದಲ್ಲಿ ಕೂಡ ಸ್ವರ್ಗ ಲೋಕವು ಬೇರೆ ಆದೆಯೆಂದರೆ ಯಾರೂ ನಂಬುವದಿಲ್ಲ. ಇದೇ ಮೂಢತತ್ವವನ್ನು ತೊಲಗಿಸಲು ೮೦೦ ವರುಷಗಳಿಂದ ಶರಣರು ನಿಜತತ್ವವನ್ನು ಜಗದಲ್ಲಿ ಪಸರಿಸಲು ಹೆಣಗಿದರು. ಇಂತಹ ಮೂಢತತ್ವಗಳನ್ನೇ ಸತ್ಯವ ನುಡಿಯುವದು ಸ್ವರ್ಗಲೋಕ, ಮಿಥ್ಯವ ನುಡಿಯುವದು ಮರ್ತ್ಯಲೋಕವೆಂದು ಸಾರಿದರು. ಜಗದಲ್ಲಿ ಬಂದಬಳಿಕ ನೆಮ್ಮದಿಯಿಂದ ನೆರೆದ ಸರರೊಡನೆ ಕಿರಿಯಿಂದ ಮನವುಳ್ಳವನಾಗಿ, ಹಿರಿಯಿಂದ ನಡೆಯುಳ್ಳವನಾಗಿ ಬಾಳುವದೇ ಶರಣರ ಜೀವನ.

ಇದೇ ಧ್ಯೇಯವನ್ನಿಟ್ಟು ೭೭೦ ಅಮರಗಣಂಗಳಾದಿ ಶಿವಶರಣರೆಲ್ಲರೂ ಜಾಗತಿಕ ಆಂದೋಲನದಲ್ಲಿ ಹೋರಾಡಿದರು. ಅವರೆಲ್ಲರೂ ಜಾಗತಿಕ ಶಾಂತಿಯ ಪರಮ ಮಂತ್ರದ ಕಾಳಗವನ್ನು ಊದಿ ಮುಂದಿನಪರಿಗೂ ಆದ

ಕ್ಷವನ್ನಿಟ್ಟುಕೊಂಡು ಸಾಗಲು ಶರಣರು ಸಾಂಪ್ರತ ಜೀವನವನ್ನು ಸಾಗಿ ಸಿದರು. ದೇವರದಾಸಿಮಯ್ಯ, ಶಂಕರದಾಸಿಮಯ್ಯ, ರೇವಣೇಶ್ವರ, ಬಸವೇಶ್ವರ, ಹಂಪೆಯ ನೂರೊಂದು ವಿರಕ್ತರು, ತೋಂಟದ ಸಿದ್ಧಲಿಂಗ ಯತಿವರ್ಯರು, ಷಣ್ಮುಖ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು, ಕಲಬುರ್ಗಿಯ ಶರಣಬಸಪ್ಪನವರು, ದೇವನೂರದ ಗುರುಮಲ್ಲೇಶ್ವರ, ಅಥಣಿಯ ಮುರುಗೇಂದ್ರ ಶಿವಯೋಗಿಗಳು, ಇಂದಿನ ಧಾರವಾಡದ ಶ್ರೀ. ಮ. ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು, ಬಂಥನಾಳದ ಶ್ರೀ. ಮ. ನಿ. ಪ್ರ. ಸಂಗನಬಸವೇಶ್ವರ ಶಿವಯೋಗಿಗಳು ಸಿದ್ಧಗಂಗಾಕ್ಷೇತ್ರದ ಶಿವಕುಮಾರ ಸ್ವಾಮಿಗಳು, ಸುತ್ತೂರ ಮಠದ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳು, ಶ್ರೀಶೈಲ ಪೀಠದ ಶ್ರೀವಾಗೀಶ ಶಿವಾಚಾರ್ಯ ಪಂಡಿತರು ಮೊದಲಾದ ಇನ್ನೂ ಅನೇಕ ಮಹಾಯೋಗಿಯವರೇಣ್ಯರಲ್ಲದೆ ಸೊಲ್ಲಾಪೂರಿನ ಶಿವಶರಣಿ ರುದ್ರಾಂಬೆಮಾತೆ, ಸಜ್ಜಲಗುಡ್ಡದ ಶಿವಶರಣೆಯರು, ಅನೆಗುಂದಿಯ ಮಾಣಿಕ್ಯಮ್ಮ ಶರಣೆಯರು ಮೊದಲಾದ ಮಾತೆಯರು ಹಿಂದಿನ ಅಕ್ಕಮಹಾದೇವಿ, ನಾಗಮ್ಮ, ನೀಲಾಂಬಿಕೆ, ಮುಕ್ತಾಯಿ ಮೊದಲಾದ ಶಿವಶರಣೆಯರೆಲ್ಲರೂ ಸಾಂಪ್ರತ ಜೀವನದ ಹೆದ್ದಾರಿಯಾಗಿದ್ದಾರೆ.

## ಬಸವಣ್ಣನವರು ಭಾರತದ ದೇದೀಪ್ಯ ವಸ್ತು.

ಈ ಎಲ್ಲ ಸಂಘಟನೆಗೆ ತಳಭದ್ರ ಶಿಲೆಯಾಗಿ ಅಜರಾಮರವಾದ ಮಹಾ ವ್ಯಕ್ತಿಯೋರ್ವನು ಕಾರಣನಾಗಿದ್ದಾನೆ. ಆತನೇ ಬಸವಣ್ಣನು. ಸಾಂಪ್ರತ ಸನಾತನವೆಂದು ಕರೆಯಲ್ಪಡುತ್ತಿರುವ ಧರ್ಮದ ಹೆಸರಿನಲ್ಲಿರುವ ಅನೇಕ ಜಟಿಲ ಸಮಸ್ಯೆಗಳನ್ನು ತತ್‌ಕ್ಷಣದಲ್ಲಿ ಬಗೆಹರಿಸಿ ಲಕ್ಷದಮೇಲೆ ತೊಂಭತ್ತಾರುಸಾವಿರ ಜಂಗಮರನ್ನು ಸಿದ್ಧಪಡಿಸಿ, ಲೋಕೋತ್ತರವಾದ ಉನ್ನತ ಧರ್ಮದ ಬೆಳಕನ್ನು ನಾಡಿಗೆ ಪ್ರತಿಯೊಂದು ಮೂಲೆಮೂಲೆಯಲ್ಲಿ ಹರಡಲು ಪ್ರಯತ್ನಪಟ್ಟ ವ್ಯಕ್ತಿ ಬಸವಣ್ಣ; ಭಾರತ ಸರಕಾರದವರು ಇಂದು ಭಾರತದ ಉದ್ಧರಣೆಗಾಗಿ ಅನೇಕ ಕಾರ್ಯಕ್ರಮಗಳನ್ನು ನೆರವೇರಿಸಿಕೊಂಡಿದ್ದಾರೆ. ಅವೆಲ್ಲ ೧೨ನೆಯ ಶತಮಾನದಲ್ಲಿ ಆದ ಕಲ್ಯಾಣ ಕ್ರಾಂತಿಯ ಪ್ರತೀಕಗಳೆಂದರೇನೂ ತಪ್ಪಿಲ್ಲ. ಸ್ತ್ರೀ ಸ್ವಾತಂತ್ರ್ಯ, ಸತ್ಯ, ಅಹಿಂಸೆ, ಶಾಂತಿ, ಪಾನಪ್ರತಿಬಂಧ, ಉದ್ಯೋಗ, ಶಿಕ್ಷಣ, ಸಂಘಟನೆ ಮೊದಲಾದವುಗಳು ಶರಣರು ನಿರ್ವಹಿಸಿ ನೀಡಿದ ಫಲಗಳು. ಅಕ್ಕಮಹಾದೇವಿ, ನಾಗಲಾಂಬಿಕೆ,

ನೀಲಾಂಬಿಕೆ, ಮುಕ್ತಾಯಿ ಮೊದಲಾದವರು ಸ್ತ್ರೀಸ್ವಾತಂತ್ರ್ಯದ ಹೋರಾಟದ ಪ್ರತೀಕಗಳು. ಸತ್ಯಧರ್ಮಕ್ಕಾಗಿ, ಶಾಂತಿಗಾಗಿ, ನೆಮ್ಮದಿಗಾಗಿ ಬಾಳಿದ ಬಸವಣ್ಣ, ಕಾಯಕವೇ ಕೈಲಾಸವೆಂದ ಮಾರಯ್ಯ ತಂದೆಗಳು, ಈ ಮೊದಲಾದವು ಇಂದಿನ ಪ್ರಗತಿಗೆ ಅವು ಆಧಾರವೆಂದರೇನೂ ಅಡ್ಡಿ ಇಲ್ಲ. ಕೆಲವೇ ದಿನಗಳಲ್ಲಿ ಬಲವಾದ, ವೈಶಿಷ್ಟಪೂರ್ವವಾದ ಕ್ರಾಂತಿಗೆ ಬಸವಣ್ಣನವರು ಮಹತ್‌ಸೇವೆ ಸಲ್ಲಿಸಿದ್ದಾರೆ. ಮಹಾತ್ಮಾ ಗಾಂಧೀಜಿಯವರು ಹರಿಜನೋದ್ಧಾರ ಮಾಡಲು ಹವಣಿಸಿದರು. ಅದೂ ಕೂಡ ಹಿಂದಿನಿಂದ ಸರಕಾರದ ಒತ್ತಾಯಕೂಡ ಸೇರಿತು. ಸರಕಾರದ ಭೀತಿಯ ಒತ್ತಾಯವಿಲ್ಲದೆ ಆಚಾರ ವಿಚಾರಗಳಿಗೆ ಮಹತ್ವವನ್ನಿಟ್ಟು, ಹೊಲೆತನವನ್ನು ಹೊರಗಟ್ಟಿ, ಅಮೂಲ್ಯವಾದ ಅವರ ನಡೆನುಡಿಗೆ ಬೆಲೆಯನ್ನಿಟ್ಟು ಎತ್ತಿಕೊಂಡವರಲ್ಲಿ ಶಿವಶರಣರು. ಅದರಲ್ಲಿ ಬಸವಣ್ಣನವರು ಪ್ರಮುಖರಾಗಿದ್ದಾರೆ.

## ಸರಕಾರದ ರೀತಿ ಸ್ವರೂಪ

ಜಾತಿವಾದದ ಮೇಲೆ ನೀರು ಚೆಲ್ಲಿದ ಮಹಾತ್ಮಾ ಗಾಂಧಿಯ ಜಯಂತಿ, ಪುಣ್ಯತಿಥಿಗಳಿಗಾಗಿ ಅನೇಕ ಹಣವನ್ನು ಸೂರೆಯಾಗಿ ಚೆಲ್ಲುವ ಸರಕಾರವು ಜಾತ್ಯತೀತನಾಗಿ ಉಚ್ಚ ಕುಲದ ಬ್ರಾಹ್ಮಣ ಮಧುವಯ್ಯನ ಮಗಳನ್ನು ಅತಿ ನೀಚವೆಂದರಸುವ ( ಕುಲದಿಂದ ಮಾತ್ರ ) ಹರಳಯ್ಯನ ಮಗನಿಗೆ ಮದುವೆ ಮಾಡಿ, ಅದೇ ಕ್ರಾಂತಿಯಿಂದೆ ತನ್ನ ಪ್ರಧಾನ ಮಂತ್ರಿಯ ಸ್ಥಾನಕ್ಕೆ ತಿಲಾಂಜಲಿಯನ್ನಿತ್ತು, ಕೊನೆಗೆ ಅದಕ್ಕಾಗಿ ಪ್ರಾಣವನ್ನೇ ತೆತ್ತ ಬಸವಣ್ಣನವರ ಸ್ಮಾರಕವಾಗಿ ಇಂದಿಗೂ ನಡೆಯುತ್ತಿರುವ ಬಸವಜಯಂತಿಯನ್ನು ಸಾರ್ವತ್ರಿಕ ಬಿಡುವನ್ನು ಜಾರಿಯಲ್ಲಿ ತರಲು ಎಷ್ಟು ಹಿಂದು ಮುಂದೆ ನೋಡುತ್ತಿದ್ದಾರೆ ? ನಿಜವಾಗಿ ಇದು ಪಕ್ಷಪಾತ ಧೋರಣೆಯ್ಯ ಮಾತು ಎಂದಿಲ್ಲಿ ನಿಷ್ಠುರವಾಗಿ ಹೇಳಬಲ್ಲೆ. ನಿಜವಾಗಿ ಭಾರತ ಸರಕಾರವು ಕೃಷ್ಣ ಜಯಂತಿ, ರಾಮನವಮಿ ಮೊದಲಾದ ಏಕ ಪಕ್ಷೀಯ ಬಿಡುವುಗಳನ್ನು ಸಾರ್ವತ್ರಿಕ ದಿನಾಚರಣೆ ಮಾಡವಲ್ಲಿ ಪಕ್ಷಪಾತ ಧೋರಣೆಯೇ ಹೊರತು ಮತ್ತೇನಿಲ್ಲ. ಈ ಹೊತ್ತು ಬಸವಣ್ಣನವರು ೨ ಕೋಟಿ ಜನಾಂಗಕ್ಕೆ ಪ್ರಾಣಸ್ವರೂಪರಾಗಿದ್ದರೂ ನಾಡಿನ ಮೂಲೆ ಮೂಲೆಗಳಲ್ಲಿ ಕಾಶ್ಮೀರ, ಅಜಮೀರ, ಬನಾರಸ, ಕೇದಾರ, ಶ್ರೀಶೈಲ, ( ಆಂಧ್ರ ) ಗುಜರಾಥ,

ಮೈಸೂರ, ಮಹಾರಾಷ್ಟ್ರ, ಮದ್ರಾಸ ಮೊದಲಾದ ಭಾಗಗಳಲ್ಲಿ ಬಸವಣ್ಣನವರ ಸಾಂಪ್ರದಾಯ ಜನವಿದೆ. ಅಂದ ಮೇಲೆ ಇಡೀ ಭಾರತದ ತುಂಬೆಲ್ಲ ಅವರ ಪ್ರಭಾವವಿದೆಯೆಂದ ಮೇಲೆ ಆ ಬಗ್ಗೆ ಜನತೆಗೆ ಅಭಿಮಾನಗಳಿಲ್ಲವೆ? ನಿಜವಾಗಿ ವಿಚಾರಪರವಾದ ಸರಕಾರವಿದ್ದರೆ ಬಸವಜಯಂತಿಯನ್ನು ಕೆಲವೇ ದಿನಗಳಲ್ಲಿ ಸಾರ್ವತ್ರಿಕ ದಿನಾಚರಣೆಯನ್ನು ಸಾರಲಾ! ಅದು ಹಿಂಜರಿಯುತ್ತಿದ್ದರೆ ನಿಜವಾಗಿ ಅದು ಮಹಾತ್ಮಾಗಾಂಧಿಯ, ಬಸವಣ್ಣನವರ ಅತಏವ ಭಾರತಸರಕಾರದ ಮೂಲ ತತ್ವಗಳ ಪ್ರಗತಿಗೆ ಕಾರಣವಾಗುತ್ತದೆ, ಎಂದು ಹೇಳಬಹುದಾಗಿದೆ. ಏಕೆಂದರೆ ನಿಜವಾಗಿ ಬಸವಣ್ಣನವರು ಭಾರತದ ಮಹಾಭಾಗ್ಯ ವಸ್ತುವಾಗಿದ್ದಾರೆ.

———

# ನೀತಿಶಾಸ್ತ್ರ ಸಾರ

[ ಲೇ:— ಶ್ರೀ ವೀರಪ್ಪ ಯುಗಟಿ, ಬಿ. ಎ. ಎಲ್. ಎಲ್. ಬಿ., ಹಾವೇರಿ. ]

## ೧. ನೀತಿಶಾಸ್ತ್ರದ ಧ್ಯೇಯ

ನೀತಿಯು ಮಾನವ ವರ್ತನದ ಧ್ಯೇಯ ಸಾಧನೆಯ ಶಾಸ್ತ್ರವು. ನೀತಿಯು ಮನುಷ್ಯನ ಚಟುವಟಿಕೆಗಳ ಒಪ್ಪು ತಪ್ಪುಗಳ ಮತ್ತು ಅವುಗಳಿಂದ ಪರಿಣಮಿಸುವ ಒಳಿತು ಕೇಡುಗಳ ವಿಷಯವಾಗಿ ವಿಚಾರಿಸುವದು. ಮನುಷ್ಯನ ಪರಿಪಾಠ, ಚಟ ಅಥವಾ ರೂಢಿ ಮತ್ತು ಪರಂಪರಾಗತ ಪದ್ಧತಿಗಳನ್ನು ತಾನು ಅನುಸರಿಸಿ ನಡೆಯುವ ತತ್ವಗಳ ಅನ್ವಯ ಸದಾಕಾಲ ವರ್ತಿಸುವ ಕಾರ್ಯಗಳು ನ್ಯಾಯಸಮ್ಮತವಾಗಿವೆಯೋ ಅಥವಾ ಪುಣ್ಯಪಾಪಮಯವಾಗಿವೆಯೋ ಎಂಬುದನ್ನು ಪರಿಶೀಲಿಸುತ್ತದೆ. ನೀತಿಯು ಮನುಷ್ಯನ ಅಂತರಂಗದ ಸದುದ್ದೇಶವನ್ನು ಸದ್ಭಾವವನ್ನು (Charater) ಪರಿಗಣಿಸುವದು ಒಂದು ಕಾರ್ಯವು ಹಿತ ಅಥವಾ ಒಳಿತಾದದ್ದೆಂದು (Good) ತಿಳಿಯಬೇಕಾದಲ್ಲಿ ಅದು ಒಂದು ಧ್ಯೇಯವನ್ನು ಸಾಧಿಸುವಲ್ಲಿ ಸರಿಯಾದ ಸಾಧನವಾಗಿರಬೇಕು. ಎಲ್ಲರ ಧ್ಯೇಯಗಳು ಒಂದೇ ವಿಧವಾಗಿರುವದಿಲ್ಲ. ಕೆಲವರು ಸಂಪತ್ತನ್ನು ದೊರಕಿಸುವಲ್ಲಿ, ಕೆಲವರು ಸ್ವಾತಂತ್ರ್ಯವನ್ನು, ಕೆಲವರು ಅಧಿಕಾರವನ್ನು ಹಲವರು ಕೀರ್ತಿಯನ್ನು, ಹಲವರು ಜ್ಞಾನವನ್ನು, ಕೆಲವರು ಪ್ರೇಮವನ್ನು, ಇತರರು ಸಾಮಾಜಿಕ ಸೇವೆಯನ್ನು ಮತ್ತೆ ಕೆಲವರು ಇವೆಲ್ಲದರಲ್ಲಿ ಹುರುಳಿಲ್ಲವೆಂದು ಭಾವಿಸಿ ಆತ್ಮಜ್ಞಾನದ ಮೂಲಕ ಪರಮಾತ್ಮನ ಸಾಕ್ಷಾತ್ಕಾರ ಒಂದೇ ಧ್ಯೇಯವೆಂದು ನಂಬುತ್ತಾರೆ.

ನೀತಿಶಾಸ್ತ್ರವು ಸರಿಯಾದ ವರ್ತನವನ್ನು ಸಾಧಿಸಲು ಒಂದು ಓರೆಗಲ್ಲನ್ನು ರಚಿಸಲು ಪ್ರಯತ್ನಿಸುತ್ತದೆ. ಆದರೆ ದೇಶ, ಕಾಲ, ಪರಿಸ್ಥಿತಿಗಳಿಗನುಸಾರವಾಗಿ ನೀತಿಯ ಮಟ್ಟವು ಮಾರ್ಪಾಡು ಹೊಂದುತ್ತ ಹೋಗುವದರಿಂದ ಈ ಒರೆಗಲ್ಲು ಅಥವಾ ಪ್ರಮಾಣಸೂತ್ರವು (Standard) ಹೊಸ ಒರೆಗಲ್ಲಿಗೆ ಸ್ಥಾನ ಕೊಡಬೇಕಾಗುವದು. ನೀತಿಶಾಸ್ತ್ರದ ಆಜ್ಞೆಯು ಯಾವಾಗಲೂ " ನೀನು ಯೋಗ್ಯವಾಗಿ ವರ್ತಿಸತಕ್ಕದ್ದು " ಎಂದಿರುತ್ತದೆ. ಉದ

ಶಾಸ್ತ್ರಗಳು ಕೇವಲ ಸಂಗತಿಗಳ ವರ್ಣನಾತ್ಮಕವಾಗಿದ್ದು ಅವುಗಳ ಪರಿಣಾಮ ಹಾಗು ಸರಿಪಡಿಸುವ ಉಪಾಯಗಳನ್ನು ಸೂಚಿಸುತ್ತವೆ. ವೈದ್ಯಶಾಸ್ತ್ರವು ರೋಗಗಳ ಸ್ವರೂಪವನ್ನು ವಿವರಿಸುವದಲ್ಲದೆ ಅವುಗಳ ಉಪಚಾರ ಅಥವಾ ಚಿಕಿತ್ಸೆಯನ್ನು ಹೇಳುವದು. ತರ್ಕಶಾಸ್ತ್ರವು ಸರಿಯಾದ ವಿಚಾರಸರಣಿ ಹೇಗಿರಬೇಕೆಂಬುದಕ್ಕೆ ಕೆಲವು ಸೂತ್ರಗಳನ್ನು ಹಾಕುವದು. ಭೂಗರ್ಭ ಶಾಸ್ತ್ರವು ಭೂಮಿಯ ಸ್ವರೂಪವನ್ನು ಭೂಗುಣಗಳ ಭೇದ ಮೂಲಕ ವಿವರಿಸುವದು. ಸಾಮಾಜಿಕ ಶಾಸ್ತ್ರವು ಬೇರೆ ಬೇರೆ ಸಂಗಡಗಳ ಸ್ಥಿತಿ, ಗತಿ ಹಾಗು ಪದ್ಧತಿಗಳ ಆಧಾರದಿಂದ ಅವುಗಳ ಹುಟ್ಟು, ಬೆಳವಣಿಗೆ ಮತ್ತು ಸಂಸ್ಕೃತಿಗಳ ಕಾರಣವನ್ನು ವಿವರಿಸುವದು. ಇವೆಲ್ಲ ಶಾಸ್ತ್ರಗಳು ಸ್ವಾಭಾವಿಕ ವಿಷಯಗಳ ವರ್ಣನಾತ್ಮಕವಿದ್ದು ವ್ಯವಹಾರಿಕ ಶಾಸ್ತ್ರಗಳಲ್ಲಿ (*Natural sciences*) ಸಮಾವೇಶವಾಗುತ್ತವೆ. ಈ ಶಾಸ್ತ್ರಗಳು ತಮ್ಮ ವಿಷಯ ಪ್ರತಿಪಾದನೆಗಾಗಿ ಕೆಲವು ನಿಯಮಗಳನ್ನು ರಚಿಸುವವು. ಆದರೆ ನೀತಿಶಾಸ್ತ್ರವು ಪ್ರಮಾಣಶಾಸ್ತ್ರವಿರುವದರಿಂದ (*Normative science*) ಉಳಿದ ಶಾಸ್ತ್ರಗಳಂತೆ ನಿಯಮಗಳನ್ನು ರಚಿಸದೆ ಧ್ಯೇಯದ ವ್ಯಾಖ್ಯೆಯನ್ನು ರೂಪಿಸುವದು.

ಶಾಸ್ತ್ರವು ಜ್ಞಾನಬೋಧೆ ಮಾಡುವದು. ಆದರೆ ಶಿಲ್ಪಕಲೆ. ಚಿತ್ರಕಲೆ, ಸಂಗೀತ, ನಾಟ್ಯ, ಯಂತ್ರ ನಿರ್ಮಾಣ ಮುಂತಾದ ಕಲೆಗಳು ರಚನಾವಿಧಾನಗಳನ್ನು ಬೋಧಿಸುವವು ನೀತಿಶಾಸ್ತ್ರವು ಮುಖ್ಯವಾಗಿ ಮನುಷ್ಯನ ಅಂತರಂಗ ಭಾವನೆಯ ಪ್ರಾಧಾನ್ಯ ಮತ್ತು ಅದಕ್ಕನುಸಾರವಾಗಿ ಹೊರಗೆ ಪ್ರಕಟವಾದ ವರ್ತನೆಯ ಬೆಲೆಯನ್ನು ಧ್ಯೇಯದ ಒರೆಗಲ್ಲಿನ ಮೇಲೆ ಪರಿಶೀಲಿಸುತ್ತದೆ. ಸದ್ಗುಣವು (*Virtue*) ಸದಾಚಾರದಲ್ಲಿಯೇ ಪ್ರಕಟವಾಗುತ್ತದೆ. ಯಾವನು ಸರಿಯಾದ ರೀತಿಯಲ್ಲಿ ವರ್ತಿಸುವನೋ ಅವನು ಸದಾಚಾರಿ ಅಥವಾ ಸತ್ಯವಂತನು. ಸದ್ಗುಣವು ಬಹಿರಂಗದ ಚಟುವಟಿಕೆಯಲ್ಲಿಯೇ ಪ್ರಕಟವಾಗತಕ್ಕದ್ದಾಗಿದೆ. ಸದ್ಗುಣವು ಗೋಪ್ಯವಾಗಿದ್ದರೆ ಅದರ ಬೆಲೆಯು ಗೊತ್ತಾಗದು. ಬಹಿರಂಗದ ವರ್ತನೆಯು ಅಂತರಂಗ ಸ್ವಭಾವವನ್ನು ಪ್ರತಿಬಿಂಬಿಸುವದು. ನೀತಿಯು ಮಾನವನ ವೈಯಕ್ತಿಕ ಅಭಿವೃದ್ಧಿಗೆ ಕಾರಣವು. ಅವನ ಸದ್ವರ್ತನೆಯು ಅವನ ಸಮಾಜದಲ್ಲಿ ಹಾಗು ಜಗತ್ತಿನಲ್ಲಿ ಅವನ ಕೀರ್ತಿ, ಗೌರವ ಮತ್ತು ಸಂಪತ್ತನ್ನು ವೃದ್ಧಿಗೊಳಿಸಲು

ಕಾರಣವಾಗುವದು. ಅಭಿನವ ಪಂಪನು ಸದ್ವರ್ತನದ ಮೇಲ್ಮೆಯನ್ನು ಹೀಗೆ ವರ್ಣಿಸಿದ್ದಾನೆ;—

ಗುಣಹಾನಿಯಿಂದಧೋಗತಿ । ಗುಣದಿಂ ಸ್ವರ್ಗಾಪವರ್ಗ ಸುಖಮುಪ್ಪು
ಮೆನಲ್ ॥
ಗುಣಹೀನನ ಸಿರಿಯಿಂದಂ ।ಗುಣಗಳ ಬಡತನಯೆ ನಾಡೆಯುಂ ಲೇಸಲ್ತೆ॥

ಸದ್ವರ್ತನವು ಜೀವನದ ಸರ್ವಸ್ವವು. ಸಾರ್ವತ್ರಿಕ ನೀತಿಗೆ ದೇಶ ಕಾಲ, ಸಿರಿತನ ಬಡತನಗಳ ಭೇದವೇ ಇರುವದಿಲ್ಲ. ಧ್ಯೇಯವನ್ನು ಆಯ್ದು ಕೊಳ್ಳುವದು ಮತ್ತು ಅದನ್ನು ಸಾಧ್ಯಮಾಡಿಕೊಳ್ಳಲು ಸಾಧನಗಳನ್ನು ಆರಿಸಿಕೊಳ್ಳುವದು, ವರ್ತನದ ಉದ್ದೇಶವು. ಇಂತಹ ಆಯ್ಕೆಯು ಚಿತ್ತದ ಕಾರ್ಯವು (*act of will*) ವರ್ತನವು ಸ್ಥಿರಚಿತ್ತವನ್ನವಲಂಬಿಸಿದೆ. ಸ್ಥಿರಚಿತ್ತವು ಆತ್ಮಸ್ಫೂರ್ತಿಯುಳ್ಳದ್ದೇ ಇರಬೇಕು. ಸ್ಥಿರಚಿತ್ತವು ವರ್ತನೆಯಲ್ಲಿ ಪರಿಣಮಿಸಿದಾಗ ಅದಕ್ಕೆ ಭಾವನೆ ಜ್ಞಾನಗಳ ಸಂದರ್ಶವುಂಟಾಗಿರಬೇಕು.

ನೀತಿಶಾಸ್ತ್ರದ ಸಮಸ್ಯೆಗಳಾವವೆಂದರೆ— (೧) ಮನುಷ್ಯನ ಪರಮಾರ್ಥವು ಯಾವದು ? (೨) ಮನುಷ್ಯನ ನಿಜವಾದ ಆತ್ಮವು ಯಾವುದು ? ಮನುಷ್ಯನಲ್ಲಿ ಪರಸ್ಪರ ವಿರೋಧವುಳ್ಳನೇಕ ಇಂದ್ರಿಯಗಳುಂಟು. ಮನೋವಿಕಾರಗಳು, ಆಶೆ, ದ್ವೇಷ, ರಾಗ, ಮದ, ಕೋಪ, ಅಹಂಕಾರ, ಲೋಭ ಮೋಹ ಮೊದಲಾದ ಕಾಯದ ವೃತ್ತಿಗಳು ತಮ್ಮ ಮೇಲ್ಮೆಗಾಗಿ ಹೋರಾಡುವವು. ಇವುಗಳ ಮೇಲ್ಮೆಯನ್ನು ತಗ್ಗಿಸಿ ದೇಹದಲ್ಲಿ ಒಂದು ಶಾಂತವಾದ ಮತ್ತು ಹಿತಕರವಾದ ಆಡಳಿತವನ್ನು ಅಂದರೆ ಬುದ್ಧಿಯಿಂದ ನಿಯಂತ್ರಿತವಾದ ಜೀವನ ಕ್ರಮವನ್ನು ಸ್ಥಿರಗೊಳಿಸಬೇಕಾಗುವದು. ಮೊದಲು ಮನುಷ್ಯನ ನೀತಿಯು ಪರಂಪರಾಗತವಾದ ಪದ್ಧತಿ ಅಥವಾ ಪೂರ್ವಿಕರ ಆಚಾರ, ವಚನಗಳ ಆಧಾರದ ಮೇಲೆ ಅವಲಂಬಿಸಿರುವದು. ಆದರೆ ಮಾನವನ ಜ್ಞಾನ ಹಾಗು ತರ್ಕಶಕ್ತಿಯು ಬೆಳೆಯುತ್ತ ಹೋದಹಾಗೆ ನೀತಿಯ ಕಲ್ಪನೆಯಲ್ಲಿ ಅಡಕವಾದ ವಿರೋಧಾಭಾಸಗಳನ್ನು ಒಂದೊಂದಾಗಿ ಕಿತ್ತಿಹಾಕಿ ಸುಜ್ಞಾನಿಯು ಹಿಂದು ಬುದ್ಧಿಪುರಸ್ಸರವಾದ ನೈತಿಕ ಸಿದ್ಧಾಂತವನ್ನು ರಚಿಸುವನು. ಸದ್ವರ್ತನೆಗೆ ಸುಜ್ಞಾನದ ಸ್ಫುರಣೆಬೇಂಕೆಂದು ಸೋಮೇಶ್ವರ, ಭರ್ತೃಹರಿ, ಸಾಕ್ರೆಟಿಸ್. ಪ್ಲೇಟೋ, ಅರಿಸ್ಟಾಟಲ್ ಮೊದಲಾದ ನೈತಿಕ ವಿಜ್ಞಾನಿಗಳು ಹೇಳಿದ್ದಾರೆ.

ಸುಜ್ಞಾನದ (*Wisdom*) ಕೊರತೆಯೇ ಅನೀತಿ ಅಥವಾ ದುಷ್ಕೃತಿಗೆ ಕಾರಣವು. ಆದುದರಿಂದ ನೈತಿಕ ಜಾಗ್ರತೆಯಾಗುವ ಮುನ್ನ ಸುಜ್ಞಾನದ ಜಾಗ್ರತೆಯಾಗುವದು ಅವಶ್ಯವು. ಅಂದರೆ ಮನಸ್ಸಿನಲ್ಲಿ ಪಾಪದ ಅರಿವುಂಟಾಗಿ ಪಶ್ಚಾತ್ತಾಪವೆನಿಸಬೇಕು. ನೈತಿಕ ಧ್ಯೇಯದಲ್ಲಿಯ | ನಂಬಿಗೆಯನ್ನು ಸುಜ್ಞಾನ ರೂಪದಲ್ಲಿ ಪರಿವರ್ತಿಸುವದು ನೀತಿಶಾಸ್ತ್ರದ ಪ್ರಯತ್ನವಾಗಿದೆ. ಮನುಷ್ಯನು ಸಾಮಾಜಿಕ ಘಟನೆಯಲ್ಲಿ ಒಂದು ಅಂಗವಾಗಿದ್ದಾನೆ. ಆದರೆ ನೈತಿಕ ಕ್ಷೇತ್ರದಲ್ಲಿ ಅವನು ತಾನೊಬ್ಬನೇ ಸಮಷ್ಟಿಯಾಗಿದ್ದಾನೆ. ಒಳಿತು ನ್ಯಾಯ ವಾದ ಸಂಗತಿಯ ಆಧಾರ ಸ್ತಂಭವು. ಯಾವದು ಒಳಿತು ಅಥವಾ ಹಿತ ವಾದುದೋ ಅದು ನ್ಯಾಯವಾದದ್ದು ಅಥವಾ ಸರಿಯಾದದ್ದು ಇರಲೇಬೇಕು. ಒಪ್ಪು ತಪ್ಪುಗಳ ಅರಿವು ನಮಗೆ ಹೇಗೆ ಮತ್ತು ಯಾವಾಗ ಆಗುವದು ? ಆತ್ಮಸ್ಫೂರ್ತಿವಾದಿಗಳು (*Intuitionists*) ಈ ಅರಿವು ಆತ್ಮದ ಸ್ಫುರಣ ದಿಂದ ಉಂಟಾಗುವದೆಂದು ಹೇಳುತ್ತಾರೆ. ಆದರೆ ವಿಕಾಸವಾದಿಗಳು (*evoluti on ists*) ಈ ಅರಿವು ನೈತಿಕ ಅನುಭವದ ಪರಿಣಾಮವೆಂದು ಹೇಳುತ್ತಾರೆ. ಇವರು ಅಧಿಕ ಸಂಸ್ಕಾರದಿಂದ ಬೆಳೆದ ನೈತಿಕ ವಿಚಾರ ಗಳು ಮೊಟ್ಟ ಮೊದಲಿನ ಅಶಿಕ್ಷಿತ ಹಾಗೂ ಅಪೂರ್ಣ ವಿಚಾರಗಳಿಂದ ಕ್ರಮವಾಗಿ ಹೇಗೆ ರೂಪಾಂತರ ಹೊಂದುತ್ತವೆಂಬುದನ್ನು ವಿವರಿಸುತ್ತಾರೆ. ಕಾಳಿದಾಸ ಕವಿಯು ಸಹ ಆತ್ಮಸ್ಫೂರ್ತಿವಾದಿಯಿದ್ದಾನೆ. ಆತನು ಜ್ಞಾನಿ ಗಳಾದ ಸಜ್ಜನರಿಗೆ ಯಾವ ಪ್ರಸಂಗಗಳಲ್ಲಿ ಸಂಶಯ ವುಂಟಾಗುವದೋ ಆಗ ಅವರ ಅಂತಃಕರಣ ಪ್ರವೃತ್ತಿಯೇ ಪ್ರಮಾಣವೆಂದು ಹೇಳಿದ್ದಾನೆ. "ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣ ಪ್ರವೃ ತ್ತಯಃ"

ತರ್ಕಶಾಸ್ತ್ರವು ಸರಿಯಾದ ವಿಚಾರಮಾರ್ಗವನ್ನು ಚರ್ಚಿಸಿ, ನಿಶ್ಚಯಿ ಸುವದು. ನೀತಿಶಾಸ್ತ್ರವು ಸರಿಯಾದ ವರ್ತನವು ಯಾವುದೆಂಬುದನ್ನು ನಿರ್ಧ ರಿಸುವದು. ಈ ನಿರ್ಣಯದಲ್ಲಿ ಮಾನಸಶಾಸ್ತ್ರದಂತೆ ನೀತಿಶಾಸ್ತ್ರವು ಜ್ಞಾನ ಭಾವನೆ ಮತ್ತು ಚಿತ್ತಗಳ ವಿಧಾನ ಕೃತಿಗಳನ್ನು ಅನುಸರಿಸಬೇಕಾಗುವದು. ಇದರಂತೆ ಮನುಷ್ಯನ ಅನೇಕ ನೈತಿಕ ಭಾವನೆಗಳು ಸಮಾಜದ ಸಂಪರ್ಕ ದಿಂದ ಲಭ್ಯವಾದವುಗಳಿರುತ್ತವೆ. ವ್ಯಕ್ತಿಯು ತನ್ನ ನೈತಿಕ ಗುಣಗಳನ್ನು ಸಮಾಜದಲ್ಲಿಯೇ ಪ್ರಕಟಪಡಿಸಬಲ್ಲನಲ್ಲದೆ ನಿರ್ಜನವಾದ ಗವಿಯಲ್ಲಿದ್ದು

ಕೊಂಡು ಪ್ರಕಟಿಸಲಾರನು. ಆದುದರಿಂದ ನೀತಿಶಾಸ್ತ್ರವು ಸಮಾಜಶಾಸ್ತ್ರ ಮತ್ತು ಮಾನಸಶಾಸ್ತ್ರಗಳೊಂದಿಗೆ ನಿಬಿಡವಾದ ಸಂಬಂಧವುಳ್ಳದ್ದಿರುವದು. ವ್ಯಕ್ತಿಯು ಸಂಸ್ಕೃತಿ ಹೊಂದಿದ ಸಮಾಜದ ಸದಸ್ಯನಿರುವಾಗ ಅವನು ರಾಜಕಾರಣದಲ್ಲಿ ಭಾಗವಹಿಸಬೇಕಾಗುವದು. ಆಗ ರಾಜನೀತಿಯ ಸಂಪರ್ಕವು ಅವನಿಗುಂಟಾಗುವದು. ವ್ಯಕ್ತಿಯು ವಾಣಿಜ್ಯ ಮುಂತಾದ ವ್ಯವಹಾರಗಳಲ್ಲಿ ಪ್ರವೇಶ ಮಾಡುವದರಿಂದ ಆಗ ವಸ್ತುಗಳ ಬೆಲೆ ಹಾಗು ಹಣದ ಬೆಲೆಗಳ ಬಗ್ಗೆ ವಿವರಣೆ ಮಾಡುವ ಅರ್ಥಶಾಸ್ತ್ರದ ಸಂಪರ್ಕವು ಅವನಿಗೆ ಉಂಟಾಗುವದು. ಇದರಂತೆ ನೀತಿಶಾಸ್ತ್ರವು ವರ್ತನದ ಬೆಲೆಯನ್ನು ನಿರ್ಧರಿಸುವದು.

ಶೀಲ ಅಥವಾ ಸದ್ಗುಣವು ಸದ್ಭಾವನೆಯ ಸ್ವಭಾವವು. ಕರ್ತವ್ಯವು (Duty) ಬಹಿರಂಗ ವರ್ತನೆಯಲ್ಲಿ ವ್ಯಕ್ತವಾಗುವದು. ಸದ್ಗುಣವು ಕರ್ತಾರನ ಸ್ವಭಾವಕ್ಕೆ ಅನ್ವಯಿಸುವದು. ಕರ್ತವ್ಯವು ಆತನ ಚಟುವಟಿಕೆಗೆ ಅನ್ವಯಿಸುವದು. ಸದ್ಭಾವನೆ ಮತ್ತು ಸತ್ಕಾರ್ಯಗಳು ಒಂದರಿಂದೊಂದು ಅಗಲದಂತಿವೆ. ಅವುಗಳನ್ನು ಒಂದುಗೂಡಿಸುವ ತತ್ವವಾದ ಧ್ಯೇಯವು ಒಂದೇ ಆಗಿದೆ. ಆ ಧ್ಯೇಯಕ್ಕೆ ಅನುಗುಣವಾಗಿ ವರ್ತಿಸುವದರಲ್ಲಿಯೇ ಮಾನವನ ಶ್ರೇಷ್ಠತೆಯುಂಟು. ಮನುಷ್ಯನು ನೈತಿಕ ಪ್ರಾಣಿಯಾಗಿದ್ದಾನೆ. ಯಾಕೆಂದರೆ ಅವನು ವರ್ತನೆಯ ಪರಿಣಾಮದ ಬಗೆಗೆ ತನ್ನ ತರ್ಕದ ಮೂಲಕ ಒಳಿತು ಯಾವದು ಕೆಡಕು ಯಾವದು ಎಂಬುದನ್ನು ನಿಶ್ಚಯಿಸುತ್ತಾನೆ. ಈ ವಿಚಾರ ವಿಧಾನದಿಂದ ಅವನು ನೈತಿಕ ಪ್ರಾಣಿಯೆಂಬುದು ವ್ಯಕ್ತವಾಗುತ್ತದೆ. ನೀತಿಶಾಸ್ತ್ರವು ಮನುಷ್ಯಜೀವನದಲ್ಲಿ ಪರಮಾರ್ಥವ್ಯಾವುದೆಂಬುದನ್ನು ಶೋಧಿಸುತ್ತದೆ. ಮನುಷ್ಯನಲ್ಲಿ ಕ್ಷಣಿಕಸುಖಕ್ಕೆಳೆಸುವ ಇಂದ್ರಿಯಗಳುಂಟು. ಚಂಚಲವಾದ ಇಂದ್ರಿಯಗಳನ್ನು ಹಿಡಿತದಲ್ಲಿ ತರಲು ಮಾರ್ಗ ತೋರಿಸುವ ಬುದ್ಧಿಯುಂಟು. ಆದರೆ ಇವೆರಡನ್ನು ನಿಯಂತ್ರಣ ಮಾಡಲು ಆತ್ಮದ ಪ್ರಭಾವವು ಬೇಕು. ಪಶುಪಕ್ಷಿಗಳಲ್ಲಿ ವಿಚಾರಶಕ್ತಿ ಇಲ್ಲ. ಮನುಷ್ಯನಲ್ಲಿ ವಿಚಾರಶಕ್ತಿಯಿರುವದರಿಂದ ಅವನಲ್ಲಿ ನೈತಿಕ ವಿಚಾರವು ಅಂಕುರಿಸುವದು. ಈ ಕಾರಣದಿಂದ ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲರು ಸದ್ಗುಣವಿರುವಲ್ಲಿ ಜ್ಞಾನವಿರಲೇಬೇಕೆಂದು ಪ್ರತಿಪಾದಿಸಿದ್ದಾರೆ.

———

# ಶಿವಾನುಭವ ಸಮ್ಮೇಲದ ವರದಿ.

## ಹೊಳಲ್ಕೆರೆ ತಾಲೂಕು
## ಶಿವಪುರದಲ್ಲಿ ನಡೆದ ಶ್ರೀ ಶಿವಾನುಭವ ಸಮ್ಮೇಳನದ ಸಂಕ್ಷಿಪ್ತ ವರದಿ.

ಶ್ರೀಮದುಜ್ಜಯನಿ ಸಾಧುಸದ್ಧರ್ಮ ಸಿಂಹಾಸನಾಧೀಶ ಶ್ರೀ ತರಳಬಾಳು ಜಗದ್ಗುರು ೧೮ನೆ ಶ್ರೀ. ಶ್ರೀ. ಶಿವಕುಮಾರ ಶಿವಾಚಾರ್ಯ ದೇಶಿಕೇಂದ್ರ ಮಹಾಸ್ವಾಮಿಗಳ ಪಾದಾರವಿಂದಗಳಲ್ಲಿಯೂ, ಶ್ರೀ. ಸಿರಿಗೆರೆ ಶಾಖಾ ಬಿಲ್ಹಳ್ಳಿ ಮಠಾಧಿಪತಿಗಳಾದ ಶ್ರೀ. ಮ. ನಿ. ಪ್ರ. ಸಂಗಮನಾಥ ಸ್ವಾಮಿಗಳ ಪಾದ ಪದ್ಮಂಗಳಲ್ಲಿಯೂ, ಆತ್ಮಜ್ಞಾನಿಗಳಾದ ಶ್ರೀ ವೆಂಕಣ್ಣಶಾಸ್ತ್ರಿಗಳಲ್ಲಿಯೂ, ಜ್ಞಾನಜ್ಯೋತಿ ಪ್ರಕಾಶಕರೂ, ಆತ್ಮಜ್ಞಾನಿ ಜಂಗಮರೂ ಆದ ಶ್ರೀ ಬಸವಪ್ಪ ಸ್ವಾಮಿಗಳಲ್ಲಿಯೂ, ಆಗೂಪುರದ ಮತ್ತು ಸೋದರ ಗ್ರಾಮಗಳಿಂದ ನಮ್ಮ ಜ್ಞಾನ ದಾಸೋಹವನ್ನು ಯಶಸ್ವಿಗೊಳಿಸಲೂ ಶರಣರ ಜ್ಞಾನಾಮೃತಧಾರೆ ಯನ್ನು ಸವಿದು ತೃಪ್ತಿಪಡೆಯಲು ಬಂದಿರತಕ್ಕ ಶರಣ ಶರಣೆಯರಲ್ಲಿಯೂ ಶಿವಪುರದ ಪ್ರಥಮ ಶಿವಾನುಭವ ಮಂಟಪ ಸಮ್ಮೇಳನದ ಕಾರ್ಯಮಂಡಳಿಯ ಅಧ್ಯಕ್ಷರ ಮತ್ತು ಸದಸ್ಯರ ಹೃತ್ಪೂರ್ವಕ ಪ್ರಣಾಮಗಳು.

**ಪೂಜ್ಯರೇ ಹಾಗೂ ಶರಣ ಶರಣೆಯರೇ,**

ಈ ಗ್ರಾಮದಲ್ಲಿ ಈ ಸಾರೆ ಶಿವಾನುಭವ ಸಮ್ಮೇಳನವನ್ನು ನಡೆಸಬೇಕೆಂದು ಗ್ರಾಮದ ಮುಖಂಡರುಗಳೊಂದಿಗೆ ನಾವು ಸಮಾಲೋಚನೆ ನಡೆಸಿದಾಗ ಸರ್ವಾನುಮತದಿಂದ ಒಪ್ಪಿಗೆ ದೊರೆಯಿತು. ಈ ವಿಷಯವನ್ನು ಉತ್ತಮ ಶಿವಾನುಭವಿಗಳೂ, ಹಗಲಿರಳೂ ಶಿವಾನುಭವ ತತ್ವ ಪ್ರಚಾರ ಮಾಡುತ್ತ ಸಮಾಜದ ಕಲ್ಯಾಣಕ್ಕೆ ದುಡಿಯುತ್ತಲಿರುವ ಶ್ರೀ. ಶ್ರೀ. ಸಂಗಮನಾಥ ಸ್ವಾಮಿಗಳ ಮುಂದೆ ಇಟ್ಟಾಗ ಅವರು ಬಹು ಆನಂದಪಟ್ಟು ನಿಮ್ಮಲ್ಲಿ ನಿಷ್ಠೆವಂದಿದ್ದರೆ, ಶ್ರೀ. ಗುರುವಿನ ಆಶೀರ್ವಾದದಿಂದ ನಿಮ್ಮ ಆಶೆ ಆಕಾಂಕ್ಷೆಗಳು ಈಡೇರುವುದರಲ್ಲಿ ಯಾವ ಸಂಶಯವೂ ಇಲ್ಲವೆಂದು ಒಂದೇ ಮಾತಿನಲ್ಲಿ ತಮ್ಮ ಆನಂದದ ಒಪ್ಪಿಗೆಯನ್ನು ತಿಳಿಸಿದ್ದು ಅಲ್ಲದೆ ಕಾರ್ಯದ

ಏರ್ಪಾಡಿಗೆ ಅಮೋಘವಾದ ಸಲಹೆಗಳನ್ನಿತ್ತರು. ಅವರ ಸಲಹೆಯಂತೆಯೂ ಶ್ರೀ. ಶ್ರೀ. ತರಳಬಾಳು ಜಗದ್ಗುರುಗಳನ್ನು ಸಮಾರಂಭಕ್ಕೆ ದಯಮಾಡಿಸು ವಂತೆ ಕೇಳಿಕೊಂಡಾಗ ಕರುಣಾಳುಗಳೂ, ಲೋಕೋದ್ಧಾರಕರೂ, ಜಾತ್ಯಾತೀತ ಮನೋಭಾವದವರೂ, ಸರ್ವಧರ್ಮ ಸಮನ್ವಿಗಳೂ ಆದ ಪೂಜ್ಯರು ಭಕ್ತರ ಪರಾಧೀನರಾದ ಗುರುವೂ, ಯಾವಾಗಲೂ ಭಕ್ತರ ಇಚ್ಛೆಯನ್ನು ನೆರವೇರಿಸುವ ಯೋಚನೆಯಲ್ಲಿಯೇ ಇರುತ್ತಾನೆಂಬ ಅನ್ವಿತದಂತಹ ಮಾತನ್ನಾಡಿ ಕಡಿಮೆ ಖರ್ಚಿನಲ್ಲಿ ದೊಡ್ಡ ಸಮಾರಂಭವನ್ನು ನಡೆಸಿರಿ ಎಂಬ ಅಮೋಘ ಸಲಹೆಯನ್ನಿತ್ತು ತಮ್ಮ ಒಪ್ಪಿಗೆಯನ್ನು ಆನಂದದಿಂದ ವ್ಯಕ್ತಪಡಿಸಿದರು. ಅಲ್ಲದೆ ಸಮಾರಂಭದ ಮೂರು ದಿನಗಳೂ ಸಭೆಗೆ ದಯ ಮಾಡಿಸಲು, ಅನಂತ ತೊಂದರೆಗಳೂ, ಕಾರ್ಯ ಗೌರವಗಳೂ ಇರುವುದರಿಂದ ಕೊನೆಯ ದಿವಸ ದಯಮಾಡಿಸುತ್ತೇವೆಂದು ತಿಳಿಸಿ ಸಮಾರಂಭವು ಏರ್ಪಾಡಾಗಲು ಕೃಪೆದೋರಿದರು. ಅವರ ದಿವ್ಯ ಕೃಪೆಯಿಂದ ತಾ. ೧-೩-೫೮ ರಿಂದ ೩-೩-೫೮ ರ ವರೆವಿಗೆ ಈ ಶಿವಾನುಭವ ಸಮ್ಮೇಳನದ ಏರ್ಪಾಡಾಯಿತು. ಸಮ್ಮೇಳನದಲ್ಲಿ ಭಾಗವಹಿಸಲು ಎಷ್ಟೋ ಜನ ಜ್ಞಾನಿಗಳಿಗೆ ನಮ್ಮ ಆದರದ ಆಹ್ವಾನ ಕರೆಯೋಲೆಯದ್ನು ಇತ್ತಿದ್ದೆವು. ಅವರಲ್ಲಿ ಪೂಜ್ಯರಾದ ಶ್ರೀ. ಮ. ನಿ. ಪ್ರ. ಸಂಗಮನಾಥ ಸ್ವಾಮಿಗಳು ಒಂದು ದಿವಸ ಮುಂಚಿತವಾಗಿಯೇ ದಯಮಾಡಿಸಿದರು. ಪೂಜ್ಯರನ್ನು ಬಹು ವಿಜೃಂಭಣೆಯಿಂದ ಸ್ವಾಗತಿಸಿದೆವು. ಹೀಗೆಯೇ ಶ್ರೀ ಬಸಪ್ಪ ಸ್ವಾಮಿಗಳು, ಪಾಂಡೋಮಟ್ಟಿ ಅಕ್ಕನಬಳಗದವರೂ ಇನ್ನೂ ಮಾಡಲಾದ ಶಿವಾನುಭವ ತತ್ವನಿಷ್ಠೆಗಳು ಒಂದುದಿನ ಮುಂಚಿತವಾಗಿಯೇ ದಯಮಾಡಿಸಿ ಸಮಾರಂಭವು ಯಶಸ್ವಿಯೊಂದಿಗೆ ಪ್ರಾರಂಭವಾಗಲು ಕಾರಣರಾದರು.

ಶ್ರೀ ಗುರುಗಳ ಕರುಣಕಟಾಕ್ಷೆಯಿಂದಲೂ, ಗ್ರಾಮದ ಹಾಗೂ ಸೋದರ ಗ್ರಾಮದ ಅನೇಕ ದಾನಿಗಳ ಸಹಾಯದ ನೆರವಿನಿಂದಲೂ, ಏರ್ಪಾಡಾದ ಈ ಸಮಾರಂಭವು ಈ ಕೆಳಗೆ ಕಂಡಂತೆ ಪ್ರಾರಂಭವಾಗಿ ಇದುವರೆವಿಗೂ ಬಹು ಯಶಸ್ವಿಯಾಗಿ ನಡೆದುಬಂದಿದೆ.

ತಾ. ೧-೩-೫೮ ನೇ ಶನಿವಾರ ಬೆಳಿಗ್ಗೆ ೮ ಗಂಟೆಗೆ ಗ್ರಾಮದ ಪಟೇಲರಾದ ಶ್ರೀ ಬಸಪ್ಪನವರು ಧ್ವಜಾರೋಹಣ ಮಾಡಿದರು. ಸಭೆಯು ೮-೩೦ ರಿಂದ ಶ್ರೀ ಗೌಡ್ರ ನಿಂಗಪ್ಪನವರ ಪ್ರಾರ್ಥನೆಯೊಂದಿಗೆ ಶ್ರೀ ಸಂಗಮನಾಥ

ಸ್ವಾಮಿಗಳವರ ಘನಅಧ್ಯಕ್ಷತೆಯಲ್ಲಿ ಪ್ರಾರಂಭವಾಯಿತು. ಚೇಅರಮನ್ ಸಿದ್ದಪ್ಪನವರು ಸಭೆಗೆ ಆಗಮಿಸಿದ ಪ್ರವಚನಕಾರರನ್ನು ಭಾಷಣಕಾರರನ್ನೂ, ಮಹಾಶಯರನ್ನೂ ಮತ್ತು ಮಹಿಳೆಯರನ್ನು ಆದರದಿಂದ ಸ್ವಾಗತಿಸಿದರು. ಪಾಂಡೋಮಟ್ಟಿ ಅಕ್ಕನ ಬಳಗದವರಿಂದ ಮೊದಲು ಭಜನೆ ನಡೆಯಿತು. ನಂತರ ಶ್ರೀ ಡಿ. ಶಿವಲಿಂಗಪ್ಪನವರು "ಕ್ಷೇತ್ರ ಕ್ಷೇತ್ರಜ್ಞ ವಿವರ" ಎನ್ನುವ ವಿಷಯದಲ್ಲಿ ವಿಚಾರ ಪೂರಿತವಾದ ಭಾಷಣ ಮಾಡಿದರು. ನಂತರ ಶ್ರೀ ಬಸಪ್ಪ ಸ್ವಾಮಿಗಳವರು "ಶರಣಸಾಹಿತ್ಯ"ದ ವಿಷಯದಲ್ಲಿ ಸ್ವಾರಸ್ಯವಾದ ವ್ಯಾಖ್ಯಾನ ಮಾಡಿದರು. ಕೊನೆಯದಾಗಿ ಶ್ರೀ ಶ್ರೀಗಳವರು ಶಿವಾನುಭವ ಸಮ್ಮೇಳನದ ಉದ್ದೇಶಕ್ಕೆ ಅದರ ಸಾರ್ಥಕತೆಯು ಬಗ್ಗೆ ಬಹು ಸ್ವಾರಸ್ಯವಾಗಿ ತಮ್ಮ ಅಧ್ಯಕ್ಷ ಭಾಷಣದಲ್ಲಿ ತಿಳಿಸಿದರು. ಅಕ್ಕನ ಬಳಗದವರಿಂದ ಮಂಗಳಾರತಿಯಾದ ಮೇಲೆ ಬೆಳಗಿನ ಕಾರ್ಯಕ್ರಮವು ೧೧-೩೦ಕ್ಕೆ ಮುಕ್ತಾಯಗೊಂಡಿತು.

ಸಾಯಂಕಾಲ ೫-೩೦ ರಿಂದ ೬ ಗಂಟೆಯ ವರೆಗೆ ಶ್ರೀ ಬಸಪ್ಪಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಭೆ ಸಮಾವೇಶಗೊಂಡಿತು. ಆ ಸಭೆಯಲ್ಲಿ ಶಿವಪುರದ ಅಕ್ಕನಬಳಗದ ಸದಸ್ಯಣಿಯರಲ್ಲೊಬ್ಬರಾದ ಕುಮಾರಿ ಬಿ. ರತ್ನಮ್ಮನು "ವೀರಗೊಲ್ಲಡೆಯನ ಭಕ್ತಿನಿಷ್ಠೆ" ಎಂಬ ವಿಷಯದಲ್ಲಿ ಬಹು ವಿಷದವಾಗಿ ಪ್ರವಚನ ಮಾಡಿದರು ಅಲ್ಲದೆ ಶ್ರೀ. ಜಿ. ವೀರಪ್ಪನವರು ತೆಪ್ಪದಹಳ್ಳಿ ಇವರು "ಮಾನವನ ಗುರಿ" ಎಂಬ ಬಗ್ಗೆ ಭಾಷಣ ಮಾಡಿದರು. ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ. ಬಸಪ್ಪ ಸ್ವಾಮಿಗಳು ಶೂನ್ಯಸಿಂಹಾಸನದ ಬಗ್ಗೆ ಉಪನ್ಯಾಸ ಮಾಡಿದರು. ಸಾಯಂಕಾಲ ೬-೨೫ ಕ್ಕೆ ಧ್ವಜಾವರೋಹಣ ಮಾಡಿದರು.

ರಾತ್ರಿ ೮ ಗಂಟೆಗೆ ಶ್ರೀ. ಶ್ರೀ ಸಂಗಮನಾಥಸ್ವಾಮಿಗಳವರ ಘನಅಧ್ಯಕ್ಷತೆಯಲ್ಲಿ ಸಭೆ ಸೇರಿತು. ಕುಮಾರಿ ಕಮಲಮ್ಮನವರು "ವಚನ ಧರ್ಮ ಮತ್ತು ಸ್ತ್ರೀಯರು" ಎಂಬ ವಿಷಯದಲ್ಲಿಯೂ ಡಿ. ಶಿವಲಿಂಗಪ್ಪನವರು ಅಧ್ಯಾತ್ಮದ ವಿಚಾರವಾಗಿ ಭಾಷಣ ಮಾಡಿದರು.

ನಂತರ ಬಾಲಗಂಗಾಧರದಾಸ್ ಮಧುಗಿರಿ ಇವರು "ಶಿವಶರಣ ಹರಳಯ್ಯ"ನ ಚರಿತ್ರೆ ವಿಷಯದಲ್ಲಿ ಕೀರ್ತನೆ ಮಾಡಿದರು. ಅಧ್ಯಕ್ಷರ ಸಮಾರೋಪ ಭಾಷಣವಾದ ಮೇಲೆ ರಾಷ್ಟ್ರಗೀತೆಯೊಂದಿಗೆ ಸಭೆ ಮುಕ್ತಾಯವಾಯಿತು.

೨-೩-೫೮ ರಂದು ಭಾನುವಾರ ಬೆಳಗ್ಗೆ ಧ್ವಜಾರೋಹಣ ನಡೆಯಿತು. ಸಭೆಯು ಶ್ರೀ ಶ್ರೀ ಗಳವರ ಘನ ಅಧ್ಯಕ್ಷತೆಯಲ್ಲಿ ೮ ಗಂಟೆಯಿಂದ ಶ್ರೀ ಎಸ್. ಮಹದೇವಪ್ಪನವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಮಾಳೀನ ಹಳ್ಳಿ, ಬಸಪ್ಪನವರಿಂದ ವಚನಸಂಗೀತ ನಡೆಯಿತು. ನಂತರ ಶ್ರೀ ಜಿ· "ಮಾವನ ತತ್ವದ ಸಾರ್ಥಕತೆ" ಯು ಬಗ್ಗೆಯೂ ಶ್ರೀ ಡಿ. ಶಿವಲಿಂಗಪ್ಪನ ವರು "ಮಾನವತ್ವದ ಸಾಧ್ಯಾಸಾಧ್ಯತೆ"ಯ ಬಗ್ಗೆಯೂ ಶ್ರೀ ಪಾಂಡೋ ಮಟ್ಟಿಕಲ್ಲಿ ವೀರಪ್ಪನವರು "ಮಾನವ ಗುರಿ" ಎಂಬುದರ ಬಗ್ಗೆಯೂ, ಕುಮಾರಿ ಕಮಲಮ್ಮನವರು ಅಷ್ಟಾವರಣದ ಬಗ್ಗೆಯೂ ಶ್ರೀ ಬಸಪ್ಪ ಸ್ವಾಮಿ ಗಳವರು "ಪ್ರಭುಲಿಂಗಲೀಲೆಯ ವಿಮರ್ಶೆ" ಬಗ್ಗೆಯೂ ವಿಚಾರ ಪೂರಿತ ಉಪನ್ಯಾಸ ಮಾಡಿ ಸಭಿಕರ ಮನಸ್ಸನ್ನು ಆನಂದಗೊಳಿಸಿದರು. ಅಧ್ಯಕ್ಷರ ಸಮಾರೋಪ ಭಾಷಣದ ನಂತರ ಮಂಗಳದೊಂದಿಗೆ ೧೨ ಗಂಟೆಗೆ ಸಭೆ ಮುಕ್ತಾಯವಾಯಿತು.

ಮಧ್ಯಾಹ್ನ ३ ಗಂಟೆಗೆ ಶ್ರೀ ಬಸಪ್ಪಸ್ವಾಮಿಗಳ ಅಧ್ಯಕ್ಷತೆಯಲ್ಲಿ ಅಕ್ಕನ ಬಳಗದವರ ಮುಂದಾಳುಗಳಾದ ಕುಮಾರಿ ಕಮಲಮ್ಮನವರು "ಆದರ್ಶ ಗೃಹಿಣಿ" ಎಂಬ ವಿಷಯದಲ್ಲಿಯೂ, ಶ್ರೀ ಜಿ. ಬಸಪ್ಪ ಹೊದಿಗ್ಗೆರೆ ಇವರು "ಮಾನವನ ಕರ್ತವ್ಯ" ಎಂಬ ಬಗ್ಗೆಯೂ, ಶ್ರೀ ಬಾಲಗಂಗಾಧರ ದಾಸ ರವರು "ಶಿವಶರಣ ಕಣ್ಣಪ್ಪ"ನ ವಿಷಯದಲ್ಲಿ ಪ್ರವಚನ ಮಾಡಿದರು. ಅಧ್ಯಕ್ಷರ ಹಿತನುಡಿಗಳೊಂದಿಗೆ ಸಭೆ ಮುಕ್ತಾಯವಾಯಿತು. ಸಾಯಂಕಾಲ ೬–೨೫ ಕ್ಕೆ ಧ್ವಜಾರೋಹಣವಾಯಿತು.

ರಾತ್ರಿ ೮ ಗಂಟೆಗೆ ಶ್ರೀ ಶ್ರೀ ಸಂಗಮನಾಥ ಸ್ವಾಮಿಗಳವರ ಘನ ಅಧ್ಯಕ್ಷತೆಯಲ್ಲಿ ಸಭೆ ಸೇರಿತ್ತು. ಅಕ್ಕನಬಳಗದವರಿಂದ ಪ್ರಾರ್ಥನೆಯಾದ ನಂತರ ಸಭೆ ಪ್ರಾರಂಭವಾಯಿತು. ಶ್ರೀ ಬಸಪ್ಪ ಸ್ವಾಮಿಗಳವರು "ಸಿದ್ಧ ರಾಮ ಚರಿತ್ರೆ" ಯ ಬಗ್ಗೆ ವ್ಯಾಖ್ಯಾನ ಮಾಡಿದರು. ಶ್ರೀ ವೆಂಕಣ್ಣಶಾಸ್ತ್ರಿ ಗಳು ಸರ್ವ ವಿಷಯ ಸಮನ್ವಯಪೂರಿತವಾದ ಉಪನ್ಯಾಸ ಮಾಡಿದರು. ಶ್ರೀ ಎರೇಸೀಮೆ ಚನ್ನಪ್ಪನವರು "ಭಕ್ತಿ ಭಂಡಾರಿ ಬಸವಣ್ಣ"ನವರ ವಿಷ ಯದಲ್ಲಿ ಕೀರ್ತನೆ ಮಾಡಿದರು. ಅಧ್ಯಕ್ಷರ ಹಿತವಚನವಾದನಂತರ ರಾಷ್ಟ್ರ ಗೀತೆಯೊಂದಿಗೆ ರಾತ್ರಿಯ ಸಭೆ ಮುಕ್ತಾಯವಾಯಿತು.

೩--೩—೧೯೫೮ನೇ ಸೋಮವಾರ ಬೆಳಿಗ್ಗೆ ೮ ಘಂಟೆಗೆ ಶ್ರೀ ಪಟೇಲ ಬಸಪ್ಪನವರಿಂದ ಧ್ವಜಾರೋಹಣವಾಯಿತು. ಶ್ರೀ ಶ್ರೀಗಳವರ ಅಧ್ಯಕ್ಷತೆಯಲ್ಲಿಯೂ, ಅಕ್ಕನಬಳಗದವರ ಪ್ರಾರ್ಥನೆಯೊಂದಿಗೆ ಸಭೆಯು ಪ್ರಾರಂಭವಾಯಿತು. ಶ್ರೀ ಎಚ್. ಟಿ. ಬಸಪ್ಪನವರಿಂದ ವಚನಸಂಗೀತ ನಡೆಯಿತು. ಶಿವಪುರದ ಅಕ್ಕನ ಬಳಗದ ಮುಂದಾಳಾದ ಶ್ರೀಮತಿ ಎಸ್. ರತ್ನಮ್ಮನವರು "ಆದರ್ಶ ಸತಿ" ಎಂಬುದರ ಬಗ್ಗೆ ಪ್ರವಚನ ಮಾಡಿದರು. ನಂತರ ಡಿ. ಶಿವಲಿಂಗಪ್ಪನವರು ಶ್ರೀ ಬಸಪ್ಪಸ್ವಾಮಿಗಳಿಂದ ಪ್ರವಚನ ನಡೆಯಿತು. ಕೊನೆಗೆ ಶ್ರೀ ವೆಂಕಣ್ಣಶಾಸ್ತ್ರಿಗಳಿಂದ ಉಪನ್ಯಾಸವಾದ ಮೇಲೆ ಅಧ್ಯಕ್ಷರ ಸಮಾರೋಪ ಭಾಷಣದೊಂದಿಗೆ ಸಭೆಯು ಮಂಗಳದೊಡನೆ ಕೊನೆಗೊಂಡಿತು.

ಸಾಯಂಕಾಲ ೩ ಗಂಟೆಗೆ ಶ್ರೀ ಶ್ರೀ ತರಳಬಾಳು ಜಗದ್ಗುರುಗಳವರು ಗ್ರಾಮಕ್ಕೆ ದಯಮಾಡಿಸಿದರು. ಗ್ರಾಮದವರು ಶ್ರೀ ಶ್ರೀಗಳವರನ್ನು ಬಹು ಆನಂದದಿಂದ ಸ್ವಾಗತಿಸಿದರು. ಶ್ರೀ ಶ್ರೀಗಳವರ ಸಲಹೆಯಂತೆ ೪ ಗಂಟೆಗೆ ಸಭೆ ಸೇರಿತು. ಶ್ರೀ ಎಸ್ ಸಿದ್ದಪ್ಪನವರು ಶ್ರೀ ಶ್ರೀಗಳವರನ್ನೂ, ಬೆಂಗಳೂರಿನಿಂದ ಬಂದಿದ್ದ ಶ್ರೀ ಮಹಾದೇವ ಶಾಸ್ತ್ರಿಗಳನ್ನೂ ಸಭೆಗೆ ಸ್ವಾಗತಿಸಿದರು. ಶ್ರೀ ಶ್ರೀಗಳವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಮಹದೇವ ಶಾಸ್ತ್ರಿಗಳವರು "ಶಿವಶರಣೆ ಅಕ್ಕಮಹಾದೇವಿಯ" ಚರಿತ್ರೆ ಬಗ್ಗೆ ಕೀರ್ತನೆಮಾಡಿದರು. ೬ ಗಂಟೆಗೆ ಸಭೆ ಮುಕ್ತಾಯವಾಯಿತು.

ಸಾಯಂಕಾಲ ೭ ಗಂಟೆಯಿಂದ ಶ್ರೀ ಶ್ರೀ ಜಗದ್ಗುರು ತರಳಬಾಳು ಸ್ವಾಮಿಗಳವರ ಹೂವಿನ ಅಡ್ಡ ಪಲ್ಲಕ್ಕಿ ಮಹೋತ್ಸವವು ಬಹು ವಿಜೃಂಭಣೆಯಿಂದ ನಡೆಯಿತು. ಉತ್ಸವ ಕಾಲದಲ್ಲಿ ಬಹುಸಂಖ್ಯೆಯಲ್ಲಿ ಜನರು ಸೇರಿದ್ದರು. ಬಹು ಶಾಂತ ರೀತಿಯಿಂದ ತಳಿರು ತೋರಣಗಳಿಂದಲಂಕೃತವಾದ ರಾಜ ಬೀದಿಗಳಲ್ಲಿ ಉತ್ಸವವು ನಡೆಯಿತು. ಎಲ್ಲ ಮನೆಗಳ ಮುಂದೆ ಭಕ್ತಾದಿಗಳು ಕಾದಿದ್ದು ಶ್ರೀ ಶ್ರೀಗಳವರಿಗೆ ಹಾರ ತುರಾಯಿಗಳನ್ನು ಅರ್ಪಿಸುವುದರ ಮೂಲಕ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿ ಶ್ರೀಗುರು ಆಶೀರ್ವಾದಕ್ಕೆ ಪಾತ್ರರಾದರು. ೯ ಗಂಟೆಗೆ ಉತ್ಸವ ಮುಗಿಯಿತು. ೯-೩೦ ಕ್ಕೆ ಪುನಃ ಸಭೆಸೇರಿತು. ಶ್ರೀ ಶ್ರೀಗಳವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಶ್ರೀ ಸಂಗಮನಾಥ ಸ್ವಾಮಿಗಳವರು ಉಪಾಧ್ಯಕ್ಷತೆಯನ್ನು ವಹಿಸಿದ್ದರು. ಕುಮಾರಿ ಕಮಲಮ್ಮನವರಿಂದ ಪ್ರಾರ್ಥನೆಯಾಯಿತು. ಶ್ರೀ ಗುರು ಸ್ವಾಮಿ ಚಿಕ್ಕ

ಜಾಜೂರು ಇವರಿಂದ ಇಂಪಾದ ವಚನಸಂಗೀತ ನಡೆಯಿತು. ಶ್ರೀ ಗುರು ಕರಜಾತರಾದ ಅಷ್ಟಾವರಣ ಶೋಭಿತರಾದ ಶ್ರೀ ಎಸ್. ಜಿ. ಮಹೇಶ್ವರಪ್ಪ ನವರು ಶ್ರೀ ಶ್ರೀ ತರಳಬಾಳು ಜಗದ್ಗುರುಗಳವರಿಗೂ ಶ್ರೀ ಶ್ರೀ ಸಂಗಮನಾಥ ಸ್ವಾಮಿಗಳವರಿಗೂ ಭಕ್ತಿಪೂರ್ವಕವಾದ ಬಿನ್ನವತ್ತಳೆಗಳನ್ನು ಅರ್ಪಿಸಿದರು. ಶ್ರೀ ಬಿ. ರತ್ನಮ್ಮನವರು "ಪತಿವ್ರತೆ" ಎಂಬ ಬಗ್ಗೆ ಉಪನ್ಯಾಸ ಮಾಡಿದರು. ಶ್ರೀ ಮಹಾದೇವ ಶಾಸ್ತ್ರಿಗಳು "ಶಿವನ ಸೋಲು" ಎಂಬ ಚರಿತ್ರೆ ಬಗ್ಗೆ ಸ್ವಾರಸ್ಯವಾದ ಕೀರ್ತನೆ ಮಾಡಿದರು. ಅಧ್ಯಕ್ಷರೂ ಅಮೋಘವಾದ ಭಾಷಣ ಮಾಡಿದ್ದೂ ಅಲ್ಲದೆ ಸಮಾರಂಭವನ್ನು ಯಶಸ್ವಿಯಾಗಿ ನಡೆಸಿದ ಶಿವಪುರದ ಹಾಗೂ ನೆರೆದಿದ್ದ ಭಕ್ತಾದಿಗಳಿಗೆ ಆಶೀರ್ವಾದ ಮಾಡಿದರು. ಶ್ರೀ ಎಚ್. ರೇವಪ್ಪನವರು ವಂದನಾರ್ಪಣೆ ಮಾಡಿದರು. ಶ್ರೀ ಗುರುಸ್ವಾಮಿಯಿಂದ ಮಂಗಳವಾದ ಮೇಲೆ ರಾಷ್ಟ್ರಗೀತೆಯೊಂದಿಗೆ ಸಭೆಯು ರಾತ್ರಿ ೩ ಘಂಟೆಗೆ ಮುಕ್ತಾಯವಾಯಿತು. ಈ ರೀತಿಯಾಗಿ ಸಭೆಯು ಇದುವರೆಗೂ ನಡೆದು ಕೊಂಡು ಬಂದದ್ದು ಶ್ರೀ ಶ್ರೀಗಳವರ ಕೃಪೆಯ ಕಾರಣವಲ್ಲದೆ ನಮ್ಮದೇನೂ ಹೆಚ್ಚಳವಿಲ್ಲ. ಆದರೆ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ಉಪಕಾರ ಮಾಡಿದವರನ್ನು ಸಂಭ್ರಮದ ವೇಳೆಯಲ್ಲಿ ಸ್ಮರಿಸುವದು ಉಚಿತವಾದ್ದರಿಂದ ನಮ್ಮ ಸಮ್ಮೇಳನಕ್ಕೆ ಸಹಾಯ ಮಾಡಿದವರ ಪಟ್ಟಿಯನ್ನು ಓದಿ, ಸಭೆಯು ಇಷ್ಟು ಯಶಸ್ವಿಯಾಗಿ ನಡೆಯಲು ಕಾರಣರಾದ ಶ್ರೀ ಶ್ರೀ ತರಳಬಾಳು ಜಗದ್ಗುರುಗಳನ್ನೂ, ಶ್ರೀ ಮ. ನಿ. ಪ್ರ. ಸಂಗಮನಾಥ ಸ್ವಾಮಿಗಳನ್ನೂ ಸ್ಮರಿಸಿ, ನಮಗೂ ಕೃತಜ್ಞತೆಗಳನ್ನರ್ಪಿಸಿ ಈ ಸಮ್ಮೇಳನದ ಪುಟ್ಟ ವರದಿ ಯನ್ನು ಶ್ರೀ ಗುರುಗಳ ಆಶೀರ್ವಾದದೊಂದಿಗೆ ಮುಕ್ತಾಯಗೊಳಿಸುವೆ. ಈ ವರದಿಯನ್ನು ಓದಲು ವೇಳೆಯನ್ನೊದಗಿಸಿದ ಅಧ್ಯಕ್ಷರಿಗೆ ನನ್ನ ಪ್ರಣಾಮಗ ಳನ್ನು ಪುನಃ ಅರ್ಪಿಸಿ, ಶಾಂತ ರೀತಿಯಿಂದ ವರದಿಯನ್ನು ಕೇಳಿದ್ದಕ್ಕಾಗಿ ಸರ್ವರನ್ನು ವಂದಿಸುವ,

| ಶಿವಾನುಭವ ಸಂಘ | ತಮ್ಮೆಲ್ಲರ ವಿಧೇಯ<br>ಎಂ. ಮಹಾದೇವಪ್ಪ, ಶಿವಪುರ. |
| --- | --- |

# ರಾವಬಹಾದ್ದೂರ ಹಳಕಟ್ಟಿಯವರು

ಪದ— ವಾ. ಘ.

ಜಯವಿರಲಿ ಚಿರಕಾಲ ಪುಣ್ಯಾತ್ಮನೇನಿನಗೆ ।
ನಯದಿಂದ ರಂಜಿತನೆ ಪರಮ ಶಿವಶರಣನೇ ।
ದಯೆಯ ಮೂರ್ತಿಯೆ ವೀರಶೈವ ಮತ ಭೂ
ಷಣನೆ ಕರ್ಮಯೋಗಿಯೆ ವಿನುತನೇ ।

ಜಯವಿರಲಿ ಜಯವಿರಲಿ ಮಂಗಲಾಕಾರನೇ ।
ಭಯರ ಹಿತ ವೃತ್ತಿಯನೆ ಗಂಭೀರನೇ ಪುಣ್ಯಂ ।
ಮಯತನುವೆ ಹಳಕಟ್ಟಿಯುಪನಾಮಿಯೇ ।
ಫಕೀರಪ್ಪನೇ ಸನ್ಮಾನ್ಯನೇ ॥೧॥

ಶಿವಶರಣ ವಚನಗಳ ಹೊತ್ತಿಗೆಗಳೆಲ್ಲವೂ ।
ಬುವಿಯಲ್ಲಿ ಮಾಯವಾಗುತ್ತಿರಲು ಹುಳುಹತ್ತಿ
ದಿವಿಜರಂಥವನೆ ನೀ ಸಂಗ್ರಹಿಸಿಯವು
ಗಳನು ಮುದ್ರಣವ ಸಲೆಮಾಡಿಸಿ ।

ಅವಿರಳಾನಂದದಿಂ ವೀರಶೈವರಕ-ರಕೆ
ಸುವಿಚಾರಿಯೆ ನೀನು ಕೊಟ್ಟು ಪುಣ್ಯವ ಪಡೆದೆ ।
ಸವೆಸಿದ್ಯೆ ನಿಜತನುವ ಮೋಕ್ಷ್ಮನವನದಕಾಗಿ
ಹಗಲಿರುಳು ದುಡಿದು ನೀನು ॥೨॥

ಹೊರದೆಗೆದೆ ಶರಣ ಜನವಚನ ನಿಕ್ಷೇಪವನು ।
ಹೊರದೆಗೆದು ಸಕಲರಿಗೆ ಕೊಡುತ್ತಿರುವೆ ಧನವದನು ।
ಹರುಷದಿಂದಂ ಸತತ ನಿಃಸ್ವಾರ್ಥಿಯೆ
ಪರಮ ಲೋಕಸೇವಕನೆ ನೀನು ॥

ಸರಿಯಿಲ್ಲದು ಪಕೃತಿಯುಗೆಯ್ದಿರುವೆನಿಜವಾಗಿ ।
ವರ ವೀರಶೈವ ಮತಜನರುಗಳಮೇಲೆ ನೀಂ ।
ಮರೆಯಲಾರರು ನಿಜವು ನಿನ್ನಯುಪಕಾರ
ವನು ಶಿವಮತದ ಜನರೆಂದಿಗೂ ॥ ॥೩॥

ನಿನ್ನಯಾ ಕಾರ್ಯ ಬಹು ಪರಿಣಾಮವಮಾಡಿಹುದು ।
ನನ್ನಿಯಿದು ಕನ್ನಡದ ನಾಡೆಲ್ಲ ಹಾಡುವದು ।
ಸನ್ನುತನೆ ಶರಣಜನ ವಚನಗಳ ನಿತ್ಯ
ವೂ ಬಿಡದೆಲ್ಲ ವೂರುಗಳಲಿ ॥

ಚೆನ್ನಕೃತ್ಯದೆ ನಿನ್ನ ಪ್ರೋನ್ನತಿಯ ಪಡೆದಿಹುದು ।
ಮನ್ನಣೆಗೆ ಸತ್ಪಾತ್ರ ವೀರಶೈವರ ಮತವು ।
ಚೆನ್ನದಂತಹ ಗುಣದ ರಾವಬಾಹದ್ದೂರನೇ ಅದು ನಿನ್ನ
ಸುಕೃತಿಫಲವು ॥

ವೀರಶೈವರ ಮಹಾಸಭೆಗೆ ಮೇಣ್ ಕರ್ನಾಟ ।
ಚಾರುತರ ಸಾಹಿತ್ಯವರ ಸಭೆಗೆ ನೀನಾಗಿ ।
ಧೀರನೇ ಅಧ್ಯಕ್ಷನವರಿಂದ ಬಹುಹಿತವ ಸಾಧಿಸಿದೆ ಕರ್ನಾಟಕದ ॥

ಭೂರಿಸಾಫಲ್ಯಗೆಯ್ದಿರುವೆ ನಿನ್ನಯ ಜನ್ಮ ।
ಕಾರುಣ್ಯ ನಿಧಿಯಾದ ಪಾರ್ವತೀಶನು ಕೊಡಲಿ ।
ಪಾರವಿಲ್ಲದ ಸುಖವ ಮತ್ತು ದೀರ್ಘಾಯುವನು ನಿನಗೆ
ತಾಂ ಹರುಷದಿಂದೆ ॥

— ತು. ರಂ. ಕೋಪರಡೆ,

# ಸಾಮೂಹಿಕ ಪ್ರಾರ್ಥನೆಗಾಗಿ ಆಯ್ಕೆ ಮಾಡಿದ ಸ್ತೋತ್ರಗಳು

## ಪರಮಾತ್ಮನು ತೇಜೋಮಯನು

ಎಲ್ಲಿ ನೋಡಿದಡಲ್ಲಿ ನೀನೇ ದೇವ,
ಎಲ್ಲಿ ಮುಟ್ಟಿದಡಲ್ಲಿ ನೀನೇ ದೇವ,
ಎಲ್ಲಿ ನೆನೆದಡಲ್ಲಿ ನೀನೇ ದೇವ,
ಎಲ್ಲಿ ಭಾವಿಸಲಲ್ಲಿ ನೀನೇ ದೇವ,
ಎಲ್ಲೆಡೆಯಲ್ಲಿ ನಿಮ್ಮ ಮಹಾಪ್ರಭೆಯೆ ಮುಸುಕಿತಾಗಿ
ಅಖಂಡೇಶ್ವರಾ,
ನಾನು ನೀನೆಂಬುದಕೆ ತೆರಹಿಲ್ಲ ದೇವಾ.

## ಪರಮಾತ್ಮನು ಪರಿಪೂರ್ಣನು

ಎನ್ನದು ಯಾವುದಯ್ಯ । ಎನ್ನಯ ದೊರೆ
ಅನ್ಯರದಾವುದಯ್ಯಾ ॥ಪಲ್ಲ॥

ಎಲ್ಲ ಸೌಭಾಗ್ಯವು ನಿನ್ನ ಪಾಗಿರಲಾಗಿ
ಎನ್ನದು ಯಾವುದಯ್ಯಾ ॥ಅ.ಪ.॥

ಗಂಗೆಯ ಜಲವೆಲ್ಲಿ ತುಂಗಭದ್ರೆಯದೆಲ್ಲಿ
ಮಂಗಳಕರಳಹ ಯಮುನೆಯದೆಲ್ಲಿ ॥
ತುಂಗ ತರಂಗೆಯ ಸಿಂಧು ನದಿಯದೆಲ್ಲಿ
ವಿಂಗಡಿಸುವರಾರೊ ಜಲನಿಧಿಯೊಳು ಪೊಕ್ಕು ।೧॥

ಚಂಪಕರಜವೆಲ್ಲಿ ಚಂದನರಜವೆಲ್ಲಿ
ಸೊಂಪಿನ ಪಾಟಲ ರಜವು ಅದೆಲ್ಲಿ ॥
ಪಾರಿಜಾತದ ರಜವೆಂಬುದನ್ನಾರು
ಪರಿಕಿಸಿ ಪೇಳ್ವರೋ ವನವಾಶದಲಿ ನಿಂದು ॥೨॥

ಭಿನ್ನಭಾವವ ಬಿಟ್ಟು ನಿನ್ನ ಪೂರ್ಣತೆಯನು
ಚೆನ್ನಾಗಿ ನೋಳ್ಪ ಕಣ್ಣೆನ್ನದಾಗಿರಲಿ ॥
ನಿನ್ನ ಮಹಿಮೆಯನೆನ್ನ ಕಣ್ಣಿಗೆ ತೋರಿಪ
ಪುಣ್ಯವೆ ಅನ್ಯರದಾಗಿರಲೆಂದಿಗು ॥೩॥

## ಪರಮಾತ್ಮನು ಕಾರುಣ್ಯಮೂರ್ತಿಯು

ಪರಮ ಪ್ರಭುವೆ ನಿಮ್ಮ ಸ್ಮರಣೆಯೊಳೆನ್ನ ಮನ
ಸ್ಥಿರವಾಗಿ ನಿಂತು ಧ್ಯಾನಿಸುತಿರಲಿ
ಕರಿಗೆ ಕೇಸರಿ ವೈರಿಯಂತೆನ್ನ ದುಂತಕ್ಕೆ
ಹರ ನಿಮ್ಮ ನಾಮವು ಹಗೆಯಾಗಲಿ ॥೧॥

ದಿನಕರನುದಯಕ್ಕೆ ಮಿನುಗುಚುಕ್ಕೆಗಳೆಲ್ಲ
ಕ್ಷಣದಲ್ಲಿ ಮಾಯವಾಗುವ ತೆರದಿ
ಘನಮಹಿಮ ನಿಮ್ಮ ತೇಜದೊಳೆನ್ನ ದೋಷವು
ಎನಿತಿಲ್ಲದಂತೆ ಹೋಗಲಿ ಭರದಿ ॥೨॥

ಅಸುರತನದಲಿ ಘೋರ ಸಂಸಾರ ಸಾಗರದಿ
ದೆಸೆದಿಕ್ಕುಗಾಣದೆ ಮುಳುಗುತಿಹೆನು
ಶಶಿಮೌಳಿ ನೀಯೆನ್ನ ಶಿಶುವೆಂದು ಕರವಿಡಿದು
ಒಸೆದು ಸಂತವಿಸುತ ಸಲಹೆನ್ನನು ॥೩॥

ಬಾನಿನಲ್ಲಿಯ ಮೋಡ ಮುಸುಕಿ ಮಳೆಯನು ಸುರಿದು
ಮಾಣದೆ ಜಗದ ರಕ್ಷಿಪುದು ತಾನು
ಜ್ಞಾನ ನಿಧಿಯೆ ಅಂತಃಕರಣವಾರಿಧಿಯೆಂದ
ದೀನ ತಬ್ಬಲಿಯೆನ್ನ ಪೊರೆಯೊ ನೀನು ॥೪॥

ಬಂದು ಪರಿಮಳಕೆಳಸಿ ತುಂಬಿಯು ತರುಲತೆಯ
ಹೊಂದಿ ಕಂಪನು ಸವಿಯುವಂದದಲಿ
ತಂದೆ ಶ್ರೀ ಗುರುಸಿದ್ಧಪ್ರಭು ನಿಮ್ಮ ಚರಣದೊಳ್
ಕುಂದದೆನ್ನಯ ಮನ ಮೀಸಲಿರಲಿ ॥೫॥

## ಪರಮಾತ್ಮನು ಸಕಲ ಪದಾರ್ಥಗಳಲ್ಲಿದ್ದಾನೆ

ಸ್ವಾಗತ ! ಸ್ವಾಗತ ! ಆಓ ಪ್ಯಾರೆ ।
ದರ್ಶನ ದೋ, ನಯನೋಂಕೆ ತಾರೆ ॥

ಬಾಲಕಕೀ ಮಧುರೀ ಹಾಸೀಮೆ ।
ಮೋಹನಕೀ ಮೀಠೀ ಬಾಸೀಮೆ ॥

ಮಿತ್ರೋಂಕೀ ನಿಸ್ವಾರ್ಥ ಪ್ರೀತಿಮೆ ।
ಪ್ರೇಮೀಗಣಕೀ ಮಿಲನ ರೀತಿಮೆ ॥

ನಾರೀಕೆ ಕೋಮಲ ಅಂತರಮೆ ।
ಯೋಗೀಕೆ ಹೃದಯಾಭ್ಯಂತರಮೆ ॥

ವೀರೋಂಕೆ ರಣಭೂಮಿ ಮರಣಮೆ ।
ದೀನೋಂಕೆ ಸಂತಾಪ ಹರಣಮೆ ॥

ಭಕ್ತೋಂಕೆ ಭಗವಾನ್ ಶರಣಮೆ ।
ಜ್ಞಾನವಾನ್‌ಕೆ ಆತ್ಮ ರಮಣಮೆ ॥

ಸಂತೋಂಕಿ ಶುಚಿ ಸರಲ ಭಕ್ತಿಮೆ ।
ಅಗ್ನಿ ದೇವಕೀ ದಾಹ ಶಕ್ತಿಮೆ ॥

ಗಂಗಾಕೀ ಪುನೀತ ಧಾರಾಮೆ ।
ಪೃಥ್ವೀ ಪವನ ಯ್ಯೋಮ ತಾರಾಮೆ ॥

ಭಾಸ್ಕರಕೆ ಪ್ರಖರ ಪ್ರಕಾಶಮೆ ।
ಶಶಿಧರಕೆ ಶೀತಲ ವಿಕಾಶಮೆ ॥

ಕೋಕಿಲಕೆ ಕೋಮಲ ಸುಸ್ವರಮೆ ।
ಮತ್ತ ಮಯೂರೀ ಕೇಕಾ ರವಮೆ ॥

ಸಬಮೆ ತುಮ್ಹೀ ದೀಖತೆ ಸಾರೆ ।
ಪರ ನ ಪಕಡ ಪಾತೆ ಮತವಾರೆ ॥

ನಿಜ ಪಹಚಾನ ಬತಾ ದೋ ಪ್ಯಾರೆ ।
ಛಿಪನಾ ಛೋಡೋ ಜಗ ಉಜಿಯಾರೆ ॥

———

# ಧೀರ ಇನ್ನಾರು ?

(ಬಸವಜಯಂತಿಯ ಸ್ಮರಣಾರ್ಥವಾಗಿ ಬರೆದ ಕವನ)



ಎಣ್ಣೆ ದೀವಿಗೆ ಹಿಡಿದು ಪಥವನರಸುವ ವೀರ
ತಿಳಿಯಲಾರೆಯಾ ತಿಂಗಳನ ಬೆಳಕು
ಸವಿಯು ತಂಗಿರಣ ಛಾಯೆಗಂಜಿಹುದು ತಿಮಿರ!
ಬಾ ಇಲ್ಲಿ ಕಂಡಿಹುದು ನೈಜ ಸೆಳಕು!

ಭಕ್ತಿವ್ಯೋಮದ ತಿಲಕ ಚಂದಿರನು ಬಸವಣ್ಣ!
ಆ ಶರಣ ಸಾತ್ವಿಕತೆಯ ಸವಿಯ ಬಾ
ಲಾಸ್ಯ ಲಾವಣ್ಯದ ಲೀಲಾ ಬಲೆಯ ಬಣ್ಣ!
ಬಲಿಯಾಗದೇ ಭಾಗ್ಯವರಸ ಬಾ

ಮೌಢ್ಯ ಜಾಡ್ಯದ ಜಾಲ ಆವರಿಸಿನಿಂದಾಗ
ಬಂದರದೋ ಅವತಾರ-ಅಲ್ಲಮರು
ಕಲ್ಯಾಣ ಮೇಲೆದ್ದು ಶೂನ್ಯಸಿಂಹಾಸನನಿಂದಾಗ
ಕ್ರೌರ್ಯ ಶೌರ್ಯದ ಕ್ರಾಂತಿ ಶಾಂತಿ ಮಾಡಿದರು

ಮಿಂಚಿಬಂದಿಹವು ತೂಯುಜಾಲದ ಹಕ್ಕಿಗಳು
ಬಣ್ಣಬಲುಚಂದ ನಾದ ಅಂದ
ಹಿಡಿಯ ಲೆಳಸಿ ಬೆಂಬತ್ತಿದೊಡೆ ಬಾಳು ಹಾಳು
ಕೇಳಿ ತಿಳಿದೇಳು ಶರಣರಿಂದ

ಸತ್ಯ ಮಿಥ್ಯದ ಘೋರ ರೌದ್ರರಣವು
ಬೆಳಕು ಕತ್ತಲೆಯ ವೀರಬಣವು
ನಮ್ಮ ಶರಣವೃಂದದ ಭಕ್ತಿ ಕಹಳೆ ಕೂಗಿದವು
ಶರಣರಿಗಿದಿರಾದ ಅಸುರರಿನ್ನಾವು ?

ಶ್ಯಾಮವರ್ಣದ ಮಾಯ ಮುಗಿಲಿನಲಿ ಮಿಂಚಾಗಿ
ಚಿಮ್ಮಿ ಎದ್ದಳದೋ ಮಹದೇವಿಯಕ್ಕ
ಕಾರಿರುಳ ಕರಗಿಸಿ ಸಿಡಿವ ಕಡುಸಿಡಿಲಾಗಿ
ಬಡಿದಳದೋ ಶಾಲೆಗೆ ಎಮ್ಮ ಭಾಗ್ಯದಕ್ಕ

ಸಾಸಿರಕೂ ಮಿಗಿಲಾದ ಲಿಂಗದೇವನ ದೂತರು
ಬಂದು ನಿಂದಾಗ ಬಸವಳಿಪ ನೀನಾರು ?
ದಾರಿಯರಿಯದ ನಿನಗೆ ಕಾದುನಿಂದಾಗ ಶರಣರು
ಎಣ್ಣೆದೀವಿಗೆ ಹಿಡಿದ ಧೀರ ಇನ್ನಾರು ?

—ಗು. ಹು. ಹನ್ನೆರಡುಮಠ,
ಕಾಡಸಿದ್ಧೇಶ್ವರ ಕಾಲೇಜ, ಹುಬ್ಬಳ್ಳಿ.

———

ಶಿವೈಕ್ಯರಾದ

# ಹುಬ್ಬಳ್ಳಿ ಮೂರುಸಾವಿರ ಮಠದ

# ಶ್ರೀಮಜ್ಜಗದ್ಗುರುಗಳು.

ಪದ್ಯ— ಕಳೆಕಳೆದ ಹಾಗೆ, ಎಂಬಂತೆ.

ಹೋದೆಯಾ ಮಹಿಮನೇ ಭೂಲೋಕವನು ತೊರೆದು ।
ಭೋ ದಯಾ ಮೂರ್ತಿಯೇ ಕೈಲಾಸದೊಳಗಿರಲು ।
ಬಾಧಿಸುದು ಬಹಳೆಮಗೆ ನಿನ್ನಗಲಿಕೆಯ ದುಃಖ ।
ಭೂಧರದ ಹಾಗೆ ಸ್ಥಿರ ಧೃತಿಯುತನೆ ಮಂಗಲನೆ ॥
ಹುಬ್ಬಳ್ಳಿಯೊಳಗಿರುವ ಮೂರುಸಾವಿರ ಮಠದ ।
ಹೆಬ್ಬಗೆಯ ಶ್ರೀ ಜಗದ್ಗುರುವೆ ಪುಣ್ಯಾತ್ಮನೇ ॥
ಹಬ್ಬಿರುವ ತವಕೀರ್ತಿ ಹಿಡಿಸದದು ನಾಡಿನ ।
ಲ್ಲುಬ್ಬಿನೊಳು ಮೆರೆದ ಗುರುಸಿದ್ಧ ರಾಜೇಂದ್ರನೇ ।
ನಿನ್ನ ಬಳಿ ಬೇಡಲಿಕೆ ಬಂದಿರುವ ಜನರೆಲ್ಲ ।
ನಿನ್ನಿಂದೆ ಹಣವಡೆದು ಹಿಗ್ಗಿನಿಂ ಹೋಗುತಿದೆ ।
ನನ್ನಿಯಿದು ಪರಮೋಪಕಾರಿಯಾದವ ನೀನು ।
ಸನ್ನುತನು ಲೋಕಕ್ಕೆ ಪ್ರಿಯನಾದೆ ವರನರನು ।
ಜನಹಿತದ ಕಾರ್ಯಗಳ ಹಲವೆಸಗಿದಂಥವನು ।
ಜನರ ಕಲ್ಯಾಣವೇ ಗುರಿಯಿಟ್ಟು ನಡೆದವನು ।
ಜನ ಸೇವೆಯಲಿ ನಿನ್ನಯಾಯುಷ್ಯಗಳೆದವನು ।
ವಿನಯ ಗುಣಭೂಷಿತನು ಕರುಣಾಂಬು ನಿಧಿನೀನು ।
ಹುಟ್ಟುವರು ತುಸು ಜನರು ಲೋಕದೊಳು ನಿನ್ನಂಥ ।
ಧಿಟ್ಟನೇ ಶ್ರೇಷ್ಠರೀ ಮಾನವರ ಕುಲದಲ್ಲಿ ।
ಪಟ್ಟಿಹೆವು ಬಹುದುಃಖ ನಿನ್ನನ್ನು ಕಳಕೊಂಡು ।
ಗಟ್ಟಿಗನೆ ಸ್ವೀಕರಿಸು ನನ್ನ ವಂದನೆಗಳನು ॥

—ತು. ರ. ಕೋಪರಡೆ,

ಸಾ॥ ಬನಹಟ್ಟಿ.

# ಅಕ್ಕನ ಐತಿಹಾಸಿಕ ಜೀವನ ದರ್ಶನದ ವಿಮರ್ಶೆ

(ಲೇಃ- ಶ್ರೀ ಶಿವಾನಂದ ಸ್ವಾಮಿಗಳು, ಗವಿಮಠ, ತೆಗ್ಗಿಹಳ್ಳಿ (ಇಂಡಿ)



ನೋಡುವ ಲೋಚನಗಳು ಎಲ್ಲರಿಗೂ ಒಂದೇ ತರವಿದ್ದರೂ ದೃಷ್ಟಿಯಲ್ಲಿ ಬಹಳಷ್ಟು ವ್ಯತ್ಯಾಸ ಕಂಡುಬರುವದು. ಕಾದಂಬರಿಕಾರನ ಕಾಮುಕ ಕಾಕ ದೃಷ್ಟಿ, ಕವಿಯ ಕಾಲ್ಪನಿಕ ಕಪಿಯ ದೃಷ್ಟಿ, ಪುರಾಣಿಕನ ಪುರಾತನ ಪುಸಿದೃಷ್ಟಿ, ರಗಳೆಕಾರನ ರಂಭಾಟದ ರಂಧ್ರದ ರಗಳೆಯ ದೃಷ್ಟಿ, ಸಾಹಿತಿಗಳ ಸಟೆಯಾಗಿ ಸಂಗ್ರಹಿಸುವ ವೃಷ್ಟಿ, ಪಂಡಿತರ ಪೊಸ ಪೆಕ್ಕಳಿಸುವ ದೃಷ್ಟಿ, ನಾಟಕಕಾರನ ನಂಜಿನ ನಟನೆಯ ನವರಸ ದೃಷ್ಟಿ, ಚಿತ್ರಕಾರನ ಚಲ್ಲಾಟದ ಚಂಚಲ ದೃಷ್ಟಿ, ಸ್ವಾನುಭವಿಗಳ ಸಮ್ಯಕ್ ದೃಷ್ಟಿ ಮೊದಲಾದ ಇನ್ನೂ ಅನೇಕ ದೃಷ್ಟಿಗಳುಂಟು. ವಾಚಕರು ಅವುಗಳನ್ನು ಸ್ವಲ್ಪ ತರ್ಕ ಮಾಡಿ ಅರಿಯಬಹುದು.

ಕಾದಂಬರಿಕಾರನ ಕಾಮುಕ ಕಾಕ ದೃಷ್ಟಿಃ— ಇವನು ಮನಭಾವಗಳಿಂದ ಸುಂದರ ಹೆಣ್ಣಿನ ಸುತ್ತ ಹಾರಾಡುವನು. ಹೆಣ್ಣಿನ ನವಕು, ಮುರಕು, ಫಿರಕಿಗಳನ್ನು ಸದಾ ತರಳು ಮಾಡುವನು. ವನಪು ವೈಯ್ಯಾರಗಳನ್ನು ಮನದಿ ಹೆಣೆಯುವನು. ಕಾಮಿನಿಯರ ಕಾಂತಾರಗಳಲ್ಲಿ ಅಶರೀರಿಯಾಗಿ ವಿಹರಿಸುವನು. ಕಾಮನ ಬಾಣಗಳನ್ನು ಈಕ್ಷಿಸುವನು. ಕಾಮಿನಿಯರ ಭ್ರಂಗಳನ್ನು ಹಿಡಿಯ ಹೋಗುವನು. ಕಾಮಿನಿಯ ಉಡಿಗೆ ತೊಡಿಗೆಗಳನ್ನು ತಾನೇ ಉಡಿಸಿ, ಧ್ಯಾನಿಸುವನು. ಕಾಮಿನಿಯರ ಅಂಗನ್ಯಾಸ, ಕರನ್ಯಾಸಗಳನ್ನು ಕಾದು ನೋಡುವನು. ಕಾಮಿನಿಯರಿಗೆ ಮುದ್ದಿಟ್ಟು ಅಪ್ಪಲು ಹೋಗುವನು. ಕಾಮಿನಿಯರನ್ನು ಹಿಂಬಾಲಿಸಿ ಸದಾ ತಿರುಗುವನು. ಕಾಮಕೇಳಿಗಳಲ್ಲಿ ರಮಿಸುವನು. ಕಾಮಿನಿಯರಲ್ಲಿ ಅಶ್ಲೀಲ ಬೀಭತ್ಸ ರೀತಿಯಲ್ಲಿ ರಮಿಸುವನು. ಎಲ್ಲ ಕಾಮಿನಿಯರಲ್ಲಿ ಸಹ ಇದನ್ನೇ ಕಾಣುವನು. ಸೂಳೆ, ಬಸವಿ, ಕುಲೀನ ಸ್ತ್ರೀ, ಶರಣೆ, ಸಂತ, ನಟಿ, ಪತಿವ್ರತೆ ಎಲ್ಲರನ್ನೂ ತನ್ನ

ಕಾಮುಕ ದೃಷ್ಟಿಯಿಂದಲೇ ಕಾಣುವವನು. ಯಾಕೆಂದರೆ ಅವನ ಬುದ್ಧಿ ಹೃದಯ ಅಂಗೋಪಾಂಗ ರೋಮ ರೋಮ ನರನಾಡಿಗಳೆಲ್ಲದರಲ್ಲಿ ಬರೀ ಕಾಮುಕಾಮಿನಿಯರೇ ತುಂಬಿರುವರು. ಇಂಥ ಕಾಮಾಂಧರಿಗೆ ಸೋಮಧರನೇ ಕಾಣುವದಿಲ್ಲ. ಕಾಮನಿದ್ದಲ್ಲಿ ಸೋಮಧರನಿಲ್ಲ. ಸೋಮಧರನಿದ್ದಲ್ಲಿ ಕಾಮ ನಿಲ್ಲ. ಕಾಮಾಂಧ ಕಾಮುಕ ಕಾದಂಬರಿಕಾರನಿಗೆ ಸೋಮಧರನ ಹಿಡಿದಿಪ್ಪ ಅಕ್ಕನ ನಿಲವು ಎಂದೂ ತಿಳಿಯಲಾರದು. ಕಾದಂಬರಿಕಾರರಾದ ಬಸವರಾಜ ಕಟ್ಟಿಮನಿಯವರು ಅದಕ್ಕಂತೇ ಅಕ್ಕನಿಗೆ "ಗಿರಿಯ ನವಿಲೆಂದು" ಹೆಸರಿಟ್ಟು ಕಾದಂಬರಿ ಬರೆಯುವಂತಾಗಿದೆ. ಅದೆಲ್ಲ ಅವನ ಹೃದಯದ ಚಿತ್ರವನ್ನೇ ಮೂಡಿಸುವದೇ ಹೊರತು ಅಕ್ಕನ ಚಿತ್ರ ಅದಲ್ಲೆಂದು ಬಲ್ಲವರು ಹೇಳದಿರಲಾರರು. ಕಾದಂಬರಿಗೆ ಸ್ತ್ರೀರತ್ನ ಶರಣೆ ಶಿಖಾಮಣಿಗಳಾದ ಪರಮ ಪೂಜ್ಯಳಾದ ಪರಮಪರಿಶುದ್ಧಳಾದ ಬಾಲಬ್ರಹ್ಮಚಾರಿಣಿಯಳಾದ ಅಕ್ಕನನ್ನು ಆಯ್ದುಕೊಂಡದ್ದು ಕಾದಂಬರಿಕಾರನ ಕಾಮುಕ ಕಾಕದೃಷ್ಟಿ. ಅಕ್ಕನಿಗೆ ಅಶ್ಲೀಲ, ಬೀಭತ್ಸ ಕಾಮುಕ ವರ್ಣನೆಗಳು ಎಂದೂ ಸಲ್ಲವು, ಸಲ್ಲವು. ಅವು ನಿಜದಲ್ಲಿ ನಿಲ್ಲವು ನಿಲ್ಲವು. ಗಿರಿಯ ನವಿಲು ಎಂಬ ಕಾದಂಬರಿಗೆ ತಕ್ಕ ಉತ್ತರವನ್ನು ಶ್ರೀ ಕೊಟಗಿ ತೋಟಪ್ಪನವರು ಗದಗ ಇವರು ಬಹುಬಗೆಯಿಂದ ವಿಮರ್ಶಾತ್ಮಕವಾಗಿ ಕೊಟ್ಟಿದ್ದಾರೆ.

೧ನೇ ಪ್ರಕರಣ:— ಅಕ್ಕನನ್ನು ಅರಿಯಲಿಕ್ಕೆ ನಿಜವಾಗಿ ಯಾವ ದೃಷ್ಟಿಯಿಂದಲೂ ಶಕ್ಯವಿಲ್ಲ ಮಾತ್ರ ಸಮ್ಯಕ ದೃಷ್ಟಿಬೇಕೆಂದು ಸಿದ್ಧಮಾಡಿ ತೋರಿಸಿ ಕಾದಂಬರಿಕಾರನ ಕಾಮುಕ ಕಾಕ ದೃಷ್ಟಿಯನ್ನು ಚನ್ನಾಗಿ ಬೀಳುಗಳೆದಿದ್ದಾರೆ. ಅಕ್ಕನದು ಅಧ್ಯಾತ್ಮಮಯ ಜೀವನ. ಯಾವತರದ ಸೂಕ್ಷ್ಮತರ ದೋಷಗಳು ಸಹ ಇರದ ಜೀವನ. ಪುಣ್ಯಪಾವನ ಚರಿತೆ ಅಕ್ಕನ ಘನ ನಿಲವು ಆಕೆಯ ಪರಿಪೂರ್ಣ ಬ್ರಹ್ಮಚರ್ಯ ಹಾಗೂ ಪವಿತ್ರ ಶುದ್ಧಸಿದ್ಧ ಪ್ರಸಾದ ಕಾಯದ ಮೇಲೆ ನಿಂತಿದೆ. ಕಾಯಕ, ಮಾನಸಿಕ, ವಾಚಕ, ಪವಿತ್ರತೆಯು ಅಕ್ಕನಲ್ಲಿ ನಿಜವಾಗಿ ತುಂಬಿದ್ದರಿಂದ ಸ್ತ್ರೀಯರಿಗೆ ಅಸಾಧ್ಯವಾದ ಮೀರಿದ ಸ್ಥಿತಿಯನ್ನು ಪಡೆದಳೆಂದು ಧಾರಾಳವಾಗಿ ಹೇಳಬಹುದು. ಅಕ್ಕನ ಬಾಳಿನಲ್ಲಿ ಒಂದು ಚುಕ್ಕಿಯಷ್ಟು ದೋಷವಿದ್ದರೆ ಎಂದೂ ಇಂಥ ಉಚ್ಚ ಸ್ಥಿತಿಗೆ ಹೋಗುತ್ತಿರಲಿಲ್ಲ. ಆಕೆಯ ಉಚ್ಚ ಸ್ಥಿತಿಯೇ ಆಕೆಯ ಇಡೀ ಜೀವನವನ್ನು ಸಹಜ ಚಿತ್ರಿಸುವಂತಿದೆ. ಅದಕ್ಕೆ ಯಾವ ರಗಳೆ ಪುರಾಣ

ಕಾವ್ಯ ಚರಿತೆಗಳ ಆಧಾರಬೇಕಾಗಿಲ್ಲ. ಹನುಮಂತನು ಬಾಲಬ್ರಹ್ಮಚಾರಿಯಾಗಿದ್ದುದರಿಂದ ಅವತಾರಿಕನೆನಿಸಿದ ರಾಮನು ಇಡೀ ಆಯುಷ್ಯದಲ್ಲಿ ಒಂದುಸಲ ಹೆಂಡತಿಯನ್ನು ಕೂಡಿದ್ದರಿಂದ ಇವರಿಬ್ಬರಲ್ಲಿಯ ಆಧ್ಯಾತ್ಮಿಕ ಸಿದ್ಧಿಯ ಅಂತರವನ್ನು ಸ್ವಲ್ಪ ವಿಚಾರಿಸಿ ನೋಡಿರಿ. ರಾಮನಿಗಾಗದ ಅಸಾಧ್ಯ ಕೆಲಸಗಳನ್ನು ಸಹಜ ಹನುಮಂತನು ಮಾಡುತ್ತಿದ್ದನು. ಅದಕ್ಕಂತೆ ಸೇರಲಾರದವರು ಮಂಗನಂತೆ ರೂಪಿಸಿದರೂ ಕೂಡ ಭಾರತದಲ್ಲಿ ರಾಮನಿಗಿಂತ ಅತ್ಯಧಿಕ ಪೂಜ್ಯಗೊಳ್ಳುವನು. ಯಾವ ದೇವರಿಗೂ ಜನರು ಹನುಮಂತನಷ್ಟು ಪೂಜೆ ಮಾಡುವದಿಲ್ಲ. ಹನುಮಂತನು ಗ್ರಾಮದೇವರಾಗಿದ್ದಾನೆ. ಮೂರು ಮನೆಯ ಊರಿಗೂ ಹನುಮಂತನ ಪವಿತ್ರ ಶುದ್ಧ ಬ್ರಹ್ಮಚರ್ಯ ಪಾಲನೆಯನ್ನು ಸೂಚಿಸುವದು. ಅದರಂತೆ ಅಕ್ಕನೂ ಕೂಡ ಪರಿಪೂರ್ಣ ಪರಿಶುದ್ಧ ಬ್ರಹ್ಮಚರ್ಯ ಪಾಲಿಸಿದ್ದರಿಂದಲೇ ಆಕೆಯ ಸ್ಥಿತಿ ಬಹು ಉಚ್ಚಮಟ್ಟದ್ದಿರುವದು. ಹನುಮಂತನಿಗೆ ವೈರಿಗಳು ಕಡಿಮೆ; ಆದರೆ ಅಕ್ಕನಿಗೆ ವೀರಶೈವ ಮತದಲ್ಲಿ ಅಲ್ಲದೆ ಪರಮತಿಯರಲ್ಲಿ ಸಹ ಬಹುಜನ ವೈರಿಗಳಿದ್ದಾರೆ. ಆಕೆಯ ಪವಿತ್ರತೆಗೆ ಒಳಗಿನಿಂದ ಹಾಗೂ ಹೊರಗಿನಿಂದ ಅಡ್ಡಿ ಆತಂಕಗಳು ೮೦೦ ವರ್ಷಗಳಾದರೂ ಇನ್ನೂ ಬರುತ್ತಲೇ ಇರುವವು. ಆದರೂ ಈಗೀಗ ಅಕ್ಕನು ನಾಡಿನ ತುಂಬ ಬೆಳೆದು ಬಂದಿರುವಳು. ಬಂಗಾರವನ್ನು ಕಾಸಿದಂತೆ ಅದರಲ್ಲಿ ಶುದ್ಧತೆ ತೇಜಗಳು ಹೆಚ್ಚಾಗುವಂತೆ ಅಕ್ಕನನ್ನು ಕಾಡಿಕಾಡಿದಂತೆ ಆಕೆಯ ಪವಿತ್ರತೆಯು ಶುದ್ಧ ಚರಿತ್ರವು ಹೆಚ್ಚಾಗಿ ಬೆಳಗಹತ್ತಿವೆ. ಈಗ ಆಕೆಯ ಚರಿತೆಯ ಮೇಲೆ ಶ್ರೀ ಕೊಟಗಿಯವರು ಹೊಸ ಬೆಳಕನ್ನು ಬೀರಿದ್ದಾರೆ. ಇವರ ಅಕ್ಕನ ಐತಿಹಾಸಿಕ ಜೀವನ ದರ್ಶನವು ಎಲ್ಲ ಸಾಹಿತಿಗಳಿಗೆ ಸರಿಯಾದ ಬುದ್ಧಿಗಲಿಸಿ ಅವರ ಹೃದಯದ ಹೊಲಸನ್ನು ತೊಳೆದುಕೊಳ್ಳಲು ನೆರವಾಗಿದೆ ಎಂದು ಧಾರಳವಾಗಿ ಹೇಳಬಹುದು. ಇದಕ್ಕೆಲ್ಲ ಅವರವರ ದೃಷ್ಟಿಗೇನೇ ಕಾರಣವಾಗಿರುವವು. ಅದಕ್ಕೆ ಒಂದನೆಯ ಅಧ್ಯಾಯದಲ್ಲಿ ಅಕ್ಕನನ್ನು ಅರಿಯಲು ಸಮ್ಯಕ್ ದೃಷ್ಟಿಬೇಕೆಂದು ಹೇಳಿದ್ದು ಬಹು ಸಮಂಜಸವಾಗಿದೆ.

**೨ ನೇ ಪ್ರಕರಣ:** — ಮೇಲೆ ಹೇಳಿದ ಯಾವ ದೃಷ್ಟಿಯಿಂದ ಅಕ್ಕನನ್ನು ಅರಿಯಲು ಶಕ್ಯವಿಲ್ಲ. ಆದರೆ ಸಮ್ಯಕ್ ದೃಷ್ಟಿಯವರು ಉಳಿದ ಯಾವ ಪುರಾಣ, ರಗಳೆ, ಕಾವ್ಯ, ಕಥೆ, ಕಾದಂಬರಿಗಳನ್ನು ಆಧಾರವಾಗಿಟ್ಟುಕೊಳ್ಳದೆ, ಬರೆ ಅಕ್ಕನ ವಚನ ಆಕೆಯ ಕಾಲದಲ್ಲಿ ಇದ್ದ ಶರಣ ಶರ

ಣಿಯರ ವಚನಗಳನ್ನು ಆಧಾರವಾಗಿಟ್ಟುಕೊಂಡರೆ ಮಾತ್ರ ಸಮ್ಯಕ್ ದೃಷ್ಟಿ ಯವರು ಸರಿಯಾಗಿ ಅಕ್ಕನ ಐತಿಹಾಸಿಕ ಜೀವನ ದರ್ಶನವನ್ನು ತಾವೂ ಮಾಡಿಕೊಳ್ಳುವರಲ್ಲದೆ ಅನ್ಯರಿಗೂ ದರ್ಶನ ಮಾಡಿಕೊಡಲು ಶಕ್ಯವಾಗಿರುವ ದೆಂದು ಹೇಳಬಹುದು. ಎಲ್ಲ ಸಾಹಿತಿಗಳು ರಗಳೆ, ಪುರಾಣ, ಕಾವ್ಯ, ಲೇಖ ಮೊದಲಾದವುಗಳನ್ನು ಆಧಾರವಾಗಿಟ್ಟುಕೊಂಡದ್ದರಿಂದಲೇ ಬಹುವಾಗಿ ತಪ್ಪಿದ್ದಾರೆ. ಇದೆಲ್ಲ ಅವರ ದೃಷ್ಟಿ ದೋಷದ ಪರಿಣಾಮವಾಗಿರುವದು. ಆದರೆ ಶ್ರೀ ಕೊಟಗಿಯವರು ಮಾತ್ರ ಬರೀ ಅಕ್ಕನ ಹಾಗೂ ಆಕೆಯ ಸಮಕಾಲೀನ ಶರಣರ ವಚನಗಳನ್ನೇ ಆಧಾರವಾಗಿಟ್ಟುಕೊಂಡು ಅಕ್ಕನ ಜೀವನವನ್ನು ಚಿತ್ರಿಸಿರುವದರಿಂದ ಅವರು ಸರಿಯಾಗಿ ಗುರಿಯನ್ನು ತಲು ಪಿದ್ದಾರೆಂದು ಹೇಳಬಹುದು. ರಗಳೆ, ಪುರಾಣಗಳು ಆಧಾರಗಳೆಂದೂ ಆಗ ಲಾರವು. ಅದೇಕೆ ಸಾಕ್ಷಿ ಸಹ ಅವೆಂದೂ ಆಗಲಾರವು. ರಗಳೆ ಗೊಳ್ಳು ರಗಳೆಗಳಾಗಿವೆ. ಪುರಾಣ ಪುಂಡರ ಗೋಷ್ಟಿಗಳಾಗಿವೆ. ಸತ್ಯದಿಂದ ಇವು ದೂರ ಇರುವವು. ಇವೆಂದೂ ಸತ್ಯ ಶೋಧನೆಗೆ ನೆರವಾಗಲರಿಯವು. ಮಹಾ ಭಾರತ, ಭಾಗವತ, ರಾಮಾಯಣ ಮೊದಲಾದ ಪುರಾಣಗಳನ್ನು ಅವಲೋ ಕಿಸಿದರೆ ಅವುಗಳಲ್ಲಿ ನಾಲ್ಕಾಣೆ ಸತ್ಯ ಸಹ ಕಂಡು ಬರುವದಿಲ್ಲ. ಅದೆಲ್ಲ ಕವಿಯ ಕಾಲ್ಪನಿಕ ದೃಷ್ಟಿ. ಕವಿಗಳು ಕಾದಂಬರಿಕಾರರು ತಮ್ಮ ಗ್ರಂಥ ಗಳು ಹೆಚ್ಚೆಚ್ಚಾಗಿ ನಾಡಿನಲ್ಲಿ ಹೇಗೆ ಪ್ರಕಟ ಪ್ರಸಾರವಾಗುವವೆಂಬ ಒಂದೇ ಒಂದು ಉದ್ದೇಶವನ್ನಿಟ್ಟುಕೊಂಡು ಬರೆಯುತ್ತಿರುವರು. ಜನಕ್ಕೆ ಯಾವದು ಪ್ರಿಯ, ಯಾವದು ಮೆಚ್ಚಿಗೆಗೆ ಪಾತ್ರವಾಗುವದೆಂಬ ಒಂದೇ ವಿಚಾರವನ್ನಿ ಟ್ಟುಕೊಂಡು ಬರೆಯುವದರಿಂದ ಅವೆಲ್ಲ ಸುಳ್ಳಿನ ಸಂತೆ ಎಂದೇ ಹೇಳಬೇಕು. ಅವರು ಜನವನ್ನು ಮನೋರಾಜ್ಯದಲ್ಲಿ ವಿಹರಿಸುವಂತೆ ಮಾಡುವರು. ಅವೆಂದೂ ಜೀವನದ ಆದರ್ಶವಾಗಲರಿಯದು. ಇಂಥ ಕವಿಗಳು, ಗ್ರಂಥಕಾರರು, ಅಕ್ಕನ ಜೀವನ ಚರಿತ್ರೆಯನ್ನು ಸರಿಯಾಗಿ ಚಿತ್ರಿಸಲರಿಯರು. ಕಾದಂಬ ರಿಗೆ ಅಕ್ಕನನ್ನು ಎಂದೂ ಎಳೆಯಬಾರದು. ಹನುಮಂತನನ್ನು ವಿಟಪು ರುಷನನ್ನಾಗಿ ಮಾಡಿದರೆ ಯಾವ ಕವಿಗೆ ಮೆಚ್ಚಿಗೆ ಸಿಗಬಹುದು? ಅದ ರಂತೆ ಅಕ್ಕನನ್ನು ವಿಟಸ್ತ್ರೀಯಳನ್ನಾಗಿ ಮಾಡಿ, ಕಾದಂಬರಿ ಬರೆದರೆ ಎಂದಾ ದರೂ ಶೋಭಿಸುವದೇ? ಜನ ಅದಕ್ಕೆ ಎಂದಾದರೂ ಮೆಚ್ಚಬಹುದೇ? ಆದರೆ ಸೇರಲಾರದವರಿಗೆ ಮಾತ್ರ ಮತ್ತಷ್ಟು ಆಸ್ಪದ ಕೊಟ್ಟಂತೆ ಆಗು ವದು. ಹೊರಗಿನ ವೈರಿಗಳನ್ನು ಗೆದಿಯಬಹುದು. ಆದರೆ ಒಳಗಿನ ವೈರಿ

ಗಳಿಂದ ಉಳಿಯುವದು ಬಹು ಕಠಿಣ. "ಮನೆಯಲ್ಲಿ ಹೆಂಡತಿ ಕಳೆವಡೆ ಯಾರಿಗೆ ದೂರಲಿ ಕೂಡಲಸಂಗಮದೇವಾ. ಎಂದು ಹೇಳಿದ್ದಾನೆ. ಅದರಂತೆ ಬಸವರಾಜ ಕಟ್ಟಿ ಮನಿಯವರು ನಮ್ಮ ಸಮಾಜಕ್ಕೆ ಅಂತರಿಕ ವೈರಿಗಳಾಗಿದ್ದಾರೆ. ಪರಮತೀಯರಿಗೆ ಇದರಿಂದ ಪುಷ್ಟಿ ಸಿಕ್ಕಂತಾಗಿದೆ. ಇದನ್ನು ಶ್ರೀ ಕೊಟಗಿಯವರು ಎರಡನೇ ಅಧ್ಯಾಯದಲ್ಲಿ ಈ ವಿಷಯವನ್ನು ಚನ್ನಾಗಿ ವಿಮರ್ಶಿಸಿದ್ದಾರೆ. ಅಕ್ಕನು ಜನ್ಮದಿಂದಲೇ ವೀರಶೈವಳೆಂದು ವಚನದಿಂದಲೇ ಸಿದ್ಧಮಾಡಿದ್ದು ಯೋಗ್ಯವದೆ. ಅಕ್ಕನ ತಂದೆಯ ಹೆಸರು ನಿರ್ಮಲಶೆಟ್ಟಿ. ಇಂಥ ಹೆಸರು ವೀರಶೈವರಿಗೆ ಇರುವವು. ಶಿರಿಯಾಳಶೆಟ್ಟಿ ಮೊದಲಾದವರಂತೆ ಇರುವದು. ಶ್ರೀ ಗುರುಲಿಂಗ ದೇವರು ವೀರಶೈವರ ಗುರು. ಅವನೇ ಅಕ್ಕನಿಗೆ ಲಿಂಗದ ನೆಲೆ ಕಲೆಗಳನ್ನು ತಿಳಿಸಿ ಅಳವಡಿಸಿ ಮಂತ್ರೋಪದೇಶ ಮಾಡಿದ್ದಾನೆಂದು ಆಧಾರ ಸಹಿತ ಹೇಳಿರುವರು. ಅನೇಕರು ಹರಿಹರನ ರಗಳೆಗಳ ಆಧಾರದ ಮೇಲೆ ಅಕ್ಕನ ಚರಿತೆ ಬರೆದು ಬಹು ಪ್ರಮಾದ ಮಾಡಿದ್ದಾರೆಂದು ಒಳ್ಳೇ ಧೈರ್ಯವಾಗಿ ಶ್ರೀ ಕೊಟಗಿಯವರೊಬ್ಬರೇ ಸಯುಕ್ತಿಕವಾಗಿ ಆಧಾರ ಸಹಿತ ಹೇಳಿದ್ದು ನೋಡಿದರೆ ಇವರ ಸಮ್ಯಕ್‌ದೃಷ್ಟಿಯು ಅರಿವೆ ವಾಚಕರಿಗೆ ಆಗದಿರದು. ಹರಿಹರನು ಅಕ್ಕನ ಸಮಕಾಲೀನನಲ್ಲ. ಅಲ್ಲದೆ ರಗಳೆಗಳ ಕವಿ. ರಗಳೆ ಅಂದರೆ ಬೇಸರಿಕೆಯಾಗುವ ಸಂಗತಿ ಎಂದು ಅರ್ಥವಾಗುವದು. ಇಂಥವನು ಅಕ್ಕನ ನಿಜಚರಿತೆಯನ್ನು ರಚಿಸಿದ್ದು ಯಾವ ಆಧಾರಗಳ ಮೇಲಿಂದ? ಹರಿಹರನು ಅಕ್ಕನ ಹಾಗೂ ಶರಣ ವಚನಗಳನ್ನು ಅಭ್ಯಸಿಸಿದಂತೆ ತೋರುವದೇ ಇಲ್ಲ. ತನಗೆ ಇಷ್ಟ ಕಂಡಂತೆ ಚರಿತೆಗಳನ್ನು ರಚಿಸಿದ್ದಾನೆ. ಇದೆಲ್ಲ ರಗಳೆಕಾರನ ರಂಬಾಟದ ರುಧ್ರದ ರಗಳೆಯು ದೃಷ್ಟಿ ಹೊರತು ಇವನು ಸತ್ಯಶೋಧಕನಲ್ಲ.

**೩ನೇ ಪ್ರಕರಣ:—** ವಿವಾಹವನ್ನು ಅಕ್ಕನು ಶಿವನ ಕೂಡ ಬಾಲ್ಯದಲ್ಲಿಯೇ ಆಗಿದ್ದಳೆಂಬುದಕ್ಕೆ ಅನೇಕ ವಚನಗಳೇ ಆಧಾರಗಳು. ಪುರಾಣ ರಗಳೆ, ದಂತಕಥೆ, ಕಾವ್ಯ ಮೊದಲಾದವುಗಳು ಎಂದೂ ವಿವಾಹದ ಆಧಾರಗಳೆ ಅಲ್ಲ. ಎಲ್ಲರೂ ತಪ್ಪಿದ್ದಾರೆಂದು ಶ್ರೀ ಕೊಟಗಿಯವರು ತಮ್ಮ ಗ್ರಂಥದಲ್ಲಿ ವಿವರಿಸಿದ್ದಾರೆ. ಕವಿಗಳು ಎಂಥವರೆಂದು ಪುಟ್ಟಪ್ಪನ ಪುಟ್ಟ ಕವನವನ್ನು ಸಹ ಹೇಳಿದ್ದಾರೆ. ಕಲ್ಪನಾಸಾಮ್ರಾಜ್ಯದಲ್ಲಿ ಕವಿಗಳು ವಿಹರಿಸುವರು. ಕಬ್ಬಿಗರು ವಾಗೀಂದ್ರಜಾಲಿಕರು ಹೊಂಗನಸುಗಳ ಕಾಣುವರು. ಸೊನ್ನೆಯಲಿ

ಸಗ್ಗವನು ಕೆತ್ತುವವರು ಎಂದು ಮೊದಲಾಗಿ ಹೇಳಿ ಕವಿಗಳು ಸುಳ್ಳು ಕವಿ
ಗಳೆಂದು ಹೇಳಿದ್ದಾರೆ. ಇವರಲ್ಲಿ ಐತಿಹಾಸಿಕ ಸಮ್ಯಕ್ ದೃಷ್ಟಿ ಇರುವ
ದಿಲ್ಲೆಂದು ಸಂರಾಗವಾಗಿ ಹೇಳಿದ್ದಾರೆ. ಇದರಿಂದ ಇವರಿಗೆ ಅಕ್ಕನ ಮದು
ವೆಯ ಸಮಸ್ಯೆ ಬಿಡಿಸುವದಾಗಿಲ್ಲ. ಯಾರೂ ಶ್ರೀ ಕೊಟಗಿಯವರಂತೆ ಅಕ್ಕನ
ಲಗ್ನದ ಒಗಟನ್ನು ಸರಿಯಾಗಿ ಒಡೆದಿಲ್ಲ. ಅಕ್ಕನ ಸ್ಥಿತಿ, ಇರುವಿಕೆ, ಬಾಳುವೆ,
ತ್ಯಾಗ, ದಿಗಂಬರತನ, ವಚನ ರಚನೆ, ತೇಜ, ಕಳೆ, ಶರಣರ ಹೇಳಿಕೆ
ಮೊದಲಾದವುಗಳನ್ನು ನೋಡಿದರೆ ಅಕ್ಕನೆಂದೂ ಕೌಶಿಕನ ಕೂಡ ಲಗ್ನ
ವನ್ನೇ ಆಗಿಲ್ಲ. ಲಿಂಗಧಾರಿಯಾದರೆ ಲಗ್ನವಾಗುವೆನೆಂದೂ ಸಹ ಕೇಳಿಲ್ಲ.
ಅವನ ಕಾಟಕ್ಕಾಗಿ ಅವನಿಗೆ ತನ್ನ ಪ್ರಭಾವ ಬೀರಿ ದಿಗಂಬರೆಯಾಗಿ
ವೀರಸನ್ಯಾಸಿನಿ ಶರಣೆಯಾಗಿ ವನಕ್ಕೆ ಹೋದಳೆಂದು ಅನುಮಾನವಿಲ್ಲದೆ
ಹೇಳುವೆವು. ಇಂಥ ನಿತ್ಯ ಮುಕ್ತಳಾದ ಅಕ್ಕನನ್ನು ಬೀಭತ್ಸ ಶಬ್ದಗಳಲ್ಲಿ
ಚಿತ್ರಿಸುವವರು ದುರ್ಮಾರ್ಗಿಯಾದ ಕಾದಂಬರಿಕಾರನ ಕಾಮುಕ ಕಾಕ
ದೃಷ್ಟಿ ಎಂದು ಮಾರ್ಮಿಕವಾಗಿ ಸಿದ್ಧಮಾಡಿ ತೋರಿಸಿದ್ದಾರೆ. ಯಾನಾ
ಗುಂದಿಯ ಯೋಗಿಣಿ ಮಾಣಿಕ್ಯಮ್ಮನವರು ಬಲುಮೆಯಿಂದ ಲಗ್ನವಾದ
ಗಂಡನಿಗೆ ತನ್ನ ಪ್ರಭಾವ ಬೀರಿದ್ದರಿಂದ ಆಕೆಯ ಆಶೆಯನ್ನು ತೊರೆದ
ನೆಂದು ಎರಡನೇ ನಮ್ಮ ಲೇಖದಲ್ಲಿ ಓದಿ ನೋಡಿರಿ.

೪ನೇ ಪ್ರಕರಣ:— ಕೌಶಿಕನಿಗೆ ಲಿಂಗಾಂಗಿಯಾದರೆ ಲಗ್ನವಾಗುವೆ
ನೆಂದು ಸಹ ಕೇಳಿಲ್ಲ. ಲಿಂಗಾಂಗಿಯಾದರೂ ಕೂಡ ನಿತ್ಯ ಕಾಮನ ವಿಲಾಸ
ದಲ್ಲಿ ರತಿಕ್ರೀಡೆಯಲ್ಲಿ ಬೀಳಬೇಕಾಗುವದೆಂಬ ಪ್ರಜ್ಞೆ ಅಕ್ಕನಿಗೆ ಇತ್ತು.
ಅಕ್ಕನು ಕೌಶಿಕನಿಗೆ ಲಿಂಗಾಂಗಿಯಾಗೆಂದು ಕೇಳೇ ಇಲ್ಲ. ಸಾಯುವ ಕೆಡುವ
ಗಂಡರ ಕೂಡ ಆಕೆಗೆ ಲಗ್ನವೇ ಬೇಕಾಗಿಲ್ಲೆಂದು ಅನೇಕ ವಚನಗಳಿಂದಲೇ
ಹೇಳಿದ್ದಾಳೆ. ಆಕೆ ಶರೀರದ ಉಪಯೋಗವನ್ನು ಯಾತಕ್ಕೆ ಮಾಡಬೇ
ಕೆಂಬುದನ್ನು ಚನ್ನಾಗಿ ಬಾಲ್ಯದಲ್ಲಿಯೇ ಶ್ರೀಗುರುಲಿಂಗ ದೇವರಿಂದಲೇ ಅರಿ
ತಿದ್ದಳು. ದೇವನ ಕಾರ್ಯಕ್ಕಾಗಿ ಕಾಯದ ಉಪಯೋಗ ಹೊರತು ಕಾಮ
ನೆಯ ತೃಪ್ತಿಗಾಗಿ ಅಲ್ಲೆಂದು ಚನ್ನಾಗಿ ಅಕ್ಕನು ಬಾಲ್ಯದಲ್ಲಿಯೇ ಅರಿತಿದ್ದಳು.
"ಅಮೇಧ್ಯದ ಹಡಿಕೆ ಮೂತ್ರದ ಕುಡಿಕೆ, ಎಲುಬಿನ ತಡಿಕೆ, ಕೀವಿನ ಹಡಿಕೆ
ಸುಡಲೀ ದೇಹವ ಒಡಲುವಿಡಿದು ಕೆಡಿದಿರು ಚ. ಮ. ಅರಿಮರುಳೆ ಎಂದು
ಕೌಶಿಕನಿಗೆ ಛೀಹಾಕಿ ಬುದ್ಧಿಹೇಳಿದ್ದಾಳೆ. ಇದರಿಂದ ಆಕೆಯ ಅಂತರಂಗ

ಆತ್ಮನ ಶುದ್ಧಿಯನ್ನು ತಿಳಿಯಬಹುದು. ಈ ವಚನದಂತೆ ಯಾವ ಸಾಹಿತಿಯು ಇಲ್ಲಿಯ ವರೆಗೆ ಹಾಡಿದ್ದಾನೆ. ಅವನ ಹೆಸರನ್ನು ಗೊತ್ತಿದ್ದರೆ ತಿಳಿಸಬೇಕು. ಮುಂದೆ ಮತ್ತೆ "ಉಡಿಗೆ ತೊಡಿಗೆಗಳ ಹಂಗೇಕೋ" ಎಂದು ಒಂದು ವಚನವನ್ನು ಹೇಳಿ ಉಟ್ಟ ಒಟ್ಟೆಯನ್ನು ಬಿಚ್ಚಿ ಒಗೆದು ದಿಗಂಬರಿಯಾಗಿ ವನಕ್ಕೆ ಹೊರಟಳು. ಇದೇನು ಕಲಿತ ವೈರಾಗ್ಯವಲ್ಲ. ಮುಕ್ತಾತ್ಮನ ವೈರಾಗ್ಯ. ಪರಮಾತ್ಮನಿಂದ ಮೊದಲೇ ಯೋಜಿಸಿದಂತೆ ಸಿದ್ಧವಾದ ವೈರಾಗ್ಯವಿತ್ತೆಂದು ಬಲ್ಲವರಿಗೆ ಅನಿಸುವದಿಲ್ಲವೇನು? ಇದಲ್ಲದೆ "ಒಲುಮೆ ಒಚ್ಚತವಾದವರು ಕುಲವಲವನರಸುವರೆ? ಮರುಳುಗೊಂಡವರು ಲಜ್ಜೆ ನಾಚಿಕೆ ಬಲ್ಲರೆ? ಚನ್ನಮಲ್ಲಿಕಾರ್ಜುನಗೊಲಿದವರು ಲೋಕಾಭಿಮಾನವ ಬಲ್ಲರೆ ಮರುಳೇ" ಎಂದು ಪುನಃ ಛೀ ಹಾಕಿ ತನ್ನ ಹೃದಯದ ಕೂಗನ್ನು ಹೊರಗೆಡವಿದ್ದಾಳೆ. ಇದರ ಮೇಲಿಂದ ಅಕ್ಕನು ಕೌಶಿಕನಿಗೆ ಲಿಂಗವಂತನಾಗೆಂದು ಸಹ ಕೇಳಿಲ್ಲೆಂದು ಸಹಜ ಅನಿಸುವದು. ಲಗ್ನದ ಮಾತಂತೂ ದೂರೇ ಉಳಿಯಿತು. ಇದನ್ನು ಶ್ರೀ ಕೊಟಗಿಯವರು ತಮ್ಮ ಪುಸ್ತಕದಲ್ಲಿ ಸರಿಯಾಗಿ ಕಾಣಿಸಿಲ್ಲ. ಚಾಮರಸಸಿದ್ಧ ವೀರಣಾರ್ಯರ ಮತಕ್ಕೆ ಒಪ್ಪಿಕೊಂಡಂತೆ ತೋರುವದು. ಇದನ್ನು ೧೦ನೇ ಪ್ರಕರಣದ ವಿಮರ್ಶೆಯಲ್ಲಿ ಹೆಚ್ಚಾಗಿ ಕಾಣಬಹುದು.

ಇದಲ್ಲದೆ ಕಾದಂಬರಿಕಾರರು ಅಪ್ರಸಂಗಿಕನಾಗಿ ಅನುಚಿತ ಸ್ಥಾನದಲ್ಲಿ ಅನುಚಿತ ವಚನಗಳನ್ನು ಸೇರಿಸಿದ್ದನ್ನು ಚನ್ನಾಗಿ ಖಂಡಿಸಿದ್ದದೆ. ಅಲ್ಲದೆ ಕೌಶಿಕ ಹಾಗೂ ಅಕ್ಕಗಳ ನಡುವೆ ಕಾದಂಬರಿಕಾರನು ಹೀನ ಅಸಭ್ಯ ಅನುಚಿತ ಅಯೋಗ್ಯ ರೀತಿಯ ಕಾಲ್ಪನಿಕ ಸಂಭಾಷಣೆಯನ್ನು ಹೆಣದಿದ್ದಾನೆ. ಇದಂತೂ ಭೂಷಣವೇ ಅಲ್ಲ. ಇದು ಅವರ ಸಂಭಾಷಣೆ ಇರದೆ ಕಾದಂಬರಿಕಾರನ ಸ್ವತಃ ಸಂಭಾಷಣೆ ಎಂದೇ ಹೇಳಬೇಕು. ಇದು ಅವನ ಕಾಮುಕ ಹೃದಯನ್ನು ಬಿಚ್ಚಿ ತೋರಿಸುವದು. ಶ್ರೀ ಕೊಟಗಿಯವರು ಇದಕ್ಕೆ ಚನ್ನಾಗಿ ಉತ್ತರ ಕೊಟ್ಟು ಖಂಡಿಸಿದ್ದಾರೆ. ಆದರೆ ಲಿಂಗವಂತನಾಗೆಂದು ಕೌಶಿಕನಿಗೆ ಕೇಳದಳೆಂದು ಯಾಕೆ ನಂಬಿರುವರೋ ನಮಗೆ ತಿಳಿಯದಾಗಿದೆ. ಇದೊಂದೇ ಚಿಕ್ಕ ಪ್ರಶ್ನೆಯಿಂದ ಅಕ್ಕನ ವೈರಾಗ್ಯ ಪೂರ್ಣ ನಿಲುಮೆಗೆ ಕೆಡಕನ್ನು ಬಗೆದಂತೆ ಆಗುವದು.

**೫ ನೇ ಪ್ರಕರಣಃ—** ಬಾಲ್ಯದಿಂದಲೂ ಉತ್ತಮ ರೀತಿಯ ಸಾಧನೆ ಮಾಡಿ ಶಿವನಿಗೆ ತನ್ನ ಗಂಡನೆಂದು ನೆರೆನಂಬಿದ ಅಕ್ಕನು ಕೌಶಿಕನೊ

ಡನೆ ಲಗ್ನವಾಗಿ ಮೂರು ಕರಾರುಹಾಕಿ ರತಿಕ್ರೀಡೆಯಲ್ಲಿ ಸದಾ ರಮಿಸಿ ರಾಜ್ಯಕಾರಭಾರವನ್ನು ಸಹ ಮಾಡಿ ತಿಂಗಳೊಪ್ಪತ್ತಿನಲ್ಲೇ ದಿಗಂಬರಿಯಾಗಿ ವನಕ್ಕೆ ಹೋಗುವಂಥ ಮಹಾವೈರಾಗ್ಯವೆಂದಾದರೂ ಬರುವದು ಶಕ್ಯವಿರುವದೇನು ? ಹೀಗೆ ವೈರಾಗ್ಯಬಂದು ದಿಗಂಬರೆಯಾಗ ಹೊರಟರೆ ಕೌಶಿಕನು ಸುಕ್ಕಟೆ ಬಿಡಬಹುದೇನು ? ಎಂದೂ ಶಕ್ಯವಿಲ್ಲ. ಆಕೆಯನ್ನು ಬಂಧಿಸಿ, ಸೆರೆಮನೆಯಲ್ಲಿ ಅಥವಾ ಮನೆಯಲ್ಲಿ ಇಡಬಹುದಾಗಿತ್ತು. ಜನರಿಂದ ನಿತ್ಯ ಅಕ್ಕನಿಗೆ ಛೀ ಹಾಕಿ ಸಂಸಾರ ಮಾಡೆಂದು ಸಹ ಉಪದೇಶಿಸಬಹುದಾಗಿತ್ತು. ಇವುಗಳನ್ನು ಮಾಡಿಲ್ಲೆಂದಬಳಿಕ ಲಗ್ನವಾಗಿಲ್ಲ. ಲಿಂಗಾಯತಳಾಗೆಂದೂ ಕೇಳಿಲ್ಲ. ಅವನಿಗೆ ತನ್ನ ದಿವ್ಯ ಪ್ರಭಾವ ಬೀರಿ ಹೊರಟಿದ್ದಾಳೆಂದೇ ಸಿದ್ಧವಾಗುವದು. ಹಿಂದೆ ಹೀಗೆ ಯಾವವಾದರೂ ಘಟನೆಗಳು ಸಂಭವಿಸಿರುವವೇನು ? ವಿಷಯಾಸಕ್ತಿಯಲ್ಲಿ ಚನ್ನಾಗಿ ಮುಳುಗಿದ ಅಲ್ಪಕಾಲದಲ್ಲಿಯೇ ಸ್ತ್ರೀಯರಿಗೆ ಮಹಾ ಭಯಂಕರ ವಿರತಿ ಬರುವದು ಎಂದೂ ಶಕ್ಯವಿಲ್ಲ. ಆಕೆಯ ಯೌವ್ವನ ಹೋಗಿಲ್ಲ. ಯಾವ ತರದ ಕೊರತೆಯಾಗಿಲ್ಲ. ಅಂದ ಮೇಲೆ ವಿರತಿ ಎಂದೂ ಬರುವದು ಶಕ್ಯವಿಲ್ಲ. ಇದೆಲ್ಲ ಕಾದಂಬರಿಕಾರನ ಕಾಲ್ಪನಿಕ ಕಾಮುದ ದೃಷ್ಟಿಯ ವಿಚಾರ ಹೊರತು ಸತ್ಯಸಂಗತಿಯಲ್ಲ. ಈ ವೈರಾಗ್ಯವು ಕಾಲ್ಪನಿಕವೇ ಹೊರತು ನೈಸರ್ಗಿಕವಲ್ಲ. ಅಕ್ಕನಿಗೆ ವೈರಾಗ್ಯ ಬಂದು ದಿಗಂಬರಿಯಾಗಿ ಹೊರಟಳೆಂದು ಹೇಳದೆ ಅನೇಕ ವರ್ಷ ಕೌಶಿಕನ ಕೂಡ ವಿಷಯಾಸಕ್ತಿಯಲ್ಲಿ ಮುಳುಗಿ ಕಾಮನ ಕ್ರೀಡೆಯಲ್ಲಿ ರಮಿರುತ್ತಿದ್ದಳೆಂದು ಹೇಳಿದ್ದರೆ ಹೆಚ್ಚಿನ ಸತ್ಯ ಹೇಳಿದಂತೆ ಆಗುತ್ತಿತ್ತೆಂದು ಹೇಳಬಹುದು. "ಒಳಗಿನ ಗಂಡನವ್ವಾ. ಹೊರಗಿನ ಮಿಂಡನನ್ನಾ. ಎರಡನು ನಡಿಸಲು ಬಾರದಯ್ಯ. ಲೌಕಿಕ ಪಾರಮಾರ್ಥಿಕವೆಂಬೆರಡನು ನಡಿಸಲು ಬಾರದಯ್ಯ ಚೆನ್ನಮಲ್ಲಿಕಾರ್ಜುನ. ಬಿಲ್ಲು ಬೆಳವಲಕಾಯಿ ಒಂದಾಗಿ ಹಿಡಿಯಲು ಬಾರದಯ್ಯ" ಈ ವಚನವನ್ನು ಕೌಶಿಕನಾದ ಅಕ್ಕನ ಕಡೆಗೆ ಅವನನ್ನು ಲಗ್ನವಾಗೆಂದು ಕೇಳ ಬಂದ ಸ್ತ್ರೀಪುರುಷರ ಮುಂದೆ ಹೇಳಿದ್ದಾಳೆ. ಯಾಕೆಂದರೆ ಎರಡುಸಲ ಅವ್ವಾ. ಎರಡುಸಲ ಅಯ್ಯ ಎಂದು ಸಂಭೋದಿಸಿದ್ದಾಳೆ. ಇಲ್ಲಿ ಬಿಲ್ಲು ಬೆಳವಲುಕಾಯಿಗೆ ಎಂದೂ ಮೇಳು ಬೀಳುವದಿಲ್ಲ. ಬಿಲ್ಲಿಗೆ ಬಾಣವಾದರೆ ಮೇಳು ಬೀಳುವದು.' ಬಿಲ್ಲನಿಂದ ಬೆಳವಲಕಾಯಿಯನ್ನು ಬಾಣನಂತೆ ಹಾರಿಸಲಿಕ್ಕೆ ಬರಲಾರದು. ಸಂಸಾರ ಬಿಟ್ಟ ತನಗೆ ಸಂಸಾರಿಯಾದ ಕಾಮುಕ ಕೌಶಿಕನ ಕೂಡ ಎಂದೂ ಮೇಳು ಬೀಳುವದಿಲ್ಲೆಂದು ಹೇಳಿದ್ದಾಳೆ. ಲೌಕಿಕ

ಪಾರಮಾರ್ಥಗಳು ಕೂಡಿ ನಡೆಯಲಾರವು. ಕೌಶಿಕನ ಸಂದೇಶಕ್ಕೆ ತನ್ನ ಒಪ್ಪಿಗೆ ಇಲ್ಲೆಂದು ಗಂಭೀರವಾಗಿ ವಚನದಿಂದ ಹೇಳಿಕಳಿಸಿದ್ದಾಳೆ. ಒಳಗೆ ತನ್ನ ಗಂಡನು ಚನ್ನಮಲ್ಲಿಕಾರ್ಜುನನಿರುವನು. ಇನ್ನು ಕೌಶಿಕನ ಕೂಡ ಯಾವದೂ ಶಕ್ಯವಿಲ್ಲ. ಹಾಗಾದರೆ ಒಳಗಿನ ಗಂಡನನ್ನು ಬಿಟ್ಟು ಹೊರಗಿನ ಮಿಂಡನನ್ನು ನೋಡಿದಂತೆ ಆಗುವದು. ಅದಕ್ಕೆ ಒಪ್ಪಿಗೆ ಇಲ್ಲೆಂದು ಕೌಶಿಕನಿಗೆ ತಿಳಿಸಲು ಬಂದ ಸ್ತ್ರೀಪುರುಷರಿಗೆ ತಿಳಿಸಿದಳು. ಅದರಂತೆ —“ಉರದ ಮುಳ್ಳಿನಂತೆ ಪರಗಂಡರೆನಗವ್ವಾ. ಸೋಂಕಲಮ್ಮೆ ಸುಳಿಯಲಮ್ಮೆ ನಂಬಿ ನಚ್ಚಿ ಮಾತಾಡಲಮ್ಮೆನವ್ವಾ. ಚನ್ನ ಮಲ್ಲಿಕಾರ್ಜುನನಲ್ಲದ ಗಂಡನ ಉರದಲ್ಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ.” ಇದನ್ನು ಕೂಡ ಕರೆಯಲಿಕ್ಕೆ ಬಂದವರ ಮುಂದೆ ಅಕ್ಕನು ಹೇಳಿದ್ದಾಳೆ. ಇದರ ಮೇಲಿಂದ ಅಕ್ಕನ ನಿರ್ಧಾರವನ್ನು ನೋಡಿರಿ. ಹೀಗೆ ಆಕೆಯ ಅನೇಕ ವಚನಗಳನ್ನು ವಿಚಾರಿಸಿದರೆ ಲಗ್ನದ ಮಾತನ್ನೇ ಎಂದೂ ಎತ್ತಿಲ್ಲೆಂದು ಧಾರಾಳವಾಗಿ ಹೇಳಬಹುದು. ಇವುಗಳ ಆಧಾರದ ಮೇಲೆ ಕಾದಂಬರಿ ಬರೆಯದೆ ಏನಾದರೊಂದು ಯದ್ವಾ ತದ್ವಾ ಅಬದ್ಧ ಅಸಂಭವ ಕಲ್ಪನೆಯಿಂದ ಕಾದಂಬರಿ, ಕಾವ್ಯ, ರಗಳೆ, ಪುರಾಣಗಳನ್ನು ರಚಿಸಿದರೆ ತೀರಲಿಲ್ಲ. ಎಲ್ಲರೂ ಕುರಿಯಂತೆ ತಲೆತಗ್ಗಿಸಿ ಓದುವದಿಲ್ಲ. ವಿಚಾರಮಾಡುವವರಿದ್ದಾರೆ. ಸಮ್ಯಕ್ ದೃಷ್ಟಿಯವರೂ ಇದ್ದಾರೆ. ಅದಕ್ಕಂತೇ ಶ್ರೀ ಕೊಟಗಿಯವರು ಹಾಗೂ ಶರಣಸೇವಕ ಸಂಘದ ಅಭಿಮಾನಿಗಳೂ, ಹಿಂದಿನ ಎಲ್ಲ ಲೇಖಕರಿಗೆ ಸರಿಯಾದ ಉತ್ತರವನ್ನು ಕೊಟ್ಟು ಬುದ್ಧಿಗಲಿಸಿದ್ದಾರೆ. ಈ ಪ್ರಕರಣವನ್ನು ಬಹು ಮಾರ್ಮಿಕವಾಗಿ ಬರೆಯಲಾಗಿದೆ. ಇದಕ್ಕೆ ತಿರುಗಿ ಸರಿಯಾದ ಉತ್ತರ ಕೊಡುವ ಗಂಡು ಹುಲಿ ಯಾರೂ ದೊರಕಲಾರರು.

**೬ನೇ ಪ್ರಕರಣ:**—ಅಕ್ಕನ ಲಿಂಗಾರ್ಚನೆ, ಲಿಂಗಾನುಸಂಧಾನ, ಲಿಂಗೈಕ್ಯ ನಿಷ್ಠೆ ಬಹು ಅವರ್ಣನೀಯವಿದ್ದವೆಂದು ಆಕೆಯ ದಿವ್ಯ ವಚನಗಳಿಂದ ಸಹಜ ಸಾಮಾನ್ಯರಿಗೂ ತಿಳಿಯುವಂತಿರುವದು. ತನು, ಮನ, ಬುದ್ಧಿ, ಹೃದಯಗಳು ಬಹು ಪರಿಶುದ್ಧವಾಗಿದ್ದವೆಂದು ಆ ವಚನಗಳು ಸೂಚಿಸುವವು. ಅಲ್ಲದೆ ಆಕೆಯ ಲಿಂಗಾರ್ಚನೆ ಅತಿ ನಿಷ್ಕಾಮವಾಗಿತ್ತೆಂದು ಸಹ ಸಹಜ ತಿಳಿಯುವದು. ಇಂಥ ಅಕ್ಕನಿಗೆ ಕಾದಂಬರಿಕಾರನು ಸುಳ್ಳು ಲಗ್ನಮಾಡಿಸಿ ಪೂಜೆಯ ಕಾಲಕ್ಕೆ ಚೇಷ್ಟೆ ಮಾಡುತ್ತ ಅಕ್ಕನನ್ನು ಕೌಶಿಕನು ಮುಟ್ಟಿದನಂತೆ. ಭವಿ ಮುಟ್ಟಿದ್ದರಿಂದ ಅಕ್ಕನು ಆಗ ಪುನಃ ಸ್ನಾನ ಮಾಡಿದಳಂತೆ.

ಹಾಗೆ ಹೀಗೆಂದು ಸುಳ್ಳು ಸೂಳೆಯರ ಲಿಂಗಾರ್ಚನೆಗೆ ಅಕ್ಕನ ಲಿಂಗಾರ್ಚನೆಯನ್ನು ಹೋಲಿಸಿದ್ದಾನೆ. ರಾತ್ರಿ ಕೌಶಿಕನೊಡನೆ ರತಿಕ್ರೀಡೆಯನಾಡಿಸಿ ಚುಂಬನ ಆಲಿಂಗನಗಳನ್ನು ಮಾಡಿಸಿ ಬಿಂದು ರೇತಸ್ಸುಗಳನ್ನು ಕೂಡಿಸಿ ಅವುಗಳನ್ನು ಸ್ಖಲನ ಮಾಡಿಸಿ, ಬೆಳತನಕ ಕುಸ್ತಿ ಹಿಡಿಸಿದ ಕಾದಂಬರಿಕಾರನು ಲಿಂಗಪೂಜೆಯ ಕಾಲಕ್ಕೆ ಅವನು ಭವಿಯಾದರೇನು ? ಇದು ಅವನ ಮಹಾ ಅಪರಾಧ ಮತ್ತು ಪಾಪವೇ ಸರಿ. ಇದನ್ನು ಶ್ರೀ ಕೊಟಗಿಯವರು ಬಹು ಚನ್ನಾಗಿ ಖಂಡಿಸಿದ್ದಾರೆ. ಹೀಗೆ ಜೀವನ ನಡಿಸಿದ ಅಕ್ಕನಿಗೆ ದಿವ್ಯವಾದ ವೈರಾಗ್ಯ ಬರುವದು ಎಂದೂ ಶಕ್ಯವಿಲ್ಲ. ತಳಬುಡವಿಲ್ಲದೆ ಕಾಮುಕರ ಕಡೆಯಿಂದ ದೊಡ್ಡ ಕಾದಂಬರಿಕಾರನೆಂದು ಹೊಗಳಿಸಿಕೊಳ್ಳಲು ಹೀಗೆ ಅಲ್ಲಸಲ್ಲದ ಸಂಗತಿಗಳನ್ನೂ ವರ್ಣನೆಗಳನ್ನೂ ಹಾಕಿದ್ದಾನೆಂದು ಸಕಲರಿಗೂ ತೋರುವದು. ಅರಮನೆಯ ದಾಸಿಯರ ಕುಚೇಷ್ಟೆಯ ಮಾತುಗಳನ್ನು ಹಾಕಿ ಬರೀ ಸುಳ್ಳಿನ ಕಂತೆಯನ್ನೇ ಹೆಣೆದರೆ ಪಂಡಿತನೆಂದೂ ಆಗುವದಿಲ್ಲ. ಅದೆಲ್ಲ ಬರಹಗಾರನ ನೀಚತನ. ಶರಣ ವಿರೋಧಿತನಗಳು ಮಾತ್ರ ಪ್ರಕಟವಾಗುವವು. ಈಪ್ರಕಾರ ಅಪ್ರಸಂಗಿಕವಾಗಿ ವಚನಗಳನ್ನು ಉಪಯೋಗಿಸಿದ್ದಲ್ಲದೆ ಅವುಗಳ ಅರ್ಥವೂ ಕೂಡ ಕಾದಂಬರಿಕಾರನಿಗ ಎಳ್ಳಷ್ಟೂ ತಿಳಿದಿಲ್ಲ. ಆ ವಚನಗಳನ್ನು ತಿಳಿಯಲು ಪಂಡಿತರಿಂ ಬೇಕಾಗಿಲ್ಲ. ಆದರೆ ಸರಳವಾದ ಶುದ್ಧ ಹೃದಯ ತ್ಯಾಗಗಳು ಅವಶ್ಯಬೇಕು. ಇದನ್ನು ಶ್ರೀ ಕೊಟಗಿಯವರು ಸರಿಯಾಗಿ ಕಾದಂಬರಿಕಾರನಿಗೆ ಎಚ್ಚರವಾಗುವಂತೆ ಮಾಡಿದ್ದಾರೆ. ಮೊದಲೇ ಸುಳ್ಳ ಬರೆಯಬಾರದು. ಈ ಮೊದಲಿನ ಸುಳ್ಳನ್ನು ಮುಚ್ಚಿಕೊಳ್ಳಲು ಸಾವಿರಾರು ಹೊಸ ಸುಳ್ಳುಗಳನ್ನು ಹೇಳಬೇಕಾಗುವದು. ಇದರಂತೆ ಕಾದಂಬರಿಕಾರನು ಮೊದಲು ಅಕ್ಕನ ಲಗ್ನವಾಗಿತ್ತೆಂದು ಸುಳ್ಳು ಹೇಳಿದ್ದರಿಂದ ಅನೇಕ ಸುಳ್ಳುಗಳಿಂದ ಕೂಡಿದ ದೊಡ್ಡ ಕಾದಂಬರಿಯನ್ನು ಸುಳ್ಳರಸಲುವಾಗಿ ಬರೆಯಬೇಕಾಯಿತು. ಹೀಗಾಗಿ ಸುಳ್ಳುಗಳ ಹಳೆ ಹರಕ ಕೌದಿಯನ್ನು ಹೆಣೆದಿದ್ದಾನೆ. ಇದಕ್ಕಾಗಿ ಸಮಾಜದ ಪ್ರೀತಿಯನ್ನು ಸಹಜವಾಗಿ ಇವನು ಕಳೆದುಕೊಂಡಿದ್ದಾನೆ.

೭ನೇ ಪ್ರಕರಣ:— ಕೌಶಿಕನೊಡನೆ ಅಕ್ಕನು ಲಗ್ನವಂತೂ ಆಗೇ ಇಲ್ಲೆಂದು ವಚನಗಳ ಮೇಲಿಂದ ಸಹಜ ಕಂಡುಬರುವದೆಂದು ಹಿಂದೆ ಹಾಗೂ ಇನ್ನೊಂದು ಲೇಖಗಳಲ್ಲಿ ಕಾಣಿಸಿದ್ದೇನೆ. ಆದರೂ ಹರಿಹರನು ಬರೆದನೆಂದು

ಕಾದಂಬರಿಕಾರನು ಮೂರು ಕರಾರುಗಳನ್ನು ಹಾಕಿ ಲಗ್ನವಾದಳೆಂದು ಸುಳ್ಳಿನ ಬುರುಡೆಯನ್ನು ಉರುಳಿಸಿದ್ದಾನೆ. ಹೀಗೆ ಆಕೆಯ ವಚನಗಳಲ್ಲಿ ಆಗಲಿ ಶರಣರ ವಚನದಿಂದಾಗಲಿ ತಿಳಿದುಬರುವದಿಲ್ಲ. ಮೊದಲಿನಿಂದಲೂ ನಾವಾಗಲೀ ಶ್ರೀ ಕೊಟಗಿಯವರಾಗಲಿ ಲಗ್ನವೇ ಆಗಿಲ್ಲ ಎಳ್ಳಷ್ಟು ಸಂಸಾರ ಮಾಡಿಲ್ಲ ಎಂಬ ಧೋರಣೆಯನ್ನು ವಚನಗಳ ಆಧಾರಗಳಿಂದ ತಳೆದವರಾಗಿದ್ದೇವೆ. ಕಾದಂಬರಿಕಾರನು ಕುತ್ಸಿತತನದಿಂದ ಕೌಶಿಕನು ಕರಾರುಗಳನ್ನು ಮುರಿದೇ ಮುರಿಯುವನೆಂದು ತಿಳಿದೇ ಲಗ್ನವಾದಳೆಂದೂ ಹೀಗಾದರೆ ಕೌಶಿಕನನ್ನು ತೊರೆದು ಹೋಗುವೆನೆಂದೂ ಅಕ್ಕನು ತಿಳಿದಿದ್ದಳೆಂದು ತಮ್ಮ ಮನಸ್ಸಿನ ಹೀನ ಕುತ್ಸಿತ ಕಪಟ ವಿಚಾರಗಳನ್ನು ಹೇಳಿರುವರು. ಅಕ್ಕನು ಹೆಣ್ಣುಮಗಳು ಅಬಲೆ. ಕೌಶಿಕನು ರಾಜನು ಅವನು ಕರಾರು ಮುರಿದನೆಂದು ತಿಳಿದರೂ ಅಕ್ಕನನ್ನು ಹೀಗೆ ದಿಗಂಬರೆಯಾಗಿ ಹೊರಗೆ ಬಿಡಲಿಕ್ಕೆ ಅವನೇನು ಹೇಡಿ ಷಂಡನಿದ್ದಿದ್ದಿಲ್ಲ. ಸಾಮಾನ್ಯರು ಹೆಣ್ಣಿನ ಯಾವ ರಂಭಾಟವನ್ನು ಕೇಳುವದಿಲ್ಲ. ಗುದ್ದಿ ಬಡಿದು ಹೊಡೆದು ಅವಳನ್ನು ಹೇಳಿದಂತೆ ಡೊಗ್ಗಿಸುವರು. ಹೀಗಿದ್ದ ಬಳಿಕ ಅಕ್ಕನನ್ನು ಎಂದಾದರೂ ಅರಸನು ಕರಾರು ಮುರಿದದ್ದಕ್ಕೆ ಆಕೆಯನ್ನು ಕೇಳುವದು ಶಕ್ಯವಿಲ್ಲ. ಅಕ್ಕನು ಸಾಮಾನ್ಯ ಸ್ತ್ರೀ ಇದ್ದರೆ ಹೊಡೆದು ಬಡಿದು ಕೋಣೆಯಲ್ಲಿ ಬಂಧಿಸಿ ಹೇಗಾದರೂ ಮಾಡಿ ಹಾದಿಗೆ ತರುತ್ತಿದ್ದನು. ಅವನು ಅರಸನಿದ್ದುದರಿಂದ ಆಕೆಯ ಕರಾರು ಗಿರಾರುಗಳನ್ನೆಂದೂ ಕೇಳುವದು ಶಕ್ಯವೇ ಇಲ್ಲ. ಅದರಲ್ಲಿ ಕಾಮಾಂಧನು ಅವರಿಗೆಲ್ಲಿಯ ಕಾಯ್ದೆ, ಕರಾರು ಕಾನೂನುಗಳು ಹೇಳಿ ನೋಡುವಾ? ಇವೆಲ್ಲ ಷಂಢರಾದ ಹೇಡಿಗಳ ಮಾತು. ಅಲ್ಲದೆ ಅಕ್ಕನು ವೀರ ವಿರಾಗಿಣಿಯಾಗಿದ್ದಳು. ಅದಕ್ಕೆ ಏನೂ ನಡೆದಿಲ್ಲ. ಇದರಲ್ಲಿ ಅಕ್ಕನ ವೀರತನದ ತ್ಯಾಗ, ವೈರಾಗ್ಯಗಳನ್ನು ಅರಿಯಬಹುದು. ಈ ಕುರುಡ ಕಾದಂಬರಿಕಾರನು ಇವುಗಳನ್ನು ಅರಿಯುವದು ಶಕ್ಯವಿಲ್ಲ. ಶಿವಶರಣರು ಅಕ್ಕನನ್ನು ಯಾವ ಪ್ರಕಾರ ಹೊಗಳಿದ್ದಾರೆಂಬುದನ್ನಾದರೂ ಈ ಕವಿಗಳೂ ಕಾದಂಬರಿಕಾರನೂ ವಿಚಾರಿಸಿ ಬರೆದಿದ್ದರೆ ಬಹು ನೆಟ್ಟಗಾಗುತ್ತಿತ್ತು.

ಪರರ ಕಲ್ಯಾಣಕ್ಕಾಗಿ ಮಹಾತ್ಮರು ಸ್ವಾರ್ಥ ತ್ಯಾಗವನ್ನೂ ಸ್ವತ್ಯಾಗವನ್ನೂ ಮಾಡಿದರು. ಆದರೆ ಮಹಾ ಭಯಂಕರ ವಿಷಯ ಲಂಪಟನಿದ್ದನೆಂದು ಉದಾಹರಣೆ ಕೊಟ್ಟು ಯಾರಾದರೂ ಕವಿಗಳು, ಕಾದಂಬರಿಕಾರರು ಬರೆದರೆ ತತ್ವಕ್ಕೆ ವಿರೋಧವಾಗುವದಿಲ್ಲವೇನು ? ಇದರಂತೆ ಅಕ್ಕನ

ಬಗೆಗೆ ಬರೆಯುವಾಗ ಪ್ರಮಾದ ಮಾಡಿದ್ದಾರೆ. ಮೊದಲಿನ ಹೇಳಿಕೆಗೂ ಹಿಂದಿನ ಹೇಳಿಕೆಗೂ ತಾಳಮೇಳವಿರಬೇಕು. ಅಂದರೆ ಬರೆದದ್ದು ಸರಿಯಾಗುವದು. ಒಬ್ಬನು ನಿತ್ಯಯು ಎತ್ತೇಚ್ಛವಾಗಿ ಊಟಮಾಡುತ್ತಿದ್ದರೂ ಎಂದೂ ಮಲಮೂತ್ರಗಳನ್ನು ಬಿಡುವದೇ ಇಲ್ಲೆಂದು ಹೇಳಿದಂಥ ಮಹಾಪರಾಧವನ್ನು ಈ ಕವಿಗಳೂ ಕಾದಂಬರಿಕಾರರೂ ಮಾಡಿದ್ದಾರೆ. ಇದನ್ನು ಶ್ರೀ ಕೊಟಗಿಯವರು ಚನ್ನಾಗಿ ಖಂಡಿಸಿದ್ದಾರೆ. ತಿರುಗಿ ಉತ್ತರಿಸದಂತೆ ಆಧಾರಸಹಿತ ಬರೆದಿದ್ದಾರೆ. ಅಕ್ಕನು ತನ್ನ ಬಾಲ್ಯದಲ್ಲಿಯೇ ಮಾಡಿಕೊಂಡ ಧ್ಯೇಹ ಚುತಿಯನ್ನೆಂದೂ ಮಾಡಿಲ್ಲೆಂದು ಆಕೆಯ ನ್ಯಾಯನಿಷ್ಠುರ ಸತ್ಯ ವಚನಗಳಿಂದ ಸಹಜ ಹೊಳೆಯುವದು. ಕಾದಂಬರಿಕಾರನ ಮಂಗನಂತಿದ್ದ ಮನಸ್ಸು ಸಿಕ್ಕ ಸಿಕ್ಕಂತೆ ತರ್ಕಿಸಿ, ಅಕ್ಕನ ಚರಿತೆಯನ್ನು ಹೆಣೆದರೆ ಆ ಪುಸ್ತಕಗಳು ಬಹುವಾಗಿ ಮಾರಿ ಹಣಗಳಿಸುವೆನೆಂಬ ದುರಾಶೆಯಿಂದ ಶರಣಿ ಶಿಖಾಮಣಿಗೆ ಕಲಂಕವನ್ನು ಹಚ್ಚಲಿಕ್ಕೆ ಯತ್ನಿಸಿದರೆ ಆ ಕಲಂಕವು ಕಾದಂಬರಿಕಾರನಿಗೇ ಹತ್ತುವದು. ಕಾದಂಬರಿಕಾರನು ಸೂರ್ಯನ ಮೇಲೆ ಉಗುಳಲಿಕ್ಕೆ ಹೊರಟಂತೆ ಮಾಡಿದ್ದಾನೆ. ಶ್ರೀ ಕೊಟಗಿಯವರು ಇದರಲ್ಲಿ ಶರಣರ ಹಾಗೂ ಅಕ್ಕನ ವಚನಗಳನ್ನು ಸಮಯೋಚಿತ ಉಪಯೋಗಿಸಿದ್ದಾರೆ.

೮ನೇ ಪ್ರಕರಣ:— ಇದರಲ್ಲಿ ಕಾದಂಬರಿಕಾರನು, ಅಕ್ಕನು ಶ್ರೀಗಿರಿಗೆ ಲಿಂಗೈಕ್ಯವಾಗಲಿಕ್ಕೆ ಬಂದಾಗ ಕಡೆಯ ಪರಿಪೂರ್ಣ ಸ್ಥಿತಿಯ ಅವಸಾನ ಕಾಲದಲ್ಲಿಯೂ ಕೂಡ ಅಕ್ಕನಿಗೆ ಕಲಂಕ ಹಚ್ಚಲು ಯತ್ನಿಸಿದ್ದಾನೆ. ಇದನ್ನು ಹರಿಹರನ ಆಧಾರದಿಂದ ಚಿತ್ರಿಸಿದನು. ಕಟ್ಟ ಮನಿಯಷ್ಟೇ ಹರಿಹರನೂ ಪಂಡಿತನೆಂದು ಇದರ ಮೇಲಿಂದ ಹೇಳಬಹುದು. ಕೌಶಿಕನನ್ನು ಅಗಲಿ, ವನದಲ್ಲಿ ಸಂಚರಿಸಿ, ಕಲ್ಯಾಣದಲ್ಲಿ ವಾಸಿಸಿ, ಶ್ರೀಶೈಲಕ್ಕೆ ಲಿಂಗೈಕ್ಯವಾಗಲಿಕ್ಕೆ ಹೋಗುವ ತನಕ ಹತ್ತುವ ವರ್ಷಗಳ ಪರಿಯಂತರ ಕೌಶಿಕನು ರಾಜಕಾರಭಾರ ಬಿಟ್ಟು, ಸಂಸಾರ ಬಿಟ್ಟು, ಬರೀ ಅಕ್ಕನ ವಿರಹ, ಧ್ಯಾನ ಚಿಂತೆಗಳಲ್ಲಿಯೇ ಕಾಲ ಕಳೆದು ಸೊರಗಿ ಸಣ್ಣಾದನೇನು ? ಇಂಥ ಕಾಮುಕ ಕೌಶಿಕನು ಮೊದಲು ಆಕೆಯನ್ನು ಬಿಟ್ಟನೇಕೆ ? ಆಗೇ ಬೆನ್ನು ಹತ್ತಿ ಕಾನನಕ್ಕೆ ಏಕೆ ಹೋಗಲಿಲ್ಲ ? ಅಲ್ಲದೆ ಕಲ್ಯಾಣಕ್ಕೆ ಲಿಂಗಧಾರಿಯಾಗಿ ಸನ್ಯಾಸಿಯಾಗಿ ಯಾಕೆ ಹೋಗಲಿಲ್ಲ ? ಅಲ್ಲಿ ಅವನು ಬಂದಿದ್ದರೆ ಛೀ ! ಥೂ ! ಹಾಕುವವರೇ ಇರುವರೆಂದು ಬರಲಿಲ್ಲವೇನು ? ಇದೆಲ್ಲ ಹರಿಹರನ

ಹೊಲಸು. ವಿಚಾರ ರಗಳೆಯು ಕಾದಂಬರಿಯನ್ನೇ ಬರೆದಿದ್ದಾನೆ. ಇವನನ್ನು ನೋಡಿ ಉಳಿದವರೂ ತಪ್ಪಿದ್ದಾರೆ. ವಿಚಾರ ಸ್ವಾತಂತ್ರ್ಯವನ್ನೇ ಕಳೆದುಕೊಂಡಿದ್ದಾನೆ. ಹರಿಹರನು ತನ್ನ ರಗಳೆಯಲ್ಲಿ ಅನುಭವ ಮಂಟಪವನ್ನು ಏಕೆ ತಂದಿಲ್ಲೆಂದು ಶ್ರೀ ಕೊಟಗಿಯವ ೧ ಬಹು ಮಾರ್ಮಿಕವಾಗಿ ಸವಾಲು ಹಾಕಿದ್ದಾರೆ. ಅಂದರೆ ಹರಿಹರನು ಶರಣವಿರೋಧಿ ಎಂದು ಅನಿಸುವದು. ಇವನು ಪಂಚಾಚಾರ ಬಣದವನಿರಬಹುದೆಂದು ಶಂಕೆ ಬರುವದು. ಅದರಂತೆ ಬಸವರಾಜ ಕಟ್ಟಿಮನಿಯವರೂ ಇರಬಹುದೆಂದು ಅನಿಸುವದು. ಅನ್ಯ ಸಮಾಜದವರು ತಮ್ಮ ಗುರುಹಿರಿಯರ ಅಲ್ಪ ಚರಿತೆಯನ್ನು ಬಹುವಾಗಿ ಬೆಳೆಸಿ ಹೇಳುವರು. ಆದರೆ ಎಲ್ಲರಿಗಿಂತಲೂ ಬಹು ದಿವಸ ಭವ್ಯ ತ್ಯಾಗದ ಶ್ರೇಷ್ಠ ಚರಿತೆಯನ್ನು ಇದ್ದಕ್ಕಿದ್ದಂತೆ ಸಹ ಬರೆಯದೆ ಕೆಡಿಸಿ ಬರೆದರೆ ಇವರು ಯಾವ ಮತದವರೆಂದು ನಾವು ಕೇಳಬೇಕಾಗುವದು. ಕವಿಯು ಏನಾದರೊಂದು ಕಲ್ಪಿಸಿ, ಮಹಾ ಶರಣರಿಗೆ ಕೀಳಾಗಿ ಬಗೆದು ಬರೆದರೆ ಎಂಥ ಮಹಾ ಅಪರಾಧ ಮಾಡಿದಂತೆ ಆಗುವದು ? ವಿಚಾರಿಸಿರಿ. ಇವೆಲ್ಲ ಅಕ್ಕಮ್ಮ ಅಪರಾಧಗಳು. ಇದನ್ನು ಶ್ರೀ ಕೊಟಗಿಯವರು ಚನ್ನಾಗಿ ಆಧಾರಸಹಿತವಾಗಿ ಖಂಡಿಸಿದ್ದಾರೆ. ಈ ರಗಳೆಯು ಕಾದಂಬರಿಯು ಪುಸ್ತಕಗಳನ್ನು ಮುಟ್ಟಿದರೂ ಕೂಡ ಮಹಾ ಪಾಪ ಬರುವದು. ಹೀಗಿದ್ದ ಇವುಗಳನ್ನು ಓದಿದವರ ಗತಿಯನ್ನು ವಿಚಾರಿಸಿರಿ. ಇವುಗಳಲ್ಲಿ ಯಾವ ತಾಳು ಮೇಳುಗಳೇ ಇರುವದಿಲ್ಲ. ಆಗ ಕೌಶಿಕನನ್ನು ನೋಡಿ ಅಕ್ಕನು ಮುಗುಳುನಗೆ ಬೀರಿದಳೆಂದು ಬರೆಯಲು ಲೇಖಣಿ ಹೇಗೆ ಒಪ್ಪಿತು? ತುಟ್ಟ ತುದಿಯಲ್ಲಿ ಅಕ್ಕನಿಗೆ ಕಲಂಕ ತರಲು ಯತ್ನಿಸಿದ್ದರ ದ್ಯೋತಕವಿದಾಗಿದೆ. ಇದನ್ನು ಶ್ರೀ ಕೊಟಗಿಯವರು ಚನ್ನಾಗಿ ಖಂಡಿಸಿದ್ದಾರೆ.

**೯ನೇ ಪ್ರಕರಣ:—** ಕಾದಂಬರಿಕಾರನ ಅಕ್ಕಮ್ಮ ಅಪರಾಧಗಳನ್ನು ಬಹು ಚನ್ನಾಗಿ ಇದರಲ್ಲಿ ಎತ್ತಿ ತೋರಿಸಿದ್ದು ಬಹು ಉತ್ತಮವಾಗಿದೆ. ಅಲ್ಲದೆ ಒಳ್ಳೇ ಧೈರ್ಯದ ಕೆಲಸವೂ ಆಗಿದೆ. (೧) ಅಕ್ಕನನ್ನು ಕಾದಂಬರಿಗೆ ಹಾಕಿದ್ದು (೨) ಏಕಾಭಿಪ್ರಾಯವಿಲ್ಲದ ಹರಿಹರನನ್ನು ಅನುಸರಿಸಿ ಕಾದಂಬರಿಕಾರರು ಅಕ್ಕನಿಗೆ ದಾಂಪತ್ಯಜೀವನಕ್ಕೆ ಹಚ್ಚಿದ್ದು. (೩) ತಂದೆ ತಾಯಿಗಳ ಮೇಲೆ ಬಂದ ಗಂಡಾಂತರವಂತೆ. ಅದನ್ನು ಉಳಿಸಲು ಕರಾರು ಹಾಕಿ ಲಗ್ನವಾದಳಂತೆ. ಕರಾರು ಮುರಿದ ಮೇಲೆ ದಿಗಂಬರೆಯಾಗಿ ಹೋದಳಂತೆ. ಹೀಗೆ

ಪುರಾಣ, ರಗಳೆ, ಕಾದಂಬರಿಯಿಂದ ಅಕ್ಕನನ್ನು ಅಳೆದುದು ತಪ್ಪು. ಆಕೆ ಯನ್ನು ಐತಿಹಾಸಿಕ ದೃಷ್ಟಿಯಿಂದ ವಚನಗಳ ಆಧಾರದಿಂದ ನೋಡದಿರು ವದು ಮಹಾಪರಾಧ. (೪) ವೀರಶೈವ ಸಂಸ್ಕೃತಿ ಹಾಗೂ ಸಿದ್ಧಾಂತದ ಕೊಲೆ ಮಾಡುವ ಅಲ್ಲದ ಸಲ್ಲದ ಕುಹಕ ಕುಚೇಷ್ಟೆಗೆ ಇಂಬುಗೊಡುವ ಕೆಲವು ಲೇಖಗಳನ್ನು ಆಧಾರವಾಗಿಟ್ಟುಕೊಂಡದ್ದು ಸಹ ಮಹಾಪರಾಧ (೫) ಗಿರಿಯು ನವಿಲೆಂದು ಕಾದಂಬರಿಗೆ ಹೆಸರಿಟ್ಟದ್ದು ಒಳ್ಳೇ ಹೆಚ್ಚಿನ ಪ್ರಮಾದ. (೬) ಅಕ್ಕನ ಹಾಗೂ ಸಮಕಾಲೀನ ಶರಣರ ವಚನಗಳ ಆಧಾರವನ್ನು ಕಣ್ಣೆತ್ತಿ ನೋಡದೆ ಬಿಟ್ಟದ್ದು ಅತಿ ಹೆಚ್ಚಿನ ಪ್ರಮಾದ. ಇವೆಲ್ಲ ಅಪರಾಧಗಳು ಅಕ್ಕನ ನೈಜ ಚರಿತೆಯಿಂದ ಬಹುದೂರ ಇರುವವು. ಅಕ್ಕನ ವಚನಗಳಿಂದ ಶರಣರ ವಚನಗಳಿಂದ ಅಕ್ಕನನ್ನು ನೋಡಲೇ ಬೇಕು ಹೊರತು ಉಳಿದ ಯಾವುದರಿಂದಲೂ, ಎಂದೂ ಯಾರೂ ನೋಡಕೂಡದು. ಇವನ್ನು ಶ್ರೀ ಕೊಟಗಿಯವರು ಚನ್ನಾಗಿ ವಿವರಿಸಿದ್ದಾರೆ.

**೧೦ನೇ ಪ್ರಕರಣ:**— ಇನ್ನು ಚಾಮರಸ, ಗುಳೂರ ಸಿದ್ಧವೀರಣಾ ರ್ಯರ., ಹರಿಹರ ಚನ್ನಬಸವಾಂಕರನ್ನು ತಪ್ಪು ಮಾಡಿಲ್ಲ. ಆದರೂ ಒಂಬ ತ್ತನೇ ಪ್ರಕರಣದಲ್ಲಿ ಹಾಗೂ ಹತ್ತರಲ್ಲಿ "ಉಡುತಡಿಯ ಮಹಾದೇವಿಯಕ್ಕ ನೆಂಬ ನಾಮಮಂ ಧರಿಸಿ, ಲಿಂಗಧಾರಣವಾಗಲೊಲ್ಲೆವೆಂದ ಭವಿಯ ಸೋಂಕದೆ ಅಂಗ ಸಂಗಮಂ ತೊರೆದು" ಮುಂತಾಗಿ ಬರೆದುದು ಸಹ ನಮಗೆ ಸರಿ ಎನಿಸುವದಿಲ್ಲ. ಹಿಂದಿನ ವಿವರಣೆ ಹಾಗೂ ಮತ್ತೊಂದು ನಮ್ಮ ಲೇಖದ ಲ್ಲಿಯ ವಿಚಾರದಂತೆ ಅಕ್ಕನು ಕೌಶಿಕನಿಗೆ ಲಿಂಗಧಾರಣೆ ಮಾಡಿಕೊಂಡರೆ ಲಗ್ನವಾಗುತ್ತೇನೆಂದು ಸಹ ಕೇಳಿಲ್ಲ. ಹಾಗೆ ಕೇಳಿದ್ದರೆ ನಿಜವಾದ ಅಕ್ಕನ ತತ್ವ, ಸಿದ್ಧಾಂತ, ಸಾಧನ, ಸ್ಥಿತಿ, ಸಿದ್ಧಿ, ಅನುಭವಗಳನ್ನೆಲ್ಲ ಕೊಲೆಮಾಡಿ ದಂತೇ ಆಗುವದು. ಮೊದಲೇ ಶಿವನ ಕೂಡ ಲಗ್ನವಾಗಿತ್ತು. ಎರಡನೇ ಸಲ ಲಗ್ನವಾದರೆ ಒಳಗಿನ ಗಂಡ ಹೊರಗಿನ ಮಿಂಡ ಎರಡನು ನಡಿಸಲು ಬಾರದು. ಸಂಸಾರ ಪಾರಮಾರ್ಥಗಳೆರಡನ್ನೂ ಕೂಡಿ ನಡಿಸಬಾರದು ಎಂದು ವಚನಗಳನ್ನು ಎಂದೂ ಅಕ್ಕನು ಹಾಡುತ್ತಿರಲಿಲ್ಲ. ಇದರಂತೆ ಇದಕ್ಕೆ ಸಂಬಂಧಿ ಸಿದ ಅನೇಕ ವಚನಗಳನ್ನು ಸಹ ವಿಚಾರಿಸಿದರೆ ಕೌಶಿಕನಿಗೆ ಲಿಂಗಧಾರಿ ಯಾದರೆ ಲಗ್ನವಾಗುವೆನೆಂದು ಎಂದೂ ಕೇಳಿಲ್ಲೆಂದೇ ಹೊಳೆಯುವದು. ಮೊದಲೇ ತ್ಯಾಗ ಜೀವಿ ಸಂಸಾರಕ್ಕೆ ಎಂದೂ ಎಳೆಸುವದು ಶಕ್ಯವಿಲ್ಲ. ೧೫,

೧೬ ವರ್ಷಗಳಲ್ಲಿ ಲಗ್ನದ ಬಗ್ಗೆ ತಾಯಿ-ತಂದೆ, ಬಂಧು-ಬಳಗ, ಬೀಗರು ವಿಚಾರಿಸಲೇ ಬೇಕು. ಅವರಿಗೆಲ್ಲ ನಕಾರದಲ್ಲೇ ಉತ್ತರಿಸಿದ್ದಾಳೆ. ಲಗ್ನದ ಬಗ್ಗೆ ವಿಚಾರಿಸಿದಾಗ ಎಲ್ಲರಿಗೂ ಅವೇ ವಿಚಾರಗಳಿಂದಲೇ ಉತ್ತರ ಕೊಟ್ಟಿದ್ದಾಳೆ. ಆಕೆ ನಿಷ್ಠಾವಂತಳು. ಯಾರಿಗೂ ಅಂಜುವವಳಲ್ಲ. ಯಾರ ಸಾರವತ್ತು ಬಿಡೆಗಳಿಗೂ ಒಳಗಾಗುವಳಲ್ಲ. ಅದಕ್ಕೆ ಚಾಮರಸನಾಗಲಿ ಗೂಳೂರ ಸಿದ್ಧವೀರಣಾರ್ಯನಾಗಲಿ ಇದರಲ್ಲಿ ನಿಜವಾಗಿ ತಪ್ಪಿದ್ದಾರೆಂದು ಧೈರ್ಯವಾಗಿ ಹೇಳಬಲ್ಲೆವು. ಶ್ರೀ ಕೊಟಗಿಯವರು ಎಲ್ಲರನ್ನು ಖಡಾಖಡಿಯಾಗಿ ಸರಿಯಾಗಿ ಚನ್ನಾಗಿ ಯೋಗ್ಯವಾಗಿ ಖಂಡಿಸಿದರೂ ಇವರಿಬ್ಬರನ್ನು ಏಕೆ ಖಂಡಿಸಲಿಲ್ಲೆಂದು ನಾವು ವಿಚಾರಕ್ಕೆ ಒಳಗಾಗಿದ್ದೇವೆ. ವಚನಗಳನ್ನು ಪರಿಪೂರ್ಣ ಅಭ್ಯಸಿಸಿ ನಿಜ ಅರ್ಥ ತಿಳಿದರೆ ಈ ಕೌಶಿಕನ ಲಿಂಗಧಾರಣೆಯ ಪ್ರಶ್ನೆಯೂ ಕೂಡ ಸುಳ್ಳೆನಿಸದೆ ಬಿಡುವದಿಲ್ಲ. ಕೌಶಿಕನಿಗೆ ಲಿಂಗಧಾರಣೆ ಮಾಡಿಕೊಳ್ಳುವ ಮಾತೇನು ದೊಡ್ಡದಲ್ಲ. ಅಕ್ಕ ನಿಜವಾಗಿ ಕೇಳಿದ್ದರೆ ಅರಸನು ಕೂಡಲೇ ಒಪ್ಪದೇ ಬಿಡುತ್ತಿರಲಿಲ್ಲ. ಮೊದಲೇ ಕಾಮಾತುರ ಅಂಥ ಅರಸನಿಗೆ ಲಜ್ಜೆ ನಾಚಿಕೆಗಳು ಇರುವದಿಲ್ಲ. ಲಿಂಗ ಕಟ್ಟಿಕೊಂಡರೆ ಕೌಶಿಕನದೇ ಎಂಗಂಟುಹೋಗುತ್ತಿರಲಿಲ್ಲ. ಅದೇನು ಅವನಿಗೆ ದೊಡ್ಡ ಸಮಸ್ಯೆಯಲ್ಲ. ಅವನು ಒಂದೇ ಏಟಿಗೆ ಒಪ್ಪಿಕೊಳ್ಳಬಹುದಾಗಿತ್ತು. ಇದೇನು ಅರಸನಿಗೆ ಬಹು ಬಿಗಿ ಕಠಿಣ ಆಗಿರುವ ಮಾತಲ್ಲ. ಲಿಂಗಾಯತನಾದವನ ಕೂಡ ಅಕ್ಕನು ಕಾಮ ಕೇಳಿಯಲ್ಲಿ ಕಾಲಕಳೆದರೆ ಆಕೆಯ ನಿಷ್ಠೆ ನಿಯಮ ಸಾಧನ ವ್ರತ ಮೊದಲಾದವುಗಳಿಗೆ ಭಂಗ ಬರುತ್ತಿರಲಿಲ್ಲವೇನು? ಅಥವಾ ಇದಕ್ಕೂ ಮೊದಲೇ ಆಕೆ ಏಕೆ ಲಿಂಗಾಯತರನ್ನು ಲಗ್ನವಾಗುತ್ತೇನೆಂದು ಹೇಳಬಾರದು? ಇವು ಯಾವವೂ ಆಗಿಲ್ಲ. ಕೇಳಿದ ಎಲ್ಲರಿಗೂ ಮೊದಲೇ ಶಿವನ ಕೂಡ ಲಗ್ನವಾಗಿದೆ. ಎರಡನೇ ಲಗ್ನದ ಮಾತೇ ಇಲ್ಲ ಎಂದು ಎಲ್ಲರಿಗೂ ಹೇಳಿದ್ದಾಳೆಂದೇ ಆಕೆಯು ಯಾರಕೂಡ ಲಗ್ನವನ್ನೇ ಆಗಿಲ್ಲ. ಕೌಶಿಕನು ಲಿಂಗಾಯತನಾದರೆ ಲಗ್ನವಾಗುವೆನೆಂದು ಹೇಳಿದ್ದರೆ ಆಕೆಯ ಮನದಲ್ಲಿ ಲಿಂಗಾಯತರನ್ನು ಲಗ್ನವಾಗಬೇಕೆಂದೇ ಬಯಸುತ್ತಿದ್ದಳೆಂದು ಸಿದ್ಧವಾಗುವದಿಲ್ಲವೇ? ಆದರೆ ಈಕೆಯನ್ನು ಆ ಕಾಲದ ಎಲ್ಲ ಲಿಂಗಾಯತರು ಲಗ್ನವಾಗಲಿಕ್ಕೆ ಒಲ್ಲೆಂದರೆಂದು ಅರ್ಥವಾಗುವದು. ಈಕೆಗೆ ಲಿಂಗಾಯತ ವರನು ಸಿಗಲಾರದಕ್ಕಾಗಿ ಜೈನನನ್ನು ಲಿಂಗಾಯತನನ್ನಾಗಿ ಮಾಡಿಯಾದರೂ ಲಗ್ನವಾಗಬೇಕೆಂದು ಆಕೆಯ ಬಯಕೆ ಇತ್ತೆಂದು ಹೇಳಿದಂತೆ ಆಗುವದು. ಇವೆಲ್ಲ

ವುಗಳು ಅಸಂಭವನೀಯು. ಲಿಂಗಾಯತ ಅರಸರು ಈಕೆಗೆ ಲಗ್ನವಾಗಲಿಕ್ಕೆ ಸಿಗಲಾರದಕ್ಕಾಗಿ ಜೈನನನ್ನಾದರೂ ಲಿಂಗಧಾರಣ ಮಾಡಿಸಿ ಲಗ್ನವಾಗಬೇಕೆಂದು ಮನಸ್ಸು ಮಾಡಿದ್ದಾಳೆಂದು ಮತ್ತೊಂದು ರೀತಿಯಿಂದ ಹೇಳಿದಂತಾಗುವದು. ಸದಾ ಲಿಂಗಾಯತರಿಂದ ಚಯನಿ ಐಷ ಆರಾಮ ಕೇಳಿ, ರತಿ ಕ್ರೀಡೆಗಳು, ಆಲಿಂಗನ ಮುದ್ದುಗಳು ಅಷ್ಟು ಸಿಗುವದಿಲ್ಲೆಂದು ತಿಳಿದು ಜೈನ ರಾಜನನ್ನು ಲಿಂಗಾಯತನನ್ನಾಗಿ ಮಾಡಿ, ಲಗ್ನವಾಗಿ, ರಾಣಿಯಾಗಿ ಅವುಗಳನ್ನೆಲ್ಲ ಭೋಗಿಸಬೇಕೆಂದು ಅಕ್ಕನ ಮನಸ್ಸಿನಲ್ಲಿ ಇತ್ತೆಂದು ಮತ್ತೊಂದು ರೀತಿಯಿಂದ ಹೇಳಿದಂತೆ ಆಗುವದು. ಇವುಗಳನ್ನೆಲ್ಲವನ್ನು ವಿಚಾರಿಸಿದರೆ ಕೌಶಿಕನಿಗೆ ಲಿಂಗಧಾರಣ ಮಾಡಿದರೆ ಲಗ್ನವಾಗುವೆನೆಂದು ಸಹ ಅಕ್ಕನು ಎಂದೂ ಕೇಳಲೇ ಇಲ್ಲೆಂದು ಸಿದ್ಧವಾಗುವದು. ವಚನಗಳ ಹೊರತು ಉಳಿದ ಆಧಾರಗಳೇ ಸುಳ್ಳೆಂದು ಹೇಳುವಾಗ ಚಾಮರಸ ಹಾಗೂ ಗೂಳೂರ ಸಿದ್ಧ ವೀರಣಾರ್ಯರ ಆಧಾರಗಳೂ ತಾನೇ ಸುಳ್ಳಾಗಿ ಹೋಗುವವು. ಕೌಶಿಕನು ಅಕ್ಕನನ್ನು ತನ್ನ ಭೋಗ್ಯ, ರತಿಕ್ರೀಡೆಯ ವಸ್ತುವನ್ನಾಗಿ ಇಟ್ಟುಕೊಳ್ಳಲು ಎಲ್ಲ ಉಪಾಯ ಹಾಗೂ ಯೋಜನೆಗಳನ್ನು ಮಾಡಿ ನಿರಾಶನಾಗಿ, ನಿರುಪಾಯನಾಗಿ ಸೋತು, ಅಕ್ಕನನ್ನು ಬಿಟ್ಟು ಬಿಟ್ಟಿದ್ದಾನೆ. ಅಕ್ಕನ ಪ್ರಭಾವ ಸಿದ್ಧಿಗಳನ್ನು ಕಂಡು ದಿಗಂಬರಿಯಾಗಿ ಹೋಗಲು ಬಿಟ್ಟಿರುವನು. ಸಾಮಾನ್ಯ ಸ್ತ್ರೀಯಳಾಗಿದ್ದರೆ ಆಕೆಯನ್ನು ಕೆಲವು ದಿನ ಒಪ್ಪಿಕೊಳ್ಳುವತನಕ ಸೆರೆಮನೆಯಲ್ಲಿ ಬಂಧಿಸಿ ಬಿಡಬಹುದಾಗಿತ್ತು. ಇದನ್ನೇನೂ ಆತನು ಮಾಡಿಲ್ಲ. ಆಕೆಯ ಪ್ರಭಾವಕ್ಕೆ ಅಂಜಿ ಬೆರಗಾಗಿ ಎಲ್ಲ ಉಪಾಯಗಳ ಕೈ ಬಿಟ್ಟಿರುವನು. ಆಕೆಯನ್ನು ಕೌಶಿಕನು ಹೀಗೆ ಬಿಡುವದರಿಂದಲೇ ನಿಜವಾಗಿ ಅಕ್ಕನಲ್ಲಿ ಪ್ರಭಾವ ಮಹಿಮೆ ಇತ್ತೆಂದು ಸಹಜ ಅನಿಸದೆ ಬಿಡುವದಿಲ್ಲ. ಆಗ ಹೇಳಿದ ವಚನಗಳನ್ನು ವಿಚಾರಿಸಿದರೂ ಸಹ ವಾಚಕರಿಗೆ ಹೊಳೆಯುವಂತಿದೆ. ಇದೆಲ್ಲ ಘಟನೆ ಸಾಮಾನ್ಯರಿಗೆ ಘಟಿಸುವದು ಎಂದೂ ಶಕ್ಯವಿಲ್ಲ. ಇದು ಒಳ್ಳೇ ಅಕ್ಕನಿಗೆ ಬಂದ ಕಠಿಣ ಬಿಗಿ ಪ್ರಸಂಗ. ಇಂಥದರಿಂದ ಸಹಜ ಪಾರಾಗಿ ದಿಗಂಬರಿಯಾಗಿ ಹೊರಟಳು. ಇದರಿಂದ ಅಕ್ಕನ ನಿಜವಾದ ಸ್ಥಿತಿ, ಮಹಿಮೆ, ಪ್ರಭಾವ, ಯೋಗ್ಯತೆ, ನಿಲುಮೆ, ಅನುಭಾವ, ಸಿದ್ಧಿ ಮೊದಲಾದವುಗಳ ಪ್ರಜ್ಞೆ ಎಲ್ಲರಿಗೂ ಸಹಜ ಬರುವದೆಂದು ನಾವು ಧಾರಾಳವಾಗಿ ಹೇಳುವೆವು. ಇಲ್ಲಿಯ ತನಕ ಎಲ್ಲರೂ ಒಂದಿಲ್ಲೊಂದು ರೀತಿಯಿಂದ ಅಕ್ಕನ ಚರಿತೆಯನ್ನು ಬರೆಯಲಿಕ್ಕೆ ನಿಜವಾಗಿ ತಪ್ಪಿದ್ದಾರೆ. ಇದರಲ್ಲಿ ಶ್ರೀ

ಕೊಟಗಿಯವರು ಸಹ ಚಾಮರಸ ಗೊಳೂರ, ಸಿದ್ಧವೀರಣಾರ್ಯರ ಅಭಿಪ್ರಾಯಕ್ಕೆ ಹೌದೆನ್ನುವ ಕಾರಣವೇನಾಯಿತು ನಮಗೆ ಎಳ್ಳಷ್ಟು ಹೊಳೆಯು ಲಿಲ್ಲ. ಇದೊಂದು ಸಣ್ಣ ಪ್ರಶ್ನೆಯಿಂದ ಅಕ್ಕನ ಬಾಲಬ್ರಹ್ಮಚರ್ಯ ವ್ರತಕ್ಕೇನು ಭಂಗ ಬರುವದಿಲ್ಲೆಂದು ಚಾಮರಸ ಸಿದ್ಧವೀರಣಾರ್ಯರು ಬಗೆದಂತೆ ಶ್ರೀ ಕೊಟಗಿಯವರೂ ಸಹ ಬಗೆದಂತೆ ತೋರುವದು. ಆಕೆಯು ಅನೇಕ ವಚನಗಳಿಂದ ಕೌಶಿಕನಿಗೆ ಲಿಂಗಧಾರಣ ಮಾಡಿಕೊಂಡರೆ ಲಗ್ನವಾಗುವೆನೆಂದು ಸಹ ಎಂದೂ ಕೇಳಿಲ್ಲೆಂದು ನಾವು ಮೇಲೆ ಸಯುಕ್ತಿಕವಾಗಿ ಸಿದ್ಧ ಮಾಡಿ ತೋರಿಸಿದ್ದೇವೆ. ಸ್ಥಳದ ಸಂಕೋಚದ ಮೂಲಕ ಎಲ್ಲ ವಚನಗಳನ್ನು ಹಾಕಿಲ್ಲ. ನಾವು ಈ ಎಲ್ಲ ಅಂಶಗಳನ್ನೊಳಗೊಂಡ ಅಕ್ಕನ ಚರಿತೆಯನ್ನೊಂದು ಬರೆಯುವವರಿದ್ದೇವೆ. ಆಗ ಸವಿಸ್ತರ ವಿಚಾರಿಸುವೆವು.

ಅಕ್ಕನನ್ನು ಸ್ವಾಗತಿಸಿ ಕರಕೊಂಡು ಬರಲು ಕಿನ್ನರಯ್ಯಗಳನ್ನು ಬಸವಾದಿಗಳು ಕಳಿಸಿದ್ದರು. ಆಗ ಅವರಿಬ್ಬರಲ್ಲಿ ನಡೆದ ಸಂಭಾಷಣೆಯು ಅಕ್ಕನ ನಿಜನಿಲುಮೆಯನು ಜಗಕೆ ತೋರಿಸಲು ಹೆಣೆದದ್ದೇ ಇರುವದು. ಹೊರತು ಕಿನ್ನರಯ್ಯನೇನು ಕಾಮುಕನಲ್ಲ. ಅವನು ಸಮ್ಯಕ್ ಜ್ಞಾನದ ಮಹಾ ಶರಣ. ಹೀಗಂತಲೇ ಬಸವಣ್ಣನು ಪ್ರಭುದೇವರು ಕೂಡ ಆತನೊಬ್ಬನನ್ನೇ ಅಕ್ಕನನ್ನು ಕರೆತರಲು ಕಳಿಸಿದ್ದರು. ಬೇಕಂತಲೇ ಅಕ್ಕನಿಗೆ ಕೆಣಕಿ ಕೇಳಿ ಆಕೆಯಿಂವಲೇ ಯೋಗ್ಯ ಉತ್ತರವನ್ನು ಪಡೆದಿದ್ದಾನೆ. ಹೋಗಿ —"ಬರ್ರಿ ಅಕ್ಕನವರೇ" ಎಂದರೆ ಅದರಲ್ಲಿ ಮಹತ್ವ ಹೊಳೆಯುವದಿಲ್ಲ. ಅಕ್ಕನ ಯೋಗ್ಯತೆ ಜಗಕೆ ತಿಳಿಯುವದಿಲ್ಲ. ಅದಕ್ಕಾಗಿ ಇಲ್ಲದ ಪ್ರಶ್ನೆಹಾಕಿ ಕಾಮುಕನಂತೆ ನಟಿಸಿ ತೋರಿಸಿದಾನೆ. ಹೊರತು ನಿಜವಾದ ಕಾಮಾರಿಯಾಗಿದ್ದನು. ಬೊಮ್ಮಯ್ಯನು ಮೋಹದ ಬಲೆಯಲ್ಲಿ ಸಿಲುಕಿದವನಂತೆ ನಟಿಸಿ ಆಕೆಯ ಕೈಹಿಡಿಯ ಹೋಗುವನು. ಇದೆಲ್ಲ ಅವನು ಮೊದಲೇ ಯೋಚಿಸಿದ ನಟನೆ ಹೊರತು ನಿಜವಲ್ಲ. ಇದರಿಂದಲೇ ಅಕ್ಕನು ದಿವ್ಯ ವಚನಗಳಿಂದ ತನ್ನ ಯೋಗ್ಯತೆಯನ್ನು ಪ್ರಕಟ ಗೊಳಿಸಿದ್ದಾಳೆ. ಅವಳ ಅಚಲ ಶ್ರದ್ಧೆ ಧೈರ್ಯ ಸಾಹಸ ನಿಷ್ಠೆ ಬ್ರಹ್ಮಚರ್ಯ ಪಾಲನೆಗಳು ಮಾತ್ರ ಪ್ರಕಾಶಕ್ಕೆ ಬಂದವು. ಅಲ್ಲದೆ ಅಕ್ಕನು ತಾನು ನೋಡಲಿಕ್ಕೆ ಹೆಣ್ಣು ರೂಪಾದರೂ ನಿಜವಾಗಿ ಗಂಡಾಗಿರುವಳೆಂದು ಸಹ ತೋರಿಸಿಕೊಟ್ಟಳು. ಹೀಗೆ ಕೆಣಕಿ ಆಕೆಯನ್ನು ಎಲ್ಲ ರೀತಿಯಿಂದ ಪರೀಕ್ಷಿಸಿ ಕಲ್ಯಾಣದಲ್ಲಿ ಅನುಭವಮಂಟಪದಲ್ಲಿ ಎಲ್ಲರ ಮಧ್ಯದಲ್ಲಿ ದಿಗಂಬರೆಯಾಗಿ ನಿಜವಾಗಿ ಇರ

ಲಿಕ್ಕೆ ಬಹು ಯೋಗ್ಯನೆಂದು ಪರೀಕ್ಷಿಸಿ ನೋಡಿ ಪ್ರಶಸ್ತಿಪತ್ರಿಕೆಯನ್ನು ಬೊಮ್ಮಯ್ಯನು ಕೊಟ್ಟಿದ್ದಾನೆ. ಇಂಥ ಪ್ರಶಸ್ತಿಪತ್ರಿಕೆಯನ್ನು ಅಕ್ಕನಿಗೆ ಕೊಡಲು ಇವನೇ ಮಹಾ ಯೋಗ್ಯನೆಂದು ತಿಳಿದೇ ಬಸವಾದಿಗಳು ಅವನನ್ನೇ ಸ್ವಾಗತಮಾಡಿ ಕರೆದುಕೊಂಡು ಬರಲಿಕ್ಕೆ ಕಳಿಸಿದ್ದಾರೆ. ಅಲ್ಲದೆ ಒಬ್ಬನನ್ನೇ ಕರೆತರಲಿಕ್ಕೆ ಕಳಿಸಿದ್ದರ ಉದ್ದೇಶವನ್ನಾದರೂ ತಿಳಿದು ನೋಡಬೇಕು. ಬಹು ಜನರಾದರೆ ಈ ಪ್ರಕಾರ ಕಾಮುಮೋಹದ ನಟನೆ ಮಾಡಲಿಕ್ಕೆ ಅವನಿಗೆ ಬರುತ್ತಿದ್ದಿಲ್ಲ. ಅನ್ಯರು ಇದ್ದರೆ ಅಕ್ಕನು ನಾಚಿ ಬೇರೊಂದು ಬಗೆಯ ಉತ್ತರ ಕೊಡಬಹುದೆಂದು ತಿಳಿದೇ ಬೊಮ್ಮಯ್ಯನೊಬ್ಬನನ್ನೇ ಅಕ್ಕನನ್ನು ಕರೆತರಲು ಕಳಿಸಿದ್ದಾರೆ. ಈ ಉದ್ದೇಶ ನಟನೆಗಳನ್ನು ಶ್ರೀಕಂಠಯ್ಯನವರಂಥವರೂ ಕೂಡ ಅರಿತಿಲ್ಲೆಂದು ಶ್ರೀ ಕೊಟಗಿಯವರು ಅವರನ್ನು ಖಂಡಿಸಿದ್ದಾರೆ. ಇನ್ನೊಳ್ಳೇ ಸಾಹಸದ ಕೆಲಸವನ್ನು ಮಾಡಿದ್ದಾರೆಂದು ಹೇಳಬಹುದು. ಶರಣರನ್ನು ಸಾಮಾನ್ಯರು ಅರಿಯಲು ಎಂದೂ ಶಕ್ಯವಿಲ್ಲೆಂದು ನಾವು ಅನೇಕಸಲ ಹೇಳಿರುವೆವು. ಅವರನ್ನು ಅರಿಯಲು ಸಮ್ಯಕ್ ದೃಷ್ಟಿ ಬೇಕು. ಸ್ವತಂತ್ರ ವಿಚಾರ ಶೀಲರೂ ಬೇಕು. ತ್ಯಾಗಿಗಳು ಭಕ್ತರೂ ಬೇಕು. ಅಂದರೆ ಶರಣರ ಚರಿತೆಯ ಗುಟ್ಟು ಗೂಢಗಳ ಅರ್ಥವಾಗುವದು.

ಇದರಂತೆ ಬಸವಣ್ಣ, ಪ್ರಭುದೇವರು, ಸಿದ್ಧರಾಮ, ಚನ್ನಬಸವಣ್ಣ, ಮಡಿವಾಳ ಮಾಚಿದೇವ, ಬೊಮ್ಮಯ್ಯಗಳು ಅಕ್ಕನನ್ನು ಸ್ತುತಿಸ್ಯದ ವಚನಗಳನ್ನು ಹಾಕಿ ಅಕ್ಕನ ಯೋಗ್ಯತೆಯನ್ನು ನಿಲುಮೆಯನ್ನು ಶರಣರ ಮುಖದಿಂದಲೇ ಕೇಳಿ ತಿಳಿಯುವಂತೆ ಶ್ರೀ ಕೊಟಗಿಯವರು ಯತ್ನಿಸಿದ್ದು ಕಡೆಯ ಭಾಗದಲ್ಲಿ ಕಂಡುಬರುವದು. ಮೊದಲಿನ ಎಲ್ಲ ಪ್ರಕರಣಗಳಿಗೆ ಈ ಹತ್ತನೇ ಪ್ರಕರಣವು ಸಾಕ್ಷಿ ಹಾಗೂ ಆಧಾರವಾಗಿದೆ ಎಂದು ಹೇಳಬಹುದು ಅದನ್ನು ಓದಿದರೆ ಮಾತ್ರ ತಿಳಿಯುವದು. ಅನುಭವಮಂಟಪದಲ್ಲಿ ನಡೆದ ಪ್ರಭುದೇವರ ಹಾಗೂ ಅಕ್ಕನ ಸಂಭಾಷಣೆಯು ಅಕ್ಕನ ನಿಲುಮೆಯನ್ನು ತೋರಿಸುವದು. ಪ್ರಭುದೇವರು ತಪ್ಪು ಹೊರಿಸಿ ಹೊರಟನೆಂಬುದು ಸತ್ಯವೇ? ತನು ಸಿರಿಯ ನಳಿದು ನಿರ್ವಾಣದಲ್ಲಿ ಮನದ ಭ್ರಾಂತಿ ನಿಶ್ಚಯವಾಗದು, ಕೇಶವೆಂಬ ಸೀರೆಯೇ ಲಿಂಗಕ್ಕೆ ಮರೆಯಾಯಿತ್ತು. ಅಪಮಾನವೆಂತು ಹರಿಯಿತ್ತು? ಅದು ಗುಹೇಶ್ವರಲಿಂಗಕ್ಕೆ ಸಲ್ಲದ ವೇಷ." ಇದರ ಮೇಲಿಂದ ಕೆಲವರು ಕೌಶಿಕನು ಲಿಂಗಾಯತನಾಗದ ತಪ್ಪನ್ನು ಅವನ ಮೇಲೆ ಹೊರಿಸಿ ಹೊರಟು

ಬಂದಳೆಂದು ಎಲ್ಲರೂ ಅರ್ಥಮಾಡಿರುವರು. ಇದು ಸರಿಯಲ್ಲ. ತಂದೆ ತಾಯಿ ಬಂಧುಬಳಗ ಕೌಶಿಕ ಅವನು ಕಳಿಸಿಕೊಟ್ಟ ಶಿಷ್ಟಮಂಡಳದವರು ಹೀಗೆ ಅನೇಕರು ಲಗ್ನವಾಗೆಂದು ಮೊದಲಿನಿಂದ ಇಲ್ಲಿಯತನಕ ಅಕ್ಕನನ್ನು ಕೇಳುತ್ತಿದ್ದರು. ಈಕೆ ಶಿವನ ಕೂಡ ಲಗ್ನವಾಗಿದೆ. ಇನ್ನೆಲ್ಲಿಯ ಎರಡನೇ ಲಗ್ನ? ಇದೆಂದೂ ಶಕ್ಯವಿಲ್ಲೆಂದು ಎಲ್ಲರಿಗೂ ಮೊದಲಿನಿಂದಲೂ ಹೇಳುತ್ತ ಬಂದಳು. ಎಲ್ಲರ ಮೇಲೂ ಇದೇ ತಪ್ಪನ್ನು ಹೊರಿಸಿ ಕೊಟ್ಟಳಲ್ಲದೆ ಲಿಂಗಧಾರಿಯಾದರೆ ಲಗ್ನವಾಗುವೆನೆಂದು ಕೌಶಿಕನಿಗೆ ಹೇಳಿ, ಆಗಲಾರದ್ದಕ್ಕೆ ಅವನ ಮೇಲೆ ತಪ್ಪ ಹೊರಿಸಿದಳೆಂದು ತಪ್ಪು ಅರ್ಥವನ್ನು ಮಾಡಬಾರದು. ವ್ಯವಹಾರದಲ್ಲಿ ಹೆಣ್ಣುಮಕ್ಕಳು ಪ್ರಾಯಕ್ಕೆ ಬಂದ ಕೂಡಲೆ ಎಲ್ಲರೂ ಸಣ್ಣದೊಡ್ಡವರೂ ಒಳಗಿನವರೂ ಹೊರಗಿನವರೂ ಹೀಗೆ ಸಕಲರೂ ದೊಡ್ಡವಳಾದಿ. ಪ್ರಾಯ ಬಂದಿದೆ. ಯೌವ್ವನ ಬಂದಿದೆ. ಇನ್ನು ಯಾವಾಗ ಲಗ್ನ? ಹೆಣ್ಣು ಹಾಗೇ ಇರಕೂಡದು. ಹೆಣ್ಣೆಂದರೆ ಹುಣ್ಣು. ಗಂಡನಿಲ್ಲದ ಗೈಯಾಳಿಯಂತೆ ತಿರುಗಬಾರದು. ತಿರುಗಿದರೆ ಎಲ್ಲರ ಕಣ್ಣು ಬೀಳುವದು. ಹಾಗೆ ಹೀಗೆ ಎಂದು ಅನೇಕರು ಕೇಳುವವರೇ ಇರುವರು. ಒಲ್ಲೆಂದರೆ ಬಿಡಲೊಲ್ಲಳೇಕೆ ಶರಣೆಯಾಗಿ ಇರಲೆಂದು ಯಾರೂ ಎಂದೂ ಹೇಳುವದಿಲ್ಲ. ಅದರಂತೆ ಅಕ್ಕನಿಗೂ ಎಲ್ಲರೂ ಗಂಡನನ್ನು ಮಾಡಿಕೋ ಎಂದು ಕೌಶಿಕನು ಕೇಳುವದಕ್ಕಿಂತ ಮೊದಲೇ ಎಲ್ಲರೂ ಆಕೆಗೆ ಹೇಳುತ್ತಿದ್ದರು. ಇದಕ್ಕೆ ಆಕೆಗೆ ಬೇಸರಿಕೆ. ಎಲ್ಲರಿಗೂ ಲಗ್ನವಾಗುವದಿಲ್ಲ. ಶಿವನ ಕೂಡ ಲಗ್ನವಾಗಿದೆ ಎಂದು ಹೇಳಿದಳು. ಆದರೂ ಎಲ್ಲರೂ ಅಕ್ಕನಿಗೆ ಕಿರಿಕಿರಿ ಕೊಡುವದನ್ನು ಬಿಟ್ಟಿರಲಿಲ್ಲ. ಅದರಂತೇ ಕೌಶಿಕನೂ ಕೂಡ ತನ್ನನ್ನೇ ಲಗ್ನವಾಗೆಂದು ಕೇಳಿದಾಗ ಸಹ ಇದರಂತೆ ಹೇಳಿದಳು. ಆಗ ಅವನು ಕರೆತರಿಸಿ ಜುಲುಮೆ ಮಾಡಲು ಒಲ್ಲೆಂದು ಹೇಳಿ, ದಿಗಂಬರೆಯಾಗಿ ಹೊರಟಳು. ಇದರಂತೆ ಎಲ್ಲರೂ ಮೊದಲಿನಿಂದಲೂ ಲಗ್ನವಾಗೆಂದು ಹೇಳುವದೇ. ಅಕ್ಕನು ಅವರೆಲ್ಲರ ಮೇಲೆ ಹೊರಿಸಿದ ತಪ್ಪು ಹೊರತು ಲಿಂಗಧಾರಣೆ ಮಾಡಿಕೊಳ್ಳುವದಿಲ್ಲವೆಂದು ಹೇಳಿದ ಕೌಶಿಕನ ತಪ್ಪು ಇದಲ್ಲ. ಲಗ್ನವಾಗಿ ಸಂಸಾರಿಯಾಗೆಂದು ಸಕಲರೂ ಮೊದಲಿನಿಂದ ಹೇಳುವ ಸಂಗತಿಯೇ ಅಕ್ಕನು ಎಲ್ಲರ ಮೇಲೆ ಹೊರಸಿದ ತಪ್ಪು. ಅದಕ್ಕಾಗಿ ಎಲ್ಲರನ್ನೂ ತೊರೆದು ವನಕ್ಕೆ ಹೋದಳು. ಬರೇ ಕೌಶಿಕನದೇ ತಪ್ಪಾಗಿದ್ದರೆ ತನ್ನ ಮನೆಯಲ್ಲಿ ಹೋಗಿ ಇರಬಹುದಾಗಿತ್ತು. ಇಲ್ಲವೆ ಬೀಗರ ಮನೆಯಲ್ಲಿ ಇನ್

ಬಹುದಾಗಿತ್ತು. ಇವರೆಲ್ಲರ ತಪ್ಪು ಇದದ್ದರಿಂದ ಅಕ್ಕನು ಎಲ್ಲರನ್ನು ಬಿಟ್ಟು
ವನಕ್ಕೆ ಹೋದಳು. ಎಲ್ಲರೂ ವಿರತಿ ವೈರಾಗ್ಯ ಬೇಡ. ಶರಣಮ್ಮನಾಗ
ಬೇಡೆಂದು ಹೇಳುವದೇ ಅವರೆಲ್ಲರ ತಪ್ಪು ಇದೆ. ತಪ್ಪನ್ನು ಎಲ್ಲರ ಮೇಲೆ
ಹೊರಿಸಿ ಹೊರಹೊರಟಳು. ಗೂಳೂರ ಸಿದ್ಧವೀರಣಾರ್ಯರು ಬರೆದ ಉಡು
ತಡಿಯ ಮಹಾದೇವಿಯಕ್ಕಗಳ ಸಂಪಾದನೆಗಳಿಂದ ಇದೆಲ್ಲ ಅಕ್ಕನ ನಿಲುಮೆ
ಯನ್ನೇ ತೋರಿಸುವದು. ಆದರೂ ಸಿದ್ಧವೀರಣಾರ್ಯರು ಮಾತ್ರ ಕೌಶಿಕನು
ಲಿಂಗಧಾರಣೆ ಮಾಡಿಕೊಂಡರೆ ಲಗ್ನವಾಗುವೆನೆಂದು ಅಕ್ಕನು ಹೇಳಿದಳೆಂದು
ಅಭಿಪ್ರಾಯವನ್ನು ಚಾಮರಸನಂತೆ ವ್ಯಕ್ತ ಮಾಡಿ ತಪ್ಪಿದ್ದಾನೆ. ಅದರ
ಬಗ್ಗೆ ಒಂದಾದರೂ ವಚನವನ್ನು ಒಬ್ಬರಾದರೂ ಹೇಳಿದರೆ ನಂಬಬಹುದಾ
ಗಿತ್ತು. ಪ್ರಭುದೇವರು ಕೇಳಿದ ಮೇಲಿನ ಪ್ರಶ್ನೆಯಿಂದ ತಪ್ಪಿಗೆ ಇಲ್ಲದ
ಅರ್ಥ ಮಾಡದೆ ನಾವು ಹೇಳಿದ ಅರ್ಥವು ಸಮಂಜಸವೂ ವ್ಯಾವಹಾರಿಕವೂ
ಆಗಿದೆ ಎಂದು ಧಾರಾಳವಾಗಿ ಹೇಳಬಹುದು. ಅಕ್ಕನು ಸಕಲರ ಕೂಡ
ವಚನದಿಂದಲೇ ಮಾತಾಡುತ್ತಿದ್ದಳು. ಅವೆಲ್ಲವುಗಳನ್ನು ಶೋಧಿಸಿ ತೆಗೆದರೆ
ಒಳಿತಾಗುವದು. ಅವೆಲ್ಲ ಹಾಳಾಗಿರಬಹುದು. ಇದ್ದ ವಚನಗಳಲ್ಲಿ ಅಕ್ಕ
ನನ್ನು ತಿಳಿಯಲಿಕ್ಕೆ ಯತ್ನಿಸೋಣ. ಇದೊಂದು ವಿಚಾರವನ್ನು ಬಿಟ್ಟರೆ
ಚಾಮರಸ ಹಾಗೂ ಸಿದ್ಧವೀರಣಾರ್ಯರು ಅಕ್ಕನ ಚರಿತೆಯನ್ನು ಹೆಚ್ಚಾಗಿ
ನೈಜವಾಗುವಂತೆ ಬರೆದವರೆಂದು ಹೇಳಬಹುದು. ಹೀಗಾಗಿ ಬಹುತರ ಎಲ್ಲರೂ
ಹೆಚ್ಚು ಕಡಿಮೆ ತಪ್ಪನ್ನು ಅಕ್ಕನ ಬಗ್ಗೆ ಮಾಡದೆ ಬಿಟ್ಟಿಲ್ಲೆಂದು ಧಾರಾಳ
ವಾಗಿ ಹೇಳಬಹುದು. ಈ ೧೦ನೇ ಪ್ರಕರಣದಲ್ಲಿ ಬಾಳ್ನೋಟಕಂಜನವೆಂದು
ಅನೇಕ ವಿಷಯಗಳನ್ನು ಬರೆದಿದ್ದಾರೆ. ಇದು ದೊಡ್ಡ ಪ್ರಕರಣವಾಗಿದೆ.
ಇದರಲ್ಲಿಯ ಸಕಲ ವಿಷಯಗಳನ್ನು, ಅನೇಕರ ವಿಮರ್ಶೆಗಳನ್ನು ಬಹು
ಮಾರ್ಮಿಕವಾಗಿ ಮಾಡಿದ್ದಾರೆ. ಕೌಶಿಕನು ಲಿಂಗಧಾರಣ ಮಾಡಿಕೊಂಡರೆ
ಲಗ್ನವಾಗುವೆನೆಂದು ಇಬ್ಬರು ಹಿಂದಿನ ಕವಿಗಳನ್ನು ಸಮರ್ಥಿಸಿದ್ದು ಮಾತ್ರ
ನಮ್ಮ ಮನಸ್ಸಿಗೆ ಬಂದಿಲ್ಲ. ಅದನ್ನು ಮೇಲೆ ವಿವರಿಸಲಾಗಿದೆ. ಉಳಿದು
ದೆಲ್ಲ ಒಳ್ಳೇ ಸಮಂಜಸವಾಗಿದೆ. ಅನೇಕರನ್ನು ಖಂಡಿಸಿದ್ದಾರೆ. ಇದೆಲ್ಲ
ಒಳ್ಳೇದೇ ಆಗಿದೆ.

೧೧ನೇ **ಪ್ರಕರಣಃ**—ಇದರಲ್ಲಿ ಅಕ್ಕನ ಘನ ನಿಲುಮೆಯನ್ನು ಅಕ್ಕನ
ಹಾಗೂ ಶರಣರ ವಚನಗಳಿಂದ ಸಂಭಾಷಣೆಗಳಿಂದ ಚನ್ನಾಗಿ ಕಲೆಹಾಕಿದ್ದಾರೆ
ಇದು ಒಳ್ಳೇ ಸಮಂಜಸವೂ ಆಗಿದೆ. ಇದೆಲ್ಲವೂ ಸತ್ಯವಿದೆ ಶುದ್ಧವಿದೆ.

ಅಕ್ಕನ ಘನ ನಿಲವು ದಿಗಂಬರೆಯಾಗಿ ಹೊರ ಹೊರಟ ಕೂಡಲೇ ತಿಳಿಯ ಹತ್ತುವದು. ಆದರೆ ಅದು ವನದಲ್ಲಿ ಮತ್ತು ಕಲ್ಯಾಣದಲ್ಲಿ ಪೂರ್ಣವಾಗಿ ಎಲ್ಲರಿಗೂ ತಿಳಿಯುವಂತಿದೆ. ಬಹುತರ ಎಲ್ಲ ಬರಹಕಾರರೂ ಅಕ್ಕನ ನಿಲವು ಸಾಕ್ಷಾತ್ಕಾರ ಅರಿವೆಗಳನ್ನು ಹಾಕಿದ್ದ ಕಡೆಯು ಪ್ರಕರಣದಲ್ಲಿ ಎಂದೇ ತೋರುವದು. ಇದರ ಅರ್ಥವನ್ನು—ಅವರು ಕಟ್ಟ ಕಡೆಗೆ ಅಕ್ಕನಿಗೆ ಅನುಭವ ವಾಯಿತೆಂದೂ ಸಾಕ್ಷಾತ್ಕಾರವಾಯಿತೆಂದೂ ತಿಳಿದು ಅರ್ಥ ಮಾಡಿಕೊಂಡು ಹಾಗೆಲ್ಲ ಮಾಡಿದ್ದಾರೆ. ಇದು ಸರಿಯಲ್ಲ. ಅಕ್ಕನು ಕೌಶಿಕನ ಕಣ್ಣಿಗೆ ಬೀಳುವದಕ್ಕಿಂತ ಮೊದಲೇ ಅವಳಿಗೆ ಸಂಪೂರ್ಣ ಸಾಕ್ಷಾತ್ಕಾರದ ಸುದ್ಧಿಗಳು ಅನುಭವಗಳಾಗಿದ್ದವು. ಆಗಲೇ ಅವಳಿಗೆ ಶ್ರೇಷ್ಠ ನಿಲುಮೆಯು ಪ್ರಾಪ್ತ ವಾಗಿತ್ತು. ಅದಕ್ಕಂತೇ ಕೌಶಿಕನ ಕಾಮುಕ ದೃಷ್ಟಿಯು ನೀಚ ಕೃತಿಗಳಿಂದ ಸಹಜ ಪ್ರಭಾವ ಬೀರಿ ದಿಗಂಬರೆಯಾಗಿ ಪಾರಾದಳು. ಸಾಧನ ಸ್ಥಿತಿಯಲ್ಲಿ ದಿಗಂಬರೆ ಯಾಗಲಿಕ್ಕೆ ನಾಚಿಕೆ ಬರುವದು. ಇದೆಲ್ಲ ಪೂರ್ಣ ಸಿದ್ಧಾವಸ್ಥೆ ಯವರಿಗೆ ಮಾತ್ರ ಶಕ್ಯವಿರುವದು. ಇದು ಅಕ್ಕನಿಗೆ ಮಾತ್ರ ಶಕ್ಯವಾಯಿತು. ಅಕ್ಕನು ಸಾಧಕಳು ಅಥವಾ ಸಾಮಾನ್ಯಳು ಇದ್ದರೆ ಹೀಗೆ ದಿಗಂಬರೆಯಾಗಿ ಪಾರಾಗುವದು ಎಂದೂ ಶಕ್ಯವಿಲ್ಲ. ತನ್ನ ಮನೆಯಲ್ಲಿಯೇ ಅನೇಕ ಸಾಧನೆ ಗಳನ್ನು ಮಾಡಿ ಸಕಲ ಪ್ರಯೋಗಗಳನ್ನು ಯಶಸ್ವಿಯಾಗಿ ಮುಗಿಸಿದ್ದಳು. ಅದಕ್ಕಂತೇ ಕೌಶಿಕನ ಆಳುಗಳು ಬಲುಮೆಯಿಂದ ಕರೆತರಲಿಕ್ಕೆ ಬರಲು, ಕೌಶಿಕನ ಸಂಗಡ ಅಕ್ಕನು ವಾದಿಸಿ ತನ್ನ ಪ್ರಭಾವ ಬೀರಿ ಅವನನ್ನು ಸೋಲಿಸಿ ಬರಬೇಕೆಂದು ತಾನೇ ಧೈರ್ಯದಿಂದ ಅರಸನ ಅರಮಂದಿರಕ್ಕೆ ನಡೆದು ಬಂದಳು. ಮತ್ತು ಆಕೆ ಯೋಚಿಸಿದಂತೆ- ಈ ದುರ್ಘಟನೆ ಯೊಳಗಿಂದ ಸಹಜ ಪಾರಾದಳು. ಆಗಲೇ ಆಕೆಯ ನಿಲುಮೆಯನ್ನರಿಯಲು ಜನರಿಗೆ ಅನುಕೂಲವಾಯಿತು. ಮತ್ತು ಪ್ರಾರಂಭವಾಯಿತು. ಇದಕ್ಕೂ ಮೊದಲಿನ ಆಕೆಯ ಚರಿತೆ - ಸಾಧನ ನಿಲುಮೆ ಸಾಕ್ಷಾತ್ಕಾರಗಳು ಏನೂ ತಿಳಿಯವು. ಅವೆಲ್ಲ ಮನೆಯಲ್ಲಿ ಗುಪ್ತವಾಗಿ ಸುಪ್ತವಾಗಿದ್ದವು. ಕೌಶಿಕನು ಕೆಣಕಿದಾಗ ಅವೆಲ್ಲ ಪ್ರಕಟವಾದವು. ಕೌಶಿಕನು ಕೆಣಕದಿದ್ದರೆ ಅಕ್ಕನನ್ನು ಯಾರು ತಾನೇ ಅರಿಯ ಬಲ್ಲರು? ಅಕ್ಕನು ಇಲ್ಲಿಯ ತನಕ ಬಾಳಿ ಬದುಕಿ ಬೆಳೆದವ್ದಾದರೂ ಕೌಶಿಕನ ನಿಂದೆ ಎಂದು ಹೇಳಬಹುದು. ಕೌಶಿಕನಿಲ್ಲ ದಿದ್ದರೆ ಅಕ್ಕನ ಯೋಗ್ಯತೆ—ಯಾರಿಗೆ ತಿಳಿಯುತ್ತಿತ್ತು. ಅವಳು ದಿಗಂಬರೆ ಯಾಗುತ್ತಿರಲಿಲ್ಲ. ಕಾನನಕ್ಕೆ, ಕಲ್ಯಾಣಕ್ಕೆ, ಅನುಭವ ಮಂಟಪಕ್ಕೆ, ಅಕ್ಕನು

ಹೋಗುತ್ತಿದ್ದಳೊ ಇಲ್ಲವೋ ಎಂದು ಹೇಳಲಿಕ್ಕೆ ಬರುತ್ತಿದ್ದಿಲ್ಲ. ಇದೆಲ್ಲ ಪರಮಾತ್ಮನು ಮೊದಲೇ ಯೋಚಿಸಿದಂತೆ ಸಕಲವೂ ನಡೆದಿದೆ. ಎಂದು ಹೇಳಬೇಕು.

ಒಟ್ಟಿನಲ್ಲಿ ಹಿಂದಿನ ಈಗಿನ ಯಾವ ಪಂಡಿತರೂ ಕವಿಗಳೂ ಅಕ್ಕನ ಚರಿತೆಯನ್ನು ಆಕೆಯ ಸಿದ್ಧಿ, ಸ್ಥಿತಿ, ಸಾಧನ, ಪೂಜೆ, ತ್ಯಾಗ, ದಿಗಂಬರತ್ವ ವೈರಾಗ್ಯ, ಯೋಗ, ನಿಲುವು ಸಾಕ್ಷಾತ್ಕಾರ, ಅನುಭವ, ವಚನಕಾರನ ವಚನಗಳಲ್ಲಿಯ ಸತ್ಯ,ಶರಣರ ಸ್ತುತಿ, ಮೊದಲಾದ ವಿಷಯಗಳಿಗೆ ಬಗ್ಗೆ ವಂತೆ ಬರೆದಿಲ್ಲೆಂದು ನಾವು ಧೈರ್ಯವಾಗಿ ಹೇಳಬಲ್ಲೆವು. ವಚನಗಳ ಹೊರತು ಉಳಿದವರ ಆಧಾರಗಳನ್ನು ತಕ್ಕೊಂಡವರೆಲ್ಲ ನಿಜವಾಗಿ ಎಡವಿದ್ದಾರೆ. ಅಕ್ಕನ ವಚನ ಹಾಗೂ ಸಮಕಾಲೀನ ಶರಣರ ವಚನಗಳನ್ನೇ ಆಧಾರ ಸಾಕ್ಷಿಯಾಗಿಟ್ಟು ಕೊಂಡೇ ಅಕ್ಕನ ಚರಿತ್ರೆ ಬರೆಯ ಬೇಕೆ ಹೊರತು ಅನ್ಯ ಯಾವ ಆಧಾರ ಸಾಕ್ಷಿಗಳು ಉಪಯೋಗವಾಗಲಾರವು. ಆದಕ್ಕಾಗಿ ಎಲ್ಲರೂ ತಪ್ಪಿದ್ದಾರೆ. ಹಿಂದಿನ ಈಗಿನ ಎಲ್ಲರಿಗಿಂತ ಶ್ರೀ ಕೊಟಗಿಯವರು ಮಾತ್ರ ಒಂದೇ ಒಂದು ವಿಷಯವನ್ನು ಬಿಟ್ಟು ಉಳಿದ ಎಲ್ಲ ವಿಷಯಗಳನ್ನು ಚನ್ನಾಗಿ ಪ್ರತಿ ಪಾದನ ಮಾಡಿದ್ದಾರೆ. ವಚನಗಳ ಆಧಾರದಿಂದ ಇವರು ಬರೆದರೂ ಕೌಶಿಕನು ಲಿಂಗಧಾರಣ ಮಾಡಿಕೊಂಡರೆ ಲಗ್ನನಾಗುವೆನೆಂದು ಅಕ್ಕನು ಅಂದಳೆಂದು ಚಾಮರಸ ಸಿದ್ಧ ವೀರಣಾರ್ಯರನ್ನು ಯಾಕೆ ನಂಬಿದರೆಂದು ನಮಗೆ ತಿಳಿಯದಾಗಿದೆ. ಇದೂ ಕೂಡಾ ಸರಿಯಲ್ಲೆಂದು ನಾವು ಹಿಂದೆ ವಿವರಿಸಿದ್ದೇವೆ. ಇನು ಮುಂದಿನ ೨ನೇಭಾಗದಲ್ಲಿ ಶ್ರೀ ಕೊಟಗಿಯವರು ನಮ್ಮ ಅಭಿಪ್ರಾಯದಂತೆ ತಿದ್ದಿಕೊಂಡು ಗ್ರಂಥ ಬರೆಯುವರೆಂದು ನೆರೆ ನಂಬಿದ್ದೇವೆ. ಇಷ್ಟಾದರೆ ಅವರ ಗ್ರಂಥವು ಅತೀ ಪರಿಪೂರ್ಣ ಸ್ಥಿತಿಗೆ ಬರುವದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಎಲ್ಲವನ್ನೂ ವಚನಗಳಿಂದ ಬರೆದು ಅದೊಂದು ಮಾತನ್ನು ಆ ಇಬ್ಬರು ಕವಿಗಳ ಆಧಾರವನ್ನೇಕೆ ತೆಗೆದು ಕೊಳ್ಳಬೇಕು? ಮುಗಳಿ ಪಟ್ಟೆ ಸ್ವಾಮಯ್ಯ, ವೀರಭದ್ರಪ್ಪ ಅಂಗಡಿ, ನಾಗಭೂಷಣ, ಕರಡಿ, ಪಾಟೀಲ, ಕುಂದಣಗಾರ, ಮಾಳವಾಡ, ಶ್ರೀನಿವಾಸ ಮೂರ್ತಿ, ಪರಮೇಶ್ವರ ಭಟ್ಟ, ಹಂಜಿ, ಕೃಷ್ಣರಾಯ, ಲಿಂಗಣ್ಣಯ್ಯಾ ಬಸವರಾಜ ಮೊದಲಾದವರು ಹರಿಹರ ಚನ್ನಬಸವಾಂಕರನ್ನು ಅನುಸರಿ ಸಿದ್ದಾರೆ. ಇವರಿಗೆಲ್ಲ ಸಮ್ಯಕ್ ದೃಷ್ಟಿ ಇಲ್ಲದ್ದಕ್ಕೆ ಹೀಗೆ ಬರೆದಿದ್ದಾರೆ ಇವರನ್ನೆಲ್ಲ ಶ್ರೀ ಕೊಟಗಿಯವರು ಚನ್ನಾಗಿ ಖಂಡಿಸಿದ್ದಾರೆ. ಇದರಲ್ಲಿ

ಚಾಮರಸ ಸಿದ್ಧ ವೀರಣಾರ್ಯರನ್ನು ಒಪ್ಪಿಕೊಂಡಿದಾರೆ. ಎಲ್ಲರನ್ನು ಕೈ ಬಿಟ್ಟರೆ ತ್ರಾಸಾದೀತೆಂದು ಬಗೆದಂತೆ ತೋರುವದು. ಇನ್ನು ಇವರನ್ನೂ ಸಹ ಖಂಡಿಸುವದುಚಿತ ವೆಂದು ಸೂಚಿಸುವೆವು. ಅಂದರೆ ಅಕ್ಕನ ಚರಿತೆ ಪೂರ್ಣ ಸಂಪೂರ್ಣ ವಾಗುವದೆಂದು ಸತ್ಯವಾಗಿ ಹೇಳಬಲ್ಲೆವು.

ಪರಮಾತ್ಮನ ಚಿಚ್ಛಕ್ತಿ, ಮಾಯಾಶಕ್ತಿಗಳಾದ ಎರಡು ಶಕ್ತಿಗಳ ಯೋಗ್ಯತೆಯನ್ನು ಜಗಕೆ ತೋರಿಸಲು ಇದೊಂದು ಹೂಡಿದ ಆಟವಿರುವದು. ತಾನು ಪ್ರಭುವಾಗಿ ಜನಿಸುವನು. ಚಿಚ್ಛಕ್ತಿಯೇ ಅಕ್ಕಮಹಾದೇವಿ ಮಾಯಾ ಶಕ್ತಿಯೇ ಮಾಯಾದೇವಿಯರಾಗಿ ಜನಿಸುವರು, ಪ್ರಭುವಿಗೆ ಮೊದಲು ಮಾಯಾದೇವಿ ಗಂಟುಬೀಳುವಳು. ಬೇಕಾದಷ್ಟು ಯತ್ನಿಸಿದರೂ ಪ್ರಭು ಮಾಯೆಗೊಳಗಾಗುವದಿಲ್ಲ. ಮಾಯೆ ಸೋಲುವಳು. ಆದರೆ ಚಿಚ್ಛಯಾದ ಅಕ್ಕಮಹಾದೇವಿಯನ್ನು ಪ್ರಭು ನೋಡಿದ ಕೂಡಲೇ ಆಕೆಗೆ ಮೆಚ್ಚಿ ಗುರು ವಿನಂತೆ ನೆರವಾಗುವನು. ಇದು ಶುದ್ಧ ಪವಿತ್ರ ಅಕ್ಕನ ಕಂಡು ಪ್ರಭು ತಾಯಿ, ತಾಯಿ ಎಂದು ನಂಬಿ ನಡೆದನು. ಮೊದಲಿನ ಮಾಯಾದೇವಿಯು ಮಾಯೆ, ಮೋಹ, ಮದ, ಮಮಕಾರ, ಅಹಂಕಾರ, ಆಶೆ, ವಾಸನೆ, ತಿಂಡಿ, ಬಯಕೆ, ಕಾಮನೆ, ವಿಲಾಸ, ಚಟುನಿ, ಐಸು, ಆರಾಮ, ವಿಷಯಾಸಕ್ತಿ, ರೀತಿ, ಕ್ರೀಡೆ, ಕಾಮವಿಲಾಸ ಮೊದಲಾದವುಗಳ ಮೊತ್ತವಾಗಿ ಜನಿಸಿದ್ದಳು. ಆದರೆ ಅಕ್ಕಮಹಾದೇವಿಯು– ತ್ಯಾಗ, ವೈರಾಗ್ಯ, ವಿರತಿ, ನಿರ್ಮಾಯೆ, ನಿರ್ಮೋಹ, ನಿರಹಂಕಾರ, ನಿರಾಶೆ, ನಿರ್ವಾಸನೆ, ಬ್ರಹ್ಮಚರ್ಯ, ನಿಷ್ಕಾಮನೆ, ಸಾದಾ ಸರಳಜೀವನ, ಸತ್ಯ, ನ್ಯಾಯ, ನಿಷ್ಠುರ ಪ್ರೇಮ, ಭಕ್ತಿ, ಜ್ಞಾನ, ಅರಿವೆ ಮೊದಲಾದವುಗಳ ಮೊತ್ತವಾಗಿ ಜನಿಸಿದ್ದಳು. ಹೀಗಿದ್ದ ಬಳಿಕ ಪ್ರಭುದೇವರು ಮಾಯಾದೇವಿಗೆ ಮರುಳಾಗದೆ ಅಕ್ಕ ಮಹಾದೇವಿಗೆ ಮರುಳಾಗಿ ಮಹಾ ತಾಯಿ ಜಗನ್ಮಾತೆ ಎಂದು ನಮೋ ನಮೋ ಎಂದು ಸ್ತುತಿಯ ವಚನಗಳನ್ನು ಪ್ರಭುದೇವರು ಹಾಡಿದರು. ಅದರಂತೆ ಸಕಲ ಶರಣ ಶರಣೆಯರೂ ಹಾಡಿದರು. ಈ ಎರಡು ಶಕ್ತಿಗಳ ಕೂಡ ಪ್ರಭುದೇವರು ಹೋರಾಡಿದ್ದರಿಂದ ನಿಜವಾದ ಪ್ರಭುವಿನ ಶಕ್ತಿ ಯೋಗ್ಯತೆಗಳು ಪ್ರಕಟವಾದುದಲ್ಲದೆ ಅಕ್ಕನ ಮಹಾ ಯೋಗ್ಯತೆಗಳು ಪ್ರಕಟವಾದುದಲ್ಲದೆ ಅಕ್ಕನ ಮಹಾ ಯೋಗ್ಯತೆಯೂ ಕೂಡ ಪ್ರಕಟವಾಗುವದು. ಅಕ್ಕನು ಅಸಾಮಾನ್ಯ ಹೋಲಿಕೆಯಿಲ್ಲದ ಮಹಾ ಮಹಾತ್ಮಳೂ ಶರಣೆಯೂ ಎಂದು ಸಹ ತಿಳಿಯಪಡಿಸಿದಳು. ಅಕ್ಕನು ಸ್ತ್ರೀಯರಿಗೆ ಎಷ್ಟು ಸ್ವಾತಂತ್ರ್ಯ ಸಮಾನತೆಗಳಿರುವವೆಂಬು

ದನ್ನು ತಿಳಿಯಪಡಿಸಲು ಅವತರಿಸಿ ಗಂಡನನ್ನೇ ಆಗುವದಿಲ್ಲೆಂದು ಹೇಳಿ ಯೋಗ್ಯತೆ ಇದ್ದರೆ ದಿಗಂಬರೆಯಾಗಿ ಸಹ ಇರಲಿಕ್ಕೆ ಬರುವದೆಂದು ತ್ಯಾಗದ ಹಿರೇ ಉಚ್ಚ ಮಟ್ಟವನ್ನು ತೋರಿಸಿಕೊಡಲಿಕ್ಕೆ ಅವತರಿಸಿದಳು. ಸ್ತ್ರೀಯರಿಗೆ ಶಿವಯೋಗದಲ್ಲಿ ಎಷ್ಟರ ಮಟ್ಟಿಗೆ ಸಾಧಿಸುವ ಅಧಿಕಾರವಿರುವದೆಂದು ತೋರಿಸಿಕೊಟ್ಟಳು. ಸ್ತ್ರೀಯರು ಪುರುಷರಿಗಿಂತ ಯಾತರಲ್ಲಿಯೂ ಕಡಿಮೆ ಇಲ್ಲ. ಒಂದು ದೃಷ್ಟಿಯಿಂದ ಹೆಚ್ಚೆಂದು ತಿಳಿಸಲು ಬಂದಳು. ತ್ಯಾಗದ ಒಳ್ಳೇ ಎತ್ತರವಾದ, ಯಾರೂ ಎಂದೂ ಮುಟ್ಟಲಾರದ ಮಟ್ಟನ್ನು ತಿಳಿಸಲಿಕ್ಕೆ ಅವತರಿಸಿದಳು. ಅದಕ್ಕಂತೇ ಅಕ್ಕನ ಸ್ಥಿತಿಯು ಬಹು ಹೆಚ್ಚಿನದೆಂದು ಎಲ್ಲ ಶರಣ ಶರಣೆಯರು ಏಕ ಕಂಠದಿಂದ ಹೊಗಳಿದ್ದಾರೆ. ಈ ಪ್ರಕಾರ ಶ್ರೀ ಕೊಟಗಿಯವರು ಅಕ್ಕನನ್ನು ಚಿತ್ರಿಸಿ, ಅಕ್ಕನಿಗೆ ಬಂದ ಅನೇಕ ಹುಸಿ ದುರಾಪವಾದಗಳನ್ನು ದೂರ ಮಾಡಲಿಕ್ಕೆ ಚನ್ನಾಗಿ ಹೆಣಗಿದ್ದಾರೆ. ಅಲ್ಲದೆ ದುರಾಪವಾದವನ್ನು ಕೊಟ್ಟವರನ್ನೂ ಸಹ ಚನ್ನಾಗಿ ಖಂಡಿಸಿ, ಬುದ್ಧಿಗಲಿಸಿದ್ದಾರೆ. ಆದರೆ ನಾವು ಮೇಲೆ ತೋರಿಸಿದ ಆದೊಂದು ಚಿಕ್ಕ ಅಪವಾದವನ್ನು ಕೂಡ ಹೊರದೂಡಿ ಅಕ್ಕನ ಸಂಪೂರ್ಣ ಪರಿಪೂರ್ಣ ತ್ಯಾಗ ವಿರಾಗಮಯ ಸತ್ಯ, ಶುದ್ಧ, ಪೂಜ್ಯ, ಪವಿತ್ರ ನಿಜಜೀವನವನ್ನು ಮುಂದಿನ ಎರಡನೇ ಭಾಗದಲ್ಲಿ ಹೆಣೆಯುವರೆಂದು ನಾವು ಬಲವಾಗಿ ನಂಬಿದ್ದೇವೆ.

———

# ವಚನ ಸಾಹಿತ್ಯ

[ ಲೇಖಕರು:- ನಾ. ಮ. ಬಸವರಾಜ, ಮುಖ್ಯೋಪಾಧ್ಯಾಯ ಚಿಕ್ಕ ಬಳ್ಳಾರಿ.]

ಆದ್ಯರ ವಚನ ಪರುಷ ಕಂಡಯ್ಯ ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ,
ಕೂಡಲಸಂಗನ ಶರಣರ ವಚನ ಬೇವ ಸವಿದಂತೆ.

—ಶ್ರೀ ಬಸವಣ್ಣನವರು.

ವಚನಸಾಹಿತ್ಯವಾಗಲಿ, ವೀರಶೈವ ಸಾಹಿತ್ಯವಾಗಲೀ ಕನ್ನಡನಾಡಿಗೆ ಅರ್ಪಿಸಿದ ಸೇವೆ ಅಷ್ಟಿಷ್ಟಲ್ಲ, ಅಪಾರವಾಗಿದೆ. ವಚನಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ಎಂಥ ಸ್ಥಾನ ಗಳಿಸಿದೆಂಬುದನ್ನು ನೋಡೋಣ. ಸಾಹಿತ್ಯ ವೆಂದರೇನು ಎಂಬುದನ್ನು ಮೊದಲು ತಿಳಿದುಕೊಳ್ಳೋಣ. ಕೆಲವು ಮಹ ನೀಯರು ಸಾಹಿತ್ಯವನ್ನು ಕುರಿತು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಸಂಸ್ಕೃತದಲ್ಲಿ " ಸಹಿತಾನಾಂ ತಸ್ಯ ಭಾವಃ ಸಾಹಿತ್ಯಂ " ಸಾಹಿತ್ಯವು ಹಿತದಿಂದ ಕೂಡಿರಬೇಕು. 'ಛಂದೋಬದ್ಧವಾದ ಶಬ್ದಗಳು ಸಾಹಿತ್ಯ' ಎಂದು ಒಬ್ಬ ಗ್ರಂಥಕಾರನು ಹೇಳುತ್ತಾನೆ. " *Literature is the goldon mirrior of the contemporary society* " ಅಂದರೆ, ಸಾಹಿತ್ಯವು ಸಮಕಾಲೀನ ಜನರ ರನ್ನಗನ್ನಡಿ ಎಂದು ಶ್ರೀ ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. " *It is the mirrior of lite* " ' ಸಾಹಿತ್ಯವು ಜೀವನದ ಕೈಗನ್ನಡಿ " ಎಂದು ಇನ್ನೊಬ್ಬರು ಹೇಳಿದ್ದಾರೆ. ' ಸಾಹಿತ್ಯ ಜೀವನದ ವಿಧಾಯುಕ ವಿಮರ್ಶೆ ' – ಮ್ಯಾಥ್ಯೂ ಆರ್ನಾಲ್ಡ್. " ಜೀವನದಲ್ಲಿ ಯಾವ ವಸ್ತುಗಳನ್ನು ಸರಿಯಾಗಿ ನೋಡಿರುವದಿಲ್ಲವೋ ಅವನ್ನು ಸರಿಯಾಗಿ ತೋರಿ ಸುವದೇ ಸಾಹಿತ್ಯ " – ರೆಯ್‌ಮಂಡ್.

ವಚನಸಾಹಿತ್ಯ ಅಥವಾ ವೀರಶೈವ ಸಾಹಿತ್ಯವೆಂದರೆ ಕನ್ನಡಸಾಹಿತ್ಯ ವೆಂದು ಹೇಳಲು ಯಾವ ಅನುಮಾನವಿಲ್ಲ. ಸಾಹಿತ್ಯವನ್ನು ಮೂರುವಿಧ ವಾಗಿ ವಿಂಗಡಿಸಿದ್ದಾರೆ. (೧) ಜೈನಸಾಹಿತ್ಯ, (೨) ವೀರಶೈವಸಾಹಿತ್ಯ, (೩) ಬ್ರಾಹ್ಮಣಸಾಹಿತ್ಯ. ಕನ್ನಡ ನಾಡು ಪವಿತ್ರವಾದುದು. ಇದು ಪವಿತ್ರ

ವಾಗಲು ಕಾರಣ. ಇದು ಪ್ರಪಂಥರ ತಾಯಿನಾಡಾಗಿದೆ. ಕರ್ನಾಟಕ ದೇಶ ದಲ್ಲಿ ಅಸಂಖ್ಯಾತ ವೀರಶೈವ ಜನರಿದ್ದಾರೆ. ಕನ್ನಡನಾಡು ಎಂದರೆ ಲಿಂಗ ದಂತರ ನಾಡು ಎಂದು ಪರಿಗಣಿಸಿದ್ದಾರೆ.

ವೀರಶೈವ ಸಾಹಿತ್ಯವು (ವಚನ ಸಾಹಿತ್ಯ) ಕನ್ನಡದಲ್ಲಿ ಏಕೆ, ಇತರ ಭಾಷೆಗಳಲ್ಲಿ ಕೂಡ ವಿಶಿಷ್ಟ ಸ್ಥಾನ ಗಳಿಸಿದೆ. ಇದರ ಉಗಮವು ಶ್ರೀ. ಜಗ ಜ್ಯೋತಿ ಬಸವೇಶ್ವರನಿಂದ ಆಯಿತೆಂದು ಹೇಳಬಹುದು. ವಚನ ಸಾಹಿ ತ್ಯವು ದೇವರದಾಸಿಮಯ್ಯ, ಬಸವೇಶ್ವರ, ಪ್ರಭುದೇವರು, ಚೆನ್ನಬಸವೇಶ್ವರ, ಸಿದ್ಧರಾಮೇಶ್ವರ, ಅಕ್ಕಮಹಾದೇವಿ ಮೊದಲಾದ ಶಿವಶರಣೆಯರು ರಚಿಸಿ, ವೀರಶೈವ ಧರ್ಮಕ್ಕೆ ಕನ್ನಡನಾಡಿಗೆ ಹೊಸ ಮಾರ್ಗವನ್ನೇ ತೋರಿಸಿಕೊ ಟ್ಟಿದ್ದಾನೆ.

ವಚನಸಾಹಿತ್ಯವ ರಚಿಸಿ
ಹೊಸ ವಿಚಾರವ ಕೆರಳಿಸಿ ಕನ್ನಡ ಬೆಳಗಿಸಿದವರು
ದಾಸಿಮಯ್ಯ ಬಸವಣ್ಣ ಪ್ರಭುದೇವ ಚನ್ನಬಸವಣ್ಣರು,
ಲಕ್ಕಮ್ಮ ಅಕ್ಕಮಹಾದೇವಿಯರು
ಚಂಪುಕಾವ್ಯಗಳ ಬರೆದು ಕನ್ನಡ ಸಾಹಿತ್ಯ
ಬೀಜಾರೋಪವಮಾಡಿದರು ಪಂಪ ರನ್ನ ಪೊನ್ನರು
ಕನ್ನಡ ಕವಿತೆಗಳ ಬರೆದು ಹೊಸ ಹೊಲಬು
ತೋರಿದರು ಹರಿಹರ ರಾಘವಾಂಕ ಸರ್ವಜ್ಞರು
ಸಂಸ್ಕೃತ ಸೌಧದಿಂದಿಳದು ಕನ್ನಡದಿ
ರಸಕಾವ್ಯವ ರಚಿಸಿದರು ಕುಮಾರ ವ್ಯಾಸ ಲಕ್ಷ್ಮೀಶ ಮುದ್ದಣಾದಿಗಳು
ಇವರೆಲ್ಲರು ಸಾಹಿತ್ಯ ಸೃಷ್ಟಿಯ ಬ್ರಹ್ಮರಾದರು. ರಸಸ್ವರೂಪರಾದರು
ಶ್ರೀ ನಿಡುಮಾಮಿಡಿ ಶ್ರೀ ಗಿರಿಸೂರ್ಯ ಸಿಂಹಾಸನಾಧೀಶ್ವರು

ಎಂದು ಶ್ರೀ. ಜ. ಚ. ನಿಯವರು "ವಚನ ಮಂಜರಿ" ಯಲ್ಲಿ ಹೇಳಿದ್ದಾರೆ.

ನಮ್ಮ ವಚನಕಾರರು ತಿಳಿಗನ್ನಡದಲ್ಲಿ, ಪಂಡಿತರಿಗೂ ಪಾಮರರಿಗೂ ತಿಳಿಯುವಂತೆ ನುಡಿದಿದ್ದಾರೆ. ಪ್ರತಿಯೊಂದು ವಚನದಲ್ಲಿ ಅದ್ಭುತ ತುಂಬಿದೆ. ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ ಎಂಬ ವಚನ ಸಂಗೀತದಿಂದ ಹಾಡಿದರೆ ಅದೆಷ್ಟೋ ಆನಂದವಾಗುತ್ತಿದೆ.

ವಚನಗಳು ಷಟ್ಪದಿಗಳಿಗೂ ಛಂದಸ್ಸಿಗೂ ಸಂಬಂಧಪಟ್ಟಿದ್ದಲ್ಲ. ಇವುಗಳ ಮಾರ್ಗವೇ ಬೇರೆ ಸುಪ್ರಸಿದ್ಧ ಸಾಹಿತಿಗಳಾದ ಕುವೆಂಪು ಅದರು. ಈ ಗದ್ಯ ಕ್ಲಿಪ್ತ ಛಂದಸ್ಸನ್ನು ತೊರೆದಿದ್ದರೂ ಅದರ ವ್ಯೆಕಟ್ಟು ಅಭಂಗವಾದುದಲ್ಲಿ ಅದು ಗದ್ಯರೂಪಧಾರಣ ಮಾಡಿದ್ದರೂ ಕಾವ್ಯತ್ವವನ್ನು ಬಿಟ್ಟಿಲ್ಲ- ಆ ಗದ್ಯದ ಪ್ರಕಾರಾಂತರವೇ ವಚನಸಾಹಿತ್ಯವಾಗಿ ಹೂ ಬಿಟ್ಟಿತು. ವಚನಗಳು ಆ ಗದ್ಯದಿಂದ ಹೊಮ್ಮಿದ ಬಿಡಿಯ ಕಿಡಿಹೂಗಳು ಎಂದಿದ್ದಾರೆ. ಪ್ರಬುದ್ಧ ಕರ್ನಾಟಕ ಸಂಪುಟ ೩೧. ಸಂಚಿಕೆ ೧. "ವಚನಗಳಲ್ಲಿ ಉತ್ತಮ ಭಾವಗಳವೆ. ಶ್ರೇಷ್ಠ ನಿರೂಪಣೆ ಇದೆ. ಅರ್ಥಾಲಂಕಾರ, ಶಬ್ದಾಲಂಕಾರಗಳವೆ. ಉಪಮೆ, ದೃಷ್ಟಾಂತ ಮೊದಲಾದ ಅಲಂಕಾರಗಳು ಹದವರಿತು ಬಂದಿವೆ. ಒಟ್ಟನಲ್ಲಿ ಸಾಹಿತ್ಯದಲ್ಲಿ ಕಾಣುವ ಶ್ರೇಷ್ಠ ಕಾವ್ಯಾನಂದವನ್ನೂ ನಾವು ಈ ಶಿವಶರಣರ ವಚನಗಳಲ್ಲಿಯೂ ಅನುಭವಿಸಬಹುದು. ಇವುಗಳನ್ನು ಓದಿ ಆನಂದಿಸಬಹುದು. ಅಲ್ಲದೆ ಜೀವನಕ್ಕೆ ಪ್ರಯೋಜನವನ್ನು ಪಡೆಯಬಹುದು.

ವಚನಸಾಹಿತ್ಯದಲ್ಲಿ ಮುಖ್ಯವಾಗಿ ವಿಶ್ವಧರ್ಮದ ಮಾತುಗಳು ಬಂದಿದ್ದರೂ ಮತಪ್ರಕ್ರಿಯೆಗಳಾದ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳ ವಿಷಯವಾಗಿ ಬಹಳ ಸಂಗತಿಗಳು ನಿರೂಪಿತವಾಗಿವೆ.

ಕನ್ನಡ ಕವಿ ಚರಿತ್ರೆಕಾರರೂ ಈ ವಚನಸಾಹಿತ್ಯವನ್ನು ಕುರಿತು "ಈ ವಚನಗಳು ಕನ್ನಡ ಸಾಹಿತ್ಯ ಪೂಜ್ಯ ಸ್ಥಾನ ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಕನ್ನಡ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನಮುಟ್ಟುವಂತೆ ಬೋಧಿಸುತ್ತವೆ. ಇವು ಕನ್ನಡ ಭಾಷೆಯ ಉಪನಿಷತ್ತುಗಳಂತಿವೆ" ಎಂದು ಹೇಳಿದ್ದಾರೆ. (ಕ. ಕ. ಚ. ಭಾಗ ೩. ಪುಟ ೨೮) ವಚನ ಧರ್ಮಸಾರ ಎಂಬ ಗ್ರಂಥದಲ್ಲಿ ಶ್ರೀ ಎಂ. ಆರ್. ಶ್ರೀನಿವಾಸ ಮೂರ್ತಿಗಳು "ವಚನಗಳಲ್ಲಿ ರಸ, ಭಾವ, ಅಲಂಕಾರಗಳೂ, ಉದಾತ್ತ ಧ್ಯೇಯವೂ ಇರುವದರಿಂದ ಅವು ಉತ್ತಮ ಸಾಹಿತ್ಯವೆಂದು ಧಾರಾಳವಾಗಿ ಹೇಳಬಹುದು. ವಚನಗಳನ್ನು ಕನ್ನಡ ಸಾಹಿತ್ಯದ ಉಪನಿಷತ್ತುಗಳು. ಆ ಕವಿಗಳನ್ನು ಕನ್ನಡ ನಾಡಿನ ರಸಋಷಿಗಳು" ಎಂದು ಹೇಳಿರುತ್ತಾರೆ.

ವಚನಗಳು ವೀರಶೈವ ಧರ್ಮದ ಅಸ್ತಿಭಾರಗಳು ಹಾಗೂ ವಚನ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಒಂದು ಅಂಗವಾಗಿದೆ. "ವಚನ ಶಾಸ್ತ್ರವು ಇತಿಹಾಸ ಸಂಶೋಧಕರು, ನಾಟಕ ಕರ್ತೃಗಳು, ಹಾಡುಗಳನ್ನು ಕಟ್ಟುವವರು, ಸಮಾಜ ಸುಧಾರಕರು, ಅಧ್ಯಾತ್ಮ ಸಾಧಕರು, ಲೋಕಾನುಭವವನ್ನು ಬಯಸುವವರು ಇವರಿಗೆಲ್ಲಾ ಉಪಯುಕ್ತವಾಗಿವೆ. ಆದ್ದರಿಂದಲೇ ಇದು 'ಕನ್ನಡ ನಂದನ ವನ' ಎಂದು ಕರೆಯಬಹುದು." (ವೀರಶೈವ ಸಾಹಿತ್ಯ ಮತ್ತು ಇತಿಹಾಸ ಭಾಗ ೧. ಪುಟ ೪೬.)

ವಚನಸಾಹಿತ್ಯ ಹಾಗೂ ವೀರಶೈವ ಸಾಹಿತ್ಯ ವಿಶ್ವದಲ್ಲಿ ವಿಶಿಷ್ಟಸ್ಥಾನ ಪಡೆಯಲೆಂದು ಹಾರೈಸುತ್ತೇನೆ. ಈ ಕೆಳಗಿನ ವಚನಗಳಲ್ಲಿ ಸಾಹಿತ್ಯವನ್ನು ಕಾಣಬಹುದು.

೧. " ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ "

೨. " ದಯವಿಲ್ಲದ ಧರ್ಮವಾವುದಯ್ಯ "

೩. " ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ "

೪. " ಹಾಲ ತೊರೆಗೆ ಬೆಲ್ಲದಂತಹ ಕೆಸರು, ಸಕ್ಕರೆಯಂತಹ ಮಳಲು "

೫. " ಕಲ್ಲನಾಗರ ಕಂಡರೆ ಹಾಲನೆರೆ ಎಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ "

೬. ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯ? ಸಮುದ್ರದ ದಡದಲ್ಲಿ ಮನೆಯ ಮಾಡಿ ನೆರೆತೆರೆಗಳಿಗಂಜಿದೊಡೆಂತಯ್ಯ? ಸಂತೆಯೊಳಗೊಂದು ಮನೆಯ ಮಾಡಿ ಶಬ್ದ ಜಾಲಕೆ ನಾಚಿದೊಡೆಂತಯ್ಯ ? ಚನ್ನಮಲ್ಲಿಕಾರ್ಜುನಯ್ಯ ಸಂಸಾರದಲ್ಲಿ ಹುಟ್ಟಿದ ಬಳಿಕ ಸ್ತುತಿನಿಂದೆಗಳಿಗೆ ಅಂಜಬಾರದು, ಅಳುಕಬಾರದು. ಸಮಾಧಾನಿಯಾಗಿರಬೇಕು."



ಅಖಿಲಕರ್ನಾಟಕದಲ್ಲಿ

ವಚನಶಾಸ್ತ್ರ ಪ್ರಚುರಪಡಿಸಿ,

ವಚನಶಾಸ್ತ್ರ ಪಿತಾಮಹರೆಂದು ಖ್ಯಾತಿವೆತ್ತ

ಡಾ॥ ರಾ. ಬ. ಫ. ಗು. ಹಳಕಟ್ಟಿ, ಬಿ.ಏ. ಎಲ್.ಎಲ್.ಬಿ.

ಇವರ ಸಂಪಾದಕತ್ವದಲ್ಲಿ



೩೨ ವರ್ಷಗಳ ವರೆಗೆ ಸೇವೆಸಲ್ಲಿಸಿದ

# ಶಿವಾನುಭವ

ಮಾಸ ಪತ್ರಿಕೆಗೆ

## ಚಂದಾದಾರರಾಗಿರಿ.

ವಾರ್ಷಿಕ ಚಂದಾ

೫ ರೂಪಾಯಿ ೭೫ ನಯೆ ಪೈಸೆ.

ಶಿವಾನುಭವ ಕಾರ್ಯಾಲಯ, ವಿಜಾಪುರ.

R. N. B. 2554

From
*Shivanubhava*
*Office*
BIJAPUR

ಶ್ರೀ. ಚನಮಲ್ಲಪ್ಪ ಸಿದ್ದಪ್ಪ ಒಡೇವಿ
ಮು— ಬನ್ನಟ್ಟಿ
ತಾ— ಜಮುಖಂಡಿ

---

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ಮನೆ ನಂ ೧೩೬೮ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಸಂಚಿಕೆ ೬, ೭, ೮. ಸಂಪುಟ ೩೨

# ಶಿವಾನುಭವ

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.

*

ಜೂನ, ಜುಲೈ, ಅಗಷ್ಟ ೧೯೫೮

ವಾರ್ಷಿಕ ಚಂದಾ ] [ ೫ರೂ. ೭೫ನ.ಪೈ.

# ವಿಷಯಾನುಕ್ರಮಣಿಕೆ



—oo:●:oo—



# ವೀರಶೈವ ವಿದ್ಯಾಪೀಠದ ಅವಶ್ಯಕತೆ.[1]

( ಲೇಖಕ:— ಶರಣ ಸೇವಕ. )

ಈಗಿನ ವೈಜ್ಞಾನಿಕ ಯುಗದಲ್ಲಿ ಧರ್ಮವು ಹ್ರಾಸವಾಗುತ್ತ ನಡೆದಿದೆ. ಆದರಿಂದ ಜನರ ನೈತಿಕ ಮಟ್ಟವೂ ಕೆಳಗಿಳಿಯ ಹತ್ತಿದೆ. ಧರ್ಮದಲ್ಲಿ ಬಂಧುರತೆ-ಯಿದ್ದರೆ ನೈತಿಕಮಟ್ಟವೂ, ಬಂಧುರವಾಗುವದು. ನೈತಿಕವು ಧರ್ಮದ ಮುಖ್ಯಾಂಗವಾಗಿದೆ. ಈಗಿನ ಜಾಗತಿಕ ಅಶಾಂತಿಮಯವಾದ ಹಾಗೂ ವಿಧ್ವಂಸಕವಾದ ವೈಜ್ಞಾನಿಕ ಯುಗದಲ್ಲಿ ಧರ್ಮಕ್ಕೆ ಶರಣು ಹೊಡೆಯದೆ ಗತ್ಯಂತರವಿಲ್ಲ. ಇಲ್ಲದಿದ್ದರೆ ಜಗತ್ತಿಗೆ ಎಂಥ ಗಂಡಾಂತರ ಪ್ರಸಂಗವು ಕಾದಿದೆಯೆಂಬುದನ್ನು ಅಟಂಬಾಂಬ, ಹೈಡ್ರೋಜನ್ ಬಾಂಬುಗಳು ತೋರಿಸಿ ಕೊಡುತ್ತವೆ. ಅಂತೆಯೇ ಅಮೇರಿಕೆಯ ಅಧ್ಯಕ್ಷರಾದ ಶ್ರೀ ಐಸೆನ್ ಹಾವರರು ಜಾಗತಿಕ ಶಾಂತಿಗೆ ಆಧ್ಯಾತ್ಮಿಕ ತತ್ವಾಚರಣೆಯೇ ಅತ್ಯಾವಶ್ಯಕವೆಂದು ಸಾರಿದ್ದಾರೆ. ಧರ್ಮವನ್ನು ಬಿಟ್ಟು ಜಗತ್ತು ವಿಜ್ಞಾನದ ಬೆನ್ನು ಹತ್ತಿದ್ದರಿಂದಲೇ ಅನೀತಿ, ಅಶಾಂತಿ, ದ್ವೇಷಾಸೂಯೆ, ಸ್ವಾರ್ಥ, ಪರಸ್ಪರ ಭೀತಿ-ಅವಿಶ್ವಾಸಗಳುಂಟಾಗ ತೊಡಗಿವೆ. “ ಸಕಲ ಜೀವಾತ್ಮರಿಗೆ ಲೇಸನೇ ಬಯಸುವರು ನಮ್ಮ ಕೂಡಲ ಸಂಗನ ಶರಣರು ” ಎಂದು

ಬಸವಣ್ಣನವರು ಸಾರಿದ್ದಾರೆ. ಇದೇ ನಿಜವಾಗಿ ವಿಶ್ವಧರ್ಮದ ತಿರುಳು. ಇಸ್ಲಾಂ, ಬೌದ್ಧ, ಕ್ರೈಸ್ತ ಮತತತ್ವಗಳಾದರೂ ಲೋಕಹಿತವನ್ನೇ ಸಾಧಿಸ ಬೇಕೆಂದು ಬೋಧಿಸಿರುವವಲ್ಲದೆ ವಿನಾಶಕ ತತ್ವಗಳನ್ನೆಂದಿಗೂ ಹೇಳುವದಿಲ್ಲ. ಆದರೆ ಅವುಗಳ ಅನುಯಾಯಿಗಳು ಧರ್ಮವನ್ನು ಧಿಕ್ಕರಿಸಿ ವಿನಾಶಕಾರಕ ವಾದ ವೈಜ್ಞಾನಿಕ ಸಂಶೋಧನೆಯಲ್ಲಿ ಪ್ರವೃತ್ತರಾದ್ದರಿಂದ ಅಶಾಂತಿ ಭೀತಿಗಳುತ್ಪನ್ನವಾಗಿವೆ. ಆದುದರಿಂದ ಆಯಾಯ ಧರ್ಮದ ಅನುಯಾಯಿ ಗಳು ತಮ್ಮ ಧರ್ಮ ಸಂಸ್ಥಾಪಕರು ಹೇಳಿಕೊಟ್ಟ ದಿವ್ಯ ತತ್ವಗಳನ್ನಳವಡಿಸಿ ಕೊಂಡು ಸಾಗಿದರೆ ಮಾತ್ರ ಜಗತ್ತಿನಲ್ಲಿ ನಿಜವಾಗಿ ಸುಖ ಶಾಂತಿಗಳು ನೆಲಿಸುವವೆಂಬುದರಲ್ಲಿ ಸಂದೇಹವಿಲ್ಲ. ಅದರಂತೆ ವೀರಶೈವರಾದರೂ ಪಾ ಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಧರ್ಮ ಬಾಹಿರರಾಗದೇ ಅದನ್ನು ಪುನರುಜ್ಜೀವನ ಗೊಳಿಸುವದು ಅತ್ಯಂತ ಮಹತ್ವದ ಕಾರ್ಯವಾಗಿದೆ. ಅದನ್ನು ಶೀಘ್ರವಾಗಿ ಆಚರಣೆಯಲ್ಲಿ ತಂದು ಜನತೆಗೆ ಮಾರ್ಗದರ್ಶನ ಮಾಡಲಿಕ್ಕೆ ಇದು ಒಳ್ಳೆ ಸುಸಂಧಿಯಾಗಿದೆ.

ವೀರಶೈವ ಧರ್ಮವನ್ನು ಪುನರುಜ್ಜೀವನ ಗೊಳಿಸುವದೆಂದರೆ ನಮ್ಮ ಸಾಹಿತ್ಯ, ಸಂಸ್ಕೃತಿ, ಧರ್ಮ ತತ್ವಗಳ ಪ್ರಸಾರಕ್ಕಿಂತಲೂ ಆಚರಣೆಯು ಹೆಚ್ಚು ಮಹತ್ವವಾದುದೆಂದು ಯಾರೂ ಮರೆಯಲಾಗದು. ಈಗಾಗಲೇ ನಮ್ಮ ಸಾಹಿತ್ಯ, ಸಂಸ್ಕೃತಿ ಧರ್ಮಗಳನ್ನು ಬೋಧಿಸುವ ಗ್ರಂಥಗಳು ಸಾಕಷ್ಟು ಪ್ರಕಟವಾಗಿವೆ. ಇನ್ನೂ ಸಂಶೋಧಿಸಲ್ಪಡುತ್ತಾ ಇವೆ. ಎಷ್ಟೋ ಮಾಸ ಪತ್ರ ವಾರ ಪತ್ರಗಳು ಅವುಗಳನ್ನು ಆಗಾಗ್ಗೆ ಪ್ರಚಾರ ಗೊಳಿಸುತ್ತ ಅವೆ. ಅನೇಕ ತಜ್ಞ ಲೇಖಕರು ಆಳವಾಗಿ ಅಭ್ಯಾಸ ಮಾಡಿ ಆಯಾಯ ವಿಷಯ ಗಳ ಮೇಲೆ ಪ್ರಬುದ್ಧವಾದ ಲೇಖನಗಳನ್ನೂ, ಪ್ರಕಟಿಸುತ್ತಲಿದ್ದಾರೆ. ಪರ ಧರ್ಮದವರೂ ಕೂಡ ನಮ್ಮ ಸಾಹಿತ್ಯ, ಸಂಸ್ಕೃತಿ ಧರ್ಮ ತತ್ವಗಳನ್ನರಿತು ಕೊಂಡು ಗ್ರಂಥಗಳ ಮೂಲಕ ಅವುಗಳ ಮೇಲ್ಮೆಯನ್ನು ಬಣ್ಣಿಸಿದ್ದೂ, ಉಂಟು. ಶಿವಾನುಭವ ಸಮ್ಮೇಲನ, ಅನುಭವ ಮಂಟಪ, ಅಕ್ಕನ ಬಳಗ ಅಣ್ಣನ ಬಳಗ, ಉಚಿತ ಪ್ರಸಾದನಿಲಯ, ಶಿವಯೋಗ ಮಂದಿರ, ವೀರಶೈವ ವಿದ್ಯಾಪೀಠ, ಮುಂತಾದ ಸಂಘ ಸಂಸ್ಥೆಗಳಿಂದ ತಕ್ಕ ಮಟ್ಟಿಗೆ ಧಾರ್ಮಿಕ ಪ್ರಸಾರವು ನಡೆಯುತ್ತಾ ಇದೆ. ಇದಲ್ಲದೆ ಪುರಾಣ ಪ್ರವಚನ, ಕೀರ್ತನ, ವ್ಯಾಖ್ಯಾನ, ನಾಟಕ, ಸಿನೇಮಾಗಳು ಕೂಡ ವೀರಶೈವ ಮತ ತತ್ವಪ್ರಚಾರ ದಲ್ಲಿ ತಮ್ಮ ಅಳಲಿ ಸೇವೆಯನ್ನು ಸಲ್ಲಿಸಿವೆ. ಆದಾಗ್ಯೂ ವೀರಶೈವ ಧರ್ಮದ

ನಿಜವಾದ ಜಾಗ್ರತಿಯಾದಂತೆ ನಮಗೆ ಅನಿಸುವದಿಲ್ಲ. ಮೇಲ್ಕಂಡಪ್ರಯತ್ನಗಳೆಲ್ಲ ವಿಶೇಷತ: ಧರ್ಮತತ್ವ ಪ್ರಚಾರವನ್ನು ಲಕ್ಷಿಸಿ ನಡೆಗಿರುವವೇ ವಿನಾ ಆಚರಣೆಯನ್ನನು ಸರಿಸಿಲ್ಲ. ಅದಕ್ಕಾಗಿ ಒಂದು ಹೊಸ ಮಾದರಿಯ ವೀರಶೈವ ವಿದ್ಯಾಪೀಠವು ಅತ್ಯಾವಶ್ಯಕವೆಂದು ನಮಗೆನಿಸುತ್ತದೆ. ಅದು ಯಾವ ಮಾದರಿಯದಿರಬೇಕು? ಅಲ್ಲಿ ಯಾವ ವಿಷಯಗಳು ಕಲಸಲ್ಪಡಬೇಕು? ಮುಂತಾದವುಗಳನ್ನು ಕುರಿತು ಇದರಡಿಯಲ್ಲಿ ಯಥಾಶಕ್ತಿ ವಿಚಾರಿಸಲಾಗಿದೆ. ಅದರ ಸೂಕ್ಷ್ಮ ಸೂಕ್ಷ್ಮತೆಗಳನ್ನು ವಿವೇಚಿಸಲು ಸಮಾಜದ ಮುಖಂಡರ ವಿವೇಕಕ್ಕೆ ಬಿಟ್ಟು ಕೊಡಲಾಗಿದೆ.

ನನ್ನ ಅಭಿಪ್ರಾಯದಲ್ಲಿ ಸದ್ಯ ಜಿಲ್ಹೆಗೊಂದರಂತೆ ವೀರಶೈವ ವಿದ್ಯಾಪೀಠವೊಂದನ್ನು ಸ್ಥಾಪಿಸಬೇಕು. ಅದರಲ್ಲಿ ಪ್ರಾಥಮಿಕ, ಮಾಧ್ಯಮಿಕ, ಉಚ್ಚ, ಪ್ರೌಢ, ಎಂಬ ನಾಲ್ಕು ಶಿಕ್ಷಣ ವಿಭಗಗಳನ್ನು ಮಾಡತಕ್ಕದ್ದು. ಪ್ರಾಥಮಿಕ ಶಿಕ್ಷಣವು ಬಾಲಕನ ೬ನೇ ವಯಸ್ಸಿನಿಂದ ೧೦ನೇ ವಯಸ್ಸಿನವರೆಗೆ, ಮಾಧ್ಯಮಿಕ ಶಿಕ್ಷಣವು ೧೧ನೇ ವಯಸ್ಸಿನಿಂದ ೧೫ರ ವರೆಗೆ; ಉಚ್ಚ ಶಿಕ್ಷಣವು ೧೬ರಿಂದ ೨೦ರ ವರೆಗ; ಪ್ರೌಢ ಶಿಕ್ಷಣವು ೨೧ರಿಂದ-೨೫ರವರೆಗೆ ನಡೆಯಬೇಕು. ಒಮ್ಮೆ ಬಾಲಕನು ೬ನೇವರುಷಕ್ಕೆ ಈ ವಿದ್ಯಾಪೀಠದಲ್ಲಿ ಪ್ರವೇಶಿಸಿದರೆ ೨೫ನೇ ವರ್ಷದನಂತರವೇ ಹೊರಬೀಳಬೇಕು.

ಈ ವೀರಶೈವ ವಿದ್ಯಾಪೀಠವು ನದೀತೀರದ ವೃಕ್ಷಗಳ ಮಧ್ಯದಲ್ಲಿ ಪ್ರಶಾಂತ ವಾತಾವರಣದ ಏಕಾಂತ ಸ್ಥಾನದಲ್ಲಿ ಸ್ಥಾಪಿಸಲ್ಪಡಬೇಕು. ರೇಲ್ವೆ ಸ್ಟೇಶನ್ನಿಗೆ ಸಮೀಪವಾಗಿರಬೇಕು. ಅದು ಪ್ರಾಚೀನ ಕಾಲದ ಗುರುಕುಲ ಪದ್ಧತಿಯಂತೆ ನಡೆಯಬೇಕು. ಯೋಗ್ಯ ಸ್ವಾಮಿಗಳೊಬ್ಬರು ಕುಲಪತಿಗಳಾಗಿ ಸದಾ ಅಲ್ಲಿಯೇ ವಾಸ ಮಾಡಿ ಕೊಂಡಿರಬೇಕು. ಆ ಸ್ಥಾನದಲ್ಲಿ ಚಹಾಪಾನ ತಂಬಾಕ ಸೇವನೆ, ಕ್ರಾಪ್, ಆಧುನಿಕ ವೇಷಾಡಂಬರ ಮೊದಲಾದ ದುವ್ರ್ಯಸನ ಹಾಗೂ ಅಸಾಂಸ್ಕೃತಿಕ ವಿಷಯಗಳಿಗೆ ಎಡೆಯಿರಕೂಡದು. ವೀರಶೈವ ಮತದ ಎಲ್ಲ ಒಳಪಂಗಡಗಳ ವಿದ್ಯಾರ್ಥಿಗಳಿಗೂ ಅದರಲ್ಲಿ ಪ್ರವೇಶಕ್ಕೆ ಅವಕಾಶ ವಿರಬೇಕು. ಬಳಿಕೆಯಿಲ್ಲದ ವೀರಶೈವ ಬಾಲಕರನ್ನು ಕೂಡ ದೀಕ್ಷೆಯಿಂದ ಬಳಿಕೆಯಲ್ಲಿ ತೆಕೆದು ಕೊಳ್ಳಬೇಕು. ಅಲ್ಲಿ ಎಲ್ಲರಿಗೂ ಸರ್ವಸಾಮಾನ್ಯವಾದ ಒಂದೇ ಪ್ರಸಾದ ನಿಲಯವಿರಬೇಕು. ಬಡ ಮಕ್ಕಳಿಗೆ ಉಚಿತ ಮಾಗಿರಬೇಕು. ಶ್ರೀಮಂತರ ಮಕ್ಕಳಿಂದ ಸಾಕಷ್ಟು ಮಾತ್ರ

ವೆಚ್ಚವನ್ನು ತಗೆದು ಕೊಳ್ಳಬೇಕು. ಒಳ ಪಂಗಡಗಳಲ್ಲಿ ಹೆಚ್ಚು ಕಡಿಮೆ ಎಂಬ ಭೇದ ಭಾವಕ್ಕೆ ಅಲ್ಲಿ ಎಳ್ಳಷ್ಟು ಆಸ್ಪದ ವಿರಕೂಡದು. ಅಲ್ಲಿಯೇ ಬಾಲಕರ ಸಲುವಾಗಿ ವಸತಿ ಗೃಹಗಳು ಇರತಕ್ಕದ್ದು. ಅವರ ಆರೋಗ ವನ್ನು ಪರೀಕ್ಷಿಸಲು ಅಲ್ಲಿ ಒಬ್ಬವೈದ್ಯರೂ ಇರಬೇಕು. ಕಿಮ್ಮತ್ತಿನ ಕಟ್ಟಡ ಗಳಿಗಿಂತಲೂ ಜೋಪಡಿಗಳಾಗಲಿ ಅಲ್ಪ ವೆಚ್ಚದ ಇಮಾರತಿಗಳಿದ್ದರೆ ನಡೆ ಯುತ್ತದೆ. ಸಾಕಷ್ಟು ವೃಕ್ಷಗಳ ನೆರವಿದ್ದರೆ ಸಾಕು. ಇಲ್ಲವೆ ಅಲ್ಲಿ ವೃಕ್ಷ ಗಳನ್ನು ಬೆಳೆಯಿಸುವ ಏರ್ಪಾಟು ಮಾಡಬೇಕು. "ಬಿಲ್ವ" ಬನ್ನಿ ವೃಕ್ಷಗಳು, ಎಕ್ಕಿ, ಮಲ್ಲಿಗೆ, ಸೇವಂತಿಗೆ ಮೊದಲಾದ ಕಂಟಿಗಳು ಇದ್ದರೆ ಆಚಾರಕ್ಕೆ ಹೆಚ್ಚು ಅನುಕೂಲ. ಇಂಥ ಪವಿತ್ರ ಪ್ರಶಾಂತ ವಾತಾವರಣದಲ್ಲಿ ಸತ್ಸಂಗದೊಡನೆ ಶಿಕ್ಷಣಪಡೆದ ಮಕ್ಕಳು ಸುಸಂಸ್ಕೃತರಾಗಲೇ ಬೇಕು. ವಿದ್ಯಾಪೀಠದ ಬಾಲಕರಿಗೆ ನಡು ನಡುವೆ ಸೂಟಿಯಲ್ಲಿ ತಮ್ಮ ಊರುಗಳಿಗೆ ಹೋಗ ಗೊಡಬಾರದು. ಹೋಗ ಗೊಟ್ಟರೆ ಅವರಿಗೆ ಕಲುಷಿತ ವಾತಾ ವರಣವು ಅಂಟಿಕೊಳ್ಳುವ ಸಂಭವ ಹೆಚ್ಚು.

ವಿದ್ಯಾಪೀಠದಲ್ಲಿ ಕಲಿಸಲ್ಪಡುವ ವಿಷಯುಗಳೆಂದರೆ ವ್ಯವಹಾರಿಕ, ಧಾರ್ಮಿಕ, ನೈತಿಕ, ಬೆಳವಣಿಗೆಗೆ ಕಾರಣವಾದಂಥವಿರಬೇಕು. ಮೇಲ್ಕಂಡ ೪ ಶಿಕ್ಷಣ ವಿಭಾಗಗಳಿಗನುಸರಿಸಿ ತಜ್ಞರಿಂದ ಅಭ್ಯಾಸ ಕ್ರಮದ ಯೋಜನೆ ಯನ್ನು ಮುಂಚಿತವಾಗಿ ಮಾಡಬೇಕು. ಆವಕ್ಕನುಗುಣವಾಗಿ ಸುಶಿಕ್ಷಿತರಿಂದ ಯೋಗ್ಯ ಕ್ರಮಿಕ ಪುಸ್ತಕಗಳನ್ನು ಬರೆಯಿಸಬೇಕು. ಅಲ್ಲಿ ಕನ್ನಡ ಹಿಂದೀ ಸಂಸ್ಕೃತ, ಇಂಗ್ಲೀಷ, ಈ ನಾಲ್ಕು ಭಾಷೆಗಳನ್ನು ಕಲಿಸಬೇಕು. ಪತ್ರವ್ಯವ ಹಾರ, ಜಮಾಖರ್ಚು, ವ್ಯವಹಾರಿಲೆಕ್ಕ, ಬಾಯಿಲೆಕ್ಕ, ಅಂಕಗಣಿತಗಳನ್ನು ಕಲಿಸಿ ಕೊಡಬೇಕು. ವರ್ತಮಾನ ಪತ್ರ-ಮಾಸ ಪತ್ರಗಳನ್ನು ಕಡ್ಡಾಯವಾಗಿ ಓದಹಚ್ಚಿ ಪರೀಕ್ಷಿಸಬೇಕು. ಸಾಮಾನ್ಯಜ್ಞಾನ (ಇತಿಹಾಸ - ಭೂಗೋಲ- ಪೌರನೀತಿ—ಸಾಯನ್ಸ) ವನ್ನು ತಿಳಿಸುವ ಗ್ರಂಥವನ್ನು ವಿಭಾಗಕ್ಕೊಂದರಂತೆ ಬರೆಯಿಸಬೇಕು. ಧಾರ್ಮಿಕ ವಿಷಯುಗಳನ್ನು ತಿಳಿಸಲಿಕ್ಕೆ ಕ್ರಮವಾಗಿ, (೧) ಸರ್ವಜ್ಞನ ವಚನಗಳು (೨) ಶಿವಶರಣರ ವಚನಗಳು (೩) ಶತಕ-ತ್ರಯ (೪) ಶೂನ್ಯ ಸಂಪಾದನೆ (೫) ಪ್ರಭುಲಿಂಗ ಲೀಲೆ (೬) ಶರಣ ಹಸಿಗೆ (೭) ಸಿದ್ಧಾಂತ ಶಿಖಾಮಣಿ (೮) ಭಗವದ್ಗೀತೆ (೯) ದಶೋಪ ನಿಷತ್ತುಗಳು ಈ ಗ್ರಂಥಗಳು ಅವಶ್ಯವಾಗಿರಬೇಕೆಂದು ನಮಗೆನಿಸುತ್ತದೆ.

ವಿದ್ಯಾ ಪೀಠದಲ್ಲಿ ನಮ್ಮ ಸಂಸ್ಕೃತಿಗನುಸರಿಸಿ ಒಳ್ಳೇ ದಿನಚರಿಯನ್ನು ಬಾಲಕರು ಪಾಲಿಸುವಂತೆ ನೋಡಿಕೊಳ್ಳ ಬೇಕಾಗುತ್ತದೆ. ನಸುಕಿನಲ್ಲಿ ಏಳುವದು, ಮುಖಪ್ರಕ್ಷಾಳನ, ವಿಭೂತಿ ಧಾರಣ, ಸಾಮೂಹಿಕ ಪ್ರಾರ್ಥನೆ, ಸ್ನಾನ ಶಿವಪೂಜೆ, ಪ್ರಸಾದಸೇವನೆ, ಅಭ್ಯಾಸ, ಆಟಪಾಟಗಳು ಮುಂತಾಗುವದು ಇತ್ಯಾದಿಗಳ ವಿಷಯದಲ್ಲಿ ಒಂದು ಕ್ರಮವನ್ನು ಗೊತ್ತು ಪಡಿಸಿ ಅದರಂತೆ ವಿದ್ಯಾರ್ಥಿಗಳಿಗೆ ನಡೆಯ ಹಚ್ಚಬೇಕು. ಆದಷ್ಟು ಪ್ರಾರ್ಥನೆ, ಶಿವಪೂಜಾ, ಮಂತ್ರ, ಭಜನಾ ಪದಗಳೆಲ್ಲ ಕನ್ನಡದಲ್ಲಿಯೇ ಇದ್ದರೆ ಹೆಚ್ಚು ಶ್ರೇಯಸ್ಕರ ಬಾಲಗರಿಗೆ ವಿದ್ಯಾ ಪೀಠದ ಸಮವಸ್ತ್ರಗಳನ್ನು ಕೊಡಬೇಕು. ಅವರಲ್ಲಿ ಸ್ವಚ್ಛತೆ, ಅಚ್ಚುಕಟ್ಟಿತನ, ಕಾಯಕ ಪ್ರೀತಿ ಇವು ಬೆಳೆಯುವಂತೆ ಪ್ರೋತ್ಸಾಹಿಸಬೇಕು. ಶಿಸ್ತು ಕಾಪಾಡಿಕೊಂಡು ಹೋಗುವಂತೆ ನೋಡಿಕೊಳ್ಳಬೇಕು. ಇದಲ್ಲದೆ ಪರಸ್ಪರಲ್ಲಿ ಬಂಧುಭಾವ, ಸಹಕಾರ, ಸಮರಸ ಭಾವನೆಗಳು ಹೆಚ್ಚಾಗುವಂತೆ ಅವಕಾಶಗಳನ್ನು ಕಲ್ಪಿಸಿ ಕೊಡಬೇಕು.

ವೀರಶೈವ ಸಮಾಜದಲ್ಲಿ ಕಾಯಕಕ್ಕೆ ಹೆಚ್ಚು ಮಹತ್ವವಿರುವದರಿಂದ ನಾವು ವಿದ್ಯಾಪೀಠದಲ್ಲಿ ಎಲ್ಲ ಕಾಯಕಗಳಿಗೂ ಅನುವುಮಾಡಿ ಕೊಡಬೇಕು. ವಿದ್ಯಾಪೀಠವೆಂದರೆ ಅದೊಂದು ಸಹಕಾರಿ ಸರ್ವಸಾಧಾರಣ ಸೊತ್ತಾಗಿರಬೇಕು. (Cooperative Common Wealth) ವೀರಶೈವ ಸಮಾಜದಲ್ಲಿ ಬಹುಶ: ಎಲ್ಲ ಕಾಯಕಗಳು ಉಂಟು. ಅವುಗಳಲ್ಲಿ ಬೇಸಾಯ ಮುಖ್ಯ ಉಳಿದವುಗಳು ಜೊತೆಯ ಉದ್ಯೋಗಗಳು. ಒಕ್ಕಲುತನದ ಮುಖ್ಯ ಜ್ಞಾನವಾಗುವವಲ್ಲದೆ ಕೆಳಗೆಕಾಣಿಸಿದ ಬೇಕಾದ್ದೊಂದು ಕಸಬಿನಲ್ಲಿ ಅವನು ನುರಿ ವಡೆಹೊಂದಬೇಕು. ಉದಾಹರಣಾರ್ಥ- ಬಡಿಗತನ, ಕಮ್ಮಾರಿಕೆ, ಕುಂಬಾರಿಕೆ, ಕಂಚುಗಾರಿಕೆ, ಕಾಂಬಟಿತನ, ಹಗ್ಗ, ಕಣ್ಣಿ, ಮಿಣಿ, ಮಾಡುವಿಕೆ; ನೂಲುವದು, (ಅಂಬರ ಚರಕಾ) ನೇಯುವದು, ಮೊಚ್ಚೆಗಾರಿಕೆ, ಪ್ರಿಂಟಿಂಗ್, ಸಬಕಾರ, ಹಾಳೆ ತಯಾರಿಸುವದು, ಹಲ್ಲುಪುಡಿ ಮಾಡುವದು, ಕಾಯಿಪಲ್ಯೆ ಬಾಳಕಮಾಡುವದು, ಹಣ್ಣುಗಳ ಒಡೆ ಅಥವಾ ರಸವನ್ನು ಸಂಗ್ರಹಿಸುವದು, ಇವೇ ಮೊದಲಾದ ಕಾಯಕಗಳನ್ನು ಕಲಿಸಿ ಕೊಟ್ಟು ಅವರಿಗೆ ಮುಂದೆ ಉಪಜೀವನಕ್ಕೆ ಅನುವು ಮಾಡಿ ಕೊಡಬೇಕು. ಅದಕ್ಕಾಗಿ ನೂರಾರು ಎಕರೆ ಭೂಮಿ, ಹತ್ತಿಪ್ಪತ್ತು ಎಕರೆ ತೋಟ, ಅವಕ್ಕೆ ಬೇಕಾಗುವ ಬಾರದಾನ, ದನಕರ, ನೀರುಜಗ್ಗುವ ಯಂತ್ರ, ೧ ಹಿಟ್ಟಿನ ಗಿರಣಿ, ಎರಡು ಮೂರು ಪ್ರಕಾರದ

ಎಣ್ಣೆಯ ಗಾಣಗಳು ಒಂದು ಕಿರಾಣಿ ಅಂಗಡಿ, ಒಂದು ಸ್ಟೇಶನರಿ ಅಂಗಡಿ, ಇಷ್ಟೆಲ್ಲ ಅನುಕೂಲತೆಗಳು ವಿದ್ಯಾ ಪೀಠದಲ್ಲಿರಬೇಕಾಗುತ್ತದೆ. ಹಾಲು ಹೈನು ಪೂರೈಸಲು ಎಮ್ಮೆ ಆಕಳುಗಳೂ ಬೇಕು.

ಅದೇ ವಿದ್ಯಾ ಪೀಠದಲ್ಲಿ ವೀರಶೈವ ಹೆಣ್ಣು ಮಕ್ಕಳಿಗೂ ಕೂಡ ಆಸ್ಪದವಿರಬೇಕು. ಇದೊಂದು ಪ್ರತ್ಯೇಕ ಶಾಖೆಯಾಗಿರಬೇಕು. ನುರಿತ ಅನುಭವಿಕ ಶರಣಮ್ಮನೊಬ್ಬಳು ಅದರ ಮೇಲ್ವಿಚಾರ ಮಾಡಬೇಕು. ಆದರೆ ಬಾಲಿಕೆಯರ ಅಭ್ಯಾಸ ಕ್ರಮವು ೬ನೇ ವಯಸ್ಸಿನಿಂದ ೧೦ ರವರೆಗೆ ಪ್ರಾಥಮಿಕ, ೧೧ ರಿಂದ ೧೫ರ ವರೆಗೆ ಮಾಧ್ಯಮಿಕ ಇಷ್ಟೇ ಮಾಡಿಸಿ ಬಿಡಬೇಕು. ಅವರಿಗೆ ಹೆಚ್ಚಿನ ಶಿಕ್ಷಣದ ಆವಶ್ಯಕತೆ ಏನೂ ಅನಿಸುವದಿಲ್ಲ. ಅದಲ್ಲದೆ ಅವರಿಗೆ ಹೊಲಿಗೆ, ಹಣಿಗೆ, ರಂಗೋಲಿ, ಹೆರಿಗೆ, ಶಿಶು ಸಂಗೋಪನ ಅಡಿಗೆ ಕಸೂತಿ ಮುಂತಾದ ವಿಷಯಗಳನ್ನು ಪ್ರಾಯೋಗಿಕವಾಗಿ ಕಲಿಸಬೇಕು. ಜೋಗುಳ ಹಾಡು ಬೀಸು ಕುಟ್ಟುವ ಹಾಡು, ಮಂಗಳಾರತಿ, ಸೋಬಾನದ ಹಾಡು ಮುಂತಾದವುಗಳನ್ನು ಸ್ವಾರಸ್ಯವಾಗಿ ರಚಿಸಿ ಅವರಿಗೆ ಕಲಿಸಬೇಕು. ವಿದ್ಯಾಪೀಠದ ಬಾಲ ಬಾಲಿಕೆಯರಲ್ಲಿ ವಿವಾಹಗಳನ್ನೇರ್ಪಡಿಸಿ ಸುಸಂಸ್ಕೃತ ಹೊಸ ಪೀಳಿಗೆಯನ್ನು ಸಿದ್ಧಗೊಳಿಸಬೇಕು.

ಇಷ್ಟೆಲ್ಲ ವಿದ್ಯಾ ಪೀಠದ ಕಾರ್ಯ ಕ್ಷೇತ್ರಗಳಾಗಬೇಕು. ಅದಕ್ಕಾಗಿ ಲಕ್ಷಾಂತರ ರೂಪಾಯಿಗಳ ನಿಧಿ ಶೇಖರವಾಗಬೇಕು. ಧನಿಕವಾದ ವೀರಶೈವ ಸಮಾಜಕ್ಕೆ ಇಂಥ ಸಂಸ್ಥೆಗಳನ್ನು ಸ್ಥಾಪಿಸುವದು ಕಷ್ಟಸಾಧ್ಯವೇನೂ ಅಲ್ಲ. ಸ್ವಾಮಿಗಳು ತಮ್ಮ ಸೊತ್ತನ್ನು ಇಂಥ ವಿದ್ಯಾ ಪೀಠಗಳಿಗಾಗಿ ಸಲ್ಲಿಸಿದರೆ ಹೆಚ್ಚು ಶ್ರೆಯಸ್ಸುಂಟಾಗುವದು. ನಿರರ್ಥಕವಾದ ನಿರುದ್ಯೋಗ ಸಮಸ್ಯೆಯನ್ನುಂಟು ಮಾಡುವ ಈಗಿನ ಶಾಲೆ ಕಾಲೇಜಗಳಿಗೂ, ಅವುಗಳಿಗೆ ಪೋಷಕವಾಗುವಂಥ ಪ್ರಸಾದನಿಲಯಗಳಿಗೂ ಹಣವನ್ನು ವೆಚ್ಚ ಮಾಡುವದರ ಬದಲು ವೆಲ್ಕಾಣಿಸಿದ ವಿದ್ಯಾಪೀಠದಂಥ ಸಂಸ್ಥೆಗೆ ಸಹಾಯಮಾಡಿದರೆ ನಮ್ಮ ಸಾಹಿತ್ಯ, ಸಂಸ್ಕೃತಿ, ಧರ್ಮಗಳನ್ನು ಕಾಪಾಡಿಕೊಂಡಂತಾಗುವದಲ್ಲದೆ ನಿರುದ್ಯೋಗ ಸಮಸ್ಯೆಯನ್ನು ಅನಾಯಾಸವಾಗಿ ಬಿಡಿಸಿದಂತಾಗುವದು. ಆದ್ದರಿಂದ ಸಮಾಜದವರು ಇಂಥ ಒಂದಾದರೂ ವಿದ್ಯಾಪೀಠವನ್ನು ರಚಿಸಿದರೆ ವಿಹಿತ ವಾಗುವದೋ ಇಲ್ಲವೋ ಎಂಬುದನ್ನು ಸಾವಧಾನವಾಗಿ ವಿಚಾರಿಸಲಿ.

———

# ಚೆನ್ನಪ್ಪ ಕವಿ ಚಿತ್ರಿಸಿರುವ ಬಸವಣ್ಣನವರು.

( ಯಕ್ಷಗಾನ ಶರಣ ಲೀಲಾ ವೃತದಿಂದ )

( ಲೇಖಕ:- ಆರ್. ಬಸವರಾಜ್ ಬಿ. ಎ, ತಿಪಟೂರು. )



ಜಗತ್ತಿನ ಮಹಾ ಪುರುಷರಲ್ಲಿ ಅತ್ಯಂತ ಪ್ರಮುಖರಾದ ಶ್ರೀ ಬಸವೇಶ್ವರರ ಚರಿತ್ರೆಯನ್ನು ನಿರೂಪಿಸುವ ಗ್ರಂಥಗಳು ಭಾಮಿನಿ ಷಟ್ಪದಿ, ವಾರ್ಧಿಕ ಷಟ್ಪದಿ, ರಗಳೆ, ಚಂಪಕ ಮತ್ತು ಸಾಂಗತ್ಯ ಇತ್ಯಾದಿ ಸಾಹಿತ್ಯದ ವಿವಿಧ ಹಾಡುಗಬ್ಬಗಳಲ್ಲೂ ಇವೆ. ಸಂಸ್ಕೃತ, ಕನ್ನಡ, ತಮಿಳು, ತೆಲಗು, ಮತ್ತು ಮರಾಠಿ ಇತ್ಯಾದಿ ಭಾರತೀಯ ವಿವಿಧ ಭಾಷೆಗಳಲ್ಲೂ, ಅವರ ಜೀವನ ಚರಿತ್ರೆ ಉಲ್ಲಿಖಿತವಾಗಿದೆ. ಅವರೆ ಜನಸಾಮಾನ್ಯರು ನಿತ್ಯವೂ ಹಾಡುವ ಯಕ್ಷಗಾನದಲ್ಲಿ ರಚಿತವಾಗಿ ವೃತ್ತ, ಕಂದ ಷಟ್ಪದಿ, ತ್ರಿಪುಡೆ, ಅಟತಾಳ, ಜಂಪೆ, ಸೊಬಗಿನ ಸೋನೆ ಮುಂತಾದ ವಿವಿಧ ಜಾತಿಯ ಪದ್ಯಗಳಿಂದ ಅತ್ಯಂತ ಮನೋಹರವಾಗಿ ರಚಿತವಾಗಿರುವ ಏಕೈಕ ಗ್ರಂಥ ಚೆನ್ನಪ್ಪ ಕವಿ ರಚಿಸಿರುವ ಶರಣ ಲೀಲಾಮೃತವೊಂದೆ. ಈ ಶ್ರೇಷ್ಠಗ್ರಂಥವನ್ನು ಅಂದವಾದ ಚಿತ್ರಗಳಿಂದಲೂ, ಉತ್ತಮ ಕಾಗದದಿಂದಲೂ, ಪ್ರಕಟಿಸಿದ ಶ್ರೀ ಶಿವಬಸವ ಸ್ವಾಮಿಗಳು ಸಾಹಿತ್ಯ ಪ್ರಪಂಚಕ್ಕೂ, ಕನ್ನಡಿಗರಿಗೂ, ಮಹೋಪಕಾರ ಮಾಡಿದ್ದಾರೆ.

## ಕವಿ ಕಾವ್ಯ ವಿಚಾರ.

ಚೆನ್ನಪ್ಪ ಕವಿಯು ವಿಜಯ ನಗರದ ದಕ್ಷಿಣ ಭಾಗದ ನಿಡುಗಲ್ಲೆಂಬ ಗ್ರಾಮದಲ್ಲಿ ವಾಸವಾಗಿದ್ದವನು. ಕಾಲ ೧೭೫೦. ವೃತ್ತಿಯಲ್ಲಿ ಉಪಾಧ್ಯಾಯ. ಶರಣಲೀಲಾಮೃತದ ಇಪ್ಪತ್ತೈದನೆಯ ಸಂದಿಯಲ್ಲಿ ಹೀಗೆ ಹೇಳಲಾಗಿದೆ.

ಇದುವೆ ದಕ್ಷಿಣ ಕಾಶಿ ಹಂಪೆಯ ।<br>
ಮದನಹರ ವಿರುಪಾಕ್ಷ ನಿರುತಿಹ ।<br>
ನಿಧಿಗೆ ಟೆಂಕಲು ಸ್ಥಳದಿ ನಿಡುಗಲ್ಲೆಂಬ ಪಟ್ಟಣದ ॥

ಚದುರ ಪೇಟೆಯ ಬಸವರಾಜನ ।
ಮದನ ಮಂಟಪದಲ್ಲಿ ಸದ್ಗುಣ ।
ಹೃದಯ ಚೆನ್ನಪ್ಪಯ್ಯ ದೇವರು ಪೇಳ್ದರೀ ಕೃತಿಯ ॥

ಇದರಿಂದ, ನಿಡುಗಲ್ಲಿನ ಬಸವೇಶ್ವರ ದೇವಾಲಯದಲ್ಲಿ ಕವಿಯು ಈ ಗ್ರಂಥವನ್ನು ರಚಿಸಿದುದಾಗಿ ಹೇಳಿಕೊಂಡಿದ್ದಾನೆ. ( ಪುಟ ೬೦೩ ಶರಣ ಲೀಲಾಮೃತ ) ಕವಿಯ ಮಾತಾ ಪಿತೃಗಳು, ಸ್ಥಳ ಜನನ ವಿಚಾರಗಳೊಂದೂ ತಿಳಿದು ಬರುವದಿಲ್ಲ. ಚೆನ್ನಪ್ಪನು ವೀರಶೈವನೆಂಬುದು ಅವನ ಗ್ರಂಥದಿಂದಲೆ ನಿಶ್ಚಿತವಾಗುತ್ತದೆ. ಇದೇ ಕವಿಯಿಂದ ರಚಿತವಾಗಿರುವ 'ಚೆನ್ನ ಬಸವೇಶ್ವರ ಕಾಲಜ್ಞಾನ' ವೆಂಬ ಮತ್ತೊಂದು ಗ್ರಂಥವೂ ದೊರೆತಿದೆ.

ಚೆನ್ನಪ್ಪನು ಕನ್ನಡ ಸಾಹಿತ್ಯದ ತಿರುಳನ್ನೂ, ಸವಿಯನ್ನೂ, ಚೆನ್ನಾಗಿ ಅನುಭವಿಸಿದ ಕವಿ. ತನ್ನ ಹಿಂದೆ ಆಗಿಹೋದ ವೀರಶೈವ ಗ್ರಂಥಗಳೆಲ್ಲವನ್ನೂ ಅಧ್ಯಯನ ಮಾಡಿ ತನ್ನ ಕೃತಿ ಪೇಳಿದ್ದಾನೆ. ಒಂದೇ ವಿಧವಾದ ಪದ್ಯದಲ್ಲಿ ಬೋಧಿಸುವ ವಿಧಾನವು ಓದುಗರಿಗೆ ಬೇಸರ ತರಿಸುತ್ತದೆಂದು ತಿಳಿದೇ ವೈವಿಧ್ಯಮಯವೂ ಸರಳ ಸುಂದರವೂ ಆದ ಯಕ್ಷಗಾನದಲ್ಲಿ ಕೃತಿ ರಚಿಸಿದ್ದಾರೆ. ಅಲ್ಲಲ್ಲಿ ಪ್ರೌಢ ಕಾವ್ಯದ ಸಲ್ಲಕ್ಷಣಗಳೂ ವ್ಯೆದೋರಿವೆಯಲ್ಲದೆ ವರ್ಣನೆ ಉಪಮೆ ಮುಂತಾದ ಅಲಂಕಾರಗಳು ಕವಿಯ ಪ್ರತಿಭೆಗೆ ಕನ್ನಡಿ ಹಿಡಿದಿವೆ. ಆದರೆ ಹೇಳಬೇಕಾದ ವಿಷಯವನ್ನು ಕೆಲವು ಕಡೆ ಅನವಶ್ಯಕವಾಗಿ ಲಂಬಿಸಿರುವುದರಿಂದ ಕೃತಿಯ ಗಾತ್ರ ಹಿರಿದಾಗಿದೆ. "ನಾನು ದುಡಡನು ನನ್ನ ಹೃದಯದಿ ತಾನು ಪೇಳದ ಬಸವರಾಜನು "ಏನ ಪೇಳಿದನೆಂದು ಯುಕಸವಾಡದಿರಿ ನರರು" ಪಾತಕರಿಗೆ ಶರಣ ಸತ್ಕೃತಿಯ ಮಾರ್ಗ ಗೋಚರಿಸದು ಎಂದು ತನ್ನ ವಿಷಯವನ್ನು ಬರೆದಿದ್ದಾನೆ. ತನ್ನ ಹಿಂದಿನ ಕವಿಗಳೆಲ್ಲರನು ಸ್ಮರಿಸಿ ಅವರ ಮಾರ್ಗವೇ ತನಗೆ ಮಾರ್ಗ ವೆಂದು ಸ್ತುತಿಸುತ್ತಾನೆ.

ಘಾಲ್ಕುರಿಕೆ ಸೋಮವರ ಕಲಿ ।
ಭೀಮ ಶಂಕರದೇವ ಧೂರ್ಜಟಿ ।
ಪಾಲಲೋಚನ ಭಕ್ತ ಮಲುಹಣ ಗುಬ್ಬಿ ಮಲ್ಲಣನು॥
ಲೀಲೇ ಚಾಮರಸಯ್ಯ ದಸುರಿಯು ।
ಕಾಲಹರಸುತ ಶಿವನ ಶರಣರ ಸ್ತುತಿಸಿ ಬಾಳಿದರು ॥

ಎಂದು ಶೈವಭಕ್ತರ ಮಹಿಮೆಯನ್ನು ರೂಪಿಸಿದ ಕವಿ ಕುಲವನ್ನು ಹೆಸರಿಸುತ್ತಾನೆ. ಕವಿಗೆ ಬಸವೇಶ್ವರರಲ್ಲಿ ಬಹಳ ಭಕ್ತಿ. ಈ ಅನುಪಮ ಭಕ್ತಿಭಾವ ಕೃತಿಯಲ್ಲಿ ರಮ್ಯವಾಗಿ ಮತ್ತು ಮಹಿಮಾನ್ವಿತವಾಗಿ ನಿರೂಪಿಸಲ್ಪಟ್ಟಿದೆ. ಇಪ್ಪತ್ತೈದು ಸಂದಿಗಳಿಂದ ಕೂಡಿ ೬೬೬೭ ಪದ್ಯಗಳಿಂದ ರಚಿತವಾಗಿರುವ ಈ ಬೃಹತ್ ಗ್ರಂಥ ಪವಾಡಗಳ ಮಧ್ಯೆ ಬಸವಣ್ಣನವರ ಚರಿತ್ರಾಂಶ ಬಹು ಮಟ್ಟಿಗೆ ಮುಚ್ಚಿ ಹೋಗಿದ್ದರೂ ಅದರ ಜಾಡನ್ನು ಗುರುತಿಸುವುದು ಸಾಧ್ಯವಿದೆ. ವೀರಶೈವರಿಗೆ ಸಂಬಂಧಿಸಿದ ಎಲ್ಲ ಗ್ರಂಥಗಳಲ್ಲೂ ಇರುವಂತೆ ಇದರಲ್ಲೂ ಶಿವಶರಣರ ಪವಾಡಲೀಲೆಗಳು ಬಂದಿವೆಯಾದರೂ ಅವೆಲ್ಲ ಬಸವಣ್ಣನವರ ಚರಿತ್ರೆಗೆ ನಿಕಟ ಸಂಬಂಧ ಹೊಂದಿ ಅವರ ಗುಣ ಪ್ರಾಧಾನ್ಯತೆಗೆ ಪೋಷಕವಾಗಿವೆ.

### ಕಾವ್ಯಾರಂಭದಲ್ಲಿ.....

ಕಾವ್ಯಾರಂಭದಲ್ಲಿ ಕವಿಯು ಗಿರಿಜೆಯರ್ಧಾಂಗನನ್ನೂ, ಪರಶಿವೆ, ಶಾರದೆ ವೀರೇಶ್ವರ, ಬಸವೇಶ್ವರ ಮುಂತಾಗಿ ಭಕ್ತಿಯಿಂದ ಭಜಿಸುತ್ತಾನೆ. ಅನಂತರ ಕೈಲಾಸ, ಕೈಲಾಸದ ಗಣಸ್ತೋಮ, ಏಳ್ನೂರೆಪ್ಪತ್ತು ಅಮರ ಗಣಂಗಳು ಕಾವ್ಯಗಳನ್ನುದ್ಧರಿಸಿದ ಶಿವ ಕವಿಗಳು ಮುಂತಾದವರನ್ನು ವರ್ಣಿಸುತ್ತಾನೆ.

ಹಳೆಯದೆಲ್ಲಾ ಹೊನ್ನು ಹೊಸತೆಲ್ಲಾ ಮಣ್ಣು ಎನ್ನುವ ಮನೋಭಾವದ ಕುವಿಮರ್ಶಕರು ಯಾವ ಹೊಸ ಕೃತಿಯನ್ನು ಜರೆದಾಡುವದು ಸ್ವಾಭಾವಿಕ. ಅದನ್ನರಿತ ಕವಿ—

ಯತಿಗಣವು ಗತಿಪ್ರಾಸ ವಾವುದನ್ನರಿಯದತಿ
ಕಥೆ ಕಾವ್ಯಗಳ ಜರಿವ ಕಾಕುಜನರು
ಶಿತಿಕಂಠ ಶಿವನ ಮಹಿಮೆಯನರಿಯದ ಅಧಮ
ಶತಪಾತಕರ ಮಾತು ಫಲಕೆ ಬಂದಪುದೆ॥

ಎಂದು ಖಂಡನೆ ಮಾತ್ತಾನೆ. ಅರಿತುದನ್ನು ಪೇಳುವೆನಾದೊಡು ಜಾಣರು ಇದರಲ್ಲಿ ತಪ್ಪಿದ್ದರೆ ತಿದ್ದ ಬೇಕೆಂದು ವಿನಂತಿಸಿ ಕೊಂಡಿದ್ದಾರೆ.

ಪನ್ನಗಾಧರ ಪಾದ ಕರುಣವಂ ಪಡೆದು
ಮುನ್ನ ಮಾಡಿದ ಶಾಸ್ತ್ರ ಮೂಲವಂ ತಿಳಿದು
ಉನ್ನತ ಗುಣರನ್ನನೂ ಉಚಿತ ಸಂಪನ್ನನೂ॥

ಆದ ಚೆನ್ನಪ್ಪನು ಈ ಸತ್ಕೃತಿಯನ್ನು ಪೇಳಿದನೆಂದು ಎಂಟನೆಯ ಪುಟದಲ್ಲಿ ಹೇಳಕೊಂಡಿದ್ದಾನೆ.

ಹಿಂದೆ ಕಾಳಗದಲ್ಲಿ ಹೆಚ್ಚು ಕಡಿದಾಡಿ
ಸಂದು ಹೋದವರ ಕಥೆ ಸಾಟಿ ಇದಕಲ್ಲ

ಮುಂತಾದ ಪದ್ಯಗಳಿಗೂ ಚಾಮರಸ ಕವಿಯು "ಪ್ರಭುಲಿಂಗ ಲೀಲೆ' ಯಲ್ಲಿ ಕಂಡುಬರುವ ಸತ್ತವರ ಕಥೆಯಲ್ಲ ಜನನದ ಕುತ್ತದಲಿ ಕುದಿ ಕುದಿದ್ರು ಮುಂತಾದ ಪದ್ಯಗಳಿಗೂ ಬಹಳ ಹೋಲಿಕೆ ಇದೆ. ಕೆಲವು ಕಡೆ ವಚನಗಳೇ ಅಲ್ಪಿ ಸ್ವಲ್ಪ ಬದಲಾವಣೆ ಹೊಂದಿ ಕೃತಿಯಲ್ಲಿ ಮೂಡಿ ಬಂದಿವೆ. ಈ ಕಾರಣಗಳಿಂದ ಚೆನ್ನಪ್ಪನು ತನ್ನ ಹಿಂದಿನ ವೀರಶೈವ ಕೃತಿಗಳ ಆಧಾರವನ್ನು ಬಹು ಮಟ್ಟಿಗೆ ಪಡೆದಿದ್ದಾನೆಂಬುದು ಖಚಿತವಾಗಿದೆ. ಸಾಂಪ್ರದಾಯಿಕವಾದ ಸಮುದ್ರವರ್ಣನೆ, ದ್ವೀಪವರ್ಣನೆ, ಅವುಗಳ ಅರಸುಗಳು ಅವರ ಏಳು ಜನ ಮಕ್ಕಳು, ಉತ್ತಾನುಪಾದರಾಯನ ಕಥೆ ಮುಂತಾದ ಅಪ್ರಸಂಗಿಕ ವಿಷಯ ಗಳು ಗ್ರಂಥದ ಆದಿಯಲ್ಲಿ ಕಂಡು ಬರುತ್ತವೆ. ಮೇರುಪರ್ವತ, ಪರಶಿವನ ವರ್ಣನೆ, ರಜತಾಚಲ, ಕೈಲಾಸ ಪುರ, ಪ್ರಮಥರು, ಗಣಾಧೀಶ್ವರರು ಮುಂತಾದ ಮನೋಹರ ವರ್ಣನೆಗಳೊಂದಿಗೆ ಮೊದಲನೆಯ ಸಂಧಿಯು ಮುಕ್ತಾಯವಾಗುತ್ತದೆ.

ಎರಡನೆಯ ಸಂಧಿಯಲ್ಲಿ ಅಹಂಕಾರಿಯಾದ ಬ್ರಹ್ಮನು ಶಿರವನ್ನು ಕಳೆದು ಕೊಂಡ " ಭಿಕ್ಷಾಟನ ಲೀಲೆ " ಯೂ ಮೂರನೆಯ ಸಂಧಿಯಲ್ಲಿ ಪರಶಿವನನ್ನು ದೂಷಿಸಿ ಮರಣವನ್ನು ತಂದುಕೊಂಡ ದಕ್ಷಬ್ರಹ್ಮನ ಪ್ರಸಂ ಗವೂ ನಿರೂಪಿತವಾಗಿವೆ.

## ಪೂರ್ವ ಕಥಾ ವೃತ್ತಾಂತ.

ಈಶ್ವರನ ಗಣ ಸಂತತಿಯಲ್ಲಿ ಮುಖ್ಯನಾದ ವೃಷಭನೆಂಬಾತನು ಕುಮಾರಸ್ವಾಮಿಗೆ ಪ್ರಸಾದವನ್ನು ಕೊಡದೆ, ಕೊಟ್ಟೆನೆಂದು ಅನೃತವಾಡಿದ ತಪ್ಪಿಗಾಗಿ ಆತನು ಹರನಾಜ್ಞೆಯಂತೆ ಇಳೆಯಲ್ಲಿ ಬಸವಣ್ಣನಾಗಿ ಜನಿಸುವ ವೃತ್ತಾಂತ ಬಸವರಾಜ ದೇವರ ರಗಳೆಯಲ್ಲಿ ಚಿತ್ರಿತವಾಗಿದೆ. ಭೂಲೋಕದ ಜನರು ಶಿವಸಮಯವನ್ನು ಕೆಡಿಸಿ ಪಾಷಂಡಿಗಳಾಗುತ್ತಿದ್ದುದನ್ನು ತಪ್ಪಿಸಿ ಉದ್ಧರಿಸಲು ಶಂಕರನು ತನ್ನ ಪ್ರತಿರೂಪಾದ ನಂದಿಕೇಶ್ವರನನ್ನು ಭೂಲೋ ಕಕ್ಕೆ ಕಳುಹಿಸಿದ ಪ್ರಸಂಗವನ್ನು ಭೀಮ ಕವಿಯು ತಿಳಿಸುತ್ತಾನೆ. ಶರಣ ಲೀಲಾಮೃತದ ಬಸವೇಶನ ಜನನ ಪೂರ್ವ ಪ್ರಸ್ತಾಪವೂ ಭೀಮ ಕವಿಯ ಕಥೆಯನ್ನೇ ಹೋಲುತ್ತವೆ.

ಒಂದು ಸಲ ಭೂಲೋಕವನ್ನು ನೋಡಬೇಕೆಂದು ಬಯಸಿದ ನಂದೀಶ್ವರನು "ಪುಣ್ಯವೇ ನಾನಾರೂಪುಗಳಿಂದ ಮೈತಳೆದು ನಿಂತಿದ್ದ' ಭರತ ಖಂಡಕ್ಕೆ ಬರುತ್ತಾನೆ. 'ಪೃಥ್ವಿಯೊಳಗೊಪ್ಪುವ ಪುಣ್ಯ ಕ್ಷೇತ್ರ.'

ಅತ್ಯಂತ ನದಿಗಳ ಅಖಿಲ ಭೂಮಿಗಳನ್ನು ಸುತ್ತಿ, ಮನಸಿ ಜಾರಿಯ ಭಕ್ತನಾದ ಅನಿಮಿಷ ರಾಜನ ಬಳಿಗೆ ಬರುತ್ತಾನೆ. ಅರಣ್ಯದಲ್ಲಿ ಅಶ್ವವನ್ನರಸುತ್ತಾ ಬಂದ ಅನಿಮಿಷರಾಜನು ಅದನ್ನು ಕಾಣದೇ ಬಸತ್ತು ಸೊರಗಿದನು. ತೃಷೆ ವೆಗ್ಗಳಿಸಿತಾದರೂ ಲಿಂಗಪೂಜೆ ಇಲ್ಲದೆ ಉಣಬಾರದೆಂದು ತಾಳಿಕೊಂಡಿದ್ದನು. ಆ ಸಮಯಕ್ಕೆ ಸರಿಯಾಗಿ ನಂದೀಶ್ವರನು ಅಲ್ಲಿಗೆ ಬಂದು ರಾಜನ ಸ್ಥಿತಿಯನ್ನು ಕಂಡು ಕನಿಕರ ಪಡುತ್ತಾನೆ. ತನ್ನ ಪ್ರಾಣಲಿಂಗವನ್ನೆ ರಾಜನಿಗೆ ಕೊಡುತ್ತಾನೆ. ಅದು ರಾಜನಲ್ಲೇ ಸೇರಿ ಹೋಗುತ್ತದೆ. ನಂದಿಯು ಲಿಂಗ ರಹಿತನಾಗಿ ಕೈಲಾಸಕ್ಕೆ ಬರಲು ದ್ವಾರಪಾಲಕನು ಭವಿಯನ್ನು ಒಳಗೆ ಬಿಡುವುದಿಲ್ಲವೆಂದು ತಡೆಯುವನು.

ಪರಶಿವನು ಅವರ ವಾದವನ್ನು ಕೇಳಿ ಅಲ್ಲಿಗೆ ಬರುತ್ತಾನೆ. "ಶರೀರವೆಲ್ಲವೂ ಲಿಂಗಮಯವಾದ ನಂದೀಶ್ವರನನ್ನು ಭವಿಯೆಂದು ಜರೆದ ಕಾರಣ ನೀನು ಚಾಳುಕ್ಯರಾಯನ ಗರ್ಭದಲ್ಲಿ ಬಜ್ಜಳರಾಯನಾಗಿ ಜನಿಸು." ಎಂದು ಶಪಿಸುತ್ತಾನೆ. ವೀರ ಮಡಿವಳ, ಮೊಲ್ಲೆಯ ಬೊಮ್ಮ, ಜಗದೇವ ಇವರನ್ನು ಕೂಡಿ ಬಾ. ಆಗ ಮುಕ್ತಿ ದೊರೆಯುತ್ತದೆ' ಎಂದು ವಿಶಾಪವಿತ್ತು ನಂದೀಶನೊಂದಿಗೆ ನಿರ್ಗಮಿಸುತ್ತಾನೆ.

## ಕೈಲಾಸದಿಂದ ಕರ್ತಾರನ ಕಮ್ಮಟಕ್ಕೆ

ಆ ಸಮಯಕ್ಕೆ ಸರಿಯಾಗಿ ನಾರದರು ಪರಶಿವನ ದರ್ಶನಾರ್ಥವಾಗಿ ಕೈಲಾಸಕ್ಕೆ ಆಗಮಿಸುತ್ತಾರೆ. ಭೂಲೋಕದ ಜನರು ಶಿವ ಧರ್ಮವನ್ನು ಕೆಡಿಸಿ ಪಾಷಂಡಿಗಳಾಗುತ್ತಿರುವದನ್ನು ವಿವರಿಸುವರು. ಮಹ ದೇವನು ದ್ವಿತೀಯ ಶಂಭುವೆ' ಎಂದು ನಂದೀಶ್ವರನನ್ನು ಬಳಿಗೆ ಕರೆದು "ನೀನು ಭೂಲೋಕಕ್ಕೆ ಹೋಗಿ ಬಾಗೆವಾಡಿಯ ಮಾದರಸ ಮಾದಲಾಂಬೆಯರ ಪುತ್ರನಾಗಿ ಜನಿಸಿ ಜಗತ್ಕಲ್ಯಾಣವನ್ನೆಸಗೆಂದು" ಆಜ್ಞೆಮಾಡುತ್ತಾನೆ. ಧರೆಯ ದೂಷಕ ಜನವ ಸಂಹರವ ಮಾಡಿ, ಕಲ್ಯಾಣದರಸ ವೀರ ಬಿಜ್ಜಳನಿಗೆ ಮಂತ್ರಿ ಕಾರ್ಯವೆಸಗು" ಎಂದು ತಿಳಿಸುವನು. ನಾರದನು ಕೊಂಡೆಯ ಮಂಚಣ್ಣನಾಗಿಯೂ, ವೀರಭದ್ರನು ಮಡಿವಾಳನಾಗಿಯೂ ಜನಿಸಿ ಬಸವಣ್ಣನ ಭಕ್ತಿ ಪ್ರಕಾಶನಕ್ಕೆ ನೆರವಾಗಿ ಬರುತ್ತಾರೆ.

ನಂದೀಶ್ವರನು ಅಭವನಾಜ್ಞೆಯಂತೆ ಮಾದರಸ ಮಾದಲಾಂಬೆಯರ ಮಮತೆಯ ಮಗುವಾಗಿ ಭಕ್ತಿಯ ಬೀಜ ಮೂಡಿಬಂದಂತೆ ಜನಿಸಿ ಬಂದನು.

'ಕಮಲ ರವಿಯನು ಕಂಡು ನಗುವಂತೆ" "ಕುಮುದ ಶಶಿಯಂ ನೋಡಿ ಪೆರ್ಚುವಂತೆ' ತಾಯಿ ಮಗುವನ್ನು ಕಂಡು ಆನಂದ ಗೊಳ್ಳು ತ್ತಿದ್ದಳು.

ಬಾಲಕ ಬಸವರಾಜನು ವಿವಿಧ ಬಾಲ ಲೀಲೆಗಳಿಂದ ಮಾತಾ ಪಿತೃಗಳ ಮನ ರಂಜಿಸುತ್ತ ಜಗಕಚ್ಚರಿ ಎಂಬಂತೆ ವೇದ ಮಂತ್ರಕ್ಕೆ ಮೊದಲು ಆದಿ ಪಂಚಾಕ್ಷರಿಯನ್ನು ಕಲಿತನು. ಆ ಕಿರು ವಯಸ್ಸಿಗೆ 'ಕಡೆಯಿಲ್ಲದಿಹ ಶಾಸ್ತ್ರ ಒಡಲೊಳಗೆ ತುಂಬಿತ್ತು.' ಇನ್ನು ಅವನಿಗೆ ಕಲಿಸುವುದೇನು? ಇರುವಂತಿ, ಜಾಜಿ, ಮಲ್ಲಿಗೆ ಇವುಗಳಿಗೆ ಮತ್ತೆ ಪರಿಮಳವಂ ತುಂಬಲಾದೀತೆ? ಇಷ್ಟೊಂದು ವಿದ್ಯಾ ಸಂಪನ್ನನಾಗಿದ್ದರೂ ಬಸವಣ್ಣನಿಗೆ ಗುರುಗಳೊಬ್ಬರಿದ್ದರೆಂದು ಕವಿ ತಿಳಿಸುತ್ತಾನೆ. ಆದರು ಕಲಿಸಿದ ವಿದ್ಯೆಯನ್ನು ತಂದೆ ತಾಯಿಗಳ ಮುಂದೆ ಹೇಳದೆ ಕೇವಲ ಶಿವನಾಮ ಸ್ತೋತ್ರ ಮಾಡಿದ್ದರಿಂದ ಗುರುವೂ ಉಳಿದ ಶಿಷ್ಯರೂ ಕೋಪಗೊಂಡರು. ಬಸವನನ್ನು ದ್ವೇಷಿಸಿದ ಬಾಲಕರು ಅವನಿಗೆ ಕೇಡಂ ಬಗೆಯಲು ಬೆನಕನೆಂಬ ಚಿಕ್ಕವನನ್ನು ಕೊಳದಲ್ಲಿ ನೂಂಕಿ ಬಸವನೇ ನೂಂಕಿ ಕೊಂದನೆಂದು ದೂರುವರು. ಬಸವನು ತನ್ನ ಮಹಿಮೆಯಿಂದ ಬೆನಕನ ಹೆಸರಿಡಿದು ಕರೆದು ಬದುಕಿಸಿದನು. ಬಸವಣ್ಣನ ಅಲೌಕಿಕ ಮಹಿಮೆ ಯನ್ನು ಪ್ರಕಟಿಸಲು ಕವಿಯು ಈ ಪ್ರಸಂಗವನ್ನು ಚಿತ್ರಿಸಿದ್ದಾನೆ. ಇದೇ ರೀತಿ ಚಾರನಿಗೆ ಪ್ರಾಣವಿತ್ತ ಪವಾಡ ಮೂಗನನ್ನು ಮಾತಾಡಿಸಿದ ಪವಾಡ ಚಿತ್ರಿ ತವಾಗಿವೆ. ಈ ಸಂದರ್ಭದಲ್ಲಿ ಕಣ್ಣಿಲ್ಲದವಂಗೆ ಕಣ್ಣನ್ನೂ; ಮೂಗಿಲ್ಲದವಂಗೆ ಮಾತನ್ನೂ ಕೊಟ್ಟ ಕ್ರಿಸ್ತನನ್ನು ಜ್ಞಾಪಿಸಿಕೊಳ್ಳಬಹುದು.

## ಉಪನಯನ ನಿರಾಕರಣೆ.

ಬಾಲ ರವಿಯಂತೆ ದಿನದಿನಕ್ಕೆ ಪ್ರವರ್ಧಿಸುವ ಬಾಲಕಂಗೆ ಏಳನೆಯ ವರ್ಷದಲ್ಲಿ ಉಪನಯನವೆಸಗಲು ತಂದೆಯು ಪ್ರಯತ್ನಿಸುತ್ತಾನೆ. ಮಾತಾ ಪಿತೃಗಳು "ಬಹು ವಿನೋದದಿಂದ ಬಂಧು ವರ್ಗವೆಲ್ಲಮಂ ಕರೆದು" ಮುಂದೆ ಬ್ರಾಹ್ಮಣ ಮುಖ್ಯವಪ್ಪಂತೆ ಗಾಯತ್ರಿಮಂತ್ರವನ್ನರುಹಲು ಸಮಿತ್ತು ದರ್ಭೆ ಗಳನಾಗಮರನ್ನು ಕರೆಸುತ್ತಾರೆ. ಮಠದಿಂದ ಬಂದ ಬಸವನು—"ತನಗೆ ಯುಗ ಯುಗದಲ್ಲಿ ಮುರಾರಿಯಿಂ ಪಡೆದ ವೀರಶೈವ ದೀಕ್ಷೆಯಲ್ಲದೆ ಬೇರೆ

ದೀಕ್ಷೆಯುಂಟೆ? ಭೂರಿಯಜ್ಞವಮಾಡಿ, ಮೀರಿಸ್ವರ್ಗವಸೇರಿ, ಧಾರಿಣಿಗೆ ತಿರುಗುವ ಹಾರುವರದೀಕ್ಷೆ ಹಣದಾಸೆಗೆ ಭೂರಿದಾನವ ಹಿಡಿದು ಕರ್ಮಕೆ ಹೋಹ ದಾರಿಯ ದೀಕ್ಷೆ- ಪಂಚಸೂತಕದ ದೀಕ್ಷೆ. ಶಿವದೀಕ್ಷೆಯಂ ಪಡೆದು ಸಾಂಬ ಲೋಕವ ಹೊಂದಿ ಸಾಯುಜ್ಯದಲ್ಲಿರ ಬೇಕಲ್ಲದೆ, ದ್ವಿಜ ದೀಕ್ಷೆಯಂ ಪಡೆದು ಸುರಲೋಕವ ಪಡೆದರೂ ಮರಳಿ ಮರಳಿ ಧರೆಗಿಳಿವಂಥ ನಿಮ್ಮ ದ್ವಿಜ ದೀಕ್ಷೆಯನ್ನು ನಾನೊಲ್ಲೆ"ಎಂದು ಪ್ರತಿಭಟಿಸಿ ನಿರಾಕರಿಸುವರು. ಅಲ್ಲದೆ ಮಾದರಸನ ಮಾತಾಪಿತೃಗಳನ್ನೆಲ್ಲ ಕರೆಸಿ ತೋರಿದಾಯ ಸರೂಪದಿಂ ಹಾರಿಸಿದರು. ಮಾದರಸನು ಭಯಗೊಂಡ ಜಾತಿಯವಿರ್ ತನ್ನಂ ಪೆರಗಿಕ್ಕುವರ್ ಎಂದು ನೊಂದು ನುಡಿಯಲು ಬಸವನು ಅವರಿಗೆ ತೊಂದರೆ ಬೇಡೆಂದು ಬಗೆದು ಅಕ್ಕ ನಾಗಲಾಂಬೆಯನ್ನೊಡಗೊಂಡು ಅಲ್ಲಿಂದ ಹೊರಟು ಬಿಟ್ಟನು.

ಬಸವಣ್ಣನು ದ್ವಿಜ ದೀಕ್ಷೆಯನ್ನೊಲ್ಲದೆ ಮಾತಾ ಪಿತೃಗಳನ್ನು ಮೀರಿ ಕಪ್ಪಡಿ ಸಂಗಮಕ್ಕೆ ಪಯಣಿಸುವ ಪ್ರಸಂಗವನ್ನು ಹಂಹೆರ ಭೀಮಕವಿ ಚಿತ್ರಿಸಿದ್ದಾರೆ ಹರಿಹರನು—ಬಸವಣ್ಣನಿಗೆ ಮುತ್ತಬ್ಬೆ ಎಂಬ ಪೋಷಕಗಳು ಮಾತ್ರವಲ್ಲದೆ ತಂದೆ ತಾಯಿಗಳು ಶಿವೈಕ್ಯರಾಗಿದ್ದರೆಂದು ತಿಳಿಸುತ್ತಾನೆ. "ಶಿವಪಾರ್ವತಿಯರೆ ನನಗೆ ನಿಜವಾದ ತಂದೆ ತಾಯಿಗಳು. ನೀವು ಕಾರಣಮಾತ್ರರು "ಎಂದು ಬಸವಣ್ಣನು ತಿಳಿಸಿದಂತೆ ಭೀಮಕವಿಯು ಬರೆದಿದ್ದಾನೆ. ಇಷ್ಟಲ್ಲದೆ ಮಾದರಸ ಮಾದಲಾಂಬೆಯರು ಬಸವಣ್ಣನ ಮಾತಾ ಪಿತೃಗಳೇ ಅಲ್ಲ ಎಂಬ ಆಧಾರಸಹಿತವಾದವೂ ಬಂದಿದೆ.ದ್ವಿಜ ದೀಕ್ಷೆಯನ್ನು ಸ್ವೀಕರಿಸದ ತನ್ನಿಂದ ತಂದೆ ತಾಯಿಗಳು ಪ್ರವೇಶಿಸುತ್ತಾರೆ. "ಶಶಿಕಾಂತ ಶಿಲೆಯೊ" ಎಸೆವಮಲ್ಲಿಗೆಯೊ ಎಂಬಂತಿರ್ಪ ತಾಯಿಗಳು ಬವಣೆಗೊಳಗಾಗುತ್ತಾರೆಂದು ಬಗೆದ ಬಸವೇಶ್ವರನು ಸಂಗಮೇಶ್ವರನಲ್ಲಿಗೆ ಹೊರಟದ್ದು ಉಚಿತವಾಗಿದ್ದರೂ ಅವರ ನಿರ್ಗಮನಕ್ಕೆ ಇದಕ್ಕಿಂತ ಪ್ರಬಲವಾದ ಬೇರಾವುದು ಕಾರಣವಿರಬೇಕೆಂದು ಊಹಿಸಲು ಅವಕಾಶವಿದೆ. ಹೀಗೆ ಪರಿಮಿತ ಪ್ರಾಪ್ತಿಯುಳ್ಳ ಸಂಸಾರ ಪ್ರಪಂಚವನ್ನು ತ್ಯಾಜ್ಯಮಾಡಿ ಕರ್ತಾರನ ಕುಮ್ಮಟವಾದ ವಿಶಾಲ ಪ್ರಪಂಚ ಸಂಸಾರಕ್ಕೆ ಬಸವಣ್ಣನವರು ಪ್ರವೇಶಿಸುತ್ತಾರೆ.

ಆರನೆಯ ಸಂಧಿಯಲ್ಲಿ ಬಸವೇಶನ ವಿವಾಹ, ಬಿಜ್ಜಳನ ಮನೆಯಲ್ಲಿ ದಂಡಾಧೀಪನ ಸ್ಥಾನವನ್ನಲಂಕರಿದ್ದು ಮುಂತಾದ ಪ್ರಸಂಗಗಳಿವೆ.

ಮಹಾದೇವನ ಶೃಂಗಾರ ಪುರಿಯಾದ ಕಲ್ಯಾಣ ನಗರವು ಚಂದನ, ಚಂಪಕ, ಖರ್ಜೂರ, ದ್ರಾಕ್ಷಿ, ಮಂದಾರ, ಸುರಹೊನ್ನೆ, ಮುಂತಾದ ವಿವಿಧ ವೃಕ್ಷ ಸಮೂಹಗಳಿಂದಲೂ, ಅಗಾಧವಾದ ಕೋಟೆ ಕೊತ್ತಲುಗಳಿಂದಲೂ, ಭವ್ಯ ಹರ್ಮ್ಯ ಪ್ರಾಸಾದಗಳಿಂದಲೂ ಅತ್ಯಂತ ಮನೋಹರವಾಗಿ ರಂಜಿಸು ತ್ತಿತ್ತು. ಅಲ್ಲಲ್ಲಿ ಮುತ್ತಿನಂಗಡಿಗಳೂ ರತ್ನಮಾಣಿಕದ ಸಾಲುಗಳೂ ಒಪ್ಪಿದ್ದ ವು. ಈ ಪಟ್ಟಣದರಸು ಜೈನ ಕುಲೋದ್ಭವನಾದ ಬಿಜ್ಜಳ ಭೂಪಾಲ.ಮಂತ್ರಿ ಜಗದೇವನೆಂಬಾತ.

## ಭಕ್ತ್ಯಾಂಗನೆಯ ಕೈವಿಡಿದುದು.

ಬಸವಣ್ಣನ ಮಾತಾ ಪಿತೃಗಳು ತಮ್ಮ ಸಂಬಂಧಿ ಬಲದೇವನಿಗೆ ಪತ್ರ ವೊಂದನ್ನು ಬರೆದು—" ಬಸವನು ದ್ವಿಜ ದೀಕ್ಷೆಯ ನೊಲ್ಲೆನೆಂದು ಕೋಪದಿಂದ ಮುನಿದು ಎತ್ತಲೋ ಹೋಗಿದ್ದಾನೆ. ಜೊತೆಯಲ್ಲಿ ಅಕ್ಕ ನಾಗಲಾಂಬೆಯೂ ಇದ್ದಾಳೆ. ನಿಮ್ಮಬಳಿ ಬಂದಿದ್ದರೆ ತಿಳಿಸುವದು ಎಂದು ಪ್ರಶ್ನಿಸುತ್ತಾರೆ. ಬಸವನ ಕೀರ್ತಿ ದಿನ ದಿನಕ್ಕೆ ಬೆಳೆಯುತ್ತಿರುವದನ್ನು ಕೇಳಿ ಪರಮಾನಂದ ಹೊಂದಿದ ಜಗದೇವನು ಶಿವನಿಷ್ಠಾದುರಂಧರಳಾದ ತನ್ನ ಪುತ್ರಿ ಗಂಗಾಂಬಿಕೆ ಯನ್ನು ಅವರಿಗೆ ಇತ್ತು ಲಗ್ನಮಾಡಲು ನಿಶ್ಚಯಿಸುತ್ತಾರೆ. ಕರೆತಂದು " ಇರದೀವೆ ಕೈಕೊಳ್ಳಿ ಭರವಸದೊಳಂದು" ಆತ್ಮಜೆಯನ್ನು ಚರಣಕ್ಕೆರಗಿಸು ವನು. ಬಸವಣ್ಣನ ಮಾತಿನಂತೆ ಗಂಗಾಂಬಿಕೆಗೆ ಸ್ವತ: ಸಂಗಮದೇವರಿಂದಲೆ ಕ್ರಿಯಾ ಮತ್ತು ಮೋಕ್ಷಗಳ ಶಿವ ದೀಕ್ಷೆ ನಡೆಯುತ್ತದೆ.

ಅಷ್ಟವಿಧಾರ್ಚನೆಗಳಿಂದ, ನಿಸ್ಸಾಳ,ತಮ್ಮಟೆ ಭೇರಿ ವಾದ್ಯಗಳ ಗಡಣದಿಂದ ಬಸವರಸ ಗಂಗಾಂಬಿಕೆಯ ವಿವಾಹವು ನಡೆಯುತ್ತದೆ. "ಎಳನೀರ ಗಾವಿಯ ಸುಧೋತ್ರದಂಗಿಯ ತೊಟ್ಟು" ಚಿಮ್ಮುರಿಯ ಸುತ್ತಿ ಮುತ್ತಿನ ತುರಾಯಿ ಧರಿಸಿದ ಪುಣ್ಯ ಪುರುಷ ಬಸವೇಶನನ್ನು ಕವಿ ನಾನಾವಿಧವಾಗಿ ಮನಂಬುಗು ವಂತೆ ವರ್ಣಿಸುತ್ತಾನೆ. ವಿವಾಹದ ಸಮಸ್ತ ಒಡವೆ ವಸ್ತ್ರಗಳ ವರ್ಣನೆಯೂ ಬಹು ಚೆಲ್ವಾಗಿ ಮೈದೋರಿದೆ. ಪರಧನ ಪರಸತಿಯರಿಗೆರಗದ ಭಾಷೆಯನು ಬಸವಣ್ಣ ಅಂದೇ ಕೈಕೊಂಡನು. ಧಾರೆ, ಭೂಮದ ಹಾಡು, ಪರಾಕಿನ ಆರತಿ, ಶೋಭಾನೆ, ಚಂಡಿನ ಹಾಡು, ಒರಳಕ್ಕಿ ಹಾಡು, ಜೋಗಳ ಪದ ಮೊದಲಾದ ಕನ್ನಡಿಗರ ಸಾಂಪ್ರದಾಯಕ, ಜಾನಪದ, ವಿವಾಹ ಕ್ರಮಗಳೆ ಲ್ಲವೂ ವರ್ಣಿತವಾಗಿವೆ. ರಗಳೆ ಮತ್ತು ಬಸವ ಪುರಾಣಗಳಲ್ಲಿ ಜಂಗಮ ಸೇವಾ ಪ್ರಕರಣವು ಜೀವಂತ ಚಿತ್ರವೆನಿಸುವಷ್ಟು ಮನೋಜ್ಞವಾಗಿವೆ.

ಹರಿಹರನು ಬಸವಣ್ಣನವರಿಗೆ, ಗಂಗಾದೇವಿ ಮತ್ತು ಮಾಯಿದೇವಿಯು ರೆಂಬ ಇಬ್ಬರು ಪತ್ನಿಯರಿದ್ದರೆಂದು ತಿಳಿಸುತ್ತಾನೆ. ಭೀಮಕವಿ ಮತ್ತು ಚೆನ್ನಪ್ಪ ಕವಿ ಮಾಯಿದೇವಿಯ ಹೆಸರನ್ನು ಸೂಚಿಸಿಲ್ಲದಿರುವುದರಿಂದ ಮಾಯಿ ದೇವಿ ಕೇವಲ ಕಾಲ್ಪನಿಕವಾಗಿ ಭಾಸವಾಗುತ್ತದೆ. ಚೆನ್ನಪ್ಪನು ಬಿಜ್ಜಳನ ತಂಗಿ ನೀಲಾಂಬಿಕೆಯನ್ನು ಬಸವಣ್ಣನವರು ವಿವಾಹವಾದಂತೆ ಬರೆದಿದ್ದಾನೆ. ಬಸವಣ್ಣನ ವಿವಾಹ ಮುಗಿದನಂತರ ಆತನು ಕಪ್ಪಡಿ ಸಂಗಮಕ್ಕೆ ತೆರಳಿ ದರೆಂದು ಬಸವಪುರಾಣ ಹೇಳುತ್ತದೆ. ಆದರೆ ವಿವಾಹ ಸಮಯದಲ್ಲಿ ಶಂಕರನು ವೃದ್ಧನ ರೂಪಿನಿಂ ಬಂದು "ಸದಾ ಶಿವಭಕ್ತಿಯಂ ಮೆರೆಯಬೇಕೆಂದು, ಶಿವ ಭಕ್ತಿಯಿದ್ದವರೆಲ್ಲ ಜಂಗಮರೆಂದು ತಿಳಿದು ಪರಧನ ಪರಾರ್ಥಕ್ಕೆಳಸದೆ, ಸದಾ ಶಿವಪ್ರಸಾದವನಲ್ಲದೆ ಅನ್ನ ಪ್ರಸಾದವ ಭುಂಜಿಸಬಾರದೆಂದು" ಉಪ ದೇಶಿಸಿ ಅಂತರ್ಧಾನವಾಗುವ ಚಿತ್ರ ಶರಣ ಲೀಲಾಮೃತದಲ್ಲಿದೆ. ಬಿಜ್ಜಳನ ಆಸ್ಥಾನದಲ್ಲಿ ದಂಡಾಧೀಪನಾದ ಮೇಲೆ ಬಸವಣ್ಣನವರ ವಿವಾಹವೆಂದು ಬ. ರಾ. ದೇ. ರಗಳೆ ತಿಳಿಸಿದರೆ, ದಂಡಾಧೀಶನಾಗುವ ಮೊದಲೇ ವಿವಾಹ ಜರುಗುತ್ತದೆಂದು ಚೆನ್ನಪ್ಪಕವಿ ತಿಳಿಸುತ್ತಾನೆ.

## ಬಿಜ್ಜಳರಾಯನ ಬಳಿ ಮಂತ್ರಿತ್ವ.

ಬಲದೇವ ಮಂತ್ರಿಯು ಕೆಲವು ಕಾಲಾನಂತರ ಶಿವೈಕ್ಯನಾಗಲು ಬಿಜ್ಜಳ ನದು 'ಮುಡುಪು ಬೊಕ್ಕಸಕ್ಕೆ ಹಣ ಕಡಿಮೆಯಿಲ್ಲದೊಲು, ಪೊಡವಿಯೊಳ್ ಧರ್ಮ ನಡೆವಳಿ ತಪ್ಪದಂತೆ ಇರುವ ಕಡುಜಾಣರಾರೆಂದು" ಮಂತ್ರಿಗಳನ್ನು ಪ್ರಶ್ನಿಸಿದನು. ಅವರು 'ನಿಮ್ಮ ಮಂತ್ರಿಯು ಮೋಹದಳಿಯ ಪರಮಪುರು ಷನೂ ಭಾಳಾಕ್ಷ ಸ್ವರೂಪನೂ' ಆದ ಬಸವಣ್ಣನಿದ್ದಾನೆ, ಎಂದು ತಿಳಿಸು ವರು. ರಾಯನು ಸಕಲ ಮರ್ಯಾದೆಗಳೊಡನೆ ಬಸವಣ್ಣನವರನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಳ್ಳುತ್ತಾನೆ. "ಚಂದ್ರನ ಕಳೆಗೆ ಹೆಚ್ಚುವ ಅಂಬುಧಿ ಯಂತೆ ಬಸವೇಶ್ವರನ ಆಗಮನದಿಂದ ಬಿಜ್ಜಳರಾಯನ ಆನಂದಪೆರ್ಚಿತು". ಕೈಮುಗಿದು 'ನಿಮ್ಮ ಮಾವನವರ ಸ್ಥಾನವನ್ನು ನೀವು ವಹಿಸಿಕೊಳ್ಳಿರಿ' ಎಂದನು. ಆದರೆ ಸಕಲ ಜ್ಞಾನಿಯಾದ ಬಸವಣ್ಣ "ಎಲೈ ರಾಯನೆ ನೀವು ಜಾವಕ್ಕೊಂದು ಮನಸಿನವರು, ಭಾವ ಶುದ್ಧವಿಲ್ಲ. ಚಾಡಿಮಾತಿಂಗೆ ಮನ ಸೋತರೆ ಮಾಡುವುದೇನು ? ' ಎಂದು ಶಂಕಿಸುತ್ತಾರೆ.

"ರಾಜನು ರಾಕ್ಷಸನಂತೆಯೂ, ಮಂತ್ರಿಯು ವ್ಯಾಘ್ರನಂತೆಯೂ, ಸೇಗಳು ಕತ್ತೆಯಂತೆಯೂ ಒಬ್ಬರಿಗೊಬ್ಬರಿಗೆ ಕಲಹವೈರತ್ವವಿರುವ ರಾಜ್ಯವು ಕ್ಷೀಣವಾಗುವದು"

"ರಾಜನು ಭೂದೇವಿಯಂತೆಯೂ, ಪ್ರಧಾನ ಪರ್ವತದಂತೆಯೂ ಸೇನೆ ಕಲ್ಪವೃಕ್ಷದ ಹಾಗೆಯೂ ಇದ್ಧಂತ ರಾಜ್ಯವು ವೃದ್ಧಿಯಾಗುವುದು"

ಎಂದು ರಾಜಧರ್ಮವನ್ನು ತಿಳಿಸುವರು ಬಿಜ್ಜಳನು ತಾನು ಇತರರಂತೆ ಅಲ್ಲವೆಂದೂ ಬಸವಣ್ಣನು ಮೊತಿಗೆ ಮೀರಿನೆಂದೂ ತಿಳಿಸಿದ ನೇರಿಗೆ ಬಸವಣ್ಣ ದಂಡಾಧೀಶನ ಪಟ್ಟವಂ ಒಪ್ಪಿಕೊಳ್ಳವರು.

ಆ ಸಮಯದಲ್ಲಿ ಕೈಲಾಸದಿಂದ ಲಿಪಿಗಳು ಬಿಜ್ಜಳನ ಆಸ್ಥಾನದಲ್ಲಿ ಬಿದ್ದವು. ರಾಜನು 'ಅಖಿಲ ವೇದ ಶಾಸ್ತ್ರಾಗಮಗಳ ಅರ್ಥವನ್ನು ಸಾಧಿಸಿರ್ದ ಕರಣಿಕರನ್ನು ಕರೆಸಿ ಪಾರಸಿ, ಅರಬ್ಬಿ, ಗೀರ್ವಾಣ, ಆಂಧ್ರ, ದ್ರಾವಿಡ ಕನ್ನಡ ಮೊದಲಾದ ಯಾವ ಲಿಪಿಯೂ ಹೊಂದದ' ಆ ಓಲೆಗರಿಯನ್ನು ಓದಿರೆನ್ನುವನು. ಕರಣಿಕರು 'ಮುಂದುಗಾಣದೆ ಮುಖವಂ ತಗ್ಗಿಸಿದರು. ಕುಪಿತನಾದ ದೊರೆಯು— 'ನೀವು, ಹೊಟ್ಟೆಯನ್ನು ನೆವರಿ ಬೆದರಿಸಿ ತೊವ್ವೆ ಪಾಯಸವನ್ನು ಉಣ್ಣಲು ಯೊಗ್ಯರು. ಯಕ್ಷರೊಳಗಣ ಮಾತನ್ನೆಲ್ಲ ಒಂದು ಲಕ್ಷವಾದರೂ ನುಡಿವಿರಿ, ಮೂರು ಅಕ್ಷರದ ಗುರುತರಿಯಿರಲ್ಲ" ಎಂದು ಜರೆದಾಡುವನು. ಬಸವಯ್ಯನ ಮುಖವಂ ನೋಡಿ ಆ ಲಿಪಿ ಶಾಸ್ತ್ರವಂ ಹಸ್ತದಲ್ಲಿತ್ತು "ಎನ್ನ ದೇವ! ಈ ಪ್ರಸಾದವಂ ಪಾಲಿಸು" ಎಂದನು. ಬಸವೇಶನು ಅದನ್ನು ಪರೀಕ್ಷಿಸಿ ಅರಸನ ಗದ್ದುಗೆಯ ಕೆಳಗೆ ಏಳು ಕೊಪ್ಪರಿಗೆಯ ಹಣ ಇರುವ ವಿಚಾರವಂ ತಿಳಿದು ಅಗೆಸಿ ನೋಡಲು 'ಏಳು ಕೂರಿಗೆಯ ತಾಳಿನ ಪ್ರಮಾಣದಿ ಏಳು ಕೊಪ್ಪರಿಗೆಯ' ಹೊನ್ನನ್ನು ನೋಡುವರು. ಬಸವಣ್ಣನ ಜ್ಞಾನ ಸಾಮರ್ಥ್ಯಕ್ಕೆ ಆನಂದಗೊಂಡ ಭೂಪಾಲನು ತನ್ನ ಸೋದರಿ ನೀಲಾಂಬಿಕೆಯನ್ನು ಬಸವಣ್ಣನವರಿಗಿತ್ತು ಅಖಿಲರಾಜ್ಯದ ಮುದ್ರೆ ಇತ್ತು ಕಲ್ಯಾಣವೆಸಗುವರು.

## ಕಲ್ಯಾಣ ನಗರಿ

ಚೆನ್ನಪ್ಪ ಕವಿಯು— ಬಸವಣ್ಣನು ಸಂಗಮದೇವರಲ್ಲಿ ಮತ್ತು ಜಂಗರಲ್ಲಿ ಇಟ್ಟಿದ್ದ ಅತಿಶಯ ಭಕ್ತನಿಷ್ಠೆಗಳನ್ನು ವರ್ಣಿಸುವುದಕ್ಕಿಂತ ಬಸವರಸನ ರಾಜ್ಯಭಾರ ಕ್ರಮವನ್ನು ಅತಿಶಯವಾಗಿ ವರ್ಣಿಸುತ್ತಾನೆ. ಕಲ್ಯಾಣದ

ಪುರಜನರಲ್ಲಿ ಶಿವಭಕ್ತರ ಶಿವಪೂಜೆ ಶಿವಮಾರ್ಗಗಳನ್ನು ಸಾಧಿಸುತ್ತ, ಕೆರೆ ಕಾಲುವೆ ಕೂಪ ಸರಸಿಗಳನ್ನು ನಿರ್ಮಿಸುತ್ತ ಧರ್ಮ ನಡೆವಳಿ ತಪ್ಪದಂತೆ ಶರಣರ ನಿಧಿ' ಎನಿಸಿ ಬಾಳುತ್ತಿದ್ದರು. ಬಸವಣ್ಣನವರು ಉನ್ನತವಾದ ಕಟ್ಟಡಗಳಿಂದಲೂ, ಭವನಂಗಳಿಂದಲೂ, ಅಸಂಖ್ಯಾತ ಶಿವಸಿಲಯ, ರತ್ನಗೆಲಸದ ಉಪ್ಪರಿಗೆಗಳು ವಿಶಾಲವಾದ ರಾಜಬೀದಿಗಳಿಂದ ಮನೋಹರವಾಗಿರ್ದ ಕಲ್ಯಾಣ ನಗರಿಯಲ್ಲಿ ನಲವತ್ತೆಂಟು ಯೋಜನ ವಿಸ್ತೀರ್ಣಪರಿಯಂತರವೂ ಅಸಂಖ್ಯಾತ ಶಿವಶರಣರು ಒಪ್ಪಿರ್ದರು. 'ಬಸವ ಭಕ್ತಿಯು ಚೆಲ್ವ ಕುಸುಮವಾಸನೆ ನಾಲ್ದೆಸೆಯನ್ನೂ ಮುಸುಕಿತ್ತು ?'

ಇಡೀ ಭರತಖಂಡದ ಎಲ್ಲ ರಾಜ್ಯಗಳಿಂದಲೂ ಎಲ್ಲಾ ಜಾತಿಯ ಭಕ್ತರು ಬಸವಣ್ಣನವರ ನಡೆನುಡಿ ಗುಣಗಳಿಂದಾಕರ್ಷಿತರಾಗಿ ಕಲ್ಯಾಣ ನಗರಿಗೆ ಬಂದು ನೆಲಸಿ ಕಾಯಕವೆಸಗುತ್ತಿದ್ದರು. ಮಡಿವಾಳಮಾಚಿದೇವರು ಬಸವಣ್ಣನಂ ಕಂಡು ಶಿವಶರಣರ ಭಕ್ತಿಗೃವಲ್ಲಿ ಭೃತ್ಯರ ಅಗ್ರೇಸರನಾಗಿ, ಬಸವೇಶಂಗೆ ಮನದ ಪ್ರಿಯಾಪ್ತನಾಗಿ, ಶಿವಭಕ್ತಿ ಅಷ್ಟಾವರಣ, ಷಟ್ಸ್ಥಲ, ಪಂಚಾಚಾರ ಲಿಂಗಾಂಗ ಸಾಮರಸ್ಯಗರಿಷ್ಠನಾಗಿ ಶಿವನ ವಾಕ್ಯದಂತೆ ಶರಣರ ಮೈಲಿಗೆಗಳಂ ತೊಳೆಯುವ ಕಾಯಕವ ಕೈಕೊಂಡಿದ್ದನು.

ಒಂದು ದಿನ ಮೇದಾರ ಕೇತಯ್ಯನು ಶಿವೈಕ್ಯನಾಗಲು, ಮಾಚಿದೇವರನ್ನು ಕರೆತರಬೇಕೆಂದು ಬಸವಣ್ಣನವರು ಉತ್ತಣ್ಣನ ಸಂಗಡ ಹೇಳಿ ಕಳುಹಿಸುವರು. ಅವರು 'ಶರಣರ ಅಳವನ್ನು ಈಗ ಕೇಳಿದೆವು. ಬಸವನ ಮುಖವನ್ನು ನೋಡಸಲ್ಲದು' ಎಂದು ತಂದ ಸುದ್ದಿಗೆ ಪ್ರತಿಯಾಡುವರು-ಬಸವನು ಈ ಮಾತನ್ನು ಕೇಳಿ 'ಎನ್ನ ಗುರುವು ಎಚ್ಚರಿಕೆ ಕೊಟ್ಟನೆಂ'ದು ಕಣ್ಮುಚ್ಚಿ ಪ್ರಾಣಲಿಂಗವನ್ನು ಶಿವನಲ್ಲಿ ಐಕ್ಯಗೊಳಿಸುವರು. ನೆರೆದ ಶರಣ ಶರಣ ತಿಂಥಿಣಿ ದುಃಖದಿಂದ "ಚಿನುಮಯ ಬಸವ ಮಹೇಶ, ಬಸವಗಣ ಸಂಜೀವ, ಬಸವ ಶಿವನೇ" ಎಂದು ಅಳಲಿದರು. 'ಮಡಿವಳ ಮಾಚಯ್ಯಂ ಬಸವನೆಂಬ ಕಲ್ಪವೃಕ್ಷವಂ ಕಿತ್ತನಲ್ಲಾ! ಭಕ್ತ ಸಾಮ್ರಾಜ್ಯ ಲಕ್ಷ್ಮಿಯ ಸೂರೆ ಮಾಡಿದನಲ್ಲಾ! ಈ ಸೌಭಾಗ್ಯ ಸಂಪತ್ತನ್ನು ಮಡಿವಳನೇ ಅನುಭವಿಸಲಿ. ಪೋಗಪ್ಪಾ!! ಈ ವಾರ್ತೆಯನ್ನು ಮಾಚಿದೇವರಿಗೆ ತಿಳಿಸು" ಎನ್ನುವರು.

ಬಸವಣ್ಣನವರ ಶರಣ ನಿಷ್ಠೆಯಿಂದ ಸಂತೋಷಗೊಂಡ ಮಾಚಿದೇವರು ಶಿವನೊಡ್ಡು ಕೇತಯ್ಯ ಬಸವಯ್ಯಗಳಂ ಬದುಕಿಸಲು 'ವೀರ ಹಲಗೆಯಂ

ಹಿಡಿದು ಘಂಟೆಯು ಸಾರಿ ಹೊಯ್ದನು? ಶರಣರ ಪಗೆಗೆ ಹೆದರಿದ ಶಂಕರನು ಬಸವ ಕೇತಯ್ಯಗಳನ್ನು ಹಿಂತಿರುಗಿ ಕಳುಹಿಸುವನು.

## ಚರಿತ್ರೆಯ ಸತ್ಯ ಮತ್ತು ಪವಾಡ

ಬಸವಣ್ಣನವರು ತಮ್ಮ ಜೀವನ ರಂಗವನ್ನೆ ಬಿಂದು ಮಹತ್ತರ ಸಾಧನ ರಂಗವನ್ನಾಗಿಸಿಕೊಂಡು ಸಕಲ ಸದ್ಗುಣಗಳನ್ನೂ ಸಾಧಿಸಿ ಪಡೆದಿದ್ದರೆಂಬುದು ನಿರ್ವಿವಾದವಾದ ವಿಷಯ. ಅವರ ಸದ್ಗುಣಗಳ ಮಹಿಮೆಯನ್ನು ಅರಿತಿದ್ದ ಕವಿಗಳು ಅದನ್ನು ಚಿತ್ರಿಸಲು ತನು ತಮಗೆ ಸರಿತೋರಿದ ಮಾರ್ಗಗಳನ್ನು ಅನುಸರಿಸಿದರು. ಕೆಲವರು ಪವಾಡಗಳನ್ನು ಮೆರೆಸಿ ಅವರನ್ನು ಅಲೌಕಿಕ ವ್ಯಕ್ತಿಗಳನ್ನಾಗಿ ಚಿತ್ರಿಸಿದರು. ಇಂತಹ ಪವಾಡ ಚಿತ್ರಣದಲ್ಲಿ ಭೀಮಕವಿ, ಸಿಂಗಿರಾಜ ಮತ್ತು ಚೆನ್ನಪ್ಪ ಅಗ್ರಗಣ್ಯರಾಗಿದ್ದಾರೆಂದು ಹೇಳಬಹುದು.

ಬಸವಣ್ಣನವರಿಗೆ ಸಂಬಂಧಿಸಿದ ಸತ್ಯ ಸಂಗತಿಯೊಂದು ಹೇಗೆ ಪವಾಡವಾಗಿದೆಯೆಂಬುದನ್ನು ನೋಡಿ—

ಬಸವಣ್ಣನವರು ಸದಾ ಉದಾರ ಹೃದಯಿಗಳು, ಉಪಕಾರಿಗಳು. ಕಷ್ಟದಲ್ಲಿದ್ದವರಿಗೆ ಸಹಾಯಮಾಡಲು ಬಾಹ್ಯ ಗೌರವದ ತಮ್ಮ ಘನತೆ ದೊಡ್ಡಸ್ತಿಕೆಗಳನ್ನು ಕಡೆಗಣಿಸುತ್ತಿದ್ದರು. ಒಂದು ಸಲ ಅಂದಣದಲ್ಲಿ ಕುಳಿತುಪರಿವಾರದೊಂದಿಗೆ ರಾಜಬೀದಿಯಲ್ಲಿ ಬರುತಿರುವಾಗ ಹಾಲುಮಾರುವ ಹೆಂಗಸೊಬ್ಬಳು ಕೆಸರಿನಲ್ಲಿ ಜಾರಿ 'ಬಸವಾ, ರಕ್ಷಿಸೆಂದು' ಕೂಗಿಕೊಂಡಳು. ಬಸವಣ್ಣನವರು ಥಳಲನೆ ಅಂದಣದಿಂದಿಳಿದು ಓಡಿಬಂದು ಆಕೆಯ ಕೊಡವು ಜಾರಿ ಬೀಳುತ್ತಿದ್ದುದನ್ನು ಹಿಡಿದೆತ್ತಿ ರಕ್ಷಿಸಿದರು. ಇದು ನಡೆದ ಪ್ರಸಂಗ. ಆದರೆ ಬಸವಣ್ಣನವರು ಆಸ್ಥಾನದಲ್ಲಿ ಇದಕ್ಕಿದ್ದಂತೆ ಕೈ ಎತ್ತಲು, ರಾಜನನ್ನು ಹೊಡೆಯಲು ಕೈಎತ್ತಿದರೆಂದು ಕೊಂಡೆಮಂಚಣ್ಣನು ಸಾಧಿಸುವನು. ಬಸವರಸನು ತಾನು ಗೊಲ್ಲತಿಯೊಬ್ಬಳ ಕೊಡವನ್ನು ಜಾರದಂತೆ ಹಿಡಿದು ರಕ್ಷಿಸಲು ಹಾಗೆ ಮಾಡಿದೆನೆನ್ನುವನು.

ರಾಜನ ಸೇವಕರು ಬೀದಿಯಲ್ಲಿ ಹುಡುಕುತ್ತಾ ಬರಲು ಗೊಲ್ಲತಿಯು ಕೆಸರಿನಲ್ಲಿ ತಾನು ಜಾರಿ ಬೀಳುತ್ತಿದ್ದಾಗ ಬಸವನು ಕೊಡವನ್ನು ಹಿಡಿದು ರಕ್ಷಿಸಿದ್ದು ನಿಜವೆನ್ನುವಳು.

ಸತ್ಯ ಸಂಗತಿಯೊಂದು ಪವಾಡವು ಹೇಗಾಯಿತೆಂಬುದಕ್ಕೆ ಇದೊಂದು ಉದಾಹರಣೆ. ಮಾಂಡವ್ಯಪುರದ ಮಹಾದೇವರಾಯನಲ್ಲಿ ಬಸವನು ಗಣಂಗಳಿಂ ತಂದ ಪವಾಡ, ಗೊಲ್ಲತಿಯ ಮಜ್ಜಿಗೆ ಕೊಡವ ಹಿಂದಿದ ಪವಾಡ ಸಾವಿರ ಕೊಡನ ನಿಲಿಸಿದ ಪವಾಡ, ಸೂರ್ಯನ ಹನ್ನೊಂದುದಿನ ನಿಲಿಸಿದ ಪವಾಡ, ಚಿತ್ರದ ರೂಹು ಜಂಗಮವಾದ ಪವಾಡ, ತೃಣವಂ ಶಿವಭಕ್ತನ ಮಾಡಿ, ಮರದ ಬೊಂಬೆಯಂ ಜಂಗಮನ ಮಾಡಿದ ಪವಾಡ ಇತ್ಯಾದಿ ನೂರಾರು ಪವಾಡಗಳಿಗಾಗಿ ಶರಣಲೀಲಾ ಮೃತದ ಹದಿನೈದಿಪ್ಪತ್ತು ಸಂಧಿಗಳೇ ಮಿಸಲಾಗಿವೆ.

## ಹೊಲೆಯರ ಮನೆ ಹೊಕ್ಕರೆ?

ಅದೊಂದು ದಿನ ಬಸವ ದಂಡಾಧೀಶ ಅರಮನೆಯ ಮಂದಿಯೊಂದಿಗೆ ರಾಜ ಬೀದಿಯಲ್ಲಿ ಬರುತ್ತಿದ್ದರು. ಅಷ್ಟರಲ್ಲಿ ಘಂಟೆ ಜಾಗಟೆ ನಾದವನ್ನು ಕೇಳಿ ಶಿವನಾಗಮಯ್ಯ ಭಕ್ತನ ಮನೆಯಂಪೊಕ್ಕು ತೀರ್ಥಪ್ರಸಾದವಂ ಸೇವಿಸಿ ಬರುತ್ತಾರೆ. ಈ ಸಮಾಚಾರವನ್ನು ಕೊಂಡೆ ಮಂಚಣ್ಣನಿಂದ ಕೇಳಿದ ಅರಸು ಕಾಳೋರಗನಂತೆ ಕೆರಳಿ "ಏನಯ್ಯ, ಮಂತ್ರೀಶ! ಹೀನ ಹೊಲೆಯರ ಮನೆಯ ಪೊಕ್ಕುಬಂದು ಎನ್ನ ಹೊಲೆಗಲಸುವರೇ?" ಎಂದು ಪ್ರಶ್ನಿಸುವನು. ಅದಕ್ಕೆ ಬಸವಣ್ಣ "ಕೊಲುವಾತ ಹೊಲೆಯ, ಹೊಲಸು ತಿನ್ನುವ ಹೊಲೆಯ, ಹುಸಿಯ ನಾಡುವ ಹೊಲೆಯ. ಅನ್ಯನೇಮಕೆ ಮನವಿಟ್ಟು ಹೊಲೆಯರ ಮನೆಗೆ ಹೋಗಲಿಲ್ಲ. ಪರರ ಸ್ವತ್ತನ್ನೆಳಸಿ ಹುಸಿಯುವ ಹೊಲೆಯರ ಮನೆ ಹೊಕ್ಕುದಿಲ್ಲ. ಪರಸತಿಗಳು ಪಾಕಿದನ್ನವ ತಿನ್ನುವ ನರಕಿ ಹೊಲೆಯರ ಮನೆ ಹೋಗಲಿಲ್ಲ. ತ್ರಿಣಯ ಮೆಚ್ಚಿದ ಅಮೃತ ಹಸ್ತರೂ ಅಮೃತವಾಕ್ಯರೂ ಆದ ಶಿವನಾಗಮಯ್ಯನವರ ಬಗ್ಗೆ ವ್ಯರ್ಥಮಾತಾಡಸಲ್ಲ" ಎಂದು ಎಚ್ಚರಿಸುವರು. ಅದಕ್ಕೆ ಮಂಚಣ್ಣನು "ಅವರು ಕುಲಜರೆಂಬುದಕ್ಕೆ ಅವುದು ಸಾಕ್ಷಿ? ಅಮೃತವ ಹಸ್ತದಿ ಕರೆದು ತೋರಲಿ" ಎಂದು ಸವಾಲು ಹಾಕುವನು. ಬಸವಣ್ಣನವರು ಅದಕ್ಕಂಜದೆ ಶಿವನಾಗಮಯ್ಯನನ್ನು ಕರೆಸಿ ಬೆರಳು ಪಿಡಿದು ಅಮೃತವನ್ನು ತಂದರು.

ಹರಿಹರನು ವರ್ಣಿಸಿರುವ ಕಂಬಳಿ ನಾಗಿದೇವನೆ ಇಲ್ಲಿ ಶಿವನಾಗಮಯ್ಯನಾಗಿದ್ದಾನೆ. "ಭಕ್ತಿಯೆಂಬ ಪರುಷತಾಗಲು ಅಂತ್ಯಜನೂ ಕುಲಜನಾಗುವನು.

ಶಿವಭಕ್ತನೇ ಕುಲಜನು. ಅವನಿಗೆ ಬೇರೆ ಜಾತಿಗಳಿಲ್ಲ ಎಂಬುದು ಬಸವಣ್ಣನವರ ಜೀವನ ದೃಷ್ಟಿಯಾಗಿತ್ತು. ಅದನ್ನು ಪ್ರತಿಪಾದಿಸಲು ಶಿವನಾಗಮಯ್ಯನ ಹಸ್ತದಿಂದ ಹಾಲನ್ನು ತರಿಸಿದ ಪವಾಡವನ್ನು ಕವಿಗಳು ಕಲ್ಪಿಸಿಕೊಂಡಿದ್ದಾರೆ.

ಜೈನ ಬ್ರಾಹ್ಮಣರ ಚಾಡಿಮಾತನ್ನು ಕೇಳಿದ ಎರಗಿವಿಯು ಭೂಪನು ಬೊಕ್ಕಸದ ಹಣ ಜಂಗಮರಿಗೆ ಸೂರೆ ಹೋಯ್ತೆಂದು ಎಡೆತುಳಿದ ನಾಗ ರಂತೆ ರೋಷವಂ ತಾಳಿದನು. ಇಂತು ದುರ್ನೀತಿಯುಂಟೆ ಬಸವಣ್ಣ? ನುಡಿಯು ಪುರಾತನ, ನಡೆಯು ಕಿರಾತನ" ಎಂದು ಖತಿಯಿಂದ ತೆಗಳು ವನು. ಆದರೆ ಸತ್ಯವನ್ನು ಶೋಧಿಸಿದಾಗ ಬೊಕ್ಕಸದ ಹಣ ಒಂದಕ್ಕೆರ ಡಾಗಿರುವದನ್ನೂ, ಮಲ್ಲಶೆಟ್ಟಿಯ ಮನೆಯ ಮಕ್ಕಳು ಐಶ್ವರ್ಯ ಜೋಡಿ ಸಮನಾಗಿರುವುದನ್ನೂ, ಕಣ್ಣಾರೆ ಕಂಡು ಕ್ಷಮಿಸಬೇಕೆಂದು ಬಸವಣ್ಣನವರ ಕ್ಷಮೆ ಯಾಚಿಸುವನು.

## ಭೂತಗಳ ಶಂಕರ ದಾಸಯ್ಯ

ಸಕಲ ಭೂತ ಸಂಕುಲವನ್ನೂ, ತನ್ನ ಸ್ವಾಧೀನ ಪಡಿಸಿಕೊಂಡು ಬಿಜ್ಜಳನ ಆಸ್ಥಾನವನ್ನು ನಾನಾ ರೀತಿಯಾಗಿ ಸೂರೆಗೊಳಿಸುತ್ತಿದ್ದ ಶಂಕರ ದಾಸಯ್ಯ ನೆಂಬಾತನ ವೃತ್ತಾಂತವನ್ನು ಚೆನ್ನಪ್ಪ ಕವಿ ಚಿತ್ರಿಸಿದ್ದಾನೆ. ಆ ಭೂತ ಸಮೂಹವು ಬಸವಣ್ಣನವರ ಮಾತಿಗೆ ಕಟ್ಟುಬಿದ್ದು ಮತ್ತೆ ತಮ್ಮ ಸ್ವಸ್ಥಾನವನ್ನು ಸೇರುತ್ತವೆ.

ಶಂಕರ ದಾಸಿಮಾರ್ಯನೇ ಶಂಕರ ದಾಸಯ್ಯ. ಇವನು ದೇವರ ದಾಸಿಮಯ್ಯನೊಂದಿಗೆ ವಾದ ಮಾಡಿರುತ್ತಾನೆ. ಇವರೆಲ್ಲರೂ ಬಸವಣ್ಣ ನವರ ಸಮಕಾಲೀನರಾಗಿದ್ದರಲ್ಲದೆ ಬಸವಣ್ಣನವರಿಗಿಂತ ಹಿಂದಿನವರು ಎಂಬ ಮಾತು ಸತ್ಯಕ್ಕೆ ದೂರವಾಗಿದೆ.

ಸಾಮಾನ್ಯವಾಗಿ ವೀರಶೈವ ಗ್ರಂಥಗಳಲ್ಲೆಲ್ಲಾ ಕಡುರಮ್ಯವಾಗಿ ಚಿತ್ರಿತ ವಾಗಿರುವ ಬಸವಣ್ಣನವರ ಜಂಗಮಸೇವಾ ಪ್ರಕರಣ, ಅವರು ಮಹಮನೆ ಯಲ್ಲಿ ಈಶ್ವರಾರಾಧನೆಯಲ್ಲಿ ಮೈಮರೆಯುತ್ತಿದ್ದ ಚಿತ್ರಣ ಇವು ಚೆನ್ನಪ್ಪ ಕವಿಯ ಕೃತಿಯಲ್ಲಿ ಕಂಡು ಬರುವದಿಲ್ಲ. 'ಶರಣಸಂಕುಲಕ್ಕೆ ಗ್ರಹಗ ಳನ್ನು ನಿರ್ಮಿಸಿ, ಕಾಯಕಗಳನ್ನು ಕಲ್ಪಿಸಿ ಮಾಹೇಶ್ವರಾರಾಧನೆ ಮಾಡುತ್ತಿದ್ದ ರೆಂದು' ಸ್ವಲ್ಪದರಲ್ಲಿ ಹೇಳಿ ಮುಗಿಸುತ್ತಾನೆ.

ಬಸವಣ್ಣನವರ ಅಕ್ಕ ನಾಗಲಾಂಬೆಯ ಗರ್ಭದಲ್ಲಿ ಚನ್ನಬಸವಣ್ಣನವರು ಜನಿಸುವ ವೃತ್ತಾಂತ, ಶಿಶುವು ಗರ್ಭಾಂಬುಧಿಯಲ್ಲಿರುವಾಗಲೆ ತಾನು 'ಪರವಾದಿಗಳ ಗಂಡಿನಾಗಿ, ಕಕ್ಕಯ್ಯಗಳ ಶೇಷ ಮುಕ್ಕಣ್ಣನ ಪ್ರಸಾದದಿಂದ ಜನಿಸಿ ಬರುತ್ತೇನೆಂದು ತಿಳಿಸುವ ಪ್ರಸಂಗಗಳನ್ನು ಚೆನ್ನಪ್ಪ ಕವಿ ಶ್ರೇಷ್ಠ ರೀತಿಯಲ್ಲಿ ನಿರೂಪಿಸಿದ್ದಾನೆ.

**'ಶೂನ ಸಿಂಹಾಸನ' ಕೇವಲ ಕಲ್ಪನೆ; ಇತಿಹಾಸದ ಸತ್ಯವಲ್ಲ.**

ಬಸವಣ್ಣನವರು ಮತ್ತು ಹರಿಹರನ ಸಮಕಾಲೀನರಲ್ಲದ ಭೀಮಕವಿ ಸಿಂಗಿರಾಜ ಮತ್ತು ಚೆನ್ನಪ್ಪ ಕವಿಯ ಗ್ರಂಥಗಳಲ್ಲಿ ಪ್ರಭುದೇವರ ವೃತ್ತಾಂತ ಬರುತ್ತದೆ. ಆತನಿಗೆ ವೀರಶೈವ ಮುಖ್ಯರಲ್ಲಿ ಪ್ರಾಧಾನ್ಯ ಕಲ್ಪಿಸಲು ಚೆನ್ನಪ್ಪ ಕವಿ ಪ್ರಯತ್ನಿಸಿದ್ದಾನೆ. ಅದಕ್ಕಾಗಿ 'ಶೂನ್ಯಸಿಂಹಾಸನ'ವನ್ನು ರಚಿಸಿ ಬಸವಣ್ಣನವರೇ ಸ್ವತಃ ಆಹ್ವಾನಿಸಿ ಉಪದೇಶ ಪಡೆಯುವ ಕಾಲ್ಪನಿಕ ಚಿತ್ರಗಳೂ ಸೃಷ್ಟಿಯಾಗಿವೆ. ಇದಕ್ಕೆ ಚರಿತ್ರೆ ಇಲ್ಲ. ಭೀಮಕವಿಯಾಗಲಿ ಅಥವಾ ಹರಿಹರ ಕವಿಯಾಗಲಿ "ಶೂನ್ಯಸಿಂಹಾಸನ"ವನ್ನು ಕಂಡರಿಯರು.

ಶರಣ ಲೀಲಾಮೃತದಲ್ಲಿ ಹೀಗಿದೆ.

'ಅಖಿಲವಿಧ ಶಾಸ್ತ್ರಾನುಭಾವದ । ಶಿವಧ್ಯಾನ ಸಂಧಾನ ಮಾರ್ಗದ ಗಾಢತರದತಿ ಶೂನ್ಯಪೀಠವ ಬಸವ ರಚಿಸಿ" ಅದನ್ನೇರುವ ಗುರುವಿಗಾಗಿ ಅರಸುತ್ತಿದ್ದರು. ಅಷ್ಟರಲ್ಲಿ ಪ್ರಭುರಾಯ 'ರೂಪು ಮಾಜುತ್ತ, ತಲೆಯೊಡೆದು ರಕ್ತವು ನೆಲಕ್ಕೆ ಜೋರಿಡುತ್ತಿರಲು ನಡುಡೊಂಕ ನಡೆಯುತ್ತ, ಅಂಕುಡೊಂಕಿನ ಕಾಲು, ಕೊಂಕಿನ ಬೆನ್ನು, ಮೆಳ್ಳೆಗಣ್ಣು, ಅಕ್ಕಳಿಸುವ ಹೊಟ್ಟೆ ಸೊಕ್ಕಿದ ಗಲ್ಲ' ಇತ್ಯಾದಿ ವಿಚಿತ್ರ ವಿಕಾರ ರೂಪಿನಿಂದ ಬಗೆಬಗೆಯ ಆಟಗಳನ್ನಾಡಿ ಜಗವ ನಗಿಸುತ್ತ ಬಂದರು. ಬಸವ ಚೆನ್ನಬಸವರಾದಿಯಾಗಿ ಎರಗಿದರು. ಪ್ರಭುವು ಬಸವಣ್ಣನಿಚ್ಛೆಯಂತೆ 'ಶೂನ್ಯಸಿಂಹಾಸನ' ವೇರಿ (ಶೂನ್ಯ= ೦. ಏನೂ ಇಲ್ಲವೆಂದರ್ಥ) 'ನನ್ನ ಹಸಿವು ಮೊದಲು ನೀಗಲಿ' ಎಂದು ಪಟ್ಟಣದ ಜಂಗಮ ಕುಲಕ್ಕೆಲ್ಲ ಸಿದ್ಧಗೊಳಿಸಿದ ಆಹಾರವನ್ನೆಲ್ಲ ಉಂಡುಮುಗಿಸಿ 'ಜೀವ-ಶಿವ ತೃಪ್ತಿ'ಯ ರಹಸ್ಯವನ್ನು ದೃಷ್ಟಾಂತ ಪಡಿಸಿದರು.

ಪ್ರಭುದೇವರನ್ನು ಇಂತಹ ವಿಚಿತ್ರ ವಿಕಾರ ರೂಪಿನಲ್ಲಿ ಕಂಡಿರುವವನು ಚೆನ್ನಪ್ಪ ಕವಿ ಮಾತ್ರವೆ. ಪ್ರಭುದೇವರ ಚರಿತ್ರೆಗೆ ಪ್ರಾಧಾನ್ಯಕೊಡಲು

ಮಾತ್ರವೇ ರಚಿತವಾಗಿರುವ ಚಾಮರಸ ಕವಿಯ 'ಪ್ರಭುಲಿಂಗಲೀಲೆ'ಯು ಸವಿಸ್ತಾರ ಜೀವನ ಚಿತ್ರಣವಾಗಲಿ ಮಹಿಮಾನ್ವಿತ ವ್ಯಕ್ತಿ ಚಿತ್ರಣವಾಗಲಿ ಇಲ್ಲಿಲ್ಲ. ಭೀಮ ಕವಿಯು ಪ್ರಭುವಿನ ಊರುಕೇರಿಗಳಾವುವನ್ನೂ ತಿಳಿಸಹೆ ಗಿರಿಗಹ್ವರಗಳಲ್ಲಿ ಅಲೆಯುತ್ತಿದ್ದ ವೈರಾಗ್ಯಮೂರ್ತಿ ಎಂದು ಮಾತ್ರ ಚಿತ್ರಿಸುತ್ತಾನೆ. ಶೂನ್ಯಸಿಂಹಾಸನದ ಒಂದು ಶಬ್ದವೂ ಅಲ್ಲಿಲ್ಲದಿರುವುದು ಗಮನಿಸತಕ್ಕ ಅಂಶ.

## 'ಜೀವ-ಶಿವತೃಪ್ತಿ' ರಹಸ್ಯ

ಕೇವಲ ಜ್ಞಾನಿಯಾದ ಪ್ರಭುವು ಬಸವೇಶನ ಆದರಾತಿಥ್ಯಗಳಿಂದ ಸಂತುಷ್ಟಿಗೊಂಡು "ಸಲೆ ನಿಮ್ಮ ಭಕ್ತಿಯ ಕಲಕಿ ನೋಡಲು ಬಂದೆ. ಚೆಲುವಾಯಿತೀ ಭಕ್ತಿ. ನನಗೆ ಬಲುಮೆಚ್ಚು" ಎಂದು ಕೊಂಡಾಡುತ್ತಾರೆ" ಬಸವ ಭಕ್ತಿಯ ಕಡಲಿನ ಮೃತಕೆ ಒಸೆದು ರಾಜಮರಾಳ ಪಕ್ಷಿಯು, ಎಸಗಿ ಬಂದಂದದಲಿ ಬಂದೆವು. ಬಸವನೇ, ಗುರುಬಸವನೇ, ತಂದೆ ತಾಯಿಯು ಬಸವನಲ್ಲದೆ ಬೇರೆ ದೈವವನುಸುರಲಿನ್ನುಂಟೆ ? ನಿನ್ನಮಹಿಮೆಯೊಂ, ನಿನ್ನೊಡೆಯನ ಮಹಿಮೆಯೊ ಇನ್ನರಿಯೆವು" ಎಂದು ಬಸವೇಶನ ಭಕ್ತಿಭಾವ ಪ್ರಶಂಸಿಸುತ್ತಾರೆ.

ಜಂಗಮನಾದ ಪ್ರಭುವು ಉಂಡು ತೃಪ್ತರಾದ್ದರಿಂದ ಕಲ್ಯಾಣ ಪಟ್ಟಣದ ಜಂಗಮರಾದಿಯಾಗಿ ಜಲಚರಗಳೂ ಇನ್ನಿತರ ಪ್ರಾಣಿಗಳೂ ಸಂತೃಪ್ತಗೊಂಡವು ಎಂದ ಬಸವಣ್ಣನ ವಾಕ್ಯವನ್ನು ಪರೀಕ್ಷಿಸಲೋಸುಗ ರಾಜನು ನೀರಿನಲ್ಲಿದ್ದ ಕಪ್ಪೆಯೊಂದನ್ನು ತಂದು ನೋಡಲಾಗಿ ಅದರ ಕುಕ್ಷಿಯಲ್ಲಿಯೂ ಅನ್ನವಿದ್ದಿತು. ಪ್ರಭುವು ಶಂಕೆ ಬೇಡೆಂದು ರಾಯನಿಗೆ ತಿಳಿಸಿ—

ಆದಿಯಿಂದತ್ತತ್ತ ಶೂನ್ಯದಲಾದ ಬಸವೇಶ್ವರನ ಮಹಿಮೆಯು, ವೇದವಾದರೂ ಹಲವು ಬಗೆಯಲಿ ಸ್ತುತಿಸಲರಿಯವು. ಮೂದೇವ ಮೂರ್ತಿಗಳು ಬಸವನ ಆದಿಯಿಂದವರಾದರಲ್ಲದೆ ಭೇದಿಸಲು ಉತ್ಪತ್ತಿ ಸ್ಥಿತಿಲಯಕೆ ವರು ಕಾರಣರೆ.

> ಸಕಲಾದಿ ಲೋಕಕೆ । ನೀಡುತಿಹ ಸಕಲಾಮ್ರುತಾನ್ನವ,
> ಅಡಲೇನಖಿಳಾದಿ ಕೊಂಬುದು, ಬಸವನ ಪ್ರಸಾದ

ಹೀಗೆಂದು ಬಿಜ್ಜಳರಾಯನಿಗೆ ತಿಳಿಸಿ ಬಸವೇಶ್ವರನ ಮಹಿಮಾ ಪುರುಷ ನೆಂಬುದನ್ನು ನಿಶ್ಚಯಗೊಳಿಸುತ್ತಾರೆ. ಅಪರಿಮಿತ ಸಾಧನೆಗಳಿಂದ ತನ್ನ ತಾನರಿತು ಮಾನವತ್ವದ ಪರಿಪೂರ್ಣತೆಗೇರುತಿದ್ದ ಅವರಿಗೆ ಯಾವ ಉಪ ದೇಶಮಾಡಲೂ ಅಥವಾ ಭಕ್ತಿಯಲ್ಲಿ ಕಳಂಕವನ್ನು ಕಾಣಲೂ ಪ್ರಯತ್ನಿ ಸುವುದಿಲ್ಲ.

ಬೊಕ್ಕಸದ ಹಣವನ್ನು ವಿಟಜಂಗಮಕ್ಕೆ ಇತ್ತರೆಂಬ ಮತ್ತೊಂದು ಅಪವಾದ ಬಸವಣ್ಣನವರ ಮೇಲೆ ಬಂದೆರಗುತ್ತವೆ. ಬಿಜ್ಜಳನು "ಬಸವಾದೀಶ, ಹೀಗೆ ಮಾಡಬಹುದೆ?" ಎನ್ನಲು ಬಸವರಸನು "ದ್ರವ್ಯದಾಸೆ ನಮಗೆ ಇನ್ನೇಕೆ ಹತ್ತುವುದು. ನಾಡಮಾತನ್ನಾಡಬೇಡ. ನಮ್ಮ ಶರಣರು ಪರದ್ರವ್ಯ ಪರಸತಿಯರನ್ನು ಕಣ್ಣಿಂದಲೂ ನೋಡರು. ಭಕ್ತಿಯಿಂದ ಒಪ್ಪಿಸಿದರೂ ಅದು ಅತ್ತಲೇ" ಎಂದು ಪೆಟ್ಟಿಗೆ ಎಂತಿನಂತೆ ತುಂಬಿರುವದನ್ನು ರಾಜನಿಗೆ ತೋರಿಸುವರು.

## ಹರಳಯ್ಯ ಮಧುವಯ್ಯಗಳ ಪ್ರಸಂಗ.

ಶರಣ ಲೀಲಾಮೃತದ ವೈಶಿಷ್ಟ್ಯಗಳಲ್ಲಿ ಹರಳಯ್ಯ ಮಧುವಯ್ಯಗಳ ಪ್ರಸಂಗವು ಅತ್ಯಂತ ಪ್ರಮುಖವಾದುದು. ಬಸವೇಶ್ವರರು ಜಾತೀಯತೆಯ ಪ್ರಬಲ ವಿರೋಧಿಗಳಾಗಿದ್ದರು. ಈದಾರಿಯಲ್ಲಿ ಪ್ರಪಂಚದ ಯಾವ ಮಹಾ ತ್ಮರೂ ಸಾಧಿಸಲಾಗದ ಮಹಾ ಕಾರ್ಯವನ್ನು ಕೈಕೊಂಡು ಸಾಧಿಸಿ ಯಶಸ್ವಿಯಾದರು. ಕೀಳ್ಜಾತಿಯ ಹರಳಯ್ಯ ಮೇಲ್ಜಾತಿಯ ಮಧುವರ ಸಯ್ಯ ಇವರ ಮಕ್ಕಳಲ್ಲಿ ವಿವಾಹ ಸಂಬಂಧ ಬೆಳೆಸಿದ್ದು ವೀರಶೈವ ಮತಕ್ಕೆ ಅಸಂಖ್ಯಾತ ಮಂದಿ ಅಸ್ಪೃಶ್ಯರನ್ನು ಕೂಡಿಕೊಂಡದ್ದು ಇಂದಿಗೂ ಅಚ್ಚರಿಗೊಳಿಸುವಂಥದೂ ಅನುಕರಣೀಯವಾದುದೂ ಆಗಿದೆ. ಈ ಪ್ರಸಂಗವನ್ನು ಚೆನ್ನಪ್ಪ ಕವಿಯು ತನ್ನದೇ ಆದ ಸರಳರೀತಿಯಲ್ಲಿ ಚಿತ್ತಾ ಕರ್ಷಕವಾಗಿ ಚಿತ್ರಿಸಿದ್ದಾನೆ. ಬಸವಣ್ಣನವರ ಪೂರ್ಣಾನುಗ್ರಹಕ್ಕೆ ಪಾತ್ರ ರಾಗಿ ಅವರ ಮಹಾದಾಸೆಯನ್ನು ಕಾರ್ಯರೂಪಕ್ಕಿಳಿಸಲು ಪ್ರಯತ್ನಿಸಿದ ಶಿವಶರಣರ ಮಾರ್ಗವು ಹೀಗಿದೆ

ಕಲ್ಯಾಣ ನಗರಿಯ ಕಡೆಯ ಬೀದಿಯ ಪ್ರತ್ಯೇಕ ತಾಣವೊಂದ ರಲ್ಲಿ ಹರಳಯ್ಯನೆಂಬೊಬ್ಬ ಹರಿಭಕ್ತನು ಪತ್ನಿ ಕಲ್ಯಾಣಮ್ಮ ಪುತ್ರ ಹೊನ್ನಯ್ಯರೊಡಗೂಡಿ ಸಂಸಾರ ಮಾಡುತ್ತಿದ್ದನು. ಅದೊಂದುದಿನ ಭಕ್ತ

ರಾಜ ಬಸವಣ್ಣನ ದಿವ್ಯ ದರುಶನಕ್ಕೋಸುಗ ಹಂಬಲಿಸಿ " ಎಂದು ಕಾಂಬ ನೊ ಬಸವರಾಜನ ಎಂದು ಕಾಂಬೆನೊ ಬಸವ ಪಾದವ " ಎಂದು ನೆನೆ ಯುತ್ತಾ ರಾಜಬೀದಿಗೆ ಬಂದನು. ಎದುರು ಭಾಗದಿಂದ ಬಸವಣ್ಣನವರ ಸವಾರಿ ಚಿತ್ತೈಸುತ್ತಿತ್ತು. ಹರಳಯ್ಯನು ಆನಂದದಿಂದ ತುಂದಿಲನಾಗಿ "ಎನ್ನ ಕಾವ್ಯ ಸಿದ್ಧಿಯನ್ನು ಕಂಡೆನು." ಎನ್ನುತ್ತಾ ತ್ರಾಹಿ ಬಸವಯ್ಯ ಶರಣು ಎಂದು ಕೈಮುಗಿದನು. ಬಸವೇಶನು ಪ್ರತಿಯಾಗಿ "ಶರಣು, ಶರಣಾರ್ಥಿ" ಎಂದು ಹರಳಯ್ಯಂಗೆ ಕರಮುಗಿದು ಪೋದರು.

ಹರಳಯ್ಯ ಧರೆಗಿಳಿದು ಹೋದನು. " ಶಿವಶಿವಾ, ಶರಣೊಂದು ಎನ್ನಮೇಲೆ ಹೆಚ್ಚಿತು. " ಅದನ್ನು ನೀರ್ಗುವ ಬಗೆಎಂತು ಎಂದು ಚಿಂತಾ ಕ್ರಾಂತನಾದನು. ಪತ್ನಿ ಕಲ್ಯಾಣಮ್ಮ– ಹೊಸಪಾದುಕೆಮಾಡಿ ಬಸವಂಗಿತ್ತು ಶರಣು ಕಳೆಯೋಣ ಬನ್ನಿರೆಂದು ಸಲಹೆ ಮಾಡುವಳು. ಅದೇ ರೀತಿ ಹರಳಯ್ಯ ಪತ್ನಿಯು ಎಡದೊಡೆಯಿಂದಲೂ, ತನ್ನ ಬಲದೊಡೆಯಿಂದಲೂ, ಚರ್ಮವಂ ತೆಗದು ಅಂದವಾದ ಎರಡು ಪಾದುಕೆ ತಯಾರಿಸಿದನು. ಅವುಗಳಿಗೆ " ಮಿಸುನಿಗೆಲಸಮಾಡಿ, ಒಳ್ಳೆಯ ಹೊಸ ರತ್ನ ಮುತ್ತುಗಳನ್ನು ಹೂಡಿ " ಬಸವರಾಜೇಂದ್ರನ ಚರಣಕ್ಕೆ ತಂದನು. ಆದರೆ ವಿಶೇಷ ಜನಸಂದಣಿಯಲ್ಲಿ ಅವನಿಗೆ ಬಸವದಂಡಾಧೀಶನ ದರ್ಶನ ಲಭ್ಯವಾಲಿಲ್ಲ. ಇಷ್ಟಲಿಂಗವಂ ಕಳುಹಿಸಿ ತಾನು ಬಂದಿರುವ ವಿಚಾರವನ್ನು ಬಸವಣ್ಣಂಗೆ ಅರುಹು ಮಾಡುವನು, ವಿಷಯುವರಿತ ಶರಣಕಿಂಕರ ಬಸವೇಶ ಘಳಿಲನೆ ಪೀಠವಿಳಿದು ಬಂದು ಹರಳಯ್ಯನಂ ಬಿಗಿದಪ್ಪಿ ಕೊಂಡಾಡಿದರು. " ತಾನು ಹೊಲೆಯ " ಎಂದು ಹರಳಯ್ಯ ಅಂದ ಮಾತಿಗೆ—

**"ಹೊಲೆಯಲಲ್ಲದೆ ಲೋಕ ತಲೆಯಲ್ಲಿ ಹುಟ್ಟುವುದೆ"**

ಲೋಕ ಹೊಲೆಯಲಲ್ಲದೆ ತಲೆಯಲ್ಲಿ ಹುಟ್ಟುವುದೆ ? ಹೊಲೆರಕ್ತ ಸೂತ ಕದ ಸ್ಥಳದಲಲ್ಲದೆ ಪಿಂಡ ಇನ್ನೊಂದು ಸ್ಥಳದಲ್ಲ ಬೆಳೆವುದೆ ? ಕುಲಕಧಿಕ ರೆನ್ನುವ ಬ್ರಹ್ಮಣರೊಳಗೆ ಕಶ್ಯಪ, ಕೌಂಡಿಲ್ಯ, ವಾಶಿಷ್ಟ ದುರ್ವಾಸರೊಳಗೆ ಲೇಸು ಕುಲವುಂಟೆ ? ಮಲಹರನ ಶರಣರಿಗೆ ಕುಲವೊಂದೆ. ಅದು ಮನು ಜಕುಲ ಶರಣಕುಲ ಎಂದು ತಿಳಿಸಿ ನಮ್ಮ ಶರಣು ಬಂದಿತು. ನಿಮ್ಮ ಪಾದು ಕೆಗಳು ಶಿವಗರ್ಪಿತವೇ ಹೊರತು ನಮಗಲ್ಲವು ಎಂದು ಹಿಂದಕ್ಕೆ ಕಳುಹಿ ಸುವರು.

ಹರಳಯ್ಯ ಪಾದುಕೆವಿಡಿದು ಮನೆಗೆ ಹಿಂತಿರುಗುತ್ತಿರುವಾಗ ಮಧು ವರಸರ ಅಂದ ಚಂದದ, ರತ್ನಗೆಲಸದ ಪಾದುಕೆಗಳನ್ನು ಮೋಹಿಸಿ ನೆಟ್ಟ

ಬೇಕೆಂದು ಆಗ್ರಹ ಮಾಡಿದರು. "ಶಿವಶರಣರ ಪಾದುಕೆಗಳು ತಮಗೆ ಹೊಲ್ಲ ಎಂದು ಹೇಳಿದ ಹರಳಯ್ಯನ ಮಾತು ವ್ಯರ್ಥವಾಯಿತು. ಕೆಡುಗಾಲಕ್ಕೆ ಬುದ್ಧಿಯಿಲ್ಲ' ವೆಂಬಂತೆ ಅವುಗಳನ್ನು ಮೆಟ್ಟಿ ಕಂಗೆಟ್ಟರು. ಮೈ ಕೈಗಳಲ್ಲಿ ತಾಪವೇರಿ "ಸತ್ತೆ, ಸತ್ತೆ" ಎಂದು ಕೂಗಿಕೊಂಡರು.

ತನ್ನ ಮಗನ ತಾಪವನ್ನು ಹೋಗಲಾಡಿಸಬೇಕೆಂದು ಮಧುವಯ್ಯನ ಮಾತೆಯು ಬಸವಣ್ಣನವರಲ್ಲಿ ಮೊರೆಯಿಟ್ಟಳು. ಅವರು, ಪ್ರತಿನಿತ್ಯವು ದಾಸಿ ಮಹಾದೇವಿಯಿಂದ ನೀರನ್ನು ತರಿಸಿ ಎರೆಯಬೇಕೆಂದು ಪರಿಹಾರ ಸೂಚಿಸುವರು. ಒಂದುದಿನ ನೀರು ತರಲೆಂದು ಹೊರಟ ಮಹಾದೇವಿ ಮಾರ್ಗ ಮಧ್ಯದಲ್ಲಿ ಡೊಂಬರಾಟ ನೋಡುತ್ತಾ ನಿಂತಳು. ಸೂರ್ಯನು ಅಸ್ತಮಿಸಿದ, ಆಟವೂ ಮುಗಿಯಿತು. ಮಹಾದೇವಿಯು ಕತ್ತಲೆಯಲ್ಲಿ ದಾರಿಗಾಣದೆ ಹರಳಯ್ಯನ ಮನೆಯ ಭಕ್ತಿಲಿರುವ ಗಣಂಗಳ ಮುಖಚರಣ ಪ್ರಕ್ಷಾಳನದ ಪಾದೋದಕವನ್ನು ಅರಿಯದೆ ತಂದೆರೆಯುವಳು. ಆಶ್ಚರ್ಯ ವೆಂಬಂತೆ ಮಧುವಯ್ಯನ ಮೈ ಉರಿಯೆಲ್ಲಾ ಮಾಯವಾಗಿ ಕಾಯ ಹೊಂಬಣ್ಣದಿಂದ ಮಿಂಚಿತು.

ಶಿವಶರಣರ ಮಹಿಮೆಗೆ ಅಚ್ಚರಿಗೊಂಡ ಮಧುವರಸಯ್ಯ ಬ್ರಾಹ್ಮಣ್ಯವನ್ನು ಬಿಸುಟು ಶಿವದೀಕ್ಷೆಯನ್ನು ಹೊಂದ್ದನು. ಶಿವಭಕ್ತರಲ್ಲಿ ಕಲೆತು, ಶಿವಪೂಜೆ ಮಾಡುತ್ತಾ ಆನಂದಸಾಗರದಲ್ಲಿ ಸುಖಿಸಿದನು.

ಹರಳಯ್ಯ ಬೇಡವೆಂದರೂ ತನ್ನ ಮಗಳನ್ನು ಹರಳಯ್ಯನ ಮಗನಿಗೆ ತಂದು ಲಗ್ನಮಾಡಲು ನಿಶ್ಚಯಿಸಿದನು. ಅವನ ಜೀವವು– 'ಭ್ರಮರ ಸೋಂಕಿದ ಕೀಟ ಭ್ರಮರವಾದಂತೆ, ಕಮಲಸೋಂಕಿದ ಭೃಂಗ ಕಮಲವಾದಂತೆ, ಕಿಂಚಿತ್ಪುರುಷ ಸೋಂಕಿ ಮಿಸುನಿಯೂ, ವಸುಧೆ ಸೋಂಕಿದ ಬೀಜ ಸಸಿಯೂ ಆದಂತೆ ಬಸವಾದಿ ಪ್ರಮಥರ ಸೋಂಕಿನಲ್ಲಿ ಪವಿತ್ರವಾಯಿತು. ಬಸವೇಶ್ವರರ ನೇತೃತ್ವದಲ್ಲಿ ವಿವಾಹವೂ ಮುಗಿದು ಹೋಯಿತು.

## ಕಲ್ಯಾಣದ ಕ್ರಾಂತಿ

ಬಸವಾದಿ ಪ್ರಮಥರ ಈ ವಿವಾಹದಿಂದ ಒದಗುವ ಅನಾಹುತಗಳನ್ನೂ ಕಲ್ಯಾಣ ನಗರದ ಅವನತಿಯನ್ನೂ ಅರಿತು, ಇನ್ನು ಇಲ್ಲಿರಬಾರದೆಂದು ಶಿವಸಾನ್ನಿಧ್ಯ ಸೇರಿದರು. ಪ್ರಭುವು ಗುರುಗುಹೇಶ್ವರನಲ್ಲೂ ಬಸವೇಶ್ವರರು ಕೂಡಲ ಸಂಗಮ ದೇವರಲ್ಲೂ ಇತರ ಶರಣ ಪ್ರಮುಖರು ತಂತಮ್ಮ ಆತ್ಮ ಲಿಂಗಗಳಲ್ಲೂ ಐಕ್ಯರಾದರು. ಬಸವಣ್ಣ, ಪ್ರಭು, ಸರ್ವಜ್ಞ ಮೂರ್ತಿ

ಚೆನ್ನಬಸವಣ್ಣ ಇವರೆಲ್ಲ ಭೂತ ಭವಿಷ್ಯತ್ತುಗಳನ್ನು ಬಲ್ಲ ತ್ರಿಕಾಲ ಜ್ಞಾನಿಗಳೆಂಬುದನ್ನು ದೃಢಪಡಿಸಲು ಕವಿಯು ತಾನು ಕಂಡ ಚರಿತ್ರೆಯನ್ನು ಈ ಮಾಹಾತ್ಮ್ಯದಿಂದ ಹೇಳಿಸಿದ್ದಾನೆ.

ಮೇಲ್ಜಾತಿ ಕೀಳ್ಜಾತಿಗಳ ವರ್ಣ ಸಂಕರ ವಿವಾಹದ ವಾರ್ತೆ ಕೇಳಿ, ಅದಕ್ಕಿಂತ ಹೆಚ್ಚಾಗಿ ಪ್ರಜೆಗಳ ತೀವ್ರ ಪ್ರತಿಭಟನೆಯಿಂದ ಕೆರಳಿದ ಬಿಜ್ಜಳ ರಾಯ ಹುಚ್ಚನಂತಾದ. ತನ್ನಲ್ಲಿ ಭಿನ್ನಾಭಿಪ್ರಾಯಹೊಂದಿ ಅರಸುಗಳ ಗೊಡವೆ ಬೇಡೆಂದು ವಿಶೇಷ ವ್ಯಾಕುಲತೆಯಿಂದ ಹೊರಟು ಹೋದ ಬಸವೇಶ್ವರನು ಲಿಂಗೈಕ್ಯನಾದ ವಾರ್ತೆಯನ್ನು ಕೇಳಿ ಬಹುವಾಗಿ ಮರುಗಿದ. "ಎನ್ನ ಪ್ರಾಣನಾಯಕ, ಎನ್ನಭಾಗ್ಯನು ಪೋದನು. ನಾನು ಪಾಪಿ, ಒಡೆಯನಿಲ್ಲದ ಅನಾಥನಾದೆನು. ತಂತ್ರದಲಿ ರಾಜ್ಯವನು ಪಾಲಿಸುವ ಮಂತ್ರಿ ಇನ್ನುಂಟೆ. ಬಸವರಾಜನನ್ನು ಇನ್ನು ಎಲ್ಲಿ ನೋಡಲಿ?" ಎಂದು ಶೋಕಾಬ್ಧಿಯಲ್ಲಿ ಮುಳುಗಿ ಮುಂಗಾಣದೆ ಸಂತಪಿಸಿದ. ಆತ್ಮ ಹತ್ಯೆಗೆ ಮನಸೋಲುವಷ್ಟು ದುರ್ಬಲನಾಗುತ್ತಾನೆ.

## ಬಿಜ್ಜಳ–ಬಸವೇಶ್ವರರ ಅದ್ವಿತೀಯ ಮೈತ್ರಿ

ಬಸವೇಶ್ವರರು ಕಲ್ಯಾಣನಗರಿಯನ್ನು ತ್ಯಜಿಸಿದ್ದರಿಂದ ನಗರದ ಕಲ್ಯಾಣವೇ ನಾಶವಾಯಿತು. "ಕಲ್ಯಾಣದ ಸಿರಿ ಪುರುಷ ರೂಪಿಂದೆ ಕೈಲಾಸ ವಾಸನ ಹೊರೆಗೆ ಸೇರಿತು? ತನಗೆಸಖನಾಗಿ, ಆಪ್ತನಾಗಿ, ಮಂತ್ರಿಯಾಗಿ ಗುರುವಾಗಿ ಆತ್ಮೀಯ ಬಂಧುವಾಗಿ ಕಲ್ಪವೃಕ್ಷದಂತಿದ್ದ ಬಸವಣ್ಣನು ತನ್ನನ್ನು ಇಂತಹ ಸಂದಿಗ್ಧದಲ್ಲಿ ತೊರೆದುಹೋದುದು ಬಿಜ್ಜಳನ ಜೀವವೇ ಹೋದಂತಾಯ್ತು. ತನಗೆ ಹಿತವರಂತೆ ನಟಿಸುತ್ತಿದ್ದ ಮಂತ್ರಿಗಳೇ ಬಸವಣ್ಣನವರಿಲ್ಲದ್ದರಿಂದ ಕೊಲೆಯ ಸಂಚು ನಡೆಸಿದರು. 'ಹರಳಯ್ಯ ಮಧುವಯ್ಯಗಳ ವಿಚಾರಣೆ ನಡೆಯಲಿ. ಅವರಿಗೆ ಮರಣದಂಡನೆ ವಿಧಿಸಿ' ಎಂದ ದಂಗೆಯೆದ್ದು ಒತ್ತಾಯ ಪಡಿಸಿದರು. ದಾರಿಗಾಣದ ರಾಜನು ಮತಿಗೆಟ್ಟು, ಹೊಸ ಹೋರಿಗಳೆರಡಕ್ಕೆ ಹರಳಯ್ಯ ಮಧುವಯ್ಯಗಳನ್ನು ಕಟ್ಟಿ ರಾಜಬೀದಿಯಲ್ಲಿ ಎಳೆಸಿದನು. ದಂಡಾಧೀಶ ಚನ್ನಬಸವೇಶನ ಹಿತವಾದವೂ ಗಣನೆಗೆ ಬರಲಿಲ್ಲ. ಆದರೆ ಹರಳಯ್ಯ ಮಧುವಯ್ಯಗಳಿಗ ಯಾವ ತೊಂದರೆಯೂ ಆಗದೆ ಸುಖದಿಂದಿದ್ದರು. ಅರಸು ಅವ

ರನ್ನು ಮತ್ತೆ ಕರೆತಂಸಿ ಕಣ್ಣು ತೆಗೆಸಿ ಶೂಲಕ್ಕೆ ನಡೆಸಿದ. ಆಶ್ಚರ್ಯ, ಶೂಲವು ಬಿಲ್ವವೃಕ್ಷವಾಗಿ ಪರಿಣಮಿಸಿತು. ಸಕಲ ಜನ ಸಮೂಹವು ನೋಡು ತ್ತಿರಲು ಪುಷ್ಪಕ ವಿಮಾನದಲ್ಲಿ ಅವರು ಕೈಲಾಸಕ್ಕೆ ತೆರಳಿದರು.

ಕಲ್ಯಾಣದಲ್ಲೆಲ್ಲ ಮಹಾಕ್ರಾಂತಿಯಾಯಿತು. ಶರಣಸಂತತಿ ರಾಜನ ವಿರುದ್ಧ ದಂಗೆಯದ್ದರು. ಜಗದೇವ ಮೊಲ್ಲೆಯ ಬೊಮ್ಮಣ್ಣ ರೊಚ್ಚಿಗೆದ್ದು ಬಿಜ್ಜಳನನ್ನು ಕೊಲ್ಲುವರು.

ಈ ವೇಳೆಗಾಗಲೆ ಬಸವೇಶ್ವರರು ಕೂಡಲಸಂಗಮೇಶ್ವರನಲ್ಲಿ ಐಕ್ಯವಾಗಿ ದ್ದರು. "ಭಕ್ತವತ್ಸಲ, ಭಕ್ತನಿಧಿಸಂಪನ್ನ, ತ್ರಾಹಿ ಗುರುವೆ, ಸಲಹು" ಎಂದು ಪಂತಪಿಸಿ ಜಗದ ಜಂಜಡ ಸಾಕು. ಮುಕ್ತಿ ನೀಡೆಂದು ಹಂಬಲಿಸುವರು. ತಕ್ಷಣವೇ 'ಮೇಘದಲ್ಲಿ ಮಿಂಚಡಗಿ ಧ್ವನಿ ತೋರುವಂತೆ ಸಂಗಮೇಶನ್ನು ಬಸವೇಶನನ್ನು ತನ್ನಲ್ಲಿ ಐಕ್ಯಗೊಳಿಸಿಕೊಂಡನು. 'ನೀರೊಳಗೆ ವಾರಿಶಿಲೆ ನಿಜದಿಬೆರೆತಂತೆ, ಮಾರುತನೊಳು ಗಂಧ ಮೈತೋರಿದಂತೆ' ಗುರುಸಂಗನೊಳು ಬಸವ ಬೆರೆದು ಹೋದನು.

ಬಸವಣ್ಣನಿಗೂ ಬಿಜ್ಜಳ ಭೂಪಾಲನಿಗೂ ಇದ್ದ ಅತ್ಯಂತ ಆತ್ಮೀಯತೆ ಯನ್ನು ಚೆನ್ನಪ್ಪ ಕವಿ ಚಿತ್ರಿಸಿರುವಷ್ಟು ಸತ್ಯವಾಗಿ ಸುಂದರವಾಗಿ ಬೇರಾವ ಕವಿಯೂ ಚಿತ್ರಿಸಿಲ್ಲ. ಬಿಜ್ಜಳನನ್ನು ಬಸವಣ್ಣ ಕೊಲಿಸಿದರು ಎಂಬ ಕುಹಕಿ ಗಳ ವಾದಕ್ಕೆ ಇದೊಂದು ಭಾರಿಯ ಪೆಟ್ಟು. ಪ್ರಜಾಪೇಕ್ಷೆಗೆ ಮನಸೋತು ಆಪ್ತಮಂತ್ರಿಯ ಬುದ್ಧಿವಾದವನ್ನು ಕಡೆಗಣಿಸಿದ್ದುದೂ, ಕಷ್ಟಸಮಯದಲ್ಲೆಲ್ಲ ಮಾರ್ಗದರ್ಶನ ಮಾಡುತ್ತಿದ್ದ ಬಸವೇಶ್ವರರು ತನ್ನಿಂದ ದೂರವಾದುದೂ ರಾಜನ ಮರಣಕ್ಕೆ ಕಾರಣವಾಯಿತು.

## ಇಚ್ಛಾಮರಣಿ ಬಸವಣ್ಣ.

ಬಸವಣ್ಣನವರು ಕೂಡಲಸಂಗಮನಲ್ಲಿ ಐಕ್ಯವಾದ ವಿಷಯ ಸತ್ಯ ದೃಷ್ಟಿಯಿಂದ ವಿಚಾರಿಸಿದಾಗ ನಡೆಯಲಾರದ ಅಸತ್ಯ ಪವಾಡ ಎನಿಸು ತ್ತದೆ. ಆದರೆ ಅದರ ರಹಸ್ಯ ಬೇರೆ ವಿಷಯವಾಗಿದೆ. ಬಸವಣ್ಣನವರು ಇಚ್ಛಾ ಮರಣಿಗಳು. "ನಾಳೆ ಬಪ್ಪುದು ನಮಗಿಂದೆ ಬರಲಿ· ಇಂದು ಬಪ್ಪುದೀಗಳೆ ಬರಲಿ. ಅದಕಾರಂಜುವರು, ಅದಕಾರಳುಕುವರು" ಎಂಬುದಾಗಿ ಸಾವನ್ನು ಎದುರ್ಗೊಳ್ಳುವ ದಿಟ್ಟಿದೆಯವರು. ತಮಗೆ ಬೇಕೆಂದಾಗ ಸಾವನ್ನನುಭವಿ

ಸುವ ಮಹಾಶಕ್ತಿ ಅವರಿಗೆ ಸಾಧಿಸಿತ್ತು. ಇದು ಸಾಧ್ಯವೆಂದು ವಿಜ್ಞಾನಿಗಳೂ ಅಭಿಪ್ರಾಯಪಟ್ಟಿದ್ದಾರೆ. ಆದ್ದರಿಂದ ಕಲ್ಯಾಣದ ಕೆಲವು ಮಂದಿ ಕುಹಕಿಗಳ ದುರಾಚರಣೆಯಿಂದ ಮನನೊಂದ ಬಸವಣ್ಣನವರು ಇಚ್ಛಾಮರಣೆಗಳಾಗಿರುವುದು ಸತ್ಯವೂ ಸಮಂಜಸವೂ ಆದ ಸಂಗತಿಯಾಗಿದೆ. ಹೀಗಲ್ಲದೆ ಲೋಕದ ನಿಂದೆ ಅಥವಾ ಜಂಜಡ ಬಾಳ್ವೆಗಂಜಿ ಆತ್ಮಹತ್ಯೆ ಮಾಡಿಕೊಳ್ಳುವ ಹೇಡಿಗಳೂ ಅವರಲ್ಲ.

ಹದಿನೇಳನೆಯ ಶತಮಾನದ ಚೆನ್ನಪ್ಪ ಕವಿಯು ಇತರ ಕವಿಗಳಂತೆ ಬಸವಣ್ಣನವರ ಕಾಲದಿಂದ ಬಹುದೂರ ಬಂದು ಕೃತಿ ರಚಿಸಿರುವುದರಿಂದ ಕೆಲವೊಂದು ಅಸಂಗತ ಸಂಗತಿಗಳೂ ತಲೆಹಾಕಿವೆ. ಲಕ್ಷ್ಮೀಶ ಕವಿಯ ಜೈಮಿನಿ ಭಾರತವು ಹೇಗೆ ಪಂಡಿತ ಪಾಮರರಿಬ್ಬರಿಗೂ ರಂಜನೀಯವಾಗಿದೆಯೋ ಅದಕ್ಕಿಂತಲೂ ಅತಿಶಯವಾಗಿ ಶರಣಲೀಲಾಮೃತವು ಜನಪ್ರಿಯವಾಗಿದೆ. ವೈವಿಧ್ಯಮಯವಾದ ಯಕ್ಷಗಾನ ಪದ್ಯಗಳಲ್ಲಿ, ಮನೋಹರವಾಗಿ ರಚಿತವಾಗಿರುವುದು. ಗ್ರಂಥದ ಹಿರಿಮೆ. ಬಸವೇಶ್ವರರ ಚರಿತ್ರೆಯನ್ನು ತಿಳಿಯ ಬಯಸುವವರು (೧) ಹರಿಹರ ಕವಿಯ ಬಸವರಾಜದೇವರರಗಳೆ, (೨) ಭೀಮಕವಿಯ ಬಸವ ಪುರಾಣ, (೩) ಸಿಂಗಿರಾಜಕೃತ ಅಮಲಬಸವ ಚಾರಿತ್ರ, (೪) ಷಡಕ್ಷರ ಕವಿಯ ವೃಷಭೇಂದ್ರವಿಜಯ, (೫) ಬಸವಣ್ಣನವರ ವಚನಗಳು, (೬) ಸೋಮನಾಥನ ಬಸವ ಪುರಾಣಂ (೭) ಕಂಚಿಯ ಶಂಕರಾರ್ಯನ ಬಸವೇಶ್ವರ ವಿಜಯ (೮) ವ್ಯಾಸಕೃತ ಬಸವಪುರಾಣ, (೯) ಶಿವತತ್ತ್ವಚಿಂತಾಮಣಿ ಮುಂತಾದ ಗ್ರಂಥಗಳನ್ನು ಕಡ್ಡಾಯವಾಗಿ ಅಭ್ಯಾಸ ಮಾಡಬೇಕಾಗಿರುವಂತೆ ಚೆನ್ನಪ್ಪ ಕವಿಯ ಶರಣಲೀಲಾಮೃತವನ್ನೂ ಅತ್ಯವಶ್ಯವಾಗಿ ಅಭ್ಯಾಸ ಮಾಡಬೇಕು.

———

# ಶಿವಾನುಭವ ಪತ್ರಿಕೆಯು ಕನ್ನಡ ನಾಡಿಗೂ ವೀರಶೈವ ಸಮಾಜಕ್ಕೂ ಸಲ್ಲಿಸಿದ ಅಮೋಘ ಸೇವೆಯು.

(ಲೇಖಕರು:- ಶ್ರೀ ಚಂದ್ರಶೇಖರಯ್ಯ ಶಿವರುದ್ರಯ್ಯ
ಶಿವಪ್ಪಯ್ಯನಮಠ ಸಾ|| ಚೊಳಚಗುಡ್ಡ)

-o-o-o-o-

ಶಿವಾನುಭವ ಪತ್ರಿಕೆಯು ಸನ್ನ ೧೯೨೬ರಲ್ಲಿ ಜನನವಾಗಿ ಇಲ್ಲಿಯವರೆಗೆ ಸುಮಾರು ೩೧-೩೨ವ ವರ್ಷಗಳ ಲಾಗಾಯಿತು ಅವಿಚ್ಛಿನ್ನವಾಗಿ ನಾಡ ಸೇವೆಯನ್ನೂ ಸಮಾಜದ ಉತ್ಕರ್ಷವನ್ನೂ ಈಗಲೂ ಮಾಡುತ್ತಲಿದೆ. ವಿಜಾಪುರದ ಡಾ. ರಾ|| ಬಾ|| ಫ. ಗು. ಹಳಕಟ್ಟಿಯವರ ಸಂಪಾದಕತ್ವದಲ್ಲಿ ತನ್ನ ಸೌರಭವನ್ನು ಸರ್ವ ಕಡಿಗೂ ಪಸರಿಸಿ ಶಿವಶರಣರ ವಚನ ವಾಙ್ಮಯವನ್ನು ಬಿತ್ತರಿಸಿ ಎತ್ತರಿಸಿದೆ. ಶಿವ ಶರಣರು ವೀರಶೈವ ಸಮಾಜದ ಉತ್ಕರ್ಷ ಉನ್ನತಿಯ ಸಲುವಾಗಿ ತಮ್ಮ ಪ್ರಾಣವನ್ನು ಸಹ ಪಣಕ್ಕೆ ಹಚ್ಚಿ ನಮಗೆಲ್ಲ ಆದರ್ಶವಾಗಿ ಬಾಳಿ ಬಯಲಾದರೆಂಬುದನ್ನು ಈ ಪತ್ರಿಕೆಯು ಅರುಹಿದೆ. ೩೧-೩೨ ವರ್ಷಗಳಲ್ಲಿ ಈ ಪತ್ರಿಕೆಯಿಂದ ಅನೇಕ ಮಹತ್ವದ ಕಾರ್ಯಗಳಾಗಿದ್ದರೂ ಅವುಗಳನ್ನೆಲ್ಲ ಸ್ಥಳ ಸಂಕೋಚದ ಮೂಲಕ ವಿವರಿಸದೆ ಮಹತ್ವದ ಕೆಲವುಗಳನ್ನು ಮಾತ್ರ ಇಲ್ಲಿ ವಿವರಿಸಿದೆ.

ಶಿವಾನುಭವ ಪತ್ರಿಕೆಯು ೧೯೨೬ರಲ್ಲಿ ಜನನವಾದುದೇನೋ ನಿಜ. ಆದರೆ ಅದರ ಹಿನ್ನೆಲೆಯು ಬಹುದೂರ ಹೋಗುತ್ತದೆ. ೧೯೨೬ರ ಕ್ಕಿಂತ ಹಿಂದೆ ಅಂದರೆ ಸುಮಾರು ೩೦ ವರ್ಷದ ಸಂಪಾದಕರ ದುಡಿಮೆಯ ಒಬ್ಬಳಿಕೆಯೇ ಈ ಪತ್ರಿಕೆಯು ಉದಯಕ್ಕೆ ಕಾರಣ ವೆಂದರೆ ಅತಿಶಯೋಕ್ತಿಯೆನಿಸದು.

ಹಿಂದು ಧರ್ಮದ ಅನೇಕ ಮತ ಪಂಥಗಳ ಸ್ವತಂತ್ರ ಧರ್ಮ ಗ್ರಂಥಗಳು ಪ್ರಚಲಿತವಾಗಿದ್ದು ಅವುಗಳ ತತ್ವಗಳನ್ನು ತಿಳಿಯಲು ಸಾಧವಿರುವಂತೆ ನಮ್ಮ ವೀರಶೈವ ಧರ್ಮತತ್ವಗಳನ್ನು ತಿಳಿಯಲು ಪ್ರಚಲಿತ ಗ್ರಂಥಗಳು ಅವೆಯೋ? ಇದ್ದರೆ ಅವುಯಾವವು? ಇರದಿದ್ದರೆ ಸಂಶೋಧನೆಯಿಂದ ದೊರೆಯ ಬಹುದೋ ಹೇಗೆ? ಎಂಬ ಭಾವ ಭಾಗಳು ವಿಚಾರ ತರಂಗಳು ಯಾವಾಗಲೂ ಮಾಧ್ಯಮಿಕ ವಿದ್ಯಾರ್ಥಿ ದೆಶೆಯಲ್ಲಿ

ದ್ದಾಗ್ಗೆಯೇ ಸಂಪಾದಕರ ತಲೆಯಲ್ಲಿ ಸುಳಿದಾಟವು ನಡದೇ ಇರುತ್ತಿತ್ತು ಸುಪ್ತಾವಸ್ಥೆಯಲ್ಲಿದ್ದ ಅವರ ಧಾರ್ಮಿಕ ಜಿಜ್ಞಾಸೆ ಉಚ್ಚ ಶಿಕ್ಷಣ ಪಡೆಯುತಿರುವಾಗ್ಗೆ ಹೆಚ್ಚಾಗಿ ಅಂಕುರಿಸಿ ಗ್ರಂಥಗಳ ಸಂಶೊಧನಕ್ಕೆ ಅವರನ್ನು ಕಾರ್ಯೋನ್ಮುಖ ಮಾಡಿತು. ಅಂದಿನಿಂದಲೇ ಇವರ ಗ್ರಂಥ ಸಂಶೊಧನೆಗೆ ಆರಂಭವಾಯಿತು. ಮೊಟ್ಟ ಮೊದಲು ಇವರಿಗೆ ದೊರೆತ ಗ್ರಂಥಗಳೆಂದರೆ ಪ್ರಭುಲಿಂಗಲೀಲೆ ಮತ್ತು ಗಣಭಾಷ್ಯ ರತ್ನಮಾಲಾ. ಇವೆರಡು ಗ್ರಂಥಗಳನ್ನು ಆಮೂಲಾಗ್ರ ನೋಡಿದನಂತರ ವೀರಶೈವ ಧರ್ಮ ತತ್ವಗಳ ಬಗ್ಗೆ ಮುಂದ ಪ್ರಕಾಶವು ಇವರಿಗೆ ಮುಂದೆ ಕಾಣಹತ್ತಿತು. ಅಂದಿನಿಂದಲೆ ಇವರ ವೀರಶೈವ ಧರ್ಮಗ್ರಂಥಗಳ ಸಂಶೋಧನೆಯು ಭರದಿಂದ ಸಾಗಿತು.

೧೯೦೪ರಲ್ಲಿ ಸಂಪಾದಕರು ವಕೀಲಿ ವೃತ್ತಿಯನ್ನು ಕೈ ಕೊಂಡಮೇಲೆ ತೀವ್ರಗತಿಯಿಂದ ಗ್ರಂಥಗಳ ಸಂಶೋಧನೆಯಲ್ಲಿ ಮಗ್ನರಾದರು. ಹಲಕೆಲವು ಕೋರಿ ಕಾಗದದ ಮತ್ತು ತಾಡವಾಲೆ ಗ್ರಂಥಗಳನ್ನು ವಿಜಾಪುರಜಿಲ್ಹೆಯಲ್ಲಿ ಮತ್ತು ಜಿಲ್ಹೆಯ ಹೊರ್ತಾಗಿ ಬೇರೆ ಬೇರೆ ಭಾಗಗಳಲ್ಲಿ ಶೋಧಮಾಡಿ ದೊರೆತ ಗ್ರಂಥಗಳನ್ನು ಸಂಗ್ರಹಿಸಲು ಅವರು ಪ್ರಯತ್ನ ಪಡಹತ್ತಿದರು. ಇವರ ಸಂಶೋಧನೆಯು ೧೯೨೦ರ ವರೆಗೆ ನಡೆದು ಸುಮಾರು ಒಂದುಸಾವಿರ ಗ್ರಂಥಗಳು ಸಂಗ್ರಹಿಸಲ್ಪಟ್ಟವು. ಇವುಗಳಲ್ಲಿ ಹಲವು ಅವರಿಂದ ಹಣಕೊಟ್ಟು ಸಹ ಕೊಳ್ಳಲ್ಪಟ್ಟವು. ಇವುಗಳ ಪರಶೀಲನೆಯಿಂದ ಮಧ್ಯಸವಾದಿ ಪ್ರಮಥರು ಆಚರಿಸಿದ ಷಟ್‍ಸ್ಥಲಾಚರಣೆಗಳೇ ಮಹತ್ವಾದವುಗಳೆಂಬುದು ಅವರಿಗೆ ಕಂಡುಬಂದಿತು. ಆದ್ದರಿಂದ ದೊರೆತ ವಚನ ಗ್ರಂಥಗಳಲ್ಲಿಯ ವಿಷಯಗಳನ್ನು ಸರಿಯಾಗಿ ಕ್ರಮಗೊಳಿಸುವದರಲ್ಲಿ ಇವರಿಗೆ ಬಹಳಕಾಲ ಹಿಡಿಯಿತು. ಇವರ ಸಂಶೋಧನೆಯ ಫಲವಾಗಿಯೇ ಮೊಟ್ಟ ಮೊದಲು ವಚನಶಾಸ್ತ್ರಸಾರ ಭಾಗ ೧ ಎಂಬ ಗ್ರಂಥ ಕುಸುಮವು ಅರಳಿ ಸರ್ವಕಡೆಗೂ ಅದು ತನ್ನ ಸದ್ವಾಸನೆಯನ್ನು ಬೀರಿತು. ಈ ಪ್ರಕಾರದ ಹಿನ್ನೆಲೆಯೂ ಇಂದು ನಮ್ಮೆಲ್ಲರ ಕಣ್ಮುಂದೆ ಕಾಣುತ್ತಿರುವ ಮತ್ತು ನಲ್ಮೆಯಿಂದ ನಲಿಯುತ್ತಿರುವ ಶಿವಾನುಭವ ಪತ್ರಿಕೆಯ ವತಿಯಿಂದ ಆರಂಭಕ್ಕೆ ಕಾರಣವು.

## ಶಿವಾನುಭವ ಪತ್ರಿಕೆಯ ಪ್ರಾರಂಭ.

ಶಿವಾನುಭವ ಎಂಬ ಹೆಸರಿನ ಮಾಸಪತ್ರಿಕೆಯು ತಾ॥ ೧-೨-೧೯೨೬ನೇ ದಿವಸ ಪ್ರಕಟವಾಯಿತು. ಇದು ಮೊದಲು ೨-೩ ವರ್ಷಗಳವರೆಗೆ ತ್ರೈಮಾ

ಸಿಕವಾಗಿ ಹೊರಟಿತು. ಮುಂದೆ ಮಾಸಪತ್ರಿಕೆಯಾಗಿ ಹೊರಟು ಇಲ್ಲಿಯ ವರೆಗೂ ಅದು ಮಾಸಪತ್ರಿಕೆಯಾಗಿಯೇ ಉಳಿದಿದೆ.

## ವಚನ ಗ್ರಂಥಗಳು.

ಈ ಪತ್ರಿಕೆಯ ದ್ವಾರಾ ಶ್ರೀ ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು, ಸಿದ್ಧರಾಮೇಶ್ವರ, ಗಣದಾಸಿವೀರಣ್ಣ, ಘನಲಿಂಗ, ಮತ್ತು ಮರೆಮಂಡದೇವ ಮೊದಲಾದ ಅನೇಕ ಶರಣರ ವಚನ ಗ್ರಂಥಗಳು ಪ್ರಕಟಿಸಲ್ಪಟ್ಟಿವೆ.

ಶೂನ್ಯ ಸಂಪಾದನೆ, ಮಹಾನುಭಾವ ಪ್ರಕಾಶಿಕೆ ಮತ್ತು ಪ್ರಾಣಲಿಂಗ ಜ್ಞಾನದರ್ಪಣ ಇವು ಸ್ವತಂತ್ರ ಗ್ರಂಥಗಳಾಗಿ ಅಚ್ಚು ಹಾಕಲ್ಪಟ್ಟಿವೆ

ಮಹದೇವಿಯಕ್ಕ, ಅಂಬಿಗರ ಚೌಡಯ್ಯ, ದೇವರ ದಾಸಿಮಯ್ಯ, ಸಕಳೇಶ ಮಾದರಸ, ಉರಿಲಿಂಗ ಪೆದ್ದಿ, ಮತ್ತು ಮಡಿವಾಳ ಮಾಚಿದೇವ ಪಿವರೆಲ್ಲರ ವಚನಗಳು ಸ್ವತಂತ್ರ ಗ್ರಂಥಗಳಾಗಿ ಉಪಲಬ್ಧವಿದ್ದಿಲ್ಲ, ಅವು ಈಗ ಸ್ವತಂತ್ರ ಗ್ರಂಥಗಳಂತೆ ಅಚ್ಚು ಹಾಕಲ್ಪಟ್ಟಿರುತ್ತವೆ.

## ವಚನಗ್ರಂಥಗಳಿಗೆ ಅರ್ಥ ಬರೆದದ್ದು.

೧ ದೇವರದಾಸಿಮಯ್ಯ, ಅಂಬಿಗರಚೌಡಯ್ಯ, ಮತ್ತು ಉರಿಲಿಂಗ ಪೆದ್ದಿ ಇವುಗಳಿಗೆ ಅರ್ಥ ಬರೆಯಲ್ಪಟ್ಟಿದೆ.

## ಶಿವಾನುಭವ ಪಠ್ಯ ಪುಸ್ತಕಗಳು

ಇತ್ತಿತ್ತಲಾಗಿ ಕರ್ನಾಟಕದ ಅನೇಕ ಊರುಗಳಲ್ಲಿ ಶಿವಾನುಭವ ಸಂಘಗಳು ಮತ್ತು ಅಕ್ಕನ ಬಳಗಗಳು ಸ್ಥಾಪಿಸಲ್ಪಟ್ಟಿರುವದರಿಂದ ಅವುಗಳಲ್ಲಿ ಓದಲು ಮತ್ತು ಜನರಿಗೆ ಸುಲಭವಾಗಿ ಬೋಧ ಮಾಡಲು ಅನುಕೂಲವಾಗುವಂತೆ (೧) ಪರಮಾತ್ಮನ ವಚನಗಳು, (೨) ಭಕ್ತಿಯ ವಚನಗಳು, (೩) ದೇವರ ದಾಸಿಮಯ್ಯನ ವಚನಗಳು, (೪) ಗಾಯನದ ವಚನಗಳು ಮತು (೫) ಹೊಸಪದ್ಧತಿಯ ಬಸವಣ್ಣನವರ ವಚನಗಳು ರಚಿಸಲ್ಪಟ್ಟಿವೆ.

ಹೊಸಪದ್ಧತಿಯ ಬಸವಣ್ಣನವರ ವಚನ ಗ್ರಂಥದಲ್ಲಿ ಮನಸ್ಸಿನ ಮೇಲೆ ಒಳ್ಳೇ ಪರಿಣಾಮವಾಗುವಂತೆ ಹೊಸ ಮಾದರಿಯಲ್ಲಿ ಶೀರ್ಷಿಕೆಗಳು ಹಾಕಲ್ಪಟ್ಟು ೧೦೧ ಪಾಠಗಳಲ್ಲಿ ಕ್ರಮಗೊಳಿಸಲಾಗಿದೆ.

## ಗದ್ಯ ಗ್ರಂಥಗಳು

(೧) ಬಸವೇಶ್ವರನ ತತ್ವಗಳು, (೨) ಶಿವಾನುಭವ ಸತ್ಯಮಾರ್ಗ, (೩) ಶಿವಯೋಗಿ ಘನಮಠಾರ್ಯರು ರಚಿಸಿದ ಕೃಷಿಜ್ಞಾನ ಪ್ರದೀಪಿಕೆ, (೪) ಲಿಂಗ ಪೂಜೆಯ ತತ್ವಗಳು ಮೊದಲಾದ ಗದ್ಯ ಗ್ರಂಥಗಳು ಪ್ರಕಟಿಸಲ್ಪಟ್ಟಿವೆ.

## ಐತಿಹಾಸಿಕ ಗ್ರಂಥಗಳು

ವೀರಶೈವರಲ್ಲಿ ಅನೇಕ ರಾಜರು ಮತ್ತು ರಾಜಕಾರಣ ಧುರಂಧರರು ಆಗಿ ಹೋಗಿದ್ದು ಅವರ ಜೀವನ ಚರಿತ್ರೆಗಳು ಮತ್ತು ಅವರ ಕಾಲದ ಉಜ್ವಲ ಇತಿ ಹಾಸವು ಉಪಲಬ್ಧವಿದ್ದಿಲ್ಲ. ಈ ಕೊರತೆಯನ್ನು ದೂರಮಾಡಲು ಅನೇಕ ಗ್ರಂಥಗಳ ಸಹಾಯದಿಂದ ಚರಿತ್ರೆಗಳನ್ನು ಸಂಗ್ರಹಿಸಿ ವೀರಶೈವ ರಾಜಮನೆಂನಗಳ ಇತಿಹಾಸವು ಬರಿಯಲ್ಪಟ್ಟಿದೆ. ಇವುಗಳಲ್ಲಿ (೧) ಬೀಳಗಿ ಅರಸುಗಳ ವಂಶಾವಳಿ ಎಂಬ ಉತ್ತಮ ಕಾವ್ಯ ಗ್ರಂಥವು (೨) ರಾಜೇಂದ್ರ ನಾಮೆ (ಕೊಡಗಿನ ಅರಸರ ಚರಿತ್ರೆ) ಕೆಳದಿರಾಯರ ವಂಶಾವಳಿ ಇವು ಮುಖ್ಯವಾದವುಗಳಾಗಿವೆ.

## ಧಾರ್ಮಿಕಪುರುಷರ ಚರಿತ್ರೆಗಳು

ಶಿವಶರಣರ ಚರಿತ್ರೆಗಳು ಭಾಗ ೧,೨ ಮತ್ತು ೩ ಹೀಗೆ ಮೂರು ಭಾಗ ಗಳಾಗಿ ಮಾಡಲ್ಪಟ್ಟಿದ್ದು ಇವುಗಳಲ್ಲಿ ೧೫೦ ಜನ ಶಿವಶರಣರ ಚರಿತ್ರೆಗಳು ಆಧುನಿಕ ಪದ್ಧತಿಯ ಮೇರೆಗೆ ಕ್ರಮಗೊಳಿಸಿ ಬರಿಯಲ್ಪಟ್ಟಿವೆ. ಮತ್ತು ಬಸ ವೇಶ್ವರನಿಂದ ೧೭ನೇ ಶತಮಾನದವರೆಗೆ ಆಗಿಹೋದ ಶ್ರೀ ಮನ್ನಿರಂಜನಾದೀ ಶ್ವರರ ಚರಿತ್ರೆಗಳುಳ್ಳ ನಿರಂಜನ ವಂಶರತ್ನಾಕರವೆಂಬ ಗ್ರಂಥವು ಸಹ ಪ್ರಕ ಟಿಸಲ್ಪಟ್ಟಿದೆ.

## ಸ್ವತಂತ್ರ ಗ್ರಂಥಗಳು

ಮೊಗ್ಗೆ ಮಾಯಿ ದೇವರಿಂದ ಸಂಸ್ಕೃತದಲ್ಲಿ ರಚಿಸಲ್ಪಟ್ಟ ಶಿವಾನುಭವ ಸೂತ್ರ ಸಾರವೆಂಬ ಗ್ರಂಥವು ಕನ್ನಡ ಟೀಕೆಯೊಂದಿಗೆ ಪ್ರಕಟಿಸಲ್ಪಟ್ಟಿದೆ. ಇಡೀ ವಚನ ಶಾಸ್ತ್ರದ ಸಂಕ್ಷಿಪ್ತ ವಿವರಣೆಯನ್ನೊಳಕೊಂಡಿರುವ ಶಿವಾನು ಭವ ಶಬ್ದಕೋಶವೆಂಬ ಗ್ರಂಥವು ಪ್ರಕಟವಾಗಿದೆ. ಶಿವಾನುಭವ ಅಭ್ಯಾಸಿಗ ಳಿಗೆ ಇದು ಕೈದೀಪದಂತಿದೆ, ನೂರೊಂದು ಸ್ಥಲಗಳನ್ನೊಳಕೊಂಡ ಟೀಕಾ ತ್ಮಕವಾದ ಶಿದ್ಧಲಿಂಗ ಏಕೋತ್ತರ ಶತಸ್ಥಲವೆಂಬ ಗ್ರಂಥವು ಪ್ರಕಟಿಸಲ್ಪಟ್ಟಿದೆ.

ಮೇಲ್ಕಂಡ ಗ್ರಂಥಗಳಲ್ಲದೆ ಲಕ್ಕಣ್ಣ ದಂಡೇಶನು ರಚಿಸಿದ ಶಿವತತ್ವ ಚಿಂತಾಮಣಿ ಎಂಬ ಗ್ರಂಥದ ಭಾಗವಾಗಿರುವ ವರದಾನಿ ಗುಡ್ಡಮ್ಮೆಯ ಚರಿತ್ರೆ ಅವಧೂತ ಗೀತೆ, ಹಲಳಯ್ಯನ ತ್ರಿಪಧಿ, ಆದಿಶೆಟ್ಟಿ ಪುರಾಣ, ವೇಮಯ್ಯನ ಜ್ಞಾನಯೋಗದ ಪದಗಳು, ಹರಿಹರಾ ಚಾರ್ಯರ ರಗಳೆಗಳು, ಮುಂತದ ಅನೇಕ ಉಪಲಬ್ಧವಿಲ್ಲದ ಗ್ರಂಥಗಳು ಪ್ರಕಟವಾಗಿವೆ.

ವಚನಶಾಸ್ತ್ರಸಾರ ಭಾಗ ೧ ಪೂರ್ವಾರ್ಧ ಮತ್ತು ಉತ್ತರಾರ್ಧ, ಭಾಗ ೨ ಮತ್ತು ಭಾಗ ೩ ಪೂರ್ವಾರ್ಧ ಮತ್ತು ಉತ್ತರಾರ್ಧವೆಂಬ ಮೂರು ಗ್ರಂಥಗಳು ರಚಿಸಲ್ಪಟ್ಟು ಪ್ರಕಟವಾಗಿದ್ದು ಇವು ವೀರಶೈವ ತತ್ವಜ್ಞಾನದ ಭಾಂಡಾರಗಳಾಗಿವೆ. ಇವುಗಳಲ್ಲಿ ಧರ್ಮದ ಸ್ವರೂಪ ಮತ್ತು ವಿಶಿಷ್ಟತನವು ಎದ್ದು ಕಾಣುವದು. ಇವುಗಳನ್ನು ಸರಿಯಾಗಿ ಅಭ್ಯಾಸಮಾಡಿದರೆ ವೀರಶೈವ ಧರ್ಮದ ಜ್ಞಾನವು ಸಹಜವಾಗಿ ಆಗುವದರಲ್ಲಿ ಸಂದೇಹವಿಲ್ಲ. ಈ ಮೂರು ಭಾಗಗಳಲ್ಲಿ ಎಲ್ಲ ಶರಣರ ವಚನಗಳನ್ನು ಕ್ರೋಡೀಕರಿಸಿ ಸರಿಯಾದ ರೀತಿಯಿಂದ ಷಟ್ಸ್ಥಲಗಳಿಗೆ ಹೊಂದಿಕೆಯಾಗುವಂತೆ ಉತ್ತಮೋತ್ತಮ ಶೀರ್ಷಿಕೆಗಳನ್ನು ಹಾಕಿ ಎಲ್ಲ ವಿಷಯುಗಳನ್ನೊಳಗೊಳ್ಳುವಂತೆ ಕ್ರಮಗೊಳಿಸಲಾಗಿದೆ.

ವಿಷಯುಗಳಿಗನುಸರಿಸಿ ಶರಣರ ವಚನಗಳು ಸುಸಂಬದ್ಧವಾಗಿ ಕ್ರಮಗೊಳಿಸಲ್ಪಟ್ಟಿದ್ದು ನೋಡಿದರೆ ಸಂಪಾದಕರಿಗಿರುವ ಅಗಾಧ ಬುದ್ಧಿಮತ್ತೆ ಎದ್ದು ಕಾಣುವದು. ಶಿವಾನುಭವದ ಷಟ್ಸ್ಥಲಗಳ ನೂರೊಂದು ಸ್ಥಲಗಳ ಸಕೀಲಗಳು ಉದ್ಧಾರಣೆ ಮೊದಲಾದವುಗಳ ಆಳವಾದ ಜ್ಞಾನವು ಅವರಿಗೆಷ್ಟಿರುವದೆಂಬುದನ್ನು ಒಪ್ಪಲೇಬೇಕು. ಇವರಿಂದ ವೀರಶೈವ ಸಮಾಜಕ್ಕೆ ಕಾಣಿಕೆಯಾಗಿ ಅರ್ಪಿಸಲ್ಪಟ್ಟ ಅನರ್ಘ್ಯವಾದ ಮೂರು ರತ್ನಗಳಿವು. ವೀರಶೈವ ನಭೋಮಂಡಲದಲ್ಲಿ ಇವು (ವಚನಶಾಸ್ತ್ರ ಸಾರದ ಮೂರು ಭಾಗಗಳು) ಸುಸ್ಥಿರವಾದ ಧ್ರುವತಾರೆಯಂತೆ ಬೆಳಗುತ್ತಿರುವವು. ಇಷ್ಟೇ ಅಲ್ಲ. ಇವು ವೀರಶೈವ ಸಿದ್ಧಾಂತದ ಜ್ಞಾನಾಮೃತವನ್ನೊಳಗೊಂಡ ಅವಿನಾಶಿಯಾದ ದಿವ್ಯ ಮಂದಿರಗಳು. ಧರ್ಮ ವಿಜ್ಞಾನಿಗಳು ಈ ಮಂದಿರಗಳಲ್ಲಿ ಪ್ರವೇಶಿಸಿ ತಮ್ಮ ಜ್ಞಾನದ ಹಸಿವನ್ನು ಹಿಂಗಿಸಿಕೊಂಡು ಧನ್ಯರಾಗಬಹುದು. ಇವು ವೀರಶೈವ ತತ್ವಗಳ ಬಗ್ಗೆ ಮಹತ್ವವಾದ ಬೆಳಕನ್ನು ಕೆಡವಿರುವವು.

ಇನ್ನು ಅನೇಕ ಗ್ರಂಥಗಳು ಪ್ರಕಟವಾಗಿದ್ದು ಅವುಗಳನ್ನೆಲ್ಲ ಸಾದ್ಯಂತವಾಗಿ ಕೊಡುವದು ಸಾಧ್ಯವಿಲ್ಲ.

ಡಾ॥ ಹಳಕಟ್ಟಿಯವರ ಸಂಗ್ರಹಾಲಯದಲ್ಲಿ ಮಹತ್ವವಾದ ಎಷ್ಟೋ ಕೈಬರಹದ ಮತ್ತು ತಾಡವಾಲೆಯ ಗ್ರಂಥಗಳು ಅಚ್ಚಾಗದೇ ಇರುವವು. ಅವುಗಳೆಲ್ಲ ಅಚ್ಚಾಗಿ ಪ್ರಕಾಶಕ್ಕೆ ಬರಬೇಕಾದರೆ ಸಮಾಜದ ಉದಾರಾಶ್ರಯವು ಅತಿ ಅವಶ್ಯವಾಗಿದೆ.

ಶಿವಾನುಭವ ಪತ್ರಿಕೆಯು ಜನ್ಮವೆತ್ತಿ ಇಂದಿಗೆ ೩೦-೩೧ ವರ್ಷಗಳು ಗುತ್ತಬಂತು. ಈ ಅವಧಿಯೊಳಗಾಗಿ ಸುಮಾರು ನೂರಾರಕ್ಕಿಂತ ಹೆಚ್ಚಿಗೆ ಗ್ರಂಥಗಳು ಪ್ರಕಟವಾಗಿವೆ. ಯಾವಸಂಘ ಸಂಸ್ಥೆಗಳಾಗಲೀ ಅಥವಾ ವಾಠಮಾನ್ಯಗಳಾಗಲೀ ಮಾಡದೇ ಇರುವ ಮಹತ್ವದ ಕಾರ್ಯವನ್ನು ಈ ಪತ್ರಿಕೆಯ ದ್ವಾರಾ ಡಾ॥ ಹಳಕಟ್ಟಿಯವರು ಮಾಡಿರುವರೆಂದರೆ ಅತಿ ಶಯೋಕ್ತಿಯೆನಿಸದು. ಇಂಥ ಮಹತ್ವದ ಸೇವೆಮಾಡಿರುವ ಮತ್ತು ಮಾ ಡುತ್ತಿರುವ ಈ ಪತ್ರಿಕೆಗೆ ಈಗಲಾದರೂ ಸಾವಿರಾರು ಚಂದಾದಾರರಿಲ್ಲ ರುವದು ತುಂಬಾ ಶೋಚನೀಯ ಸಮಾಜಲ್ಲಿ ಧಾರ್ಮಿಕ ವಾ ಯ ಅಭಿರುಚಿ ಸಾಕಷ್ಟಿಲ್ಲದಿರುವದೇ ಕಾರಣ.

## ಸಂಪಾದಕರು ಅಧುನಿಕ ಶಿವಶರಣರು

ಸಂಪಾದಕರ ಬಗ್ಗೆ ಇಲ್ಲಿ ಒಂದೆರೆಡು ಮಾತಗಳನ್ನು ಹೇಳುವದು ಸೂಕ್ತ ವೆನಿಸುವದು. ಸಂಪಾದಕರಾದ ಡಾ. ಹಳಕಟ್ಟಿಯವರು ಆಧುನಿಕ ಶಿವಶರಣರು. ಯಾಕಂದರೆ ಇವರೇ ವಚನ ವಾಙ್ಮಯವನ್ನು ಬೆಳಕಿಗೆ ತಂದ ವರು. ಸುಮಾರು ೩೦ ವರ್ಷಗಳ ಹಿಂದೆ ಹಲ ಕೆಲವರಲ್ಲಿ ಶರಣರ ಬಗ್ಗೆ ಇದ್ದ ತಪ್ಪು ಗ್ರಹಿಕೆಗಳನ್ನು ವಚನಗಳ ಪ್ರಸಾರದಿಂದ ದೂರ ಮಾಡಿದವರು ಶರಣರ ಚರಿತ್ರೆಗಳನ್ನು ಪ್ರಕಟಿಸಿ ಅವರ ಬಗ್ಗೆ ಭಕ್ತಿ ವಿಶ್ವಾಸ ಹೆಚ್ಚಾಗು ವಂತೆ ಮಾಡಿದವರು ನಾಡಿನಲ್ಲೆಲ್ಲ ವಚನ ವಾಙ್ಮಯ ಪ್ರಸಾರವಾಗಲು ಇವರೇ ಕಾರಣರು. ಅಧುನಿಕ ವಿದ್ಯಾವಂತರಲ್ಲಿ ಸಹ ವಚನಗಳಬಗ್ಗೆ ಪ್ರಗಾಢವಾದ ಪ್ರೇಮಾದರಗಳನ್ನು ಹಟ್ಟಿಸಲು ವಿಶ್ವವಿದ್ಯಾಲಯಗಳ ಅಭ್ಯಾಸ ಪತ್ರಿಕೆಗಳಲ್ಲಿ ವಚನಗಳನ್ನು ಪಠ್ಯಪುಸ್ತಕಗಳಾಗಿ ಶೇರಿಸಲು ಪ್ರಯತ್ನಿಸಿದವರು. ಆದರೇನು ದೈವೀ ಸಂಪತ್ತಿದ್ದರು ಲಾಕಿಕ ಸಂಪತ್ತಿನ ಕೊರತೆ. ತರುಣರಿಗಿಂತ ಹೆಚ್ಚಿನ ಶಕ್ತಿ ಉತ್ಸಾಹವಿದ್ದರೂ ನಿರ್ಧನಿಕರಾದ್ದರಿಂದ ಅವರ ಇಚ್ಛೆಯ ಪ್ರಕಾರ ಕಾರ್ಯ ಗಳಾಗಿರುವದಿಲ್ಲ. ೮೧೦ ವರ್ಷಗಳ ಅವಧಿಯಲ್ಲಿ ಅನೇಕ ತರದ ಕಷ್ಟ ನಷ್ಟಗ ಳಿಗೆ ತುತ್ತಾದರು. ಇವರ ಹಿಂಬಡ ಸಂದು ತಪ್ಪಿನೋವಾದ್ದರಿಂದ ೧೨ ವರ್ಷ

ಮನೆಹಿಡಿದು ಕುಳ್ಳಿರುವ ಪ್ರಸಂಗ ಬಂದಿದ್ದರಿಂದ ಇವರ ಛಾಪಖಾನೆಗೆ ಹಾನಿ ಯಾಯಿತು. ಅದೇ ಕಾಲಕ್ಕೆ ಇವರ ಪ್ರೇಮದ ಜೇಷ್ಠ ಪುತ್ರ ಚಂದ್ರಶೇಖರ ಇವರು ಅಕಾಲಿಕವಾಗಿ ಶಿವಾಧೀನರಾದರು. ಇವರ ಧರ್ಮ ಪತ್ನಿಯು ಇಂದಿಗೂ ರೋಗರುಜೆಯಿಂದ ಹಾಸಿಗೆ ಹಿಡಿದಿರುವರು. ಇನ್ನೂ ಅನೇಕಾನೇಕ ಕಷ್ಟ ನಷ್ಟಗಳೊದಗಿದರೂ ಅವುಗಳನ್ನೆಲ್ಲ ತಾಳ್ಮೆಯಿಂದ ಸಹಿಸಿಕೊಂಡು ಎದೆ ಗುಂದದೆ ಧೀರರಾಗಿ ಶೂರರಾಗಿ ತಮ್ಮ ಕಾರ್ಯದಲ್ಲಿಯೇ ಮುಂದೆ ಮುಂದೆ ಸಾಗುತ್ತಿರುವರು. ಯಾವಕಾಲಕ್ಕಾದರೂ ಶರಣರೆಂಬವರಿಗೆ ತಾಕಿಕ ತೊಂದರೆ ಗಳು ಅವರ ಪರೀಕ್ಷೆ ಗೋಸ್ಕರ ಬರುವವೆಂಬ ದೇವವಾಣಿಯು ಸದಾ ಸತ್ಯ ವಾಗಿದೆ, ಇದಕ್ಕೆ ಶ್ರೀಬಸವಣ್ಣನವರ ವಚನಗಳೇ ಪ್ರಮಾಣ. " ಶಿವಭಕ್ತ ನಾಗಿ ಶನ್ನ ಹಿಡಿದಿಹೆನೆಂದು ಹೋದರೆ ನುಗ್ಗುಮಾಡುವ, ನುಸಿಯ ಮಾಡುವ ಮುಗ್ಗು ಮಾಡುವ, ಮುಸಿಯ ಮಾಡುವ, ಕೂಡಲ ಸಂಗಮದೇವರ ನೆರೆನಂಬಿ ದನಾದರೆ ಕಡೆಗೆ ತನ್ನಂತೆ ಮಾಡುವ.

ನೆಚ್ಚಿದನೆಂದರೆ ಮೆಚ್ಚಿದನೆಂದರೆ, ಸಲೆಮಾರು ಹೋದನೆಂದರೆ ತನುವ ನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನ ಲ್ಲಾಡಿಸಿ ನೋಡುತಿ ನೀನು, ಇವೆಲ್ಲಿಕ್ಕಂಜದಿದ್ದರೆ ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವ.

ಮೇಲ್ಕಂಡ ವಚನಗಳ ಸಮನ್ವಯವು ಇವರ ಜೀವನದಲ್ಲಿ ಹಾಸು ಹೊಕ್ಕಾಗಿದೆ. ಇವರ ದಿನಚರಿಯು ಒಳ್ಳೆ ಸಾದಾ ತರದ್ದಿದ್ದು ತಮ್ಮ ವಯಸ್ಸಿನ ಅಂಚನ್ನು ದಾಟಿದರೂ ಉಳಿದವರಂತೆ ಭವ್ಯಮನೆಮಂದಿರ ಕಟ್ಟಿಸಲಿಲ್ಲ ಭೂಮಿ ಸೀಮೆಗಳನ್ನು ಗಳಿಸಲಿಲ್ಲ. ಉತ್ತಮೋತ್ತಮ ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದೇ ಇವರಭವ್ಯಮಂದಿರ ಫಲಿಧ್ರುಪ ಭೂಮಿ ಶೀಮೆ. ನಿಜಕ್ಕೂ ನಿರಾಶಾಮೂರ್ತಿ, ವಿರಾಗಿ, ಆಶ್ರಮ ಸಹಿತ ನಿರಾಭಾರಿ, ವೀರಶೈವರೆಂದರೆ ಅತಿಶಯೋಕ್ತಿಯೆನಿಸದು. ಇವರಲ್ಲಿ ಇನ್ನೇನು ಬೇಕು; ವೀರಶೈವಮಹಾ ಮನೆಯಲ್ಲಿ ಆಗಿ ಹೋದ ಮತ್ತು ಆಗಿಹೋಗುತ್ತಿರುವ ಶಿವಶರಣರ ಮಾಲಿ ಕೆಯಲ್ಲಿ ಶೇರಲು ಇವರಿಗೆ ಸ್ಥಾನವದೆ; ಮಾನವದೆ. ಇವರು ಆಧುನಿಕ ಶಿವಶರಣರಲ್ಲಲ್ಲವೇ?

ಶಿವಾನುಭವ ಪತ್ರಿಕೆಯ ದ್ವಾರಾ ಇವರು ಸಲ್ಲಿಸಿದ ಅಮೋಘ ಸೇವೆಗೆ ಸಮಾಜವೇ ಚಿರ ಋಣಿಯಾಗಿದೆ. ಆದ್ದರಿಂದ ಇವರಿಗೆ ಕೃತಜ್ಞತೆಯು

ನ್ನುರ್ಪಿಸುವದು ಪ್ರತಿಯೊಬ್ಬನ ಕರ್ತವ್ಯ ವಲ್ಲವೇ ? ಈ ಪತ್ರಿಕೆಗೆ ಎಲ್ಲ ಕಡೆಗೆ ಸಾಕಷ್ಟು ಚಂದಾದಾರ ಸಂಖ್ಯೆಬೆಳಿಸಬೇಕಾಗಿದೆ. ಕಾರಣ ತಾವೊಬ್ಬರೇ ಚಂದಾದಾರರಾದರೆ ತಮ್ಮ ಕರ್ತವ್ಯ ತೀರಲಿಲ್ಲ. ಆದ್ದರಿಂದ ಚಂದಾದಾರರ ಸಂಖ್ಯೆ ಹೆಚ್ಚಿಗೆ ಬೆಳಿಯಲು ಒಬ್ಬರಿಗೊಬ್ಬರು ಪ್ರೋತ್ಸಾಹಿಸಬೇಕು. ಈಗಿರುವ ಚಂದಾದಾರರು ತಮಗೆ ಶಕ್ಯವಾದ ಮಟ್ಟಿಗೆ ಹೊಸ ಚಂದಾದಾರರನ್ನು ಮಾಡಿಕೊಡಲು ಯತ್ನಿಸಬೇಕು. ಒಬ್ಬರು ನಿದಾನ ಒಬ್ಬಬ್ಬರನ್ನಾದರು ಹೊಸ ಚಂದಾದಾರರನ್ನು ಮಾಡಲು ಮರೆಯಬಾರದು ; ತಪ್ಪಬಾರದು. ಈ ಪ್ರಕಾರವಾಗಿ ಈ ಪತ್ರಿಕೆಯನ್ನು ಪಾಲನೆಮಾಡಿ ಪೋಷಿಸಬೇಕಾಗಿ ನನ್ನ ಬಲವಾದ ಕೋರಿಕೆ.

---

# ನೀತಿ-ಶಾಸ್ತ್ರಸಾರ

( ಲೇಖಕರು-ಶ್ರೀ ವೀರಪ್ಪ ಯಗುಟಿ ಬಿ. ಎ. ಎಲ್, ಎಲ್, ಬಿ. ಹಾವೇರಿ )

(೬)

## ೨ ನೈತಿಕ ಪಂಥಗಳು

ಮನುಷ್ಯನಲ್ಲಿರುವ ಮನೋಭಾವನೆ ಮತ್ತು ಬುದ್ಧಿ ಇವುಗಳ ಪ್ರಾಧಾನ್ಯದ ಆಧಾರದ ಮೇಲೆ ಕೆಲವು ನೈತಿಕ ಪಂಥಗಳು ಹುಟ್ಟಿದವು. ಗ್ರೀಸ ದೇಶದಲ್ಲಿ ಸೈರೆನಿಕ್ ಪಂಥವೂ ಭಾರತದಲ್ಲಿ ಚಾರ್ವಾಕ ಪಂಥವೂ ಮಾನವನ ಧ್ಯೇಯವು ಇಂದ್ರಿಯ ಸುಖದಲ್ಲಿಯೇ ಇದೆ ಎಂದು ಪ್ರತಿ ಪಾದಿಸಿದರು. ಪ್ರತಿಕ್ಷಣದಲ್ಲಿ ಲಭಿಸುವ ಸುಖವನ್ನು ಕಳೆದುಕೊಳ್ಳದೆ ಅನುಭವಿಸಬೇಕೆಂದು ಸೈರೆನೆಯಕರು ಹೇಳಿದರು. ಇದರಂತೆ ಚಾರ್ವಕರು "ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನ ಕುತ: ತಸ್ಮಾತ್ ಸರ್ವಪ್ರಯತ್ನೇನ ಋಣಂ ಕೃತ್ವಾ ಘೃತಂ ಪಿಬೇತ್ ಮರಣದನಂತರ ಸುಟ್ಟುಹೋದ ದೇಹವು ಮತ್ತೆ ಹುಟ್ಟಿಬರುವದೆಂತು? ಆದ್ದರಿಂದ ಸರ್ವಪ್ರಯತ್ನದಿಂದ ಸಾಲಮಾಡಿಯಾದರೂ ಸುಖಪಡೆಯ ಬೇಕೆಂದು ಸಾರಿದರು. ಆದರೆ ಮತ್ತೊಂದು ಪಂಥವು ಬುದ್ಧಿಯ ಆಧಾರದಮೇಲೆ ಇಂದ್ರಿಯ ಸುಖವು ಕ್ಷಣಿಕವಾಗಿರುವದರಿಂದ ಅದನ್ನು ತಿರಸ್ಕರಿಸಿ ಬುದ್ಧಿಯಿಂದ ಪರಿಶೀಲಿಸಲ್ಪಟ್ಟ ಸುಖವನ್ನು ಹೊಂದಬೇಕೆಂದು ಪ್ರತಿಪಾದಿಸಿತು. ನೀತಿಶಾಸ್ತ್ರದಲ್ಲಿ ಇಂದ್ರಿಯ ಸುಖವಾದದ ಪಂಥಕ್ಕೆ ಸೇಂದ್ರಿಯಸುಖವಾದ (*Hedonism*) ಮತ್ತು ಬುದ್ಧಿ ಪುರಸ್ಕೃತ ಸುಖವಾದದ ಪಂಥಕ್ಕೆ ಬೌದ್ಧಿಕ ಸುಖವಾದ (*Rationalism*) ಎಂದು ಹೆಸರುಂಟು.

ಚಂಚಲವಾದ ಮನೋಭಾವನೆಯಲ್ಲಿ ಧ್ಯೇಯದ ಕಲ್ಪನೆ ಇರುವದಿಲ್ಲ. ಆದರೆ ಅದರಲ್ಲಿ ಕ್ಷಣಿಕ ಸುಖ, ವೇದನೆ, ಕೊರತೆ ಮತ್ತು ತೃಪ್ತಿಗಳ ಭಾವನೆಗಳಿರುವವು. ಈ ಭಾವನೆಯು ತೃಪ್ತಿಪಡಿಸುವ ವಸ್ತುಗಳ ಕಡೆಗೆ ಎಳೆಸುವದು. ಈ ಕೃತಿಯಲ್ಲಿ ಬುದ್ಧಿಯ ಪ್ರೇರಣೆ ಇರುವದಿಲ್ಲ ಸ್ವೇಚ್ಛೆಯಿಂದ ಪ್ರೇರಿತವಾದ ಚಟುವಟಿಕೆಯಲ್ಲಿ ಧ್ಯೇಯವನ್ನು ಆಯ್ದುಕೊಳ್ಳುವ ಅರಿವು ಅಥವಾ ಸೂಕ್ತ ಜ್ಞಾನವು ಇರುವದು. ಧ್ಯೇಯ ಚಟುವಟಿಕೆಯಲ್ಲಿ

ಧೇಯವನ್ನು ಪ್ರಾಪ್ತಿ ಮಾಡಿಕೊಳ್ಳುವ ಉದ್ದೇಶದಲ್ಲಿ ಭಾವನೆ ಮತ್ತು ಜ್ಞಾನಗಳೆರಡೂ (*Sensation and reason*) ಅಡಕವಾಗಿದೆ. ಇಂದ್ರಿಯ ಸುಖವಾದಿಯು ಕೇವಲ ಭಾವನೆಯನ್ನೆ ಪ್ರಧಾನವನ್ನಾಗಿ ತಿಳಿಯುತ್ತಾನೆ. ಅದರಂತೆ ಬೌದ್ಧಿಕ ಸುಖವಾದಿಯು ಭಾವನೆಯನ್ನು ತಿರಸ್ಕರಿಸಿ ಕೇವಲ ಬುದ್ಧಿಯೊಂದನ್ನೇ ಆಧಾರವಾಗಿಟ್ಟು ಕೊಳ್ಳುತ್ತಾನೆ. ಇವನು ಜನರು ಇಂದ್ರಿಯ ಸುಖಪ್ರಾಪ್ತಿಗಾಗಿ ವರ್ತಿಸದೆ ಸುಖ ಕೊಡುವ ವಸ್ತುಗಳನ್ನು ಹೊಂದಲು ಇಚ್ಛಿಸುತ್ತಾರೆಂದು ಹೇಳುತ್ತಾನೆ. "ಕಾರ್ಯ ಮಾಡುವದರಲ್ಲಿ ಸುಖ" ಮತ್ತು ಸುಖದ ಸಲುವಾಗಿ ಕಾರ್ಯ ಮಾಡುವದು" ಇವುಗಳಲ್ಲಿ ಭೇದವುಂಟು. ಕೇವಲ ಸುಖಪ್ರಾಪ್ತಿಗಾಗಿ ಕಾರ್ಯ ಪ್ರಾರಂಭಿಸಿದರೆ ಆ ಸುಖದ ಸವಿಯು ಲಭಿಸದು. ಅನಾಸಕ್ತಿಯಿಂದ ಕಾರ್ಯಮಾಡಿದ ನಂತರ ಆಕಸ್ಮಿಕವಾಗಿ ಮತ್ತು ಸಹಜವಾಗಿ ಲಭಿಸಿದ ಸುಖವು ನಿಜವಾದ ಸುಖವಾಗಿ ಪರಿಣಮಿಸುವದು. ವಿಜ್ಞಾನಿಗಳು ಮೊದಲು ಸುಖಸಂಪಾದಿಸಬೇಕೆಂದು ಶೋಧಗಳನ್ನು ಮಾಡಲು ಪ್ರಯತ್ನದಲ್ಲಿ ವಿಡಿಶನ್ನನೂ ಗ್ರಾಮ್ಯಾಫೋನ್ ಮೊದಲಾದ ಯಂತ್ರಗಳನ್ನು ರಚಿಸುವ ಮೊದಲು ಅಪಾರ ಕಷ್ಟ ಮತ್ತು ಮಾನಸಿಕ ಶ್ರಮ ಸಹಿಸಬೇಕಾಯಿತು. ಆ ಪ್ರಯೋಗದ ಪ್ರಯತ್ನದಲ್ಲಿಯೇ ಸುಖವುಂಟೆಂದು ತಿಳಿದನು. ಇದರಂತೆ ಉಳಿದ ಕಲೆಗಳಾದ ಚಿತ್ರ, ಶಿಲ್ಪ, ಸಂಗೀತ, ಯಂತ್ರರಚನೆಗಳನ್ನು ಪ್ರಾವೀಣ್ಯ ಹೊಂದುವ ಮೊದಲು ಅಪಾರ ಶ್ರಮವಿದ್ದರೂ ಕಲಾವಿದರು ಆ ಶ್ರಮವನ್ನೇ ಸುಖವೆಂದು ಭಾವಿಸುತ್ತಾರೆ. ಸುಖವನ್ನು ಗುರಿಯಾಗಿಟ್ಟುಕೊಂಡು ಅದನ್ನು ಹುಡುಕುತ್ತ ಹೋದರೆ ಅದು ಬಿಸಿಲ್ಗುದುರೆಯಂತೆ ಮಾಯವಾಗುವದು. ಯಾವನೊಬ್ಬನು ಒಂದು ಉತ್ತಮ ಕೃತಿಯನ್ನು ಮಾಡಿದಾಗ ಸುಖವು ತಾನಾಗಿಯೇ ಲಭಿಸುವದು.

ನಾವು ಸ್ವೇಚ್ಛೆಯಿಂದ ಆಯ್ದುಕೊಂಡ ಪ್ರತಿಯೊಂದು ಕೃತಿಯಲ್ಲಿ ಸುಖವುಂಟು. ಹೀಗೆ ಸುಖದ ಭಾವ ವಿಲ್ಲದಿದ್ದರೆ ನಮ್ಮ ಆಯ್ಕೆಯೇ ಅಸಂಭವ ವಾಗ್ಯವದು. ಆದುದರಿಂದ ಸುಖವು ನಮ್ಮ ಆಯ್ಕೆಯಲ್ಲಿಯೇ ಒಂದು ಅಂಶವಾಗಿವೆಯೆಂದು ನಾವು ಒಪ್ಪ ಬೇಕಾಗುವದು. ಮತ್ತೊಂದು ಪಂಥವು ಭಕ್ತಿ, ಜ್ಞಾನ, ಕ್ರಿಯೆ ಈ ಮೂರು ಘಟಕಗಳ ಆಧಾರದ ಮೇಲೆ ನೈತಿಕ ಕಟ್ಟಡವನ್ನು ಕಟ್ಟಿದೆ. ಈ ಪಂಥದಲ್ಲಿ ಚೈತನ್ಯ, ಕಬೀರ, ತುಳಸೀದಾಸ, ರಾಮದಾಸ, ಪುರಂದರದಾಸ, ಜ್ಞಾನೇಶ್ವರ, ಬಸವೇಶ್ವರ, ಕ್ರೈಸ್ತ ಮೊದಲಾದ ಸಾಧುಗಳು ಸಮಾ

ವೇಶವಾಗುತ್ತಾರೆ. ಇವರನ್ನು ಪರಮಾತ್ಮ ಭಾವಿಕವಾದಿಗಳೆಂದು ಕರೆಯು ಬಹುದು. ಯಾಕಂದರೆ ನೀತಿಯು ವರ್ತನೆಯು ಪರಮಾತ್ಮನನ್ನು ಒಲಿಸುವ ಸಾಧನವೆಂದು ಇವರ ನಂಬುಗೆ. ಬಸವೇಶ್ವರನ ವಚನವಲ್ಲಿ ಈ ಅಭಿಪ್ರಾಯು ವನ್ನು ಕಾಣಬಹುದು. ಕಳಬೇಡ, ಕೊಲಬೇಡ, ಹುಸಿಯು ನುಡಿಯಲು ಬೇಡ, ಇದಿರುಹಳಿಯಲುಬೇಡ, ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ" ಈ ವಚನದಲ್ಲಿ ಅನೀತಿಯ ಮುಖ್ಯಾಂಶಗಳಾದ ಕಳವು ಹಿಂಸೆ, ಅಸತ್ಯ, ನಿಂದೆಗಳು ಸ್ಪಷ್ಟವಾಗಿ ನಿಷೇಧಿಸಲ್ಪಟ್ಟಿವೆ. ಈ ಪ್ರಕಾರ ಕ್ರಿಯಾಮಾರ್ಗ ದರ್ಶಿತವಾಗುವದಲ್ಲದೆ ಈ ಪಂಥದ ಎಲ್ಲ ಸಾಧುಗಳು ಜ್ಞಾನ ಮತ್ತು ಭಕ್ತಿ ಗಳಿಗೆ ಪ್ರಾಧಾನ್ಯಕೊಟ್ಟಿದ್ದಾರೆ. ಭಗವದ್ಗೀತೆಯು ಬೋಧೆಯಾದರೂ ಇದೇ ಪಂಥಕ್ಕೆ ಅನುಸಾರವಾದದ್ದು. ಇದರಲ್ಲಿ ಜ್ಞಾನ, ಭಕ್ತಿ, ಕ್ರಿಯೆಗಳ ಸದುನ್ವಯುವು ವ್ಯಕ್ತವಾಗಿದೆ.

## ೩. ಮನಸ್ಸಿನ ವೃತ್ತಿಗಳು.

ಪಶುಪಕ್ಷಿಗಳಲ್ಲಿ ಆಹಾರದ ಅರಿವು ಉಂಟಾದಾಗ ತಾವು ತಿನ್ನುವ ಪದಾರ್ಥಗಳನ್ನು ಹುಡುಕುವವು. ಆದರೆ ಧ್ಯೇಯದ ಕಲ್ಪನೆಯು ಅವುಗಳ ಅರಿವಿನಲ್ಲಿ ಅಡಕವಾಗಿರುವದಿಲ್ಲ. ಆದರೆ ಈ ಪ್ರಾಣಿಗಳಲ್ಲಿಯ ಹಸಿವಿನ ಭಾವನೆ ಮನುಷ್ಯನಲ್ಲಿ ಆಶೆಯ ರೂಪಾಂತರ ಹೊಂದಿರುವದು. ಯಾಕೆಂದರೆ ಪಶು ಪಕ್ಷಿಗಳಂತೆ ಮನುಷ್ಯನು ಕೇವಲ ಹಸಿವಿನ ಸಲುವಾಗಿ ಸಮಯಕ್ಕೆ ಲಭಿ ಸಿದ ಯಾವದೊಂದು ವಸ್ತುವನ್ನು ಸೇವಿಸುವದಿಲ್ಲ. ಅವನು ವಿಚಾರ ಪೂರ್ವಕ ಆರೋಗ್ಯಕ್ಕೆ ಹಿತವಾದ ಆಹಾರವನ್ನೇ ತೆಗೆದುಕೊಳ್ಳುತ್ತಾನೆ. ಅವನಲ್ಲಿ ಹಿತಾಹಿತಗಳ ಕಲ್ಪನೆ ಇರುವಂತೆ ಪಶುಪಕ್ಷಿಗಳಲ್ಲಿರುವದಿಲ್ಲ. ಅವುಗಳಲ್ಲಿ ಹಸಿವುಂಟಾದಾಗ ಆಹಾರ ದೊರೆತರೆ ಅಥವಾ ದೊರೆಯದಿದ್ದರೆ ಸುಖ ಇಲ್ಲವೆ ವೇದನೆಗಳು ಮಾತ್ರ ಉಂಟಾಗುವವು. ಮನುಷ್ಯನ ಆಶೆಯಲ್ಲಿ ಹಿತಾಹಿತಗಳ ಕಲ್ಪನೆ ಇರುವದರಿಂದ ಹಸಿವುಂಟಾದಾಗ (*appetite*) ಅವನು ಧಾರ್ಮಿಕ ನಿಷ್ಠೆಯ ಅನುಷ್ಠಾನಕ್ಕಾಗಿ ಅಥವಾ ಆರೋಗ್ಯಕಾಯ್ದುಕೊಳ್ಳುವ ದಕ್ಕಾಗಿ ಉಪವಾಸಮಾಡಿ ಹಸಿವನ್ನು ನಿಗ್ರಹಮಾಡಬಲ್ಲನು. ಆದ್ದರಿಂದ ಮನು ಷ್ಯನಲ್ಲಿಯ ಆಶೆಯು (*desire*) ಪಶುವಿನ ಹಸಿವೆಯಂತಿರದೆ ಆತನ ಧ್ಯೇಯಕ್ಕೆ ಒಳಪಟ್ಟ ಒಂದು ಅಂಗವಾಗಿದೆ. ಆಶೆಯು ಆತನ ಸದ್ಭಾವದ (*Character*) ಅಜ್ಞೆಗೆ ಅಧೀನವಾಗಿವೆ.

ಧೇಯವನ್ನು ಪ್ರಾಪ್ತಿ ಮಾಡಿಕೊಳ್ಳುವ ಉದ್ದೇಶದಲ್ಲಿ ಭಾವನೆ ಮತ್ತು ಜ್ಞಾನಗಳೆರಡೂ (*Sensation and reason*) ಅಡಕವಾಗಿದೆ. ಇಂದ್ರಿಯ ಸುಖವಾದಿಯು ಕೇವಲ ಭಾವನೆಯನ್ನೇ ಪ್ರಧಾನವನ್ನಾಗಿ ತಿಳಿಯುತ್ತಾನೆ. ಅದರಂತೆ ಬೌದ್ಧಿಕ ಸುಖವಾದಿಯು ಭಾವನೆಯನ್ನು ತಿರಸ್ಕರಿಸಿ ಕೇವಲ ಬುದ್ಧಿಯೊಂದನ್ನೇ ಆಧಾರವಾಗಿಟ್ಟು ಕೊಳ್ಳುತ್ತಾನೆ. ಇವನು ಜನರು ಇಂದ್ರಿಯ ಸುಖಪ್ರಾಪ್ತಿಗಾಗಿ ವರ್ತಿಸದೆ ಸುಖ ಕೊಡುವ ವಸ್ತುಗಳನ್ನು ಹೊಂದಲು ಇಚ್ಛಿಸುತ್ತಾರೆಂದು ಹೇಳುತ್ತಾನೆ. "ಕಾರ್ಯ ಮಾಡುವದರಲ್ಲಿ ಸುಖ" ಮತ್ತು ಸುಖದ ಸಲುವಾಗಿ ಕಾರ್ಯ ಮಾಡುವದು" ಇವುಗಳಲ್ಲಿ ಭೇದವುಂಟು. ಕೇವಲ ಸುಖಪ್ರಾಪ್ತಿಗಾಗಿ ಕಾರ್ಯ ಪ್ರಾರಂಭಿಸಿದರೆ ಆ ಸುಖದ ಸವಿಯು ಲಭಿಸದು. ಅನಾಸಕ್ತಿಯಿಂದ ಕಾರ್ಯಮಾಡಿದ ನಂತರ ಆಕಸ್ಮಿಕವಾಗಿ ಮತ್ತು ಸಹಜವಾಗಿ ಲಭಿಸಿದ ಸುಖವು ನಿಜವಾದ ಸುಖವಾಗಿ ಪರಿಣಮಿಸುವದು. ವಿಜ್ಞಾನಿಗಳು ಮೊದಲು ಸುಖಸಂಪಾದಿಸಬೇಕೆಂದು ಶೋಧಗಳನ್ನು ಮಾಡಲು ಪ್ರಯತ್ನದಲ್ಲಿ ವಿಡಿಸನ್ನನೂ ಗ್ರಾಮ್ಯವುಫೋನ್ ಮೊದಲಾದ ಯಂತ್ರಗಳನ್ನು ರಚಿಸುವ ಮೊದಲು ಅಪಾರ ಕಷ್ಟ ಮತ್ತು ಮಾನಸಿಕ ಶ್ರಮ ಸಹಿಸಬೇಕಾಯಿತು. ಆ ಪ್ರಯೋಗದ ಪ್ರಯತ್ನದಲ್ಲಿಯೇ ಸುಖವುಂಟೆಂದು ತಿಳಿದನು. ಇದರಂತೆ ಉಳಿದ ಕಲೆಗಳಾದ ಚಿತ್ರ, ಶಿಲ್ಪ, ಸಂಗೀತ, ಯಂತ್ರರಚನೆಗಳನ್ನು ಪ್ರಾವೀಣ್ಯ ಹೊಂದುವ ಮೊದಲು ಅಪಾರ ಶ್ರಮವಿದ್ದರೂ ಕಲಾವಿದರು ಆ ಶ್ರಮವನ್ನೇ ಸುಖವೆಂದು ಭಾವಿಸುತ್ತಾರೆ. ಸುಖವನ್ನು ಗುರಿಯಾಗಿಟ್ಟುಕೊಂಡು ಅದನ್ನು ಹುಡುಕುತ್ತ ಹೋದರೆ ಅದು ಬಿಸಿಲ್ಗುದುರೆಯಂತೆ ಮಾಯವಾಗುವದು. ಯಾವನೊಬ್ಬನು ಒಂದು ಉತ್ತಮ ಕೃತಿಯನ್ನು ಮಾಡಿದಾಗ ಸುಖವು ತಾನಾಗಿಯೇ ಲಭಿಸುವದು.

ನಾವು ಸ್ವೇಚ್ಛೆಯಿಂದ ಆಯ್ದುಕೊಂಡ ಪ್ರತಿಯೊಂದು ಕೃತಿಯಲ್ಲಿ ಸುಖವುಂಟು. ಹೀಗೆ ಸುಖದ ಭಾವ ವಿಲ್ಲದಿದ್ದರೆ ನಮ್ಮ ಆಯ್ಕೆಯೇ ಅಸಂಭವ ವಾಗ್ಗುವದು. ಆದುದರಿಂದ ಸುಖವು ನಮ್ಮ ಆಯ್ಕೆಯಲ್ಲಿಯೇ ಒಂದು ಅಂಶವಾಗಿವೆಯೆಂದು ನಾವು ಒಪ್ಪ ಬೇಕಾಗುವದು. ಮತ್ತೊಂದು ಪಂಥವು ಭಕ್ತಿ, ಜ್ಞಾನ, ಕ್ರಿಯೆ ಈ ಮೂರು ಘಟಕಗಳ ಆಧಾರದ ಮೇಲೆ ನೈತಿಕ ಕಟ್ಟಡವನ್ನು ಕಟ್ಟಿದೆ. ಈ ಪಂಥದಲ್ಲಿ ಚೈತನ್ಯ, ಕಬೀರ, ತುಳಸೀದಾಸ, ರಾಮದಾಸ, ಪುರಂದರ ದಾಸ, ಜ್ಞಾನೇಶ್ವರ, ಬಸವೇಶ್ವರ, ಕ್ರೈಸ್ತ ಮೊದಲಾದ ಸಾಧುಗಳು ಸಮಾ

ವೇಶವಾಗುತ್ತಾರೆ. ಇವರನ್ನು ಪರಮಾತ್ಮ ಭಾವಿಕವಾದಿಗಳೆಂದು ಕರೆಯ ಬಹುದು. ಯಾಕಂದರೆ ನೀತಿಯ ವರ್ತನೆಯು ಪರಮಾತ್ಮನನ್ನು ಒಲಿಸುವ ಸಾಧನವೆಂದು ಇವರ ನಂಬುಗೆ. ಬಸವೇಶ್ವರನ ವಚನದಲ್ಲಿ ಈ ಅಭಿಪ್ರಾಯ ವನ್ನು ಕಾಣಬಹುದು. ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಇದಿರುಹಳಿಯಲುಬೇಡ, ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ" ಈ ವಚನದಲ್ಲಿ ಅನೀತಿಯ ಮುಖ್ಯಾಂಶಗಳಾದ ಕಳವು ಹಿಂಸೆ, ಅಸತ್ಯ. ನಿಂದೆಗಳು ಸ್ಪಷ್ಟವಾಗಿ ನಿಷೇಧಿಸಲ್ಪಟ್ಟಿವೆ. ಈ ಪ್ರಕಾರ ಕ್ರಿಯಾಮಾರ್ಗ ದರ್ಶಿತವಾಗುವದಲ್ಲದೆ ಈ ಪಂಥದ ಎಲ್ಲ ಸಾಧುಗಳು ಜ್ಞಾನ ಮತ್ತು ಭಕ್ತಿ ಗಳಿಗೆ ಪ್ರಾಧಾನ್ಯಕೊಟ್ಟಿದ್ದಾರೆ. ಭಗವದ್ಗೀತೆಯ ಬೋಧೆಯಾದರೂ ಇದೇ ಪಂಥಕ್ಕೆ ಅನುಸಾರವಾದದ್ದು. ಇದರಲ್ಲಿ ಜ್ಞಾನ, ಭಕ್ತಿ, ಕ್ರಿಯೆಗಳ ಸದನ್ವಯವು ವ್ಯಕ್ತವಾಗಿದೆ.

## ೩. ಮನಸ್ಸಿನ ವೃತ್ತಿಗಳು.

ಪಶುಪಕ್ಷಿಗಳಲ್ಲಿ ಆಹಾರದ ಅರಿವು ಉಂಟಾದಾಗ ತಾವು ತಿನ್ನುವ ಪದಾರ್ಥಗಳನ್ನು ಹುಡುಕುವವು. ಆದರೆ ಧ್ಯೇಯದ ಕಲ್ಪನೆಯು ಅವುಗಳ ಅರಿವಿನಲ್ಲಿ ಅಡಕವಾಗಿರುವದಿಲ್ಲ. ಆದರೆ ಈ ಪ್ರಾಣಿಗಳಲ್ಲಿಯ ಹಸಿವಿನ ಭಾವನೆ ಮನುಷ್ಯನಲ್ಲಿ ಆಶೆಯ ರೂಪಾಂತರ ಹೊಂದಿರುವದು. ಯಾಕೆಂದರೆ ಪಶು ಪಕ್ಷಿಗಳಂತೆ ಮನುಷ್ಯನು ಕೇವಲ ಹಸಿವಿನ ಸಲುವಾಗಿ ಸಮಯಕ್ಕೆ ಲಭಿ ಸಿದ ಯಾವದೊಂದು ವಸ್ತುವನ್ನು ಸೇವಿಸುವದಿಲ್ಲ. ಅವನು ವಿಚಾರ ಪೂರ್ವಕ ಆರೋಗ್ಯಕ್ಕೆ ಹಿತವಾದ ಆಹಾರವನ್ನೇ ತೆಗೆದುಕೊಳ್ಳುತ್ತಾನೆ. ಅವನಲ್ಲಿ ಹಿತಾಹಿತಗಳ ಕಲ್ಪನೆ ಇರುವಂತೆ ಪಶುಪಕ್ಷಿಗಳಲ್ಲಿರುವದಿಲ್ಲ. ಅವುಗಳಲ್ಲಿ ಹಸಿವುಂಟಾದಾಗ ಆಹಾರ ದೊರೆತರೆ ಅಥವಾ ದೊರೆಯದಿದ್ದರೆ ಸುಖ ಇಲ್ಲವೆ ವೇದನೆಗಳು ಮಾತ್ರ ಉಂಟಾಗುವವು. ಮನುಷ್ಯನ ಆಶೆಯಲ್ಲಿ ಹಿತಾಹಿತಗಳ ಕಲ್ಪನೆ ಇರುವದರಿಂದ ಹಸಿವುಂಟಾದಾಗ (*appetite*) ಅವನು ಧಾರ್ಮಿಕ ನಿಷ್ಠೆಯ ಅನುಷ್ಠಾನಕ್ಕಾಗಿ ಅಥವಾ ಆರೋಗ್ಯಕಾಯ್ದುಕೊಳ್ಳುವ ದಕ್ಕಾಗಿ ಉಪವಾಸಮಾಡಿ ಹಸಿವನ್ನು ನಿಗ್ರಹಮಾಡಬಲ್ಲನು. ಆದ್ದರಿಂದ ಮನು ಷ್ಯನಲ್ಲಿಯ ಆಶೆಯು (*desire*) ಪಶುವಿನ ಹಸಿವೆಯಂತಿರದೆ ಆತನ ಧ್ಯೇಯಕ್ಕೆ ಒಳಪಟ್ಟ ಒಂದು ಅಂಗವಾಗಿದೆ. ಆಶೆಯು ಆತನ ಸದ್ಭಾವದ (*Character*) ಆಜ್ಞೆಗೆ ಅಧೀನವಾಗಿವೆ.

ಮನುಷ್ಯನಲ್ಲಿಯ ಬೇರೆ ಬೇರೆ ಆಶೆಗಳು ಪರಸ್ಪರ ವಿರೋಧವುಳ್ಳವು ಗಳಾಗಿರಬಹುದು. ಒಬ್ಬ ರಾಜಕಾರಣಿಯು ಸ್ವಂತ ದ್ವೇಷ ಮೂಲಕ ಮತ್ತೊಂದು ದೇಶದ ಮೇಲೆ ಯುದ್ಧವನ್ನು ಹೂಡಬಹುದು. ಆದರೆ ಅವನು ವಿಚಾರವಂತನಿದ್ದರೆ ಅದರಿಂದ ತನ್ನ ದೇಶಕ್ಕೆ ಹಾಗು ತನ್ನ ಜನಾಂಗಕ್ಕೆ ಉಂಟಾಗುವ ಕಷ್ಟ ನಷ್ಟಗಳನ್ನು ಪರಿಗಣಿಸಿದಲ್ಲಿ ಕರ್ತವ್ಯ ನಿಷ್ಠೆಯಿಂದ ಶಾಂತಿ ಸಂಧಾನ ನಡೆಸಬಹುದು. ಆದ್ದರಿಂದ ಯಾವ ಆಶೆಯ ಮೇಲೆ ಸುಜ್ಞಾನದ ಮತ್ತು ಸದ್ಭಾವದ ಪ್ರಭಾವವುಂಟಾಗುವದೋ ಆ ಆಶೆಯು ಹಿತಕರವಾದ ಪರಿಣಾಮಕ್ಕೆ ಕಾರಣವಾಗುವದು. ಇಚ್ಛೆಯು (*wish*) ಆಶೆ ಗಿಂತ ಬಲವಾದದ್ದು. ಒಬ್ಬನು ತನ್ನ ವೈರಿಯನ್ನು ಕೊಲೆಮಾಡಲು ಆಶೆ ಮಾಡಬಹುದು ಆದರೆ ಪಾಪ ಕಲ್ಪನೆಯ ಭಯದಿಂದ ಕೊಲೆಯನ್ನು ನಿಲ್ಲಿಸ ಬಹುದು. ಆದರೆ ಪಾಪದ ಕಲ್ಪನೆ ಇದ್ದಾಗ್ಯೂ ಒಬ್ಬನು ತನ್ನ ವೈರಿಯನ್ನು ಕೊಲ್ಲುವ ಹವಣದಲ್ಲಿರಬಹುದು. ಈ ಹವಣವು ಇಚ್ಛೆಯೆನಿಸುವದು. ಈ ಇಚ್ಛೆಯು ಸಾಧನಗಳಿಲ್ಲದ ಮೂಲಕ ಕಾರ್ಯಗತವಾಗದೆ ಉಳಿಯಬಹುದು ಮನುಷ್ಯನು ಚಿತ್ತದಿಂದ ಕೃತಿಯನ್ನು ಸಾಧಿಸಿದಾಗ ಮಾತ್ರ ಕಾರ್ಯವು ಜರುಗುವದು. ಚಿತ್ತವು ಒಂದು ಕೃತಿಯ ಕಡೆಗೆ ದೃಷ್ಟಿಯನ್ನಿಟ್ಟಾಗ ಅದು ಉದ್ದೇಶವೆಂದು ಕರೆಯಲ್ಪಡುತ್ತದೆ. ಮನುಷ್ಯನಲ್ಲಿ ಕರ್ತವ್ಯಭಾವವು ಸ್ವಾಭಾ ವಿಕವಾಗಿ ಮತ್ತು ನಿರಂತರವಾಗಿ ನೆಲೆಸಿರುತ್ತದೆ. ಕೃಪಣನಲ್ಲಿ ಹಣದ ಪ್ರೇಮವು ನೆಲೆಸಿರುವಂತೆ ಮೋಸಗಾರನ್ನು ಮೋಸದ ವಿಚಾರ ನಿರಂತರ ವಾಗಿ ನೆಲೆಸಿರುವದು. ವರ್ತನೆಯು ಹೀಗೆ ಅಂತರಂಗ ಭಾವವು ಬಹಿರಂಗ ದಲ್ಲಿ ವ್ಯಕ್ತವಾದುದಾಗಿದೆ.

ಉದ್ದೇಶ ಮತ್ತು ಸಂಕಲ್ಪ (*Motive and intention*) ಉದ್ದೇ ಶವು ಮಾನಸಿಕ ಚಟುವಟಿಕೆಗೆ ಅನ್ವಯಿಸುತ್ತದೆ. ಸಂಕಲ್ಪದಲ್ಲಿ ಮಾನಸಿಕ ಚಟುವಟಿಕೆಯು ಧ್ಯೇಯದ ಕಡೆಗೆ ಒಲದಿರುತ್ತದೆ. ನಾವು ಒಂದು ಪಟ್ಟ ಣಕ್ಕೆ ಹೋಗಬೇಕೆಂದು ಸಂಕಲ್ಪಮಾಡಿದಾಗ ನಮ್ಮ ಉದ್ದೇಶಗಳು ಅನೇಕ ವಿರಬಹುದು. ಒಬ್ಬ ಸ್ನೇಹಿತನಭೆಟ್ಟಿಗಾಗಿ ಒಬ್ಬ ವೈದ್ಯನ ಅಭಿಪ್ರಾಯಪಡೆಯು ವದಕ್ಕಾಗಿ ಅಥವಾ ಕಾಯಿದೆಸಲಹೆ ತೆಗೆದುಕೊಳ್ಳಲು ಇಲ್ಲವೆ ವಾಣಿಜ್ಯದ ಸ್ಥಿತಿ ಗತಿಗಳನ್ನು ಅರಿತು ಕೊಳ್ಳುವದಕ್ಕಾಗಿ ಅವನ ಬೇರೆ ಬೇರೆ ಉದ್ದೇಶಗಳಿರ ಬಹುದು. ಸಂಕಲ್ಪದಲ್ಲಿ ಸದ್ಯದಹಾಸು ಭವಿಷ್ಯದ ಸಂಕಲ್ಪಗಳೆಂಬ ಭೇದ ಕಂಡು

ಬರುತ್ತದೆ. ಒಬ್ಬ ದುಷ್ಟನು ನೀರಿನಲ್ಲಿ ಮುಳುಗುತ್ತಿರುವಾಗ ಇನ್ನೊಬ್ಬನು ಅವನ ಜೀವ ಉಳಿಸುವ ಉದ್ದೇಶದಿಂದ ಅವನನ್ನು ಪಾರು ಮಾಡಬಹುದು. ಮತ್ತೊಬ್ಬನು ಅವನನ್ನು ಗಲ್ಲಿಗೇರಿಸುವ ಉದ್ದೇಶದಿಂದ ಅವನನ್ನು ನೀರಿನಿಂದ ಪಾರು ಮಾಡಬಹುದು. ಸಂಕಲ್ಪದಲ್ಲಿ ಮತ್ತೆ ಬಹಿರಂಗ ಮತ್ತು ಅಂತರಂಗಗಳೆಂಬ ಭೇದಗಳುಂಟು. ಒಂದು ಪ್ರಾಣಿಯು ಬೆಂಕಿಯಲ್ಲಿ ಬಿದ್ದದ್ದನ್ನು ದೋಡಿ ಅದನ್ನು ಕಡೆಗೆ ತೆಗೆಯುತ್ತಾನೆ. ಇಲ್ಲಿ ಆತನ ಬಹಿರಂಗದ ಸಂಕಲ್ಪವು ಪ್ರಾಣಿಯನ್ನು ರಕ್ಷಿಸುವದಾಗಿದೆ. ಆದರೆ ಆತನ ಅಂತರಂಗ ಸಂಕಲ್ಪವು ಆ ಪ್ರಾಣಿಯನ್ನು ಬೆಂಕಿಯಲ್ಲಿರುವದನ್ನು ನೋಡಿ ತನಗಾದ ಮನಸ್ಸಿನ ಕಳವಳವನ್ನು ದೂರ ಮಾಡುವದಾಗಿದೆ.

ಮೂರನೆಯ ಭೇದವು ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ಸಂಕಲ್ಪಗಳಾಗಿವೆ. ರಾಜನ ವಿರೋಧಿಯು ರಾಜನು ಕುಳಿತು ಪ್ರಯಾಣಮಾಡುತ್ತಿರುವ ರೈಲಿಗೆ ಮದ್ದುಗುಂಡುಗಳನ್ನಿಟ್ಟು ನಾಶ ಮಾಡುತ್ತಾನೆ. ಅವನ ಪ್ರತ್ಯಕ್ಷ ಸಂಕಲ್ಪವು ರಾಜನನ್ನು ನಾಶಮಾಡುವದಾಗಿದೆ. ಆದರೆ ಅಪ್ರತ್ಯಕ್ಷವಾಗಿ ತಾನು ಅದೇ ಬಂಡಿಯಲ್ಲಿ ಕುಳಿತು ಪ್ರಯಾಣ ಮಾಡುವ ಉಳಿದ ಜನರನ್ನು ಸಹ ನಾಶಮಾಡುವೆನೆಂದು ಅವನಿಗೆ ಅರಿಕೆಯುಂಟು. ಸಂಕಲ್ಪದಲ್ಲಿ ಅರಿವುಸಹಿತವಾದ ಮತ್ತು ಅರಿವು ರಹಿತವಾದ ಭೇದವು ಕಂಡು ಬರುತ್ತದೆ. ಒಬ್ಬನು ಕೇವಲ ಸಮಾಜಹಿತ ಸಾಧಿಸುವ ಅರಿವಿನಿಂದ ದುಡಿಯುತ್ತಿರುವಾಗ ಅಕಸ್ಮಿಕವಾಗಿ ಕೀರ್ತಿಯನ್ನು ಪಡೆಯುತ್ತಾನೆ. ಒಬ್ಬನು ಕೇವಲ ಸಮಾಜಹಿತಸಾಧಿಸುವ ಅರಿವಿನಿಂದ ದುಡಿಯುತ್ತಿರುವಾಗ ಅಕಸ್ಮಿಕವಾಗಿ ಕೀರ್ತಿಯನ್ನು ಪಡೆಯುತ್ತಾನೆ. ಒಬ್ಬನು ಹುಲಿಯನ್ನುಗುಂಡಿಕ್ಕಿ ಕೊಲ್ಲುವಾಗ ಒಂದು ಕೂಸನ್ನು ಸಹ ಉದ್ದೇಶವಿಲ್ಲದೆ ಕೊಲ್ಲಬಹುದು. ಈ ಕೃತಿಗಳಲ್ಲಿ ಒಂದರಲ್ಲಿ ಅರಿವು ಮತ್ತೊಂದರಲ್ಲಿ ಅರಿವಿನ ಅಭಾವವು ಕಂಡು ಬರುತ್ತದೆ.

ಮನುಷ್ಯನು ಮನಸ್ಸಿನ ಉದ್ರೇಕ ಅಥವಾ ಕೋಪ, ಇಲ್ಲವೆ ಮದ್ಯಪಾನದಿಂದ ಮದೋನ್ಮತ್ತನಾದಾಗ ಮಾಡಿದ ಕೃತಿಯ ಮೇಲೆ ನೈತಿಕ ನಿರ್ಣಯವನ್ನು ಕೊಡಲು ಬರಲಾರದು. ಯಾಕಂದರೆ ಪ್ರತಿಯೊಂದು ನೈತಿಕ ಭಾವನೆಯಲ್ಲಿ ಮತ್ತು ಕೃತಿಯಲ್ಲಿ ವಿಚಾರಯುಕ್ತ ಉದ್ದೇಶವಿರಬೇಕು. ಉದ್ರೇಕದ ಭಾವನೆಗಳಲ್ಲಿ ವಿಚಾರಕ್ಕೆ ಅವಕಾಶವಿರುವದಿಲ್ಲ.

ಮಾನಸಿಕ ಕ್ಷೇತ್ರದಲ್ಲಿ ಭಾವನೆ, ಆಶೆ, ಹಸಿವು, ಕೋಪ, ಮೋಹ, ಲೋಭ ಮದ, ಮುಂತಾದ ಪ್ರತಿಕೂಲವಾದ ಅಂಶಗಳಿರುವದರಿಂದ ಅವುಗಳನ್ನು ನಿಯಂತ್ರಣಗೊಳಿಸಿ ಯೋಗ್ಯ ಮಾರ್ಗದಲ್ಲಿಡಲು ಬುದ್ಧಿಯ ಸಹಾಯ ಬೇಕು. ಆದುದರಿಂದ ಬುದ್ಧಿಯು ಕ್ರಿಯಾಸಾಧನೆಗೆ ಯೋಗ್ಯವಾದ ಉದ್ದೇಶಗಳು ಉದ್ಭವಿಸಬೇಕಾದರೆ ಜ್ಞಾನವನ ಸದ್ಭಾವ ಮತ್ತು ಸದ್ವರ್ತನೆಗಳು ಪರಿಪೂರ್ಣವಾದ ಆತ್ಮದ ಆಧಾರವನ್ನು ಅವಲಂಬಿಸಿರ ಬೇಕು.



# " ಭಾವ ಭಕ್ತಿಯ ಬೆಳಕು "

(ಲೇಖಕರು–ನಾ. ಮ. ಸಿದ್ಧರಾಮಯ್ಯ ಐ ಎಸ್‌ಸಿ. (ಬೈ-ಪಿ.ಸಿ.)
ವೀರಶೈವ ಕಾಲೇಜು ಬಳ್ಳಾರಿ.



ಆನು ಭಕ್ತನಲ್ಲ, ಆನು ಯುಕ್ತನಲ್ಲ. ನೀವು ಮಾಡಿದ
ಸೂತ್ರ ಬೊಂಬೆನಾನಯ್ಯ. ಎನಗೆ ಬೇರೆ ಸ್ವತಂತ್ರ್ಯಉಂಟೇ ?
ನಿವೆನ್ನ ಮಾನಾಭಿ ಮಾನಕ್ಕೆ ಒಡೆಯರಾದ ಬಳಿಕ ಎನ್ನ
ತಪ್ಪು ಲೆಕ್ಕಿಸದೆ ಬಿಜಯಂಗೈಯುವುದಯ್ಯಾ ಕೂಡಲಸಂಗಮದೇವಾ.

"ಜಗಜ್ಯೋತಿ ಬಸವೇಶ್ವರ"

ಮಾನವನಿಗೆ ' ನಾನು ' ನನ್ನದು, ನನ್ನಿಂದ ನನಗಾಗಿ ಎಂಬ ಮನೋಭಾವನೆಯ ಹೆಮ್ಮೆಯಿಂದ ತಾನೇ ಎಲ್ಲರಿಗಿಂತ ಮೆರೆದು ಬಾಳಬೇಕೆಂಬ ಹಂಬಲ. ಇದು ಮಾನವ ಮಾತ್ರದವರೆಲ್ಲರಿಗೂ ಸಹಜಸ್ವಭಾವ. ಮಾನವನಿಗೆ ಹೆಮ್ಮೆಯೇ ಕೇಡಿನಹೆದ್ದಾರಿ. ನಾನು ನನ್ನದು ನನಗಾಗಿ ಎಂಬ ಭಾವನೆಗಳು ಎಂದು ಒಡಮೂಡುತ್ತವೆಯೋ ಅಂದೇ ಮಾನವನ ಪತನ. *Too much vanity leads to one's downfall* ಈ ಅಹಂಕಾರ ಎಂದು ನಶಿಸಿ ಹೋಗುತ್ತದೆಯೋ ಅಂದೇ ಮಾನವನ ಆತ್ಮೋದ್ಧಾರ. ಮೇಲಿನ ಅಣ್ಣನವರ ಸೂಕ್ತವಚನ ಎಲ್ಲಾ ಮಾನವಕೋಟಿಗೆ ತಳಹದಿಯಾಗಿದೆ ಭಕ್ತಿಭಾಂಡಾರಿ ಬಸವಣ್ಣನವನಾದರೂ ನಿಗರ್ವಿ. ಭಕ್ತಿಯಲ್ಲಿ ಪ್ರಾಧಾನ್ಯವಾಗಿ ಆತ್ಮಾರ್ಪಣ 'ಯಾ' ಆತ್ಮನಿವೇದನ ( ಈಶಸೇವೆ ) ಹೆಚ್ಚಿನದು. ಭಕ್ತನು ಪರಮಾತ್ಮನೊಡನೆ ಲೀನವಾಗಿ ಏಕರೂಪನಾದಾಗ ಅದನ ಭಕ್ತಿಯು ಸಮರಸ ಭಕ್ತಿಎನಿಸುವದು. ಅಹಂಕಾರ ಮಮಕಾರ ಮನುಷ್ಯನಿಂದ ದೂರವಾಗಬೇಕು. ನಾನು ನನ್ನ ಹೆಂಡಿರು, ಮಕ್ಕಳು ಕ್ಷೇಮವಾಗಿದ್ದರೆ ದೇಶವೇ ಚನ್ನಾಗಿ ಇದ್ದಹಾಗೆ ಎಂಬ ಮೌಢ್ಯದ ನೀಚ ಭಾವನೆ ನಮ್ಮಿಂದ ತೊಲಗಬೇಕು. ಹೆಂಡಿರಮಕ್ಕಳ ಹಿತಬಯಸುವಂತೆ ಸಮಾಜದ ಹಿತವನ್ನು ಬಯಸಬೇಕು. ಇಂದು ನಮ್ಮ ದೇಶದಲ್ಲಿ ಕಪಟ

ಕುಹಕ ಕೀಟಕಾದಿಗಳು ಹೆಚ್ಚಾಗಿ ಝೇಂಕರಿಸುತ್ತವೆ. ಮನುಷ್ಯಜನಾಂಗ ನಾ ಮುಂದೆ ನೀ ಹಿಂದೆ ನಾ ಹೆಚ್ಚು ನೀ ಕಡಿಮೆ ಎಂಬ ಹೋರಾಟ ನಡದೇ ನಡದೇ ಇದೆ. "ನುಡಿದಂತೆ ನಡೆಯಬೇಕು. ಬರಿಯ ಮಾತಿನ ಮಾಲಿಕೆಯನ್ನು ಹೆಣೆದರೆ ಅದು ಭಕ್ತಿಎನಿಸಲಾರದು. ತನು ಮನ ಧನಗಳನ್ನು ಭಗವತ್ಕಾರ್ಯದಲ್ಲಿ ಸವೆಸಿದಾಗ ಅದುವೇ ನಿಜಭಕ್ತಿ ಎನಿಸುವದು. ಪಕ್ಷಿಯು ಗಗನಕ್ಕೆ ಹಾರ ಬೇಕಾದರೆ ಎರಡು ರೆಕ್ಕೆಗಳು ಬೇಕಾಗುವಂತೆ ಸಾಧಕನಾದವನಿಗೆ ಜ್ಞಾನ-ಕ್ರಿಯೆಗಳೆರಡೂ ಅವಶ್ಯವಾಗಿ ಬೇಕೇ ಬೇಕು. ಜ್ಞಾನವೆಂದರೆ ತಿಳಿಯುವಿಕೆ. ಕ್ರಿಯೆ ಎಂದರೆ ತಿಳಿದಂತೆ ನಡೆದು ಕಾರ್ಯಾಚರಣೆಯಲ್ಲಿ ತರುವುದು. ಸಾಧನವೆಂಬ ರಥಕ್ಕೆ ಹೂಡಿದ ಎರಡು ಜೋಡು ಅಶ್ವಗಳಂತೆ ಜ್ಞಾನ-ಕ್ರಿಯೆಗಳೆರಡೂ ಮುಂದೆ ಸಾಗುವದು ಅವಶ್ಯವು. ಹೀಗೆ ಮಾಡಿದರೆ ಸುಜ್ಞಾನ. ಮಾಡದಿದ್ದರೆ ಅದು ಅಜ್ಞಾನ. ಮಾಡದಿದ್ದರೆ ಅದು ಅಜ್ಞಾನವೆನಿಸುವದು. ನಿಜ ಭಕ್ತಿ ಇಲ್ಲದೆ ಬರಿಯ ಮೂಗ ಹಿಡಿದು ಜಪತಪಮಾಡಿ ದೇವರನ್ನೊಲಿಸುವೆ ಎನ್ನುವ ಆಳಿ ಮನದವನ ಮಾತು ತಂಗಳ (ಹಳಸಿದ) ಪದಾರ್ಥದಂತೆ ನಿಷ್ಪ್ರಯೋಜನವಾದದ್ದು.

> ಮೊಟ್ಟೆ-ಮೊಟ್ಟೆ ಪುಷ್ಪವ ಪತ್ರಿಯ ತಂದು
> ಒಟ್ಟಿ-ಒಟ್ಟಿ ಲಿಂಗವ ಪೂಜಿಸಿದಡೇನು? ತನು, ಮನ, ಧನಕೊಟ್ಟು
> ತನು ಹಿಂಗ ದನ್ನಕ್ಕರ ? ಹುಸಿ-ಕಳವು ಪರದಾರ ವ್ಯಾಪಾರದಲ್ಲಿ
> ಹರಿದಾಡುವ ಮರುಳ ಬುದ್ಧಿಯ ದುರಾಚಾರಿಗಳಿಗೆ ದೂರವಾಗಿಪ್ಪನು
> ನೋಡಾ, ನಮ್ಮ ಅಖಂಡೇಶ್ವರನು.

ಭಕ್ತಿಯ ವಿಷಯದಲ್ಲಿ ನಂಬುಗೆ (*Confidence*) ಬೇಕು. ನಂಬಿಕೆ ಇಲ್ಲದೆ ಭಕ್ತನು ಕೂಗಿಗೆ ದೇವರು ಓ ಗೊಡನು "ನಂಬಿ ಕರೆದಡೆ 'ಓ' ಎಂಬ ನೇಶಿವನು. ನಂಬದೇ ಕರೆದಡೆ 'ಓ' ಎಂಬನೇನು ಶಿವನು ಗಂಬಲರಿಯರು, ನಚ್ಚಲರಿಯರು. ಢಂಬಿನ ಭಕ್ತರು ನಂಬದೆ, ನಚ್ಚದ ಬರಿದೆ ಕರೆದಡೆ ಶಿವ ಮೌನದಲ್ಲಪ್ಪ ಕೂಡಲಸಂಗನದೇವ ಎಂದು ಭಗವಾನ ಬಸವೇಶ್ವರರು ಹೃದಯಂಗಮವಾಗಿ ಎದೆಬಿಚ್ಚಿ - ಮನಮೆಚ್ಚಿ ನುಡಿದಿದ್ದಾರೆ. ಭಗವಂತನೇ ಸರ್ವಸ್ವ ಎಂಬ ದೃಢ ನಂಬುಗೆ ಭಕ್ತನಲ್ಲಿ ಒಡಮೂಡಿರಬೇಕು. ಎಂಥಹ ಕಠಿಣ ಪ್ರಸಂಗ ಬಂದರೂ ತಾನು ಹಿಡಿದ ಭಕ್ತಿಬಿಡದೆ ಹಿಡಿದು ಬಿಡನೆಂಬ ಛಲದಿಂದ ಮುಂದೆಸಾಗಬೇಕು.

ಕಲ್ಲುಗುಂಡಿನಮೇಲೆ ಮಲ್ಲಿಗೆಯಅರಳಿಕ್ಕೆ
ನಿಲ್ಲದಲೆ ಹಣೆಯಬಡಿವರ್ಗೆ ಮಿದುಳೆಂಬುದಿಲ್ಲ
ಕಾಣಯ್ಯ ಸರ್ವಜ್ಞ

ಪುಷ್ಪೇತ್ಯಾದಿಯಾದ ವಿವಿಧ ಸುಗಂಧ ದ್ರವ್ಯಗಳನ್ನು ಕಲ್ಲಿನ ಮೂರ್ತಿಗೆ ಇಕ್ಕಿ ತಂತಮ್ಮ ಕಷ್ಟಗಳನ್ನು ಹೇಳಿ ಕಣ್ಣೀರು ಸುರಿಸಿ ಹಣೆ ಹಣೆ ಬಡಿದುಕೊಂಡು ಕಷ್ಟ ಪರಿಹರಿಸೆಂದು ಭಗವಂತನನ್ನು ಒತ್ತಾಯಿಸುವವರನ್ನು ಸರ್ವಜ್ಞನು ಕಟುವಾಗಿ ವಿರೋಧಿಸುತ್ತಾನೆ.

ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಿರುವಂತೆ "ಕರ್ಮಣ್ಯೇ ವಾಧಿಕಾರಸ್ತೇ ಮಾಫಲೇಷು ಕದಾಚನ'' ಎಂಬುದನ್ನೇ ಸರ್ವಜ್ಞನು ಸಮರ್ಥಿಸುತ್ತಾನೆ. ಅರ್ಥಾತ್ ಫಲಾಪೇಕ್ಷೆ ಇರಬಾರದು. ಭಕ್ತನು ಕಾಯಕವಮಾಡುವಲ್ಲಿ ನಾನು ಮಾಡುವೆ ಎಂಬ ದುರಹಂಕಾರ ಸಾಧಕನಾಗಿ ಅತ್ಯಂತ ಘಾತುಕವಾದದ್ದು. "ತೇನ ವಿನಾ ತೃಣ ಮಪಿ ನಚಲತಿ" ಎಂಬ ಉಪನಿಷತ್ತಿನ ವಾಕ್ಯದಂತೆ ದೇವರ ಸಂಕಲ್ಪವಿಲ್ಲದೆ ಹುಲ್ಲು ಕಡ್ಡಿಯೂಸಹಾ ಚಲಸದು ಬಸವಣ್ಣನವರು ಬಿಜ್ಜಳನಲ್ಲಿ ಮಂತ್ರಿಯಾಗಿಯೂ ಮತ್ತು ದಂಡನಾಯಕನಾಗಿಯೂ ಇದ್ದರೂ ನಾನುಪರಸೇವೆಯ ಮಾಡುವೆನಯ್ಯ ದಾಸೋಹಕ್ಕೆಂದು ಇವು ನನ್ನ ಹೆಂಡರ ಮಕ್ಕಳಗಾಗಿ ಅಲ್ಲ. ಹಾಗೆಮಾಡಿದ್ದೇ ಆದರೆ ತಲೆದಂಡವಯ್ಯ ಗುರುಲಿಂಗ ಜಂಗಮ ಸೇವೆಗೆ ಸರ್ವಸ್ವವನ್ನು ಅರ್ಪಿಸುವೆನು ಎಂದು ಆಣೆಇಟ್ಟು ಹೇಳಿದ್ದಾನೆ ಅದರಂತೆಯೇ ( *I am the Servent of Society*) ನಾನು ಸಮಾಜ ಸೇವಕ ಎಂಬ ಉಚಕಲ್ಪನೆ ಎಲ್ಲ ಮಾನವ ಜನಾಂಗದಲ್ಲಿ ಮೂಡಬರಬೇಕು. ಭಗವಾನ ಬಸವಣ್ಣನವರು ವಿಶಾಲವಾದ ಅರ್ಥಗರ್ಭಿತವನ್ನಿಟ್ಟು " ಕಾಯಕವೇ ಕೈಲಾಸ " ( *Work is Divini* ) ಎಂದು ಕರೆದಿರುವರು.

ಕಾಯಕವೆಂದರೆ ಉದ್ಯೋಗವೆಂಬ ಅರ್ಥವಾದರೂ ಕಾಯಕಕ್ಕೂ ಉದ್ಯೋಗಕ್ಕೂ ಭೇಧಉಂಟು. ಉದ್ಯೋಗವು ಸ್ವಾರ್ಥಸಾಧಕವು ಕಾಯಕವು ಪ್ರಸಾದ ಸಾಧಕವು. ಸಾಧಾರಣವಾದ ಉದ್ಯೋಗವು ನಾನು ನನ್ನದಾಗಿ ಆರಂಭಿಸಿ ಪೂರ್ತಿಗೊಳಿಸುವನು. ಕಾಯಕವು 'ಕಾಯಕವೆ ಕೈಲಾಸ' ಎಂದರೆ ಲೋಕಾಂತರದಲ್ಲಿದ್ದ ಕೈಲಾಸವೆಂಬುದೊಂದ ಸ್ಥಾನ ವಿಶೇಷವಲ್ಲ. ಮತ್ತೇನಂದರೆ ಜೀವನದ ಆನಂದ ಸ್ಥಾನವು. ಇದಕ್ಕೆ ಕೈಲಾಸ

ವೆನ್ನುವರು. ಕೇಲೀ ಆಸಃ ಕೈಲಾಸಃ ಅಂದರೆ ಸುಖದಸ್ಥಾನ ವೆಂಬರ್ಥ ಈ ಗುರಿಯನ್ನಿಟ್ಟುಕೊಂಡೇ ಸತ್ಯ ಶದ್ಧ ವ್ಯವಹಾರದಿಂದ ತ್ರಿವಿಧ ದಾಸೋಹ (ಗುರು ಲಿಂಗ ಜಂಗಮ) ಸೇವೆಗೋಸ್ಕರ ಸ್ವೀಕರಿಸಿದ ಕಾಯಕವು ಅತ್ಯಂತ ಮಹತ್ವವಾಗಿದೆ. ಇದು ಸಮಾಜದ ಸುವ್ಯವಸ್ಥೆಗೆ ದೇಹ ಮನ ಆತ್ಮ ವಿಕಾಸಕ್ಕೆ ಸುಗಮವಾದ ಸರಳವಾದ ರಾಜಪಥವು. ಇದು ಮನುಷ್ಯ ಮಾತ್ರದವರಾದ ಎಲ್ಲರಿಗೂ ಅವಶ್ಯ ಬೇಕಾದ ಸುಸಂಘಟಿತ ಸ್ವರೂಪವುಳ್ಳ ಈ ತತ್ವನ್ನು ಅವಶ್ಯವಾಗಿ ಆಚರಿಸತಕ್ಕದೆಂದೂ ಶಿವಶರಣರು ಅನ್ವೇಕೆ ಮಹಾತ್ಮ ಗಾಂಧೀಜಿ ಲೋಕ ಮಾನ್ಯತಿಲಕ ಇವರು ಆಚರಿಸಿ ತೋರಿಸಿಹೋದ ಅಭಿಪ್ರಾಯ ಸುಸ್ಪಷ್ಟವಾಗಿದೆ. ಛತ್ರಪತಿಶಿವಾಜಿ ವಿದ್ಯಾಪಾರಂಗತನಾಗದಿದ್ದರೂ ಮರಾಠ ಜನರಲ್ಲಿ ಒಕ್ಕೂಟವೇರ್ಪಡಿಸಿಕೊಂಡು ಪ್ರಬಲವಾದ ಮಹಾರಾಷ್ಟ್ರವನ್ನೇ ಕಟ್ಟಿದನು, ಇದೆಲ್ಲಾ ಯಾವದರಿಂದ? ಒಂದುಭಾವಭಕ್ತಿಯಿಂದ ಯಾವುದೆ ಕಾರ್ಯ ಹಿಡಿದರೆ ಅದನ್ನು ಬಹಳ ನಿಷ್ಠೆಯಿಂದ ದಕ್ಷ ಸಾಧಕನಾಗಿ ಆ ಕಾರ್ಯ ನೆರವೇರಿಸಿಕೊಳ್ಳುತಿದ್ದನು. ಆತನಿಗೆ ಜಗದಾಂಬೆಯಲ್ಲಿ ಅಚಲವಾದ, ಅಪಾರವಾದ ಭಾವ ದೃಢಭಕ್ತಿಇತ್ತು. ಯಾವಾತನು ಭಕ್ತಿಯಿಂದ ದೇವರನ್ನು ಪೂಜಿಸುವನೋ ಆತನನ್ನು ದೇವರು ಎಂದೂ ಕೈಬಿಡನು. ಭಾವಭಕ್ತಿಮಾರ್ಗವು ಸದ್ಭಕ್ತನಿಗೆ ರಾಜಪಥವು.

ಉಚ್ಚ ಪದವಿಗೇರಿದ ಅನೇಕರಲ್ಲಿ ಕಂಡುಬರುವ ಹೆಮ್ಮೆ ದುರಾಶೆ, ತಿರಸ್ಕಾರ ಮೊದಲಾದ ಅವ ಗುಣಗಳಾವುವೂ ಇರಬಾರದು ಮತ್ತು ಅವುಗಳಿಂದ ತಮ್ಮ ಹೃದಯದ ಪವಿತ್ರ್ಯವನ್ನು ಕದಡಿಸಬಾರದು.

ಪ್ರಥಮದಲ್ಲಿ ಹೇಳಿರುವ ಅಣ್ಣನವರ ವಚನ "ಅನುಭಕ್ತನಲ್ಲ ಆನು" ಯುಕ್ತನಲ್ಲ ನೀವು ಮಾಡಿದ ಸೂತ್ರದಬೊಂಬೆ ಎಂದು ಅಣ್ಣನು ನಿರಹಂಕಾರ ದೈನ್ಯಭಾವದಿಂದ ಹೇಳಿದ್ದಾನೆ. ಏಕೆಂದರೆ (God is giver and God is receiver) ಸರ್ವ ಕರ್ತ ದೇವರಾದಾಗ ಮಾನವರೆಲ್ಲರೂ ಆತನು ಮಾಡಿದ ಸೂತ್ರದ ಬೊಂಬೆಗಳು (Everything is created in this world by God.) ಹೀಗಿದ್ದರೂ ಮನುಷ್ಯನು ನನ್ನ ಹೆಣ್ಣು ನನ್ನಭೂಮಿ ನನ್ನಹೊನ್ನು ಎಂದು ಹೆಮ್ಮೆ, ದುರಾಶೆಗಳಿಂದ ಮದಮತ್ತನಾಗಿದ್ದಾನೆ. ಆದರೆ ಶಿವಶರಣರು ಹೀಗಲ್ಲ. ಭಕ್ತಭಾಂಡಾರಿ ಅಣ್ಣನವರು "ಎನಗಿಂತಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದುಹೇಳಿ

ಕಿಂಕರಭಾವ ಸೂಚಿಸಿದ್ದಾರೆ. ಯಾವಾತನು ಭಾವಭಕ್ತಿಯಿಂದ ಕಾರ್ಯ ಕೈಕೊಳ್ಳುವನೋ ಅದೇ ಈಶಸೇವೆ. "An honest man's the noblest Work of God" ಎಂದು ಇಂಗ್ಲೀಷಕವಿ "ಆಲಿವರ್ ಗೋಲ್ಡ್‌ಸ್ಮಿತ್ ಹೇಳಿದ್ದಾನೆ. ಕಂಡ ಕಂಡ ವಿಗ್ರಹಗಳಿಗೆ ದೃಢ ಭಕ್ತಿಇಲ್ಲದಲೇ ಎಷ್ಟುಸುತ್ತು ಹಾಕಿದರೇನು? ಅದೆಲ್ಲಾ ನೀರಲ್ಲಿ ಹುಣಸೇಹಣ್ಣು ತೊಳದ (ಹರಡಿದ)ಹಾಗೆ ನಿಷ್ಪ್ರಯೋಜಕವಾದದ್ದು. ಹಸುಗಳಬಣ್ಣ ಬೇರೆ-ಬೇರೆ ಯಾಗಿದ್ದರೂಹಾಲು ಒಂದೇ. ಹೂವುಗಳ ಜಾತಿ ಭಿನ್ನವಾದರೂ ಪೂಜೆ ಒಂದೇ. ಮತ ಧರ್ಮ ಹಲವಾದರೂ ದೇವರೊಂದೇ ಎನ್ನುವ ಭಾವಭಕ್ತಿಬೇಕು.

ಉಣಬಂದ ಜಂಗಮಗೆ ಉಣಬಡಿಸಲೊಲ್ಲದಲೆ
ಉಣದಿರ್ಪ ಲಿಂಗಕುಣಬಡಿಸ ಕೈಮುಗಿವ
ಬಣಗುಗಳನೋಡು! ಸರ್ವಜ್ಞ

ಇದೇಮಾತನ್ನೇ ನಮ್ಮ ಅಣ್ಣನವರು—

ಕಲ್ಲನಾಗರ ಕಂಡರೆ ಹಾಲನೆರೆ ಎಂಬರು
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ
ಉಂಬ ಜಂಗಮ ಬಂದರೆ ನಡೆಎಂಬರು
ಉಣ್ಣದ ಶಿವಲಿಂಗಕ್ಕೆ ಬೋನವ ಹಿಡಿ ಎಂಬರು.

ಕಲ್ಲನಾಗರ ವಿಗ್ರಹಕ್ಕೆ ಬೇಕಾದಂಥಹ ಮೃಷ್ಟಾನ್ನಗಳಿಂದ ನೈವೇದ್ಯ ಮಾಡುವರು. ಆದರೆ ನಿಜವಾದ ನಾಗರಹಾವು ಕಂಡಲ್ಲಿ ಕೈಯಲ್ಲಿ ದೊಣ್ಣೆ ಹಿಡಿದು ಹೊಡೆದು ಕೊಲುವರು. ಇದೇತರ ಭಕ್ತಿಯಯ್ಯಾ? ಉಣ್ಣದ ಶಿವಲಿಂಗಕ್ಕೆ ಬೋನವಹಿಡಿವರು ಆದರೆ ಉಂಬ ಜಂಗಮ ಮನೆಗ ಬಂದರೆ ನಿರ್ದಾಕ್ಷಿಣ್ಯ ಭಾವದಿಂದ ಕಟುವಾಗಿ ಟೀಕಿಸಿ ನಡೆ ಎಂಬರು. ಮಾತಿನಲ್ಲಿ ಅಷ್ಟು ಕಟುತ್ವ. ಇದು ಕೇವಲ ಸ್ವಾರ್ಥತೆಯಲ್ಲದೆ ಮತ್ತೇನು? ಬೆಣ್ಣೆಇಲ್ಲ ದಿದ್ದರೂ ಬೆಣ್ಣೆಯಂತಹ ಮೃದು ವಚನ ಬೇಡವೇ? ಏಕಂದರೆ ಮಾತು ಮಾನವನಜೀವಾಳ, ಜನಾಂಗದ ಪ್ರಾಣ. "ನಾಲಿಗೆ ಒಳ್ಳೆಯದಿದ್ದರೆ ನಾಡೆಲ್ಲ ಒಳ್ಳೆಯದು" ಎನ್ನುವ ಅನುಭವನುಡಿ ಶತಸತ್ಯವಾಗಿದೆ. ಹಾವನ್ನು ಕೊಲು

ವುದು ಹಿಂಸೆಯಲ್ಲವೇ? ಸಕಲ ಪ್ರಾಣಿಗಳಲ್ಲಿ ದಯವಿರಬೇಕು. ದಯವೇ ಧರ್ಮದ ಮೂಲ ಎಂದು ಅಣ್ಣನವಚನ ಸಾರುವುದು. ಜಡತನದಲ್ಲಿ ಪೂಜ್ಯ ಭಾವನೆ ಇಡುವರು- ಚೇತನದಲ್ಲಿ ದ್ವೇಷಭಾವ ತಾಳುವರು. ಇದಕ್ಕಾಗಿ ಅಣ್ಣನವರು ಬಹುವಾಗಿ ಮರುಗುವರು. ಮಾನವನು ತಾನು ಹುಲಿಯನ್ನು ಕೊಲ್ಲುವದಕ್ಕೆ ಒಂದು ವಿನೋದವೆಂದು ಕರೆಯುತ್ತಾನೆ. ಅದೇ ಹುಲಿಯು ತನ್ನನ್ನು ಕೊಲ್ಲುವದಕ್ಕೆ ಕ್ರೂರ ಕೃತ್ಯವೆಂದು ಕರೆಯುತ್ತಾನಲ್ಲವೇ !! ಇದಾವ ನ್ಯಾಯ ಸಮ್ಮತವು? ನಮ್ಮದೇಶದ ಸ್ವಾತಂತ್ರ್ಯಕ್ಕೆ ತಳಹದಿ ಯಾವುದೆಂದರೆ ಅಹಿಂಸೆ (Non-Viloence) ಈ ತಳಹದಿ ಹಾಕಿಕೊಟ್ಟ ಮಹಾಪುರುಷ ನಾವೆಂದರೆ ನಮ್ಮ ಪೂಜ್ಯ ಬಾಪೂಜಿಯವರಲ್ಲವೆ? ಇಷ್ಟ ಲಿಂಗದಲ್ಲಿರುವ ಭಕ್ತಿನಿಷ್ಠೆಗಳು ಜಂಗಮಸ್ವರೂಪನಲ್ಲಿರಬೇಕು. ಎನಿಸುಕಾಲ ಲಿಂಗಾರ್ಚನೆ ಮಾಡಿದರೇನು? ಅದರಲ್ಲಿ ಹುರುಳಿಲ್ಲ. ಏಕಂದರೆ ಎರೆದರೆ ನೆನೆಯದು ಮರೆತರೆ ಬಾಡದು. ಆದರೆ ಜಂಗಮಕ್ಕೆರೆದರೆ ಸ್ಥಾವರ ನೆನೆಯಿತು. ಎಂದು ಶ್ರೀ ಅಣ್ಣನವರ ಹಿತವಚನ. ಭಕ್ತನಾದವನು ಒಂದನ್ನು ನಂಬಿ ಇನ್ನೊಂದನ್ನು ಉದಾಸೀನ ಮಾಡಬಾರದು. ಭಕ್ತಿ ಭಾಂಡಕ್ಕೆ ಜಂಗಮನೇ ಸುಂಕಿಗನೆಂದು ಮರೆಯಬಾರದು.

---

# ಸರ್ವರ ಹೃದಯದಲ್ಲಿ ನೆಲೆಸಿದ ಬಸವಣ್ಣನು

## ಜ್ಞಾನಿಗೆ ಗೋಚರನು ಅಜ್ಞಾನಿಗೆ ಅಗೋಚರನು

( ಲೇಖಕರು:- ವೇ. ವಿರುಪಾಕ್ಷಯ್ಯ ನಾಗಯ್ಯ ಹಿರೇಮಠ ರಾಮಪೂರ. )



ಸ್ವರ್ಣವಲ್ಲೀಪುರದಲ್ಲಿ ಶಿದ್ಧರಾಮನೆಂಬ ಒಬ್ಬಾನೊಬ್ಬ ಶಿವಯೋಗಿಯು ದೇಹೇಂದ್ರಿಯ ವ್ಯಾಪಾರ ರಹಿತನಾಗಿ ಪರಮ ಭಕ್ತಿಯಿಂದ ಸಾವಿರಾರು ಶಿವಾಲಯುಗಳನ್ನು ಕಟ್ಟಿಸಿ ಸಾಕ್ಷಾತ್ ಮಲ್ಲಿಕಾರ್ಜುನನನ್ನೆ ಅಲ್ಲಿಗೆ ಬರಮಾಡಿ ಅತ್ಯಂತ ಮಹಿಮೆಯಿಂದ ರಂಜಿಸುತ್ತಿದ್ದನು. ಒಂದಾನೊಂದು ದಿವಸ ಶಿವಾನುಭವ ಗೋಷ್ಠಿಯು ಗಣ ಸಭೆಯಲ್ಲಿ ಕುಳಿತಿರುವ ಶಿದ್ಧರಾಮ ಶಿವ ಯೋಗಿಯನ್ನು ನೋಡಿ ಸಕಲ ಮಹೇಶ್ವರರೂ ಕೊಂಡಾಡಿ ನೀನು ಪ್ರತಿ ದಿನದಲ್ಲಿಯೂ ಕೈಲಾಸಕ್ಕೆ ಹೋಗಿ ಪರಶಿವನ ಸಮೀಪದಲ್ಲಿ "ಶಿವಾನುಭವ" ಗೋಷ್ಠಿಯಲ್ಲಿ ಕಾಲಕಳೆದು ಬರುತ್ತಿರುವಿರಷ್ಟೆ; ಆ ಪರಮೇಶ್ವರನ ನಿವಾಸ ಸ್ಥಾನವಾದ ಕೈಲಾಸದಲ್ಲಿಯೂ ಈ ನಮ್ಮ ವೀರಶೈವ ಧರ್ಮವನ್ನು ವ್ಯತ್ಯಾಸ ವಿಲ್ಲದೆ ಘನತೆಗೆ ಒಯ್ದ ಈ ನಮ್ಮ ಬಸವೇಂದ್ರನಿರುದನೆ? ಎಂದು ಕೇಳಿ ದರು. ಸಿದ್ಧರಾಮ ಶಿವಯೋಗಿಯು ಮಹನಿಯರೆ ಇಲ್ಲಿರುವದು ಮಾತ್ರ ನನಗೆ ಗೊತ್ತುಂಟು. ಆದರೆ ಕೈಲಾಸದಲ್ಲಿ ಇದ್ದದ್ದು ಮಾತ್ರ ನನಗೆ ಗೊತ್ತಿಲ್ಲ ಅಲ್ಲಿರುವದನ್ನು ತಿಳಿದುಬಂದು ಹೇಳುತ್ತೇನೆಂದು ತತ್‌ಕ್ಷಣದಲ್ಲಿಯೇ ಸೂರ್ಯ ನಂತೆ ಪ್ರಕಾಶಿಸುತ್ತಿರುವ ದೇಹದ ತೇಜಸ್ಸಿನಿಂದ ಆಕಾಶ ಮಾರ್ಗವಾಗಿ ಹೋಗುತ್ತ ನಡುಮಾರ್ಗದಲ್ಲಿ ದೇವತೆಗಳಿಂದ ಪೂಜಿಸಿಕೊಂಡು ಕೈಲಾಸಕ್ಕೆ ಹೋಗಿ ಪರಶಿವನ ಮುಂಗಡೆ ಬಂದು, ದೀರ್ಘದಂಡ ನಮಸ್ಕಾರವಂ ಮಾಡಿ ಕೈ ಮುಗಿದು ನಿಂತು ಸ್ತುತಿಸಲು ಶಂಕರನು ಬಾರಯ್ಯಾ ಶಿದ್ಧರಾಮಾ! ಎಂದು ಪ್ರೇಮದಿಂದ ಕರೆದು ತನ್ನೆದುರಿನಲ್ಲಿ ಕೂಡ್ರಿಸಿಕೊಂಡು ಭೂಮಿಯಲ್ಲಿ ಭಕ್ತರುಗಳು ಸುಖವಾಗಿದ್ದಾರೆಯೆ? ಎಂದು ಪ್ರೀತಿಯಿಂದ ಕೇಳಲು ಶಿದ ರಾಮನು ಭಯ ಭಕ್ತಿಯಿಂದ ಸ್ವಾಮಿ ತಮ್ಮ ಕೃಪೆಯಿಂದ ಶಿವಭಕ್ತರೆಲ್ಲರೂ ಸುಖವಾಗಿದ್ದಾರೆ. ಆದೇ ಭಕ್ತರು ಶಿವಲೋಕದಲ್ಲಿ ಬಸವೇಶ್ವರನು ಇರುವದನ್ನು ತಿಳಿದುಕೊಂಡು ಬರುವದಕ್ಕಾಗಿ ನನ್ನನ್ನು ಕಳುಹಿಸಿರುವರು. ಎಂದು ಅನ್ನ

ಲಾಗಿ ಪಾರ್ವತೀ ಪತಿಯು ಶಿವಯೋಗಿಯ ಮಾತನ್ನು ಕೇಳಿ ಮುಗುಳ್ನಗೆ ನಕ್ಕು ಮಗು ಶಿದ್ಧರಾಮಾ ಆ ಸರ್ವವ್ಯಾಪಿಯಾದ ಬಸವೇಶ್ವರನು ಇಲ್ಲದೆ ಇರತಕ್ಕ ಸ್ಥಳವಾವದು? ತತ್ರಾಪಿ ವಿಭೂತಿ, ರುದ್ರಾಕ್ಷಾದಿ, ಅಷ್ಟಾವರಣದಲ್ಲಿಯೂ ಭಕ್ತರಲ್ಲಿಯೂ ಪ್ರಮಥ ಗಣಂಗಳಲ್ಲಿಯೂ ಮೇಲಾಗಿ ನನ್ನಲ್ಲಿಯೂ ವಿಶೇಷವಾಗಿರುವನು. ಇವನ ಮಹಿಮೆಯನ್ನು ಜ್ಞಾನಿಯಾದ ನೀನು ಕಾಣೆಯಾ? ಎಂದು ಹೇಳಿ ಸಂತೋಷದಿಂದ ಶಿವಯೋಗಿಯನ್ನು ಆನಂದ ಪಡಿಸುವದಕ್ಕಾಗಿ ಬಸವನದಲ್ಲಿ ಪೂರ್ಣ ನಂಬಿಗೆ ಹುಟ್ಟುವದಕ್ಕಾಗಿಯೂ ಆತನ ಮನಸ್ಸು ಬಸವನಲ್ಲಿ ನೆಲಿಸುವದಕ್ಕಾಗಿಯೂ ಏಕನಿಷ್ಠೆ ಯುಳ್ಳವನನ್ನಾಗಿ ಮಾಡುದಕ್ಕಾಗಿಯೂ ಆತನನ್ನು ಧನ್ಯ ನನ್ನಾಗಿ ಮಾಡುವದಕ್ಕಾಗಿಯೂ ಪರಮೇಶ್ವರನು ತನ್ನ ಹೃದಯವನ್ನು ಬಿಚ್ಚಿ ಒಳಗಿರುವ ವೃಷಭೇಶ್ವರನನ್ನು ಶಿದ್ಧರಾಮನಿಗೆ ತೋರಿಸಿದನು. ಬಸವೇಶ್ವರನಾದರೂ ಶಿವನ ಹೃದಯದಲ್ಲಿ ದಿವ್ಯ ಶರೀರವನ್ನು ಧರಿಸಿ ಪದ್ಮಾಸನಾಸೀನನಾಗಿ ಕೈಯಲ್ಲಿರುವ ಶಿವಲಿಂಗದಲ್ಲಿ ಸ್ಥಿರವಾದ ದೃಷ್ಟಿಯನ್ನಿಟ್ಟು ಜಂಗಮರ ಪಾದಕ್ಕೆ ಶರಣುಶರಣಾರ್ಥಿ ಹೇಳುತ್ತಾ ಭಸ್ಮ ಲಿಪ್ತನಾಗಿ ಅರೆಗಣ್ಣನ್ನು ಬಿಟ್ಟು ಶಿವಧ್ಯಾನಾನಂದದಿಂದ ಕಣ್ಣೀರನ್ನು ಸುರಿಸುತ್ತಾ ಹಸನ್ಮುಖಿಯಾಗಿ ರುದ್ರಾಕ್ಷಾಲಂಕಾರನಾಗಿ ಕಂಗೊಳಿಸಿದನು. ಆಗ ವಿಷ್ಣು ಬ್ರಹ್ಮಾದಿಗಳೆಲ್ಲರೂ ನೋಡಿ ಪರಮಾಶ್ಚರ್ಯರಾಗಿ ಅತ್ಯಂತ ಭಕ್ತಿಯಿಂದ ನಮಸ್ಕರಿಸಿ ಸ್ತುತಿಸಿದರು. ಶಿದ್ಧರಾಮ ಶಿವಯೋಗಿಯು ಆ ಬಸವೇಶ್ವರನ ಸಂದರ್ಶನದಿಂದ ಆನಂದ ಭರಿತವಾಗಿ ಪ್ರತಿಪ್ರತಿಯಾಗಿ ಶರಣು ಶರಣೆಂದು ನುಡಿಯುತ್ತಿದ್ದನು. ಪರಮೇಶ್ವರನು ಎಡದೊಡೆಯಮೇಲೆ ಕುಳಿತಿರುವ ಪಾರ್ವತಿಯ ಮುಖ ಕಮಲವನ್ನು ಓರೆಗಣ್ಣಿನಿಂದ ನೋಡಿ ಎಲೆ ಶಂಕರಿಯೆ ಈ ಬಸವನ ಭಕ್ತಿ ಭಾವವನ್ನೂ ಮಹಿಮೆಯನ್ನು, ಮಾಂಸವನ್ನು ನಡೆತೆಯನ್ನು ನೋಡು, ಲೋಕಸಂರಕ್ಷಣಾರ್ಥವಾಗಿ ನಾನೇ ಬಸವೇಶ್ವರನಾಗಿದ್ದೇನೆ. ಇವನು ಯಾವಾಗಲೂ ಎಡೆವಿಡದೆ ನನ್ನ ಮನಸಿನಲ್ಲಿರುವವನು. ಈತನು ಆದಿಗೆಲ್ಲಾ ಆದಿಯು ನನಗೆ ಇವನೇ ಪ್ರಾಣವು ಈ ತನಗೆ ನಾನೇ ಪ್ರಾಣವು. ನಾನು ಲೋಕಕ್ಕೆಲ್ಲಾ ಗುರುವು. ಈತನಾದರೂ ಲೋಕಕ್ಕೆಲ್ಲಾ ದಾನಿಯು. ನಾನು ಲೋಕ ರಕ್ಷಕನು ಈತನು ಲೋಕ ರಕ್ಷಕನು ನಾನು ಮುಕ್ತಿಗೆ ಪತಿ. ಈತನು ಭಕ್ತಿಗೆ ಪತಿ. ನಾನು ಭಕ್ತ ವತ್ಸಲ ಇವನು ಭಕ್ತಿಗೆ ನಿಕ್ಷೇಪ ಈತನು ಭಕ್ತಿಪ್ರಾಣಿಯು ನಾನು ಭಕ್ತ ದೇಹಿಯು ಈತನು ಲೋಕಕ್ಕೆ ಜಂಗಮನು. ನಾನು ಲಿಂಗವು.

ನಾನು ಶಂಭುವು. ಇವನು ದ್ವಿತಿಯಾ ಶಂಭುವು. ಸಕಲರಿಗೂ ನನ್ನಭಕ್ತಿ ಲಭಿಸುವ ಮುಕ್ತಿಯು ಈ ನಂದೀಶ್ವರನ ಸ್ಮರಣ ಮಾತ್ರದಿಂದ ದೊರೆಯು ವದು. ಲೋಕದ ಭಕ್ತರು ನನಗೆ ತನು ಮನ ಧನಗಳನ್ನು ಯಾವಾಗಳಾದ ರೊಂದಾ ವೃತ್ತಿ ಕೊಡುವರು ಈ ವೃಷಭೇಶ್ವರನಾದರೂ ಮನ; ಪೂರ್ವಕ ವಾಗಿ ಯಾವಾಗಲೂ ಕೊಟ್ಟಿರುವನು. ನನ್ನ ಮಹತ್ವವನ್ನು ಇವನೊಬ್ಬನೇ ಬಲ್ಲನು. ಇವನ ಮಹಿಮೆಯನ್ನು ನಾನೇಬಲ್ಲೆನು. ಮತ್ತೊ ಬ್ಬರು ತಿಳಿಯುವರೆ? ಯಾವಾತನ ಮುಖದಲ್ಲಿ ಬಸವ ಮೂರು ಅಕ್ಷರಗಳಿರು ವವೋ ಆತನ ಮುಖವೇ ನನಗೂ ನನ್ನ ಪ್ರಮಥರಿಗೂ ಮನೆಯಾಗಿರುವದು ಗುರು, ಲಿಂಗ, ಜಂಗಮ, ರುದ್ರಾಕ್ಷಿ, ಶಿವಮಂತ್ರ, ಪಾದೋದಕ, ಪ್ರಸಾದಗ ಳೆಂಬ ಅಷ್ಟಾವರಣಗಳಿಂದ ಸಮೇತನಾಗಿ ಯಾವನಿರುವನೋ ಅವನು ಬಸವೇಶ್ವರನ ಅಂಶೋದ್ಭೂತನು. ಅವನ ಹೃದಯದಲ್ಲಿ ಯಾವಾಗಲೂ ಈ ಬಸವೇಶನು ನನ್ನಲ್ಲಿರುವಂತೆ ವಾಸಿಸುವನು. ಎಂದು ಕೇಳಿ ಹೃದಯ ದಲ್ಲಿ ಕುಳಿತು ತೊಳಗಿ ಬೆಳಗುತ್ತಿರುವ ಬಸವೇಶನನ್ನು ನೋಡಿ ಭೂಮಿಯಲ್ಲಿ ಸದ್ಭಕ್ತರು ಎಷ್ಟುಮಂದಿ ಇರುವರು ? ಎಂಬದಾಗಿ ಕೇಳಲು ನಂದೀಶನು ಕೈಮುಗಿದು- ಹೇ. ಸರ್ವೇಶ್ವರನೇ ಭೂಲೋಕದಲ್ಲಿ ಸದ್ಭಕ್ತ ನೊಬ್ಬನೂ ಇಲ್ಲ. ನಾನೊಬ್ಬನೇ ಭಕ್ತನು. ಯಾಕಂದರೆ ಭಕ್ತರೆಲ್ಲರೂ ನನಗೆ ನಿನ್ನ (ಶಿವ) ಸಮಾನರು ನಾನೊಬ್ಬನೇ ಅವರೆಲ್ಲರಿಗೂ ಭಕ್ತನು. ಹೇ ಸ್ವಾಮಿಯೇ ಯಾವ ಜನ್ಮದಲ್ಲಿ ಹುಟ್ಟಿದಾಗ್ಯೂ ಗುರು, ಲಿಂಗ, ಜಂಗಮ, ಪ್ರಸಾದ ಸೇವ ನೆಯೇ ಸಾಕಾಗಿರುವದು. ಅದು ಕೈವಲ್ಯ ಸೌಖ್ಯಕ್ಕಿಂತಲೂ ಅತಿಶಯ ವಾಗಿರುವದು. ಮೃಗಪಕ್ಷಿ ಕ್ರಿಮಿ ಕೀಟಗಳಾಗಿ ಹುಟ್ಟಿದಾಗ್ಯೂ ಶಿವಶರ ಣರು ಉಂಡು ಮಿಕ್ಕ ಪ್ರಸಾದವನ್ನು ಸೇವಿಸಿದರೆ ಅಲ್ಲಿಗೆ ಸಂಸಾರವು ಕೊನೆಗಾಣುವದು. ಎಂದು ಹೇಳಲು ಇದನ್ನು ಸಭಿಕರೆಲ್ಲರೂ ಕೇಳಿ ಸಂತೋ ಷಸಮುದ್ರದಲ್ಲಿ ಮುಳಗಾಡುತ್ತಿದ್ದರು. ಶಿದ್ಧರಾಮ ಶಿವಯೋಗಿಯು ಭಕ್ತಿ ಯಿಂದ ನಮಸ್ಕರಿಸಿ ಅಪ್ಪಣೆಯಂ. ಪಡೆದು ಹಿಂತಿರುಗಿ ಭೂಲೋಕಕ್ಕೆ ಬಂದು ತನ್ನ ಪಟ್ಟಣವನ್ನು ಹೊಕ್ಕು ಅಲ್ಲಿದ್ದ ಶಿವಶರಣರಿಗೆಲ್ಲಾ ತಾನು ಶೀಡ ವರ್ತಮಾನವನ್ನು ಸಾಂಗವಾಗಿ ಹೇಳಿದನು. ಅವರು ಆ ಬಸವೇಶನು ಕವನ ಹೃದಯದಲ್ಲಿ ಹೇಗೆ ವಾಸವಾಗಿದ್ದನು ? ಎಂದು ಕೇಳಲಾಗಿ ಶಿದ್ಧ ರಾಮ ಶಿವಯೋಗಿಯು ತನ್ನ ಹೃದಯವನ್ನು ಭೇದಿಸಿ ಇಗೋ ಹೀಗಿಯೇ ಅಲ್ಲಿಯೂ ಇದ್ದನೆಂದು ಒಳಗೆ ಕುಳಿತಿರುವ ಬಸವೇಶ್ವರನ ದಿವ್ಯಮೂರ್ತಿ

ಯನ್ನು ತೋರಿಸಿ ಸರ್ವರನ್ನು ಆಶ್ಚರ್ಯದಿಂದ ಬೆರಗು ಮಾಡಿದನು. ಈಪ್ರಕಾರವಾಗಿ ಏಕಚಿತ್ತದಿಂದ ಬಸವೇಶ್ವರರ ಪಾದಾರ ಎಂಧಲ್ಲಿ ಭಯ ಭಕ್ತಿ ಇಟ್ಟಿದ್ದಾದರೆ ಶಿದ್ಧರಾಮ ಶಿವಯೋಗಿಯ ಹಾಗೆ ನಾವಾದರೂ. ನಮ್ಮ ಆತ್ಮದಲ್ಲಿ ಆ ಮಹಿಮನನ್ನು ಕಾಣಬಹುದು. ಆ ಮಹಿಮನನ್ನು ಕಾಣಲು (ಅವನ ಪಾದಾರ ವಿಂದವನ್ನು ಹೊಂದಲು) ಒಂದೇ ಮಾರ್ಗ ಗುರುವಿನಲ್ಲಿ ಭಕ್ತಿ ಲಿಂಗದಲ್ಲಿ ನಿಷ್ಠೆ ಜಂಗಮರಲ್ಲಿ ವಿಶ್ವಾಸ ಪಾದೋದಕ ದಲ್ಲಿ ಪ್ರೇಮ ಇವು ಇದ್ದದ್ದಾದರೆ ಆ ಮಹಿಮಾ ಶಾಲಿಯಾದ ಬಸವರಾಜ ನನ್ನು ಸುಲಭವಾಗಿ ಕಂಡು ಕಣ್ತುಂಬ ನೋಡಿ ಹಾಡಿ ಪಾಡಿ ಪಾರಾಗಬ ಹುದು. ಕಾರಣ ನಮ್ಮ ಸರ್ವರ ಹೃದಯಲ್ಲಿ ನೆಲಿಸಿದ ಬಸವಣ್ಣ ನಮ್ಮ ಅಜ್ಞಾನಕ್ಕೆ ಆತನು ಗೋಚರನಾಗನು. ಕಾರಣ ಮುಖ್ಯವಾಗಿ ಜ್ಞಾನಬೇಕು. ಈ ಜ್ಞಾನದಿಂದಲೇ ಈಶನ ಪಾದವನ್ನು ಹೊಂದುವ ಮುಖ್ಯೋಪಾಯ.

ಜ್ಞಾನಿಗೆ ಗೋಚರನು. ಅಜ್ಞಾನಿಗೆ ಅಗೋಚರನು.

---

# ಕರ್ನಾಟಕದ ಗಾಂಧಿ

( ಪರಿಚಯಕಾರರು:— ಶ್ರೀ ಜ್ಞಾನೋಪಾಸಕ )



ಶ್ರೀ ಮಂಜಪ್ಪನವರು ಮಂಜಿನಂತೆ ಶುಭ್ರವಾಗಿ, ನಿಚ್ಚಳವಾಗಿ ಇದ್ದಾರೆ. ಆದರೆ ಅದರಂತೆಯೇ ರಹಸ್ಯಮಯವಾಗಿಯೂ ಇದ್ದಾರೆ. ಅವರು ಸ್ವಭಾವತಃ ಪ್ರಯೋಗಶರಣರು.

— ಅಂಬಿಕಾತನಯ ದತ್ತ.

ಗಾಂಧಿಯೆಂದರೆ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯ ಮುಂದೆ ಓರ್ವ ತೇಜೋಮೂರ್ತಿಯು ಬಂದು ನಿಂತಂತೆಯೇ ಸರಿಯು. ಅವರ ಅಭೂತ ಪೂರ್ವ ಸುಗುಣಗಳೇ ಇದಕ್ಕೆ ಕಾರಣ. ಅಂತೆಯೇ ಕರ್ನಾಟಕದಲ್ಲಿನ ಜನದ ನೇತ್ರಪಟಲದ ಮುಂದೆ ಶ್ರೇಷ್ಠ ಸುಗುಣಗಳನ್ನು ಒಳಗೊಂಡ ವ್ಯಕ್ತಿಯೊಬ್ಬರು ಎದ್ದು ನಿಲ್ಲುತ್ತಾರೆ. ಅವರೇ ಕರ್ನಾಟಕದ ಗಾಂಧಿಯಾದ ಹರ್ಡೇಕರ ಮಂಜಪ್ಪನವರು. ಕರ್ನಾಟಕ ಏಕೀಕರಣ, ಹಿಂದೂ ಸಂಘಟನೆ, ಖಾದಿ ಪ್ರಚಾರ, ಹರಿಜನೋದ್ಧಾರ, ಸ್ತ್ರೀ ಶಿಕ್ಷಣ, ಗೋಪಾಲನ, ಇತ್ಯಾದಿ ಪ್ರಚಾರ ಕಾರ್ಯಗಳನ್ನು ಬಹು ಅಕ್ಕರಾದರಣೀಯದಿಂದ ಮಾಡಿದರು. ಕನ್ನಡ ಸಾಹಿತ್ಯಕ್ಕೂ, ಪತ್ರಿಕಾ ಜಗತ್ತಿಗೂ ಅಸೀಮ ಸೇವೆಯನ್ನು ಸಲ್ಲಿಸಿದರು. ಕರ್ನಾಟಕದಲ್ಲಿ ಸುತ್ತಿ ಸುಳಿದಾಡಿ ಕ್ರಾಂತಿಕಾರಕ ಉಪನ್ಯಾಸಗಳ ಮೂಲಕ ನಲವತ್ತು ವರ್ಷಗಳ ಕಾಲ ಜ್ಞಾನಪ್ರಸಾರ ಮಾಡಿದರು. ದೇಶಕ್ಕೂ, ಸಮಾಜಕ್ಕೂ ಇವರು ಸಲ್ಲಿಸಿದ ಸೇವೆಯು ಅತ್ಯಂತ ಮಹತ್ವಪೂರಿತವಾದದ್ದು. ಉದಾತ್ತ ಗುರಿ, ಸರಳ ಜೀವನದಿಂದ ಬಾಳಿ ಬದುಕಿದ ಆದರ್ಶ ವ್ಯಕ್ತಿಗಳು ಮಂಜಪ್ಪನವರು. ಇವರ ಧರ್ಮನಿಷ್ಠತೆ, ಸ್ನೇಹಶೀಲತೆ, ಭಾಷಾಪ್ರೇಮ, ದೇಶಭಕ್ತಿ, ರಚನಾತ್ಮಕ ಕಾರ್ಯಕ್ರಮದ ತತ್ವಾವಲಂಬನೆ, ನೈಷ್ಠಿಕ ಬ್ರಹ್ಮಚರ್ಯ ಪಾಲನೆ ಇವುಗಳು ಕನ್ನಡಿಗರ ಹೃದಯ ಗರ್ಭಗುಡಿಗಳನ್ನು ಹೊಕ್ಕವು. ಇವರ ಜೀವನವು 'ದೇಶ ಸೇವೆಯೇ ಈಶಸೇವೆ' ತತ್ವವನ್ನು ಕ್ರಿಯಾಪೂರ್ಣ ಮಾಡಲು ಟೊಂಕ ಕಟ್ಟಿ ನಿಂತು, ಜಗತ್ಸೇವೆಗಾಗಿ ಮುಡುಪಿಟ್ಟರು. ಉತ್ತಮ ವಾಗ್ಮಿಗಳೂ, ಶ್ರೇಷ್ಠ ಲೇಖಕರೂ ಆಗಿ ವಿಶ್ವ

ಕುಟುಂಬಿಗಳಾಗಿ ಬಾಳಿ ಬದುಕಿ, ಆತ್ಮೋದ್ಧಾರದ ಮೂಲಕ ಜಗದೋದ್ಧಾರ ಮಾಡಿ ಅನಂತ ಕೀರ್ತಿ ನಾರಾಯಣರಾಗಿ ಮಂಜಪ್ಪನವರು ಯಶೋವಂತರಾದರು. ವಚನಕಾರರ ತತ್ವದಂತೆ ಅನುಷ್ಠಾನ ಮಾಡಿ, ಬರಹ ವ್ಯಾಖ್ಯಾನಗಳ ಮೂಲಕ ಸಮಾಜ ಹಾಗೂ ರಾಷ್ಟ್ರಸೇವೆ ಮಾಡಿ ಜನಜಾಗೃತಿಯನ್ನು ಹರ್ಡೇಕರ ಮಂಜಪ್ಪನವರು ಮಾಡಿದರು. ೧೯೪೧ರಲ್ಲಿ ಕಾವ್ಯಾನಂದರು ಇವರನ್ನು ಕುರಿತು ಇಂತು ನುಡಿದರು.

"ಸಾಹಿತ್ಯವೇ ಜೀವನವಾದ, ಶಾಶ್ವತಸೇವೆಯೇ ಜೀವನಾದರ್ಶವಾದ ಶ್ರೀ ಮಂಜಪ್ಪಣ್ಣನವರು ಇದುವರೆಗೆ ಶಿಶುಸಾಹಿತ್ಯದಿಂದ ಗಂಭೀರ ಸಾಹಿತ್ಯದವರೆಗೆ ವಿವಿಧ ವಿಷಯಗಳನ್ನು ಕುರಿತು ಐವತ್ತಕ್ಕೆ ಮೇಲ್ಪಟ್ಟ ಕಿರಿ ಹಿರಿ ಹೊತ್ತಿಗೆಗಳನ್ನು ಬರೆದು ಕನ್ನಡ ಸಾರಸ್ವತ ಪ್ರಪಂಚಕ್ಕೆ ಮಹೋಪಕಾರ ಮಾಡಿದ್ದಾರೆ. ಬಸವಾದಿ ಪ್ರಮಥರ ತತ್ವಪ್ರಸಾರ ಕಾರ್ಯದಲ್ಲಿ ಇವರು ಮಾಡುತ್ತಿರುವ ಸೇವೆ ಅದ್ಭುತವಾದುದು. ಹಿಂದೂ ಧರ್ಮ ರಕ್ಷಣೆಗಾಗಿ ಇವರು ಕನ್ನಡನಾಡಿನಲ್ಲೆಲ್ಲ ಗುಡುಗಾಡುತ್ತಿದ್ದಾರೆ."

ಮಂಜಪ್ಪ ಏನು ಸೊಗಸು! ಎಂತಹ ಚಲವು. ನಾಮವು ಅನ್ವರ್ಥವೇ ಸರಿಯು. ಕ್ಷೀರಸಾಗರ ಭಟ್ಟರು ಎನ್ನುದು ಬಾಯಿಗೆ ಮರಣಾಂತ್ಯದಲ್ಲಿ ಒಂದುಕೊಟ್ಟು ಹಾಲೂ ಸಿಕ್ಕುವದಿಲ್ಲ. ಇವರದು ಹಾಗಲ್ಲ; ಹೆಸರಿಗೆ ತಕ್ಕ ನಡೆನುಡಿಯು ಮಂಜಪ್ಪ—ಬಿಳಿಯಪ್ಪ—ನವರನ್ನು ನೋಡದಇಲ್ಲವೇ ಕೇಳದ ಕನ್ನಡಿಗನೇಇಲ್ಲ. ಇವರ ನೊಸಲು ಸ್ವಚ್ಛಬಿಳಿಯ ವಿಭೂತಿಯು! ಇವರಕಾಯ ಬಿಳಿಯ ಛಾಯೆಯು! ಇದರ ಉಡಿಗೆತೊಡಿಗೆಯು ಬಿಳಿಯಖಾದಿಯು. ಸರಲವು ಸ್ವಚ್ಛ, ಬಿಳಿಯದು ಮತ್ತು ಪರಿಶುಭ್ರವು ನಿರ್ದುಷ್ಟ ವಿಷಯಗಳ ಮೂಲಕ ಇವರ ನುಡಿನಿತಂಡವು ಬಿಳಿಯದು, ನೀತಿ ನಿಯಮಗಳ ಮೂಲಕ ಇವರ ಕೃತಿಗಳೂ ಬಿಳಿಯದು. ಇವರ ಸಂದರ್ಶನವು ಲಭಿಸಿ ಹಾಗೆ ಬಿಳಿಯ ಮಂಜನಾದರೂ ಮೈವೆತ್ತಿ ಬಂದೀತೋ ಎಂಬಂತಾಗುತ್ತದೆ. ಇವರ ನೈತಿಕ ಹಾಗೂ ನೈಷ್ಠಿಕತೆಯು ಮೂಲಕ ಇವರ ನುಡಿಯ ಮಂಜು ಒಂದೊಂದುಬಾರಿ ತಣ್ಣಗೆ ಕುಳ್ಳಿರಿಸುವಂತೆ ಮಾಡಿದರೂ ಈ ಚಳಿಯು ಕಾಯದ ಚಳಿಯನ್ನು ಬಿಡಿಸಿ ಉದ್ಯೋಗಪ್ರಿಯತೆಯನ್ನು ಜನಿಸುವಂತೆ ಮಾಡುವ ಹಾಗೆಯೇ ಇವರ ನುಡಿಯಲ್ಲಿ ಬಲವೂ ಇದೆ. ಇವರು ಮಂಜಿನಂತೆ ಸತತವೂ, ಪರಿಶುಭ್ರವಾಗಿಯೂ,

ನಿಚ್ಚಳವಾಗಿಯೂ, ಇದ್ದರು. ಅಂತೆಯೇ ಶಾಂತಿ ರಹಸ್ಯಮಯರಾಗಿದ್ದರು. ಇವರು ಸ್ವಭಾವತ: ಪ್ರಯೋಗಶರಣರು. ಕರ್ಮಯೋಗಿಗಳಾದರೂ ವೈಜ್ಞಾನಿಕರ ಹಾಗೆ ಪರಿಣಾಮದ ಕಡೆಗೆ ವೃಷ್ಟಿಯನ್ನು ಚೆಲ್ಲಿ ಕೆಲಸ ಮಾಡಿದರು. ಮಾನವ ಕುಟುಂಬದ ಹಿತದ ಬಯಕೆಗಾಗಿ ನಾಡಿನಲ್ಲಿಯೂ ಐಕ್ಯಜೀವನದ ತಳಹದಿಗೆ ಸಮಾಜದಲ್ಲಿ ನೆಲೆಯು ಸಿಗಬೇಕು. ಎಂಬುದೇ ಇವರ ಅಭಿಲಾಷೆಯಾಗಿತ್ತು. ಸರ್ವಜ್ಞನಂತಹ ಸಾಹಿತಿ, ಪ್ರೋಬೆಲ್ಲನಂತಹ ಹುಟ್ಟುಶಿಕ್ಷಕ, ರಾಜಾರಾಮ ಮೋಹನ ರಾಯರಂತಹ ಸುಧಾರಕ ಮಂಜಪ್ಪ. ಅಜ್ಞಾನ ತಿಮಿರವನ್ನಳಿಸಿ, ಜ್ಞಾನಜ್ಯೋತಿಯನ್ನು ಬೀರಿ, ಅಶುದ್ಧಾಚರಣೆ ಅರೆದು, ಪರಿಶುದ್ಧಾಚರಣೆಯನ್ನು ಆವಿರ್ಭೂತವಮಾಡಿ ಅವು ಚಿರಕಾಲ ನಿಲ್ಲುವಂತೆಯನ್ನಿಸಿ ' ಅರಿದೊಡೆ ಮರೆವೊಡೆ ಮಾನವ ' ನನ್ನು ಸಮಾಜಕ್ಕೆ ಪರಿಚಯ ಮಾಡಿಸಿ ಕೊಡುವದೇ ಇವರ ದಿನಚರಿಯ ಕಾರ್‍ಯವಾಗಿತ್ತು. ಕರ್ಮಯೋಗಿ, ಅಭಿನವ ಆರೂಢ, ಮಾದರಿ ಮಾಸ್ತರು, ಮಹಾನುಭಾವಿ, ಪರಮಹಂಸ, ಪರಿವ್ರಾಜಕ, ಆದರ್ಶ ಸಮಾಜ ನಿರ್ಮಾಪಕ, ರಾಷ್ಟ್ರಧರ್ಮ ಪ್ರಸಾರಕ, ತೇಜೋವಂತ ಅಣ್ಣ– ಇಷ್ಟೆಲ್ಲಆಗಿ ನಮ್ಮ ಸುತ್ತಮುತ್ತ ಇದ್ದು ಜನತೆಯ ಕಲ್ಯಾಣವನ್ನು ತ್ರಿಕರಣಪೂರ್ವಕವಾಗಿ ಹಾರೈಸಿ ಸೇವೆ ಸಲ್ಲಿಸಿದರು.

ಕನ್ನಡಿಗರ ದೊರೆಗಳಾದ ಮಯೂರರ ರಾಜಧಾನಿಯು ಬನವಾಸಿ. ಆದಿಸಂಪನ ಅಚ್ಚು ಮೆಚ್ಚಿನ ಬನವಾಸಿಯ ಹೆಸರನ್ನು ಯಾವ ಕನ್ನಡಿಗನೂ ತಾನೇ ಕೇಳಿಲ್ಲ? ಈ ಬನವಾಸಿಯೇ ಹರ್ಡೆಕರ ಮಂಜಪ್ಪನವರ ಹುಟ್ಟೂರು. ಈಗಿನ ಮಧುಕೇಶ್ವರನ ಭಕ್ತರಮನೆತನವೊಂದರಲ್ಲಿ ಇವರು ಜನ್ಮತಾಳಿದರು. ೧೮೮೬ರಲ್ಲಿ ಈ ದೇಶಭಕ್ತರುಜನಿಸಿ, ಮಧುಕೇಶ್ವರನ ಸ್ವಾಮಿಯ ಭಕ್ತರಿಗೆ ಸಂತೋಷಸಂಭ್ರಮವನ್ನು ಉಂಟು ಮಾಡಿದರು. ದೇವರ ಒಡೆಯನಾದ ಮಧುಕೇಶ್ವರ ಸ್ವಾಮಿಯ ಸೇವೆಗಾಗಿ ಇವರ ಸಂಸಾರಿ ತರುಬಾಳನ್ನೇ ಮುಡುಪಾಗಿಟ್ಟಿದ್ದರು. ಉತ್ತರ ಕರ್ನಾಟಕದ ವಾಣಿಜ್ಯ ಮತ್ತು ಕೈಗಾರಿಕೆ ಕ್ಷೇತ್ರಗಳಲ್ಲಿ ಇವರ ಅಣ್ಣಂದಿರು ಸಕಲರಿಗೂ ಸುಪರಿಚಿತವಾಗಿದ್ದರು. ಯೋಗಿ ಮಂಜಪ್ಪನವರು, ಭೋಗಿ ಮಧುಲಿಂಗಪ್ಪನವರ ಪ್ರತಿಭೆ ಮತ್ತು ನಾಡಪ್ರೇಮವು ಈ ಮನೆತನದ ಬುದ್ಧಿ ಕೌಶಲ್ಯಕ್ಕೆ ಕುರುಹಾಗಿದೆ. ಬನವಾಸಿಯು ಪ್ರಕೃತಿಯ ಕುರುಹವು. ಸ್ವಾದಿರಾಜರ ಶಿಲ್ಪಕಲಾನಿವಾಸಸ್ಥಾನವು. ಪಾಂಡವರ ವನವಾಸವು ಮುಗಿದ ಸ್ಥಳ; ಇಂತಹ ಸ್ಥಳದ ಸುತ್ತುಮುತ್ತು ಪ್ರಕೃತಿಯ

ಚೆನ್ನುಚಲುವು ಕವಿಗಳ ಬಣ್ಣನೆಗೆ ಯೋಗ್ಯವಾದದ್ದೇ. ಚಾಮರಸ ಕವಿಯ ಚಿತ್ತಭಕ್ತಿಯಲ್ಲಿ ಪ್ರತಿಬಿಂಬಿಸಿದ ನಾಡು ಈ ಬೀಡು. ಈ ಬಗೆಯ ಜಾಗ ದಲ್ಲಿ ಜನ್ಮತಾಳಿದ ಪ್ರತಿಭಾವಂತರಿಗೆ ಹುರುಪುಹುಮ್ಮಸ್ಸು ಬರುವುದರಲ್ಲಿ ಯಾವ ಸಂಶಯವು ತಾನೇ ಇದೆ?

ಶಿರ್ಸಿ ಮತ್ತು ಬನವಾಸಿಯಲ್ಲಿ ಬಾಲ್ಯವನ್ನು ಇವರು ಕಳೆದರು. ಕನ್ನಡ ಇಂಗ್ಲೀಷ, ಮರಾಠಿ ಭಾಷೆಗಳ ಪರಿಚಯುವನ್ನು ಮಾಡಿಕೊಂಡರು. ಧಾರವಾಡ ದಲ್ಲಿ ಉಪಾಧ್ಯಾಯ ಪರೀಕ್ಷೆಯಲ್ಲಿ ಮೂರು ವರ್ಷ ವ್ಯಾಸಂಗಮಾಡಿ ಉತ್ತೀರ್ಣರಾದರು. ಅನಂತರ ಶಿಕ್ಷಕರಾಗಿ ಭಾವೀಜನಾಂಗದ ಆಶಾಕಿರಣ ಗಳಾದ ವಿದ್ಯಾರ್ಥಿಗಳ ಸೇವೆ ಮಾಡಲು ನಿಂತರು. ಬರುಬರುತ್ತ 'ಮಾಸ್ತರ್ ಮಂಜಪ್ಪ' ನವರಾದರು. ಕನ್ನಡ, ಮರಾಠಿ ಮೊದಲಾದ ಭಾಷೆಗಳಲ್ಲಿರುವ ಬಹು ಶ್ರೇಷ್ಠ ಗ್ರಂಥಗಳನ್ನು ನೋಡಿ, ತಮ್ಮ ಅರಿವಿನ ಅಂಬನ್ನು ಸೊಗಸು ಸೊಂಪಾಗಿ ಬೆಳೆಯಿಸಿ ಬಲಪಡಿಸಿಕೊಂಡರು. ಜನ್ಮತಃ ಪ್ರತಿಭಾವಂತರಾ ಗಿದ್ದ ಇವರು ಜಗತ್ ಸೇವೆಯನ್ನು ಬಹುವಾಗಿ ಅಪೇಕ್ಷಿಸುತ್ತಿದ್ದುದರಸಲು ವಾಗಿ ಅಧ್ಯಾಪಕ ಗಿರಿಗೆ ತಿಲಾಂಜಲಿಯನ್ನಿತ್ತು ಹೊರಗೆ ಬರಲು ಕಾತುರ ಪಡುತ್ತಿದ್ದರು. ೧೯೨೧ ರ ವೇಳೆಗೆ ಗಾಂಧೀ ಸತ್ಯಾಗ್ರಹ ಝುಮ್ಕರವು ಆ ಸೇತು ಹಿಮಾಚಲದ ವರೆಗೂ ಇಡೀ ಭಾರತದಲ್ಲಿಯೇ ಪ್ರಸರಿಸಿ ಹಾಹಾ ಎಂಬ ಬೊಬ್ಬೆಯು ಬುಗ್ಗೆ ಬುಗ್ಗೆಯಾಗಿ ಬಿರಲು ಆರಂಭವಾಯಿತು. ತಮ್ಮ ಸೇವಾಕ್ಷೇತ್ರವನ್ನು ವಿಸ್ತರಿಸಲು, ಜಗತ್ತಿನ ಶಾಲೆಯಲ್ಲಿ ಸೇವಾ ಸಮರ್ಪಣೆ ಮಾಡಲು ನಿಂತರು. ಉದಾರಿಗಳ ಬೀಡಾದ ದಾವಣಗೆರೆಗೆ ಬಂದು ಗ್ರಂಥ ಲೇಖನ ಮತ್ತು ಪತ್ರಿಕಾ ವೃತ್ತಿಯನ್ನು ಅವಲಂಬಿಸಿದರು. ಮಹಾಜನರ ಮಹಾಸಹಕಾರ ಬಯಸಿ 'ಧನುರ್ಧಾರಿ' ಸಾಪ್ತಾಹಿಕವನ್ನು ಹೊರಡಿಸಿದರು. ಸಹಾನುಭೂತಿಯ ಬೆಂಬಲದ ಬೆತ್ತಲೆಯನ್ನೂ ಸಹಕಾಣದೆ 'ಧರ್ಮಧಾರಿ' ಪತ್ರಿಕೆಯನ್ನು ನಡೆಯಿಸುವ ಹೊಣಿಕ್ಕೆ ಕೊಡುವ ಸಿದ್ಧ ತೆಯು ಸಾಮಾನ್ಯರಿಗೆ ಸಿಗಲಾರದು. ಮೊಳೆ ಜೋಡಿಸುವ ಕಾರ್ಯದಿಂದ ಲೇಖನ, ಮುದ್ರಣ, ಮಾರಾಟಾದಿಗಳ ಕೆಲಸವನ್ನು ತಾವೇ ಕೈಗೊಂಡು ಬಗೆಬಗೆಯ ಕಷ್ಟಗಳನ್ನು ಅನುಭವಿಸುವುದು ಉದರನಿಮಿತ್ತಕ್ಕಾಗಿ ಧರಿಸುವ ಬಹುಕೃತಕವೇಷವಲ್ಲವು. ಮುಂದೆ ಹೇರಳವಾಗಿ ಹಣ ಸಂಪಾದಿಸುವ ಸದ ಮಲ ಲಾಲಸೆಯಲ್ಲ; ಜಗತ್ ಸೇವೆಯ ಒಂದು ಮಹಾ ತಪಸ್ಸು. ತಮ್ಮ

ಸ್ವಸಂತೋಷದಿಂದ ಕಷ್ಟವನ್ನು ಆಲಂಗಿಸಿಕೊಂಡಿದ್ದು ಕಡುಕಷ್ಟದ ಕಗ್ಗತ್ತ ಲೆಯಲ್ಲಿಯೇ ಮುಂದುವರಿಯಲು ಇವರ ಸೇವಾ ಬುದ್ಧಿಯು ಧೈರ್ಯ ಸ್ಥೈರ್ಯ ವನ್ನು ನೀಡಿತು.

ಬುದ್ಧಿಯಮಾತು, ಸ್ವಕರ್ತವ್ಯ, ಸಿದ್ಧಾಂತ, ಸ್ತ್ರೀನೀತಿಸಂಗ್ರಹ ಸ್ವಾಮಿ ರಾಮತೀರ್ಥ, ಭಾರತೀಯರ ದೇಶಭಕ್ತಿ, ಬಸವಚರಿತ್ರೆ ಮೊದಲಾದ ಗ್ರಂಥ ಗಳನ್ನು ಬರೆದು ಜ್ಞಾನಪ್ರಚಾರ ಮಾಡಿದರು. ನವ ನವೀನದೃಷ್ಟಿಯಿಂದ ಕೂಡಿದ ಈ ಗ್ರಂಥಗಳು ಕನ್ನಡಿಗರ ಮನದನ್ನು ಬಹು ಬೇಗನೆ ಆಕರ್ಷಿಸಿ ಕೊಂಡವು. ಇವರ ಯಶೋಕಿರಣವು ಇಡೀ ಕರ್ನಾಟಕದ ಮೂಲೆ ಮೂಲೆಯಲ್ಲಿಯೂ ಹಬ್ಬಿತು. ಹರಿಹರದಲ್ಲಿ ತುಂಗಭದ್ರಾ ಕಡಿಯಲ್ಲಿ ಸತ್ಯಾ ಗ್ರಹಾಶ್ರಮವನ್ನು ಸ್ಥಾಪಿಸಿದರು. ಉಕಾಮುಕವಾಗಿ ಬಂದ ತುಂಗಭದ್ರಾ ಪ್ರವಾಹದಿಂದ ಪರಮಾತ್ಮನ ಅನುಗ್ರಹ ಅಳಿಸಿತೋ ಎಂಬಂತೆ ಆಶ್ರಮವು ಅಳಿದು ಹೋಯಿತು. ಅನಾನುಕೂಲಗಳಿಂದ ದಾವಣಗೆರೆಯಲ್ಲಿ ನಿಲ್ಲಲು ಅವಕಾಶವಾಗದೆ ಉತ್ತರ ಕರ್ನಾಟಕದ ಕಡೆಗೆ ಹೊರಡುವ ಪರಿಸ್ಥಿತಿಯು ಬಂದಿತು. ಸತ್ಯಾಗ್ರಹ ಸಮಯದಲ್ಲಿ ಖಾದೀ ಪ್ರಸಾರಣೆ, ದೇಶೀಯ ಕೈಗಾರಿಕೆ ಪ್ರಚಾರಗಳಂತಹ ರಚನಾತ್ಮಕ ಕಾರ್ಯವನ್ನು ಕೈಗೊಂಡು ನಾಡಿಗೆ ಸೇವೆಯನ್ನು ಸಲ್ಲಿಸಿದರು. ಬೆಳಗಾಂವಿ ಸಾಹಿತ್ಯ ಸಮ್ಮೇಳ ನಾಧ್ಯಕ್ಷರಾದ ಮುದುವೀಡು ಕೃಷ್ಣರಾಯರು ಇವರನ್ನು ಇಂತು ನುಡಿ ದಿದಾರೆ. "ಶೀಲಸ್ವಭಾವ ಕಾರ್ಯನಿಷ್ಠೆ ಸತ್ಯಾಗ್ರಹಗಳಲ್ಲಿ ನೆಲೆಗೊಂಡಿರ ಬೇಕಾದ ಅಹಿಂಸೆ, ಅಕ್ರೋಧ, ಅಪರಿಗ್ರಹ, ಬ್ರಹ್ಮಚರ್ಯ, ಸತ್ಯಾದಿ ಸದ್ಗುಣಸಮುಚ್ಚಯ, ಪರಿಶ್ರಮ ಪೂರ್ವಕ ಪ್ರಯತ್ನ ಮಾಡಿದಲ್ಲದೆ ಸಾಧ್ಯ ವಾಗದ ವಿವಿಧ ವಿಷಯಗಳ ಪರಿಪೂರ್ಣ ಪರಿಣತಿ ಇವುಗಳಿಂದ ಅವರು ಭಾರತದ ಭಾಗ್ಯ ವಿಧಾತೃಗಳಾಗ ಬಹುದಾಗಿತು."

ಗಂಡುಗೆಲಿಗಳ ಬೀಡು ಬಿಜಾಪುರ. ಈ ಪ್ರಾಂತದತ್ತ ಇವರ ದೃಷ್ಟಿಯು ಹಾರಿತು. ಕೃಷ್ಣಾದಡದಲ್ಲಿರುವ ಆಲಮಟ್ಟಿಯಲ್ಲಿ ನಿಲ್ಲುವ ಸಂದರ್ಭವು ಒದಗಿತು. ವೀರಶೈವ ವಿದ್ಯಾಲಯವನ್ನು ಸ್ಥಾಪಿಸಿ, ಆಶ್ರಮವಾಸಿಗಳಾದರು. ವಿದ್ಯಾಲಯದಲ್ಲಿ ಶ್ರೀ ಬಸವಲಿಂಗ ಮುದ್ರಣ ಮಂದಿರ ಎಂಬ ಮುದ್ರಣಾಲ ಯವನ್ನು ಸ್ಥಾಪಿಸಿದರು. ಶರಣಸಂದೇಶ ವಾರಪತ್ರಿಕೆಯನ್ನು ಹೊರಡಿ ಸಿದರು. ರಾಜಕೀಯ ಪಾರತಂತ್ರ್ಯನಿವಾರಣೆ, ಅಸ್ಪೃಶ್ಯತಾ ಪರಿಹಾರ,

ವೀರಶೈವ ಸಮಾಜದಲ್ಲಿ ಭಿನ್ನ ಭೇದ ಭಾವಗಳ ಮೂಲೋತ್ಪಾದನೆ ಶಿವ ಶರಣರ ತತ್ವಪ್ರಸಾರ – ಇವುಗಳೇ ಶರಣ ಸಂದೇಶದ ಪ್ರಧಾನಗುರಿಯು. ಉದ್ಯೋಗ, ಖಾದಿವಿಜಯ ಮಾಸಿಕಗಳನ್ನೂ, ನಡೆಸಿದರು. ಈ ಅಚ್ಚು ಕೂಟದ ಜೊತೆಗೆ ಪ್ರಚಾರ ಶಿಕ್ಷಣ ಕೇಂದ್ರವನ್ನು ತೆರೆದರು. ಆದರೆ ದುರದೃಷ್ಟವಶಾತ್ ಇದು ಯಶಸ್ವಿಯಾಗಿ ಜರುಗಲಿಲ್ಲ. ಮೊದ ಮೊದಲು ಕಾಂಗ್ರೆಸ್ಸಿನ ಪರಮಭಕ್ತರಾಗಿ ಕೊನೆಕೊನೆಗೆ ಹಿಂದೂ ಮಹಾಸಭೆಯ ಅನುಯಾಯಿಗಳಾದರು. ವೀರಸಾವರ್ಕರ 'ಹಿಂದುತ್ವ'ವನ್ನು ಮರಾಠಿಯಿಂದ ಕನ್ನಡಕ್ಕೆ ಪರಿವರ್ತಿಸಿದರು. 'ಋಗ್ವೇದ ಸಾರ' ಎಂಬ ಮಹತ್ವ ಪೂರಿತ ಗ್ರಂಥವೊಂದು ಇವರಿಂದ ಬೆಳಕು ಕಂಡಿತು. ಲಿಂಗರಾಜ ಚರಿತ್ರೆ ಶುದ್ಧಿ ಸಂಘಟನೆ ಖಾದಿಶಾಸ್ತ್ರ ಎಚ್ಚತ್ತ ಹಿಂದೂಸ್ಥಾನ ಭಾರತೀಯರ ದೇಶಭಕ್ತಿ ಮೊದಲಾದ ಗ್ರಂಥಗಳನ್ನು ಬರೆದು ಪ್ರಕಟಿಸಿದರು. ಅರುವತ್ತು ವರ್ಷಗಳು ತುಂಬಿದ ಹಬ್ಬದಲ್ಲಿ ಪ್ರಗತಿ ಗ್ರಂಥಮಾಲೆಯನ್ನು ಬಾಗಲಕೋಟೆಯಲ್ಲಿ ಆರಂಭಿಸಿದರು. ಗ್ರಂಥಗಳು ಕನ್ನಡ ಸಾಹಿತ್ಯಕ್ಕೆ ಅಮೋಘವಾದ ಕಾಣಿಕೆಗಳು, ಪತ್ರಿಕೆಗಳು ಕರ್ನಾಟಕದ ಪತ್ರಿಕಾ ಪ್ರಪಂಚಕ್ಕೆ ಸಲ್ಲಿಸಿರುವ ಸೇವಾ ಫಲಗಳು ಆಗಿ ಸಾಹಿತ್ಯಸೇವೆಯು ದೇಶಸೇವೆಗಿಂತಲೂ ಉನ್ನತವಾದದ್ದು ಎಂಬುದನ್ನು ಪ್ರದರ್ಶಿಸಿದರು. ಇವರ ಅರುವತ್ತು ವರ್ಷ ತುಂಬಿದ ಹಬ್ಬದ ದಿನಾಚರಣೆಯನ್ನು ಮಾಡಿ ಇಡೀ ಕನ್ನಡಿಗರೇ ತಮ್ಮ ತಮ್ಮ ಭಕ್ತಿ ಪ್ರದರ್ಶನವನ್ನು ವ್ಯಕ್ತಪಡಿಸಿರುವವೇ ಇವರ ಸಾಹಿತ್ಯಸೇವೆಗೆ ಹಿರಿಯ ಸಾಕ್ಷಿಯು. ಜನತಾ ಜಾಗೃತಿಗಾಗಿ ಪ್ರಗತಿಗ್ರಂಥಮಾಲಾ ಸಾಹಿತ್ಯ ಸಂವರ್ಧನೆಯು ಸಲುವಾಗಿ ಇವರ ಬೆಳ್ಳಿಯ ಹಬ್ಬದ ವೇಳೆಯಲ್ಲಿ ಹತ್ತಿಪ್ಪತ್ತು ಸಾವಿರ ರೂಪಾಯಿಗಳನ್ನು ಶೇಖರಿಸಿದ್ದರು. ದುರದೃಷ್ಟ ವಶಾತ್ ಕಾರ್ಯವು ಕೈಗೂಡಲಿಲ್ಲ.

೧೯೪೧ ರಲ್ಲಿ ಬೆಂಗಳೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಯ ಹಬ್ಬದ ಸವಿನೆನಪಿಗಾಗಿ ಇವರು ಮುಪ್ಪಿನ ಷಡಕ್ಷರಿಯಿಂದ ರಚಿಸಲ್ಪಟ್ಟ ಹಾಡುಗಬ್ಬವನ್ನು 'ಸುಬೋಧ ಸಾರ' ಎಂಬ ಹೆಸರಿನಿಂದ ಚೆನ್ನು ಚೆನ್ನಾಗಿ ಸಂಪಾದಿಸಿ ಪ್ರಕಟಿಸಿ, ಕನ್ನಡಿಗರಿಗೆ ಮಹೋಪಕಾರವನ್ನು ಮಾಡಿದರು. ಕನ್ನಡದ ಅಭಿಮಾನಿಗಳೂ, ಪ್ರಖ್ಯಾತ ದಾಗ್ಮಿಗಳೂ ಆದ ಇವರು ಕನ್ನಡ ಸಾಹಿತ್ಯ ಸಮ್ಮೇಲನ, ಕರ್ನಾಟಕ ಏಕೀಕರಣ ಕೂಟ, ಹಿಂದೂ ಮಹಾ ಸಭೆ, ವೀರಶೈವ ಮಹಾಸಭೆ, ಸಾಂಸ್ಕೃತಿಕ ಮಹೋತ್ಸವ ಸಂಘ

ಇವುಗಳಿಗೆಲ್ಲ ತಪ್ಪದೆ ಹೋಗುತ್ತಿದ್ದರು. ಶ್ರೀಮನ್ನಿರಂಜನ ಮೃತ್ಯುಂಜಯ ಸ್ವಾಮಿಗಳು, ಶ್ರೀಮನ್ನಿರಂಜನ ಬಂಥನಾಳ ಸ್ವಾಮಿಗಳು ಮೊದಲಾದವರ ಮುಂದಾಳತ್ವದಲ್ಲಿ ವೀರಶೈವ ಸಮಾಜಕ್ಕೆ ಅತ್ಯಮೋಘವಾದ ಸೇವೆಯನ್ನು ಸಲ್ಲಿಸಿದರು. "ಸೋಮಾರಿಯ ಮೆದುಳು ದೆವ್ವದ ಕಾರ್ಖಾನೆ ಎಂಬುದು ಇವರಿಗೆ ಗೊತ್ತು. *Change of Work is rest* ಎಂಬ ತತ್ತ್ವಾವಲಂಬನೆಯಿಂದ ಸತತವೂ ಕೆಲಸ ಮಾಡುತ್ತಿದ್ದ ಉದ್ಯೋಗಪ್ರಿಯರು. ಕಾಯಕವೇ ಕೈಲಾಸ, *Duty is God* ಎಂಬ ತತ್ತ್ವವನ್ನು ಚೆನ್ನಾಗಿ ಅರಿತು ಆಚರಿಸಿದ ಅನುಭವಿಗಳು. ಇವರು ಬೇಸಾಯ, ಕೈಗಾರಿಕೆ, ವಾಣಿಜ್ಯಗಳಿಂದ ಕರ್ನಾಟಕವು ತುಂಬಿ ತುಳುಕಿ ಸಂಪತ್ತಿನ ಲಕ್ಷ್ಮೀನಿಲಯವಾಗಬೇಕೆಂದು ಹಾತೊರೆಯುತ್ತಿದ್ದರು. ಸ್ವತಂತ್ರ ಕರ್ನಾಟಕವನ್ನೂ, ಸ್ವರಾಜ್ಯ ಭಾರತವನ್ನೂ ಎಷ್ಟು ಹೊತ್ತಿಗೆ ನೋಡಿಯಾನೋ ಎಂಬ ಆತುರಾಂಶದಿಂದ ಕಾಯುತ್ತಿದ್ದರು. ಶರಣ ತತ್ತ್ವ ಪ್ರಚಾರ, ಹಿಂದೂ ಸಂಘಟನೆಯೇ ಇದಕ್ಕೆ ಅಡಿಗಲ್ಲು ಎಂದು ತಿಳಿದು ಕ್ರಿಯಾಶೀಲರಾಗುತ್ತಿದ್ದರು. ಧರ್ಮೋತ್ಸಾಹವು ಅವರ ಕಾರ್ಯ ಚಟುವಟಿಕೆಗಳ ಅಡಿಗಲ್ಲು ಎಂದು ರಾಜ್ಯಪಾಲರು ಮಾನ್ಯ ದಿವಾಕರರು ಹೇಳಿರುವುದನ್ನು ನೋಡಿದರೆ ಇವರ ದಿವ್ಯ ಜೀವನವು ತಿಳಿಯದೆ ಇರದು.

ಪ್ರಾಚೀನ ಗುರುಕುಲಾಶ್ರಮಗಳಂತೆ ನದೀ ದಡದಲ್ಲಿ ಏಕಾಂತವಾದ ಗುರುಕುಲವನ್ನು ಸ್ಥಾಪನೆ ಮಾಡಿ, ಅದರ ಮೂಲಕ ವಿದ್ಯಾರ್ಥಿಗಳಿಗೆ ಉದಾರೋನ್ನತವಾದ ಮತ್ತು ಲೋಕಮಾನ್ಯವಾದ ವಚನಕಾರರ ತತ್ತ್ವಗಳನ್ನು ಕಲಿಸಿ, ಅವರಲ್ಲಿ ಪರಿಶುದ್ಧವಾದ ಆಚರಣೆ, ಸಮಾಜಸೇವೆ ರಾಷ್ಟ್ರಸೇವೆ ಇತ್ಯಾದಿ ಭವ್ಯ ಗುಣಗಳು ನೆಲಸುವಂತೆ ಮಾಡಬೇಕೆಂಬ ಹಿರಿಯಾಸೆಯು ಮೂಡಿತು. ಇದರ ಮೂಲಕ ವಚನಕಾರರ ಜೀವನತತ್ತ್ವವನ್ನು ಹರಡಿದರು. ಇವರಿಗೆ ಇಂದಿನ ಪಾಶ್ಚಿಮಾತ್ಯ ಪದ್ಧತಿಯ ಶಿಕ್ಷಣವು ರುಚಿಸಲಿಲ್ಲ. ಇಂದಿನ ಶಿಕ್ಷಣವು ಕೇವಲ ಕೆಲಸಕ್ಕಾಗಿ ತಮ್ಮ ಅಮೋಘ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಗುಲಾಮರನ್ನು ಉತ್ಪತ್ತಿ ಮಾಡುವದರಿಂದ ಸಮಾಜಕ್ಕಾಗಲೀ ರಾಷ್ಟ್ರಕ್ಕಾಗಲೀ ಯಾವ ಫಲವೂ ಲಭಿಸದು ಎಂಬುದೇ ಇವರ ನಿಶ್ಚಲ ನಂಬಿಕೆ. ಆದ ಕಾರಣ ವಿದ್ಯಾಲಯಕ್ಕೆ ಮಾಧ್ಯಮಿಕ ಶಾಲೆಯ ರೂಪನ್ನು ನೀಡಿ ಸರ್ಕಾರದ ಸಹಾಯ ಧನ

*Grant* ವನ್ನು ಪಡೆದುಕೊಳ್ಳಬೇಕೆಂಬ ಕೆಲವರ ಸಲಹೆಯು ಇವರ ಪಾಲಿಗೆ ಕಹಿಯಾಗಿ ಧಾರ್ಮಿಕ, ಅಧ್ಯಾತ್ಮಿಕ, ನೈತಿಕ ತೇಜಸ್ಸು ಓಜಸ್ಸನ್ನು ಬೆಳಗಿಸುವ ಗುರುಕುಲವು ತೇಲಲಿ, ಮುಳುಗಲಿ ಸ್ವತಂತ್ರವಾಗಿಯೇ ಇರಲೆಂದು ಪ್ರತಿಪಾದಿಸಿ, ಗುರುಕುಲ ಮಾದರಿಯ ಶಿಕ್ಷಣವೇ ವಚನಕಾರರ ಸಂಸ್ಕೃತಿಯನ್ನು ಕಾಪಾಡಿಕೊಂಡು ಹೋಗಲು ಯೋಗ್ಯ ಶಿಕ್ಷಣವು ಎನ್ನುತ್ತಿದ್ದ ಇವರ ಈ ವಿದ್ಯಾಲಯುವನ್ನು ಜೀವನಶಿಕ್ಷಣ ಶಾಲೆಯನ್ನಾಗಿ *Basic School* ಮಾಡಬೇಕೆಂಬ ಹಿರಿಯಾಸೆಯು ಇವರಲ್ಲಿ ಮೂಡಿದ್ದಿತು.

ಇವರ ದೂರದೃಷ್ಟಿಯು ಬಹು ವಿಶಾಲವಾದದ್ದು. ಇವರ ಜಗತ್ಸೇವೆಯು ಜನ ಜನಾರ್ಧನ ಪ್ರಿಯವಾದುದು. ೧೯೪೬ರಲ್ಲಿ ಬಾಗಲಕೋಟೆಯಲ್ಲಿ ಪ್ರಗತಿಗ್ರಂಥಮಾಲೆಯನ್ನ ಶಾಶ್ವತವಾಗಿ ಮುಂದುವರಿಯುವದಕ್ಕೆ ಅನುಕೂಲಿಸುವಂತೆ ನಿಧಿಯೊಂದನ್ನು ಏರ್ಪಡಿಸಿದರು. ಧರ್ಮ ದರ್ಶಿಗಳ ಸಮಿತಿಯೊಂದನ್ನು ರಚಿಸಿ ಅದರ ಮೂಲಕ ತತ್ಸಂಬಂಧಿಕ ಕಾರ್ಯಗಳೆಲ್ಲವೂ ನಡೆಯುವಂತೆ ಸುವ್ಯವಸ್ಥೆ ಮಾಡಿದರು. ಬರಬರುತ್ತ ಇವರಿಗೆ ಆರೋಗ್ಯವು ಕೆಡಲು ಆರಂಭವಾಯಿತು. ಇವರ ಕಠಿಣ ಆಚಾರ ವಿಚಾರಗಳೂ, ರೀತಿ ನೀತಿಗಳೂ, ಇದಕ್ಕೆ ಬಹು ಮಟ್ಟಿಗೆ ಕಾರಣವಾದವು. ಶ್ರಮ ಜೀವನವು ಇವರ ಬಲಹೀನತೆಗೆ ಕಾರಣವಾಯಿತು. ಈ ನಿಮಿತ್ತ ಇವರು ಹಾಸಿಗೆಯನ್ನು ಹಿಡಿಯಬೇಕಾಯಿತು. ಪುಣೆ ಇತ್ಯಾದಿ ಸ್ಥಳಗಳಲ್ಲಿ ಇವರು ಮದ್ದನ್ನು ತೆಗೆದುಕೊಂಡು ಚಿಕಿತ್ಸೆಯನ್ನು ಪಡೆದರು. ಆದರೂ ಆರೋಗ್ಯವು ಇವರಿಗೆ ಸರಿಬರಲಿಲ್ಲ. "ಮರಣವು ಮಾನವನಿಗೆ ಅಜನ್ಮಸಿದ್ಧ ಹಕ್ಕು" ಎಂಬ ತತ್ವವು ಇವರ ಸುರೀಯ ಜೀವನದಲ್ಲಿಯೂ ಸತ್ಯಸರಿಪೂರ್ಣವಾಯಿತು. ದಿನಾಂಕ ೩-೧೧-೧೯೪೭ರ ಸಂಧ್ಯಾವೇಳೆಯಲ್ಲಿನ ಐದುಗಂಟೆಯಲ್ಲಿ ಭೌತಿಕ ಕಾಯವನ್ನುಬಿಟ್ಟು ಕೀರ್ತಿಕಾಯರಾದರು. ಇಹಲೋಕ ವ್ಯವಹಾರ ಕಹಿಯಾಗಿ ಶಿವಲೋಕ ವ್ಯವಹಾರವು ಸಿಹಿಯಾಯಿತೋ ಏನೊ! ಕನ್ನಡ ಸಾಹಿತ್ಯ ಸಂಸ್ಕೃತಿ, ಹಿಂದೂಧರ್ಮದ ಪಾಲಕರಾದ ಇವರಿಗೆ ಕಣ್ಣೀರನ್ನು ಸುರಿಸಿದ ಕನ್ನಡಿಗನಿಲ್ಲ.

ಭಾರತದ ರಾಷ್ಟ್ರ ಧರ್ಮವಾದ ಆರ್ಯ ಭಾವನೆಯನ್ನು ಜಾಗೃತ ಗೊಳಿಸುವ ಕೆಲಸವನ್ನು ಮಂಜಪ್ಪನವರು ವೀರಶೈವ ವಿದ್ಯಾಲಯದಿಂದಲೂ, ಶರಣ ಸಂದೇಶ '' ದಿಂದಲೂ ಸಾಧಿಸಲು ಅನುಭವಿಸಿದ ಕಷ್ಟ ಕೋಟಲೆಯನ್ನು ಹೇಳ ತೀರದು ! ಮಂಜಪ್ಪ

ನವರು ಮಾಡಿದ ಕೃತಿಗಳೆಲ್ಲದರಲ್ಲಿ ಮತ್ತು ಅವರ ಎಲ್ಲ ಸಾಹಿತ್ಯ ರಚನೆಯಲ್ಲಿ ಒಂದೇ ಒಂದು ಸೂತ್ರವು ಕಾಣಿಸುತ್ತದೆ. ಅದುವೇ ರಾಷ್ಟ್ರಧರ್ಮ. ಆ ಸೂತ್ರದಲ್ಲಿಯೇ ತಮ್ಮ ಸರ್ವಸ್ವದ ಅಡಕ ವೀರಶೈವ ವಿದ್ಯಾಲಯದ ಸಂಚಾಲಕರಾಗಿದ್ದರೂ, 'ಶರಣ ಸಂದೇಶ'ದ ಸಂಪಾದಕರಾಗಿದ್ದರೂ ಜಾತೀತ್ವದ ಕೊರತೆಯು ಮಾತ್ರ ತಟ್ಟದೆ, ಭಾರತೀಯತೆಗೆ ಭಂಗಬಾರದಿರಲು ಈ ಸೂತ್ರವೇ ಕಾರಣ. ಅರವತ್ತು ವರ್ಷದ ಆಯುಷ್ಯದಲ್ಲಿ ಬಾಲ್ಯದ ಕೆಲವು ವರ್ಷಗಳನ್ನು ಬಿಟ್ಟರೆ ಯಾವ ಜೀವನವೂ ರಾಷ್ಟ್ರ ಜೀವನದಲ್ಲಿಯೇ ಕಳೆಯುವಂತಾಯಿತು. ಅಂತೆಯೇ ಸಾರ್ವಜನಿಕ ಜೀವನವನ್ನು ಸಾಗಿಸಿ, ರಾಷ್ಟ್ರಕಾರ್ಯಗಳನ್ನೇ ಕೈಗೊಂಡ ಅದರ ಅಭ್ಯುದಯವನ್ನು ಕಂಡು ಉಂಡರು. 'ಭಾರತಕ್ಕೆ ಬೇಕಾದುದು ರಾಷ್ಟ್ರೀಯತೆಯೊಂದೇ' ಎಂದ ಅಂಬಿಕಾಚರಣ ಮುಜಮುದಾರರನ್ನು ನೆನೆದುಕೊಂಡು ರಾಷ್ಟ್ರೀಯತೆಯ ಮಾತ್ರೆಯಿಂದ ಮಂಜಪ್ಪನವರ ಕನ್ನಡಿಗರಿಗೆ ಕಳೆಕೊಟ್ಟರು. ಒಂದೇ ಒಂದು ವ್ಯಕ್ತಿಯ ಉದ್ಧಾರವಾಗುವಂತಿದ್ದರೆ ಒಂದು ಲಕ್ಷಬಾರಿ ನಾನು ಜನ್ಮವೆತ್ತಿ ಬರುತ್ತೇನೆ ಎಂಬ ಸ್ವಾಮಿ ವಿವೇಕಾನಂದರ ವಾಣಿಯನ್ನು ಸಮರ್ಥಿಸಿ ಸಾಧಿಸಿದರು. ಅತುಲ ಸಾಹಸಿಗಳೂ, ಯೋಗಿಗಳೂ, ತಪಸ್ವಿಗಳೂ, ಸಮಾಜ ಸುಧಾರ ಉದ್ಯೋಗ ಶೀಲರೂ, ಜ್ಞಾನಕರ್ಮಯೋಗ ಸಂಯೋಗವೂ, ಶುದ್ಧ ಸ್ವದೇಶಿಗಳೂ, ಹಿಂದೂ ಮಹಾಮೂರ್ತಿಗಳೂ ಶರಣ ಸಂಪ್ರದಾಯ ಪ್ರಿಯರೂ ಆದ ಮಹಾನುಜರು ಹರ್ಡೇಕರ ಮಂಜಪ್ಪನವರು.

ಇವರ ಆದರ್ಶ ಜೀವನವು ಕನ್ನಗರಿಗೆ ಹುರುಪು ಹುಮ್ಮಸ್ಸನ್ನು ಕೊಟ್ಟಿದೆ. ಇವರ ಉದಾತ್ತೋನ್ನತ ಗುಣಗಳು ಕನ್ನಡಿಗರ ಹೃತ್ಕಮಲದಲ್ಲಿ ಅಡಗಿವೆ. ಇವರ ಗ್ರಂಥಗಳು ಇವರ ನೆನಪನ್ನು ಶಾಶ್ವತವಾಗಿ ನಿಲ್ಲಿಸಿವೆ. ಇವರ ಶರಣ ಸಂದೇಶವು ನಮ್ಮೆಲ್ಲರಿಗೂ ಅಂಜಿಕೆಯನ್ನು ಅದರಿಸಿ ಬಿಟ್ಟಿದೆ ಇವರ ಪ್ರಗತಿಗ್ರಂಥಮಾಲೆಯು ಕನ್ನಡಿಗರ ಪ್ರಗತಿಪಥವನ್ನು ತೋರಿಸುತ್ತಿದೆ; ಖಾದಿಶಾಸ್ತ್ರವು, ಸಾಧುವೃತ್ತಿಯನ್ನು ಉಪದೇಶಿಸುತ್ತದೆ. 'ಧನುರ್ಧಾರಿಯು' ಧನುಸ್ಸಿನ ಠೇಂಕಾರವನ್ನು ನೀಡಿದೆ. 'ಉದ್ಯೋಗ'ವು ಕನ್ನಡಿಗರಿಗೆ ಕಾರ್ಯೋತ್ಸಾಹವನ್ನು ಕೊಟ್ಟಿದೆ. ಆಲಮಟ್ಟಿಯ ಆಶ್ರಮವು ಇವರ ಅಂತ್ಯಸಂದೇಶವನ್ನು ಸಾರುತ್ತಾ ಎಚ್ಚತ್ತ ಕನ್ನಡಿಗರು ಎಚ್ಚರವಾಗಿ ನಡೆಯುವಂತೆ ಮಾಡಿದೆ.

---

# ಹಲಗೂರು ಮಠದ ಪಟ್ಟಾಧಿಕಾರ ಮಹೋತ್ಸವ

ತಾ॥ ೧೪-೫-೫೮ನೇ ಬುಧುವಾರ ಪ್ರಾತ:ಕಾಲ ಮಳವಳ್ಳಿ ತಾಲೂಕ
ಹಲಗೂರು ಗ್ರಾಮದ ಶ್ರೀ ಮದ್ರಾಂಭಾಪುರೀ ಮಹಾಸಂಸ್ಥಾನ ಶಾಖಾ ಮಠದ
ಮಹಾಚಾರ್ಯ ಪಟ್ಟಾಧಿಕಾರವನ್ನು ಗುಂಡ್ಲುಪೇಟೆ ತಾಲೂಕ ಪರಮಾ
ಪುರದ ವೇ॥ ಪಂಡಿತ ಎಚ್. ಶಿವಲಿಂಗ ಶಾಸ್ತ್ರಿಗಳವರಿಗೆ ವಿದ್ಯುಕ್ತವಾಗಿ
ದನಗೂರ ವೀರಸಿಂಹಾಸನ ಮಠದ ಷ॥ ಬ್ರಂ॥ ಷಡಕ್ಷರ ದೇಶಿಕೇಂದ್ರ
ಸ್ವಾಮಿಗಳವರಿಂದ ಅನುಗ್ರಹಿಸಲಾಯಿತು. ನೂತನ ಸ್ವಾಮಿಯವರನ್ನು ಶ್ರೀ
ವೀರಭದ್ರ ಶಿವಾಚಾರ್ಯರೆಂಬ ಅಭಿಧಾನದಿಂದ ಕರೆಯಲಾಯಿತು. ಈ
ಸಂದರ್ಭದಲ್ಲಿ ಅನೇಕ ವೀರಶೈವ ವಟುಗಳಿಗೆ ಶಿವದೀಕ್ಷಾ ಸಂಸ್ಕಾರವನ್ನು
ನಡೆಸಲಾಯಿತು. ಮಧ್ಯಾನ್ಹ ಮಹಾ ಪಾದಪೂಜಾ ಜಂಗಮಾರಾಧನೆ
ಯಾದನಂತರ ಬೆಂಗಳೂರು ಬೇಲಿ ಮಠದ ಶ್ರೀ. ನಿ ಪ್ರ. ಸಿದ್ಧಲಿಂಗ ಸ್ವಾಮಿ
ಗಳವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಶ್ರೀ ಜಡೆ ಸ್ವಾಮಿ ಅವರಿಂದ
ಪ್ರಾರ್ಥನೆಯಾದನಂತರ ಶ್ರೀ ಸುಬ್ಬಣ್ಣನವರಿಂದ ಸ್ವಾಗತ ಭಾಷಣವಾಯಿತು.
ಶ್ರೀ ಮಲ್ಲಿಕಾರ್ಜುನ ದೇಶಿಕರೂ, ಶ್ರೀ ಬಿ. ನಂಜುಂಡಪ್ಪನವರೂ, ವಂದಲಗೆರೆ
ಮಠದ ಷ. ಬ್ರಂ. ಮಹಲಿಂಗ ಸ್ವಾಮಿಗಳವರೂ, ಮೊರಳೆ ಮಠದ ಶ್ರೀ.
ನಿ. ಪ್ರ. ಶಿವರುದ್ರ ಸ್ವಾಮಿಗಳವರೂ ಭಾಷಣ ಮಾಡಿದರು. ಬಹಳ ಕಾಲ
ದಿಂದ ಸ್ಥಳೀಯ ಸಮಾಜದಲ್ಲಿದ್ದ ಭಿನ್ನತೆ ತೊಲಗಿ, ಐಕಮತ್ಯ ವಿಶೇಷ
ಸಹಾನುಭೂತಿ ಸಹಕಾರಗಳಿಂದ ಈ ಕಾರ್ಯವು ಅತ್ಯಂತ ಯಶಸ್ವಿಯಾಗಿ ನಡೆ
ಯಿತು. ಈ ಸಮಾರಂಭಕ್ಕೆ ಕೊಳ್ಳೆಗಾಲ, ನಂಜನಗೂಡು, ನೀಲಗಿರಿ,
ಗುಂಡ್ಲುಪೇಟೆ ಮುಂತಾಗಿ ಪರಸ್ಥಳಗಳಿಂದ ಅನೇಕ ಮಂದಿ ಮಠಾಧೀಶ್ವರರು
ದಯಮಾಡಿಸಿದ್ದರು. ಸಂಜೆ ನೂತನ ಶ್ರೀಗಳವರ ಉತ್ಸವವು ವೈಭವ
ದಿಂದ ನಡೆಸಲ್ಪಟ್ಟಿತು.

---

# ಆತ್ಮ ವಿವರಣೆ.

## (ಸಂಪಾದಕರಿಂದ)



ಶಿವಾನುಭವ ಪತ್ರಿಕೆಯ ಜೂನ, ಜುಲೈ ಸಂಚಿಕೆಗಳು ಹಿಂದೆಬಿದ್ದಿವೆ. ಈ ಪತ್ರಿಕೆಗೆ ಈಗ ೩೨ ವರ್ಷಗಳು ಪೂರ್ತಿಯಾಗಿದ್ದು ಈ ದೀರ್ಘ ಅವಧಿಯಲ್ಲಿ ಹೀಗೆ ಕೆಲ ಕಾಲವು ಪ್ರಾಪ್ತವಾದದ್ದು ಇದೇ ಮೊದಲನೆಯದಾಗಿದೆ. ಅನಿವಾರ್ಯ ಕಾರಣಗಳಿಗೋಸ್ಕರ ಹೀಗೆ ಮಾಡಬೇಕಾಗಿದೆ. ಮುಂದಿನ ಆಗಸ್ಟ ತಿಂಗಳು ೧೫ ನೇ ತಾರೀಖಿನಿಂದ ಅದು ಪುನಃ ಕ್ರಮವಾಗಿ ಪ್ರಾರಂಭವಾಗುವದು. ಹೀಗೆ ಮಾಡುವದರಿಂದ ೧೨೮ ಪುಟಗಳು ಕಡಿಮೆಯಾಗುವವು. ಈ ಪುಟಗಳನ್ನು ನಾವು ಐತಿಹಾಸಿಕ ವಿವರಣೆಗಳುಳ್ಳ ಹೊಸ ವಿಧದ ಗ್ರಂಥಗಳಿಂದ ಪೂರ್ತಿಗೊಳಿಸುವೆವು.

ಶಿವಶರಣರ ಚರಿತ್ರೆಗಳು ' ನಾಡಿಗೆ ಹೊಸತಾದ ಗ್ರಂಥಗಳಾಗಿವೆ. ಈ ಚರಿತ್ರೆಗಳು ನಮಗೆ ದೊರೆದಹಾಗೆ ಅವುಗಳನ್ನು ನಾವು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸುತ್ತ ಬಂದಿದ್ದೇವೆ. ವಚನ ವಾಙ್ಮಯ ಗ್ರಂಥಗಳು ಮಹತ್ವದವೆಂಬುದೇನೋ ನಿಜವು. ಆದರೆ ಆರಂಭಕಾಲದಲ್ಲಿ ಅವುಗಳಲ್ಲಿ ವ್ಯವಸ್ಥೆ ಇರದ್ದರಿಂದ ಅವುಗಳ ಮಹತ್ವವು ಜನತೆಗೆ ಅರಿಕೆಯಾಗಲಿಲ್ಲ. ಆದರೆ ಅವುಗಳಲ್ಲಿ ವ್ಯವಸ್ಥೆಯಾದ ಹಾಗೆ ವಚನಶಾಸ್ತ್ರಸಾರ ಭಾಗ ೧, ೨, ೩ ಈ ಗ್ರಂಥಗಳು ಪ್ರಕಟವಾದವು. ಅಂದಿನಿಂದ ಶಿವಶರಣರ ಉದಾತ್ತ ತತ್ವಗಳು ಪ್ರಸಾರವಾಗಹತ್ತಿದವು.

ಹಾಗೆಯೇ ವೀರಶೈವ ಇತಿಹಾಸವು ಬಹು ಮಹತ್ವವಾದದ್ದು. ಅದು ಶಿವಶರಣರ ಚರಿತ್ರೆಗಳಲ್ಲಿ ಅಡಕವಾಗಿರುತ್ತದೆ. ಇವುಗಳ ಭಾಗ ೧, ೨, ೩, ೪ ಈ ಗ್ರಂಥಗಳಲ್ಲಿ ಅದು ಹುದುಗಿರುತ್ತದೆ. ಅದನ್ನು ನಿಶ್ಚಿತ ಸ್ವರೂಪದಲ್ಲಿ ಪ್ರಕಟಪಡಿಸುವ ಸಮಯವು ಇನ್ನೂ ಪ್ರಾಪ್ತವಾಗಿಲ್ಲ. ಮುಂದೆ ಈ ಸಮಯವು ಬೇಗನೆ ಬರುವದು. ಈ ಗ್ರಂಥಗಳಲ್ಲಿ ವೀರಶೈವರ ರಾಜಕೀಯ ಸಾಮಾಜಿಕ ಸಾಂಸ್ಕೃತಿಕ ಇತಿಹಾಸವಿರುತ್ತದೆ

ವೀರಶೈವರ ಉಜ್ವಲ ಇತಿಹಾಸವನ್ನು ಈ ಸಾವಿರ ವರುಷಗಳಿಂದ ನಮ್ಮ ಪ್ರತಿಸ್ಪರ್ಧಿಗಳು ಯಾರಿಗೂ ಗೋಚರವಾಗದಂತೆ ನಾಶಮಾಡುವ

ದರಲ್ಲಿ ತೊಡಗಿರುತ್ತಾರೆ. ಉಳವಿಯ ಮಹಾಅರಣ್ಯ ಯುದ್ಧದಲ್ಲಿ ಅದಕ್ಕೆ ದೊಡ್ಡ ಆಘಾತವು ಒದಗಿತು. ಆಗ ವೀರಶೈವರಿಗೆ ಅಳಿಗಾಲವು ಬರುವದು ನಿಶ್ಚಯವೆಂದು ತೋರಹತ್ತಿತ್ತು. ಆದರೆ ಬಸವೇಶ್ವರ, ಬಸವೇಶ್ವರನ ಅಕ್ಕ, ನಾಗಲಾಂಬಿಕೆ ಮತ್ತು ಆತನ ಭಾರ್ಯೆಯರಾದ ನೀಲಾಂಬಿಕೆ, ಗಂಗಾಂಬಿಕೆಯರು, ನುಲಿಯ ಚಂದಯ್ಯ ಇವರ ಪುಣ್ಯ ಪ್ರಭಾವದಿಂದ ಶಿವಶರಣರ ಚರಿತ್ರೆಗಳು ಪುನಃ ಬೆಳಗಹತ್ತಿದವು. ಅವರ ಚರಿತ್ರೆಗಳು ಶಿವಶರಣರ ಚರಿತ್ರೆಗಳು ಭಾಗ ೧, ೨, ೩, ೪ ಈ ಗ್ರಂಥಗಳಲ್ಲಿ ಇವೆ. ಇನ್ನು ಮುಂದೆ ಅವರ ಹೆಸರುಗಳನ್ನು ಕರ್ನಾಟಕವು ಎಂದಿಗೂ ಮರೆಯಲಾರದು. ಅವರ ಇತಿಹಾಸವು ಮಲಪರು, ಸಾಂತರರು, ನೋಳಂಬ ಪಲ್ಲವರು, ಗುತ್ತಲದ ಗುತ್ತರಸರು, ಗೋವೆಯ ಕದಂಬರು, ಹಾನಗಲ್ಲು ಕದಂಬರು, ಸವದತ್ತಿ ಮತ್ತು ಬೆಳಗಾವಿಯ ರಟ್ಟರು ಈ ವಂಶಗಳ ರಾಜರ ಚರಿತ್ರೆಗಳಲ್ಲಿ ಅಡಕವಾಗಿರುತ್ತದೆ. ಇವರ ಇತಿಹಾಸವು ಇನ್ನೂ ಕಾಡಿನಲ್ಲಿ ಹುದುಗಿರುತ್ತದೆ. ಈ ರಾಜರ ಇತಿಹಾಸವನ್ನು ನಾವು ಧಾರವಾಡದ ಉಳವಿ ಬಸಪ್ಪನ ಗುಡ್ಡದಲ್ಲಿರುವ ವೀರಗಲ್ಲು ಹುಬ್ಬಳ್ಳಿಯ ಮಗ್ಗುಲಲ್ಲಿರುವ ಬುಡ್ಡರಸಿಂಗಿಯ ಶಿಲಾಶಾಸನ, ಅದಕ್ಕೆ ಸಮೀಪವಾಗಿರುವ ಉಣಕಲ್ಲು, ಮುಂದೆ ತಂಬೂರು ಈ ಸ್ಥಳಗಳಿಗೆ ಸಮೀಪವಿರುವ ಮಡಿವಾಳ ಮಾಚಿದೇವನ ಸಮಾಧಿ ಸ್ಥಳ, ಮಹಾಮನೆ ಪರ್ವತ, ತುಂಗಾ, ಭದ್ರಾ ನದೀ ತೀರ ಪ್ರದೇಶಗಳು, ಎಣ್ಣೆ ಹೊಳೆ ತೀರ, ನಂದೀ ಗ್ರಾಮ, ದಿಗಂಬರ ಮುಕ್ತಿಮುನಿಯು ನಡಿಸಿದ ಅರಣ್ಯಯುದ್ಧಗಳು ಇವುಗಳು ಶಿವಶರಣರು ನಡಿಸಿದ ಅದ್ಭುತ ಸಾಹಸಗಳಾಗಿವೆ. ಇವುಗಳ ವಿವರಗಳನ್ನು ಸಂಶೋಧಿಸುವದು ವೀರಶೈವರ ಕರ್ತವ್ಯವಾಗಿದೆ.

ಮೇಲ್ಕಂಡ ಸಂಗತಿಗಳನ್ನು ನಾವು ಈ ಪತ್ರಿಕೆಯಲ್ಲಿ ವರ್ಷ ಎರಡು ವರುಷಗಳವರೆಗೆ ಮುಂವರಿಸುತ್ತ ಹೋಗುವೆವು.

———

# ವಿಷಯಾನುಕ್ರಮಣಿಕೆ







## ಗೀತೆ, ಐತಿಹಾಸಿಕ ಗ್ರಂಥವೇನು ?

(ಲೇಖಕರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ, ತೆಗ್ಗಿಹಳ್ಳಿ (ಇಂಡಿ)

ಇದೊಂದು ವ್ಯಾಸಮಹರ್ಷಿಗಳು ಭಾರತದಲ್ಲಿ ಸೇರಿಸಿದ ದಿವ್ಯ ಅಧ್ಯಾತ್ಮ ವಿಚಾರದ ವಿಷಯವಾಗಿರುವದು. ವ್ಯಾಸರು ಹದಿನೆಂಟು ಪುರಾಣಗಳನ್ನು ಬರೆದರು, ಅನೇಕ ಶಾಸ್ತ್ರಗಳನ್ನು ರಚಿಸಿದರು, ಅಲ್ಲದೆ ವಿಶ್ವ ಕೋಶವೆನಿಸಿದ ಮಹಾಭಾರತವನ್ನು ಬರೆದರು. ಭಾರತದಲ್ಲಿ ಸಕಲ ವಿಷಯಗಳನ್ನು ಸೇರಿಸಿ ಬಹು ದೊಡ್ಡದಾದ ಹೆಬ್ಬೊತ್ತಿಗೆಯನ್ನೇ ಬರೆದಿದ್ದಾರೆ. ಈ ಋಷಿಗಳಷ್ಟು ಗ್ರಂಥಗಳನ್ನು ಇನ್ನಾರೂ ಬರೆದಂತೆ ತೋರುವದಿಲ್ಲ ಇವುಗಳಲ್ಲದೆ ಇನ್ನೂ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಆದರೆ ಮಹಾಭಾರತ ಗ್ರಂಥದಲ್ಲಿದ್ದ ಕೌರವ ಪಾಂಡವರ ಚರಿತ್ರೆಯು ಸತ್ಯವೋ ಮಿಥ್ಯವೋ ಹೇಳಲಿಕ್ಕಾಗುವದಿಲ್ಲ. ಕೌರವ ಪಾಂಡವರ ಜನನ, ಅವರ ಲಗ್ನ, ಆದರ ಬಾಲ್ಯದ ವರ್ತನೆ, ಪ್ರೌಢರಾದ ಬಳಿಕ ಅವರ ಕಾರ್ಯಗಳು, ಅದರಲ್ಲಿಯು

ವರ್ಣನೆಗಳು, ಅದ್ಭುತಗಳು, ಅರ್ಜುನನ ವೈರಾಗ್ಯ ಗೀತೆಯ ಉಪದೇಶ ಹೀಗೆ ಎಲ್ಲವನ್ನು ಕೂಲಂಕಷವಾಗಿ ವಿಚಾರಿಸಿದರೆ ಪಾಂಡವರು ಕೌರವರು ಇದ್ದರೋ ಇಲ್ಲವೋ ಎಂಬ ಶಂಕೆ ಉಂಟಾಗುವದು. ಒಂದು ವೇಳೆ ಇವರು ಇದ್ದರೆಂದು ತಿಳಿದರೂ ಈ ಮಹಾಭಾರತವೆಲ್ಲ ಇವರಿಗೆ ಅಕ್ಷರಶಃ ಸಂಬಂಧ ಪಡುವದಿಲ್ಲೆಂದು ಅನಿಸದೆ ಇರುವದಿಲ್ಲ. ಈ ಮಹಾಭಾರತವು ಐತಿಹಾಸಿಕ ನಿಜವಾದ ಗ್ರಂಥವಲ್ಲೆಂದು ಅನಿಸುವದು. ಯಾಕಂದರೆ ಈಗಿನ ಕಾಲದ ಲ್ಲಿಯೂ ಕೂಡ ಕವಿಗಳು ಗ್ರಂಥಕಾರರು ಅನೇಕ ಕಾದಂಬರಿ ಪುರಾಣಗ ಳನ್ನು ಮಹಾತ್ಮಾಗಾಂಧಿ, ಲೋಕಮಾನ್ಯ ಟಿಳಕ ಮೊದಲಾದವರ ಬಗ್ಗೆ ಅದ್ಭುತವಾಗಿ ಬರೆದದ್ದು ಕಂಡುಬರುತ್ತದೆ. ಅವರಿಗೆ ರೆಕ್ಕೆಗಳನ್ನು ಹಚ್ಚಿ ಆರು ಕೈ ಮೂರು ತಲೆ ಮೊದಲಾದವುಗಳನ್ನು ಮಾಡಿ ಚಿತ್ರಗಳನ್ನೂ ಸಹ ತೆಗೆದದ್ದು ನೋಡಿದರೆ, ಈ ಮಹಾಭಾರತವು ನಿಜವಾದ ಐತಿಹಾಸಿಕ ಗ್ರಂಥ ವಲ್ಲೆಂದು ತೋರುವದು. ಅದರಂತೆ ಸಕಲ ಪುರಾಣಗಳ ಹಸೆಯು ಬರ ಹವೂ ಇರುವದೆಂದು ಅನ್ನಿಸುತ್ತದೆ.

ರಾಮ ಪುರಾಣ, ಬ್ರಹ್ಮಪುರಾಣ, ವಿಷ್ಣುಪುರಾಣ, ಶಿವಪುರಾಣ, ಪದ್ಮಪುರಾಣ, ಗರುಡ ಪುರಾಣ, ಭಾಗವತ ಪುರಾಣ ಮೊದಲಾದ ಇನ್ನೂ ಅನೇಕ ಪುರಾಣಗಳಲ್ಲಿ ಬಂದ ವ್ಯಕ್ತಿಗಳು ಇದ್ದರೋ ಇಲ್ಲವೋ ಎಂಬು ದನ್ನು ಹೇಳುವದು ಕಠಿಣವಿರುವದು. ಒಂದುವೇಳೆ ಈ ವ್ಯಕ್ತಿಗಳು ಇದ್ದ ರೆಂದು ತಿಳಿದುಕೊಂಡರೂ ಕೂಡ ಅವುಗಳಲ್ಲಿ ಬಂದ ವರ್ಣನೆಗಳು ಸುಳ್ಳೆಂದು ಹೇಳಲಡ್ಡಿ ಇಲ್ಲ. ರಾವಣನಿಗೆ ಹತ್ತು ತಲೆ, ಇಪ್ಪತ್ತು ಕೈ, ಕುಂಭಕರ್ಣನ ಶರೀರ ಕಣ್ಣು ಮೂಗುಗಳ ವಿಸ್ತಾರ ಮೊದಲಾದವುಗಳನ್ನು ಓದಿದರೆ ಎಂಥ ವನಿಗಾದರೂ ಇವು ಸುಳ್ಳೆಂದು ಅನಿಸುವವು. ಆದರೆ ಇವೆಲ್ಲ ನಮ್ಮ ಶರೀರ ದಲ್ಲಿಯ ಗುಣಗಳಿಗೆ ಹೋಲಿಸಿ ಬರೆದ ದಿವ್ಯ ಗ್ರಂಥಗಳೆಂದು ಹೇಳಬಹುದು. ಬಹುತರ ಹಿಂದಿನ ಕವಿಗಳೆಲ್ಲ ಇದೇ ಮಾರ್ಗವನ್ನು ಅನುಸರಿಸಿ ಅಸಂಖ್ಯ ಗ್ರಂಥಗಳನ್ನು ರಚಿಸಿದ್ದು ಕಂಡುಬರುತ್ತದೆ. ಬಿಗಿಯಾದ ಅಧ್ಯಾತ್ಮಿಕ ಹಾಗೂ ಶರೀರ ಶೋಧಗಳನ್ನು ಕಥೆಯ ರೂಪದಿಂದ ಪುರಾಣ ರೂಪದಿಂದ ಸವಿ ಯಾಗುವಂತೆ ರುಚಿಕಟ್ಟಾಗುವಂತೆ ಒಳ್ಳೇ ಬೋಧಪ್ರದವಾಗುವಂತೆ ರಚಿಸಿ ದ್ದಾರೆಂದು ಅನಿಸುವದು. ಅದರಂತೆ ಅನೇಕ ಕವನಗಳನ್ನೂ ಪದಪದ್ಯಗ ಳನ್ನು ರಚಿಸಿದ್ದು ಕಂಡುಬರುತ್ತದೆ. ಇದರಂತೆ ಈ ಭಗವದ್ಗೀತೆಯನ್ನು

ವ್ಯಾಸ ಮಹಾ ಋಷಿಯು ಭಾರತದಲ್ಲಿ ಸೇರಿಸಿದ್ದಾರೆ. ಇದಕ್ಕೆ ಕೌರವ ಪಾಂಡವರ ಯುದ್ಧದಲ್ಲಿ ಅರ್ಜುನನಿಗೆ ವೈರಾಗ್ಯ ಬಂದಂತೆ ನಿರ್ಮಾಣ ಮಾಡಿ ಶ್ರೀಕೃಷ್ಣನು ಈ ಗೀತಾಬೋಧೆಯನ್ನು ಅವನಿಗೆ ಮಾಡಿದಂತೆ ತೋರಿಸಿ ಅವನನ್ನು ಪುನಃ ಯುದ್ಧಕ್ಕೆ ಪ್ರವೃತ್ತನನ್ನಾಗಿ ಮಾಡಿದ್ದಾನೆ. ಇದರಿಂದ ಜನಸಾಮಾನ್ಯರಿಗೆ ಈ ಸಂಸಾರದಲ್ಲಿ ನಪ್ಪಾವು ಕರ್ಮಗಳನ್ನು ಭಕ್ತಿಯುಕ್ತ ರಾಗಿ ಜ್ಞಾನದಿಂದ ಹೇಗೆ ಮಾಡಿದರೆ ಮೋಕ್ಷಸಿಗುತ್ತದೆಂಬ ಶಾಸ್ತ್ರವನ್ನು ಇದರಲ್ಲಿ ವಿಶದವಾಗಿ ಬೋಧವಾಗುವಂತೆ ಬರೆದಿದ್ದಾರೆ. ಇದೆಲ್ಲ ವ್ಯಾಸ ಮಹಋಷಿಗಳ ದಿವ್ಯ ಕೃತಿಯಾಗಿರುವದು.

ಆದರೆ ಬಹುತರ ಅನೇಕರು ಇದು ಐತಿಹಾಸಿಕ ಗ್ರಂಥವೆಂದು ಅಭಿ ಪ್ರಾಯಪಡುವರು. ಆದರೆ ಮಹಾತ್ಮಾ ಗಾಂಧಿಯವರು ಮಾತ್ರ ಇದು ಐತಿಹಾಸಿಕ ಗ್ರಂಥವಲ್ಲೆಂದು ಅಭಿಪ್ರಾಯಪಟ್ಟಿರುವರು. ಈ ಜಗದಲ್ಲಿ ಖಂಡ ಗಳಲ್ಲಿ ದೇಶದಲ್ಲಿ ಪ್ರಾಂತಗಳಲ್ಲಿ ಜಿಲ್ಹೆಗಳಲ್ಲಿ ತಾಲೂಕುಗಳಲ್ಲಿ ಊರಲ್ಲಿ ಮನೆಯಲ್ಲಿ ತನ್ನ ಶರೀರದಲ್ಲಿ ಹೀಗೆ ಸದಾ ಸದ್ಗುಣ ದುರ್ಗುಣ (ದೈವೀ ಶಕ್ತಿ ಅಸುರಶಕ್ತಿಗಳ) ನಡುವೆ ಕಲಹ, ದ್ವಂದ್ವ, ಯುದ್ಧ, ಜಗಳ, ನಡೆದೇ ಇದೆ. ಒಮ್ಮೆ ಒಬ್ಬರ ಮೇಲುಗೈಯಾದರೆ, ಇನ್ನೊಮ್ಮೆ ಇನ್ನೊಬ್ಬರ ಮೇಲ ಗೈಯಾಗುತ್ತಿರುವದು. ಅಂತ್ಯದಲ್ಲಿ ಸದ್ಗುಣಗಳಿಗೆ ಜಯ ಲಭಿಸುವದನ್ನು ಸದಾ ನೋಡುತ್ತೇವೆ. ಪಾಂಡವರೆಂದರೆ ಪಂಚಸದ್ಗುಣಗಳು, ಕೌರವರೆಂದರೆ ೧೦೧ ದುರ್ಗುಣಗಳು ಈ ಶರೀರದಲ್ಲಿರುವವು. ಕರ್ಣನೆಂದರೆ ಮನಸು, ಅರ್ಜುನನೆಂದರೆ- ಜೀವಭಾವ, ಶ್ರೀಕೃಷ್ಣನೆಂದರೆ- ಪರಮಾತ್ಮಭಾವ, ಧರ್ಮ ಕ್ಷೇತ್ರ- ಕುರಕ್ಷೇತ್ರವೆಂದರೆನೇ ಈ ಶರೀರ. ಹೀಗೆ ಈ ಗೀತೆಯು ಶರೀರಕ್ಕೆ ಚನ್ನಾಗಿ ಹೋಲಿಕೆಯಾಗುವದು. ಇದರಂತೆ ರಾಮಾಯಣದ ಸ್ಥಿತಿಯೂ ಇರುವದು. ಬಹುತರ ಎಲ್ಲ ಗ್ರಂಥಗಳನ್ನು ಈ ಶರೀರಕ್ಕೆ ಹೋಲಿಸಿದ್ದು ಕಂಡುಬರುತ್ತಿದೆ. ಆ ಗ್ರಂಥಗಳಲ್ಲಿಯ ವ್ಯಕ್ತಿಗಳು ಅವುಗಳಲ್ಲಿ ಬಂದಿರ ಬಹುದು. ಆದರೆ ಅದ್ಭುತವಾದ ಅತಿ ಬಣ್ಣದಿಂದ ಬಣ್ಣಿಸಿ ಕವಿಗಳು ತಮ್ಮ ಜ್ಞಾನಶಕ್ತಿ ಬುದ್ಧಿಶಕ್ತಿಯನ್ನು ಪ್ರಕಟಗೊಳಿಸಿದ್ದಾರೆಂದು ತೋರು ವದು. ಅದಕ್ಕೆ ಈ ಗ್ರಂಥಗಳನ್ನು ಸತ್ಯವಾಗಿ ಘಟಿಸಿದ ಸಂಗತಿಗಳ ಚರಿತೆ ಎಂದು ಓದದೆ, ಅವುಗಳಲ್ಲಿಯ ಅಧ್ಯಾತ್ಮದ ಶಾರೀರಿಕ ಶೋಧದ ತಿರು ಳನ್ನು ಗ್ರಹಿಸಲಿಕ್ಕೆ ಯತ್ನಿಸಬೇಕೇಹೊರತು ಇವೆಲ್ಲ ಅಘಟಿತ ಘಟನೆಗ

ಳನ್ನು ಆ ಮಹಾ ವ್ಯಕ್ತಿಗಳು ಮಾಡಿದರು. ನಾವು ಅದರ ಮುಂದೆ ಹುಲ್ಲು ಕಡ್ಡಿಗೆ ಸಮಾನರು ಎಂದು ದಂಗುವಂದು ಮೂಢನಂತೆ ಅವರದನ್ನು ನೆನಿಸುತ್ತ ಕುಳ್ಳಿರಬಾರದು. ಇದರಿಂದ ಮಾನವನು ನಿಜವಾಗಿ ಹೇಡಿಯಾಗುವದರಲ್ಲಿ ಸಂದೇಹವಿಲ್ಲ. ಈ ಪುರಾಣಗಳು ಕೇಳಲಿಕ್ಕೆ ಬಲು ಸೊಗಸಾಗಿಯೇ ಇರುವವು ಬರೇ ಕೇಳಿ ಮಾಡುವ್ಧದಾದರೂ ಏನು? ನಿನ್ನ ನಿಜವನ್ನು ಕಾಣುವದಕ್ಕೆ ಅವೆಲ್ಲ ಗ್ರಂಥಗಳು ನಿನಗೆ ನೆರವಾಗಬೇಕು. ಅಂದರೆ ಆ ಗ್ರಂಥ ಬರೆದದ್ದಕ್ಕೂ ಓದಿದ್ದಕ್ಕೂ ಕೇಳಿದ್ದಕ್ಕೂ ಒಳ್ಳೇ ಸಾರ್ಥಕವಾಗುವದು. ಹುಚ್ಚನಂತೆ ಅದ್ಭುತ ಪವಾಡ, ಲೀಲೆ, ಮಹಿಮೆ ಎಂದು ಬೊಟ್ಟು ಕಚ್ಚಿ ಕೂಡ್ರುವದು ಒಳಿತಲ್ಲ. ಅದರಂತೆ ಗೀತೆಯ ಮೊದಲನೇ ಅಧ್ಯಾಯದಲ್ಲಿ ಕೌರವ ಪಾಂಡವ ಸೇನೆಯ ವರ್ಣನೆಯನ್ನು ಮಾಡಿದಾಕ್ಷಣ ಈ ಗೀತೆಯನ್ನು ರಣಾಂಗಣದಲ್ಲಿ ಉಪದೇಶ ಮಾಡಿದನೆಂದು ಯಾರೂ ತಿಳಿಯಬಾರದು. ರಣಾಂಗಣದಲ್ಲಿ ಐತಿಹಾಸಿಕವಾಗಿ ಗ್ರಂಥ ಘಟನೆಗಳು ನಡೆದಿರುವವೇನು? ಇಂಥವುಗಳನ್ನು ಈಗ ಎಲ್ಲಿಯಾದರೂ ಯಾರಾದರೂ ಕಂಡಿರುವರೇನು? ಎಂಬ ಪ್ರಶ್ನೆಗೆ ಯಾರೂ ಉತ್ತರ ಹೇಳುವಂತಿಲ್ಲ. ವೈರಾಗ್ಯ ಬರುವದಕ್ಕೆ ಬಾಹ್ಯಕಾರಣಗಳು ಯಾವವು ಬೇಕು? ಅಂತರಂಗದ ಕಾರಣವೇನುಬೇಕು? ಇಂಥ ತ್ಯಾಗದ ವೈರಾಗ್ಯದ ಚರಿತೆಗಳು ಎಷ್ಟು ಆಗಿವೆ? ಅವು ಹೇಗೆ ಆಗಿವೆ? ಎಂಬುದನ್ನು ಸಹ ಕೂಲಂಕಷವಾಗಿ ವಿಚಾರಿಸಿ ಈ ಗೀತೆಯ ಪ್ರಾರಂಭವನ್ನು ಇವುಗಳಿಗೆ ಹೋಲಿಸಬೇಕೇ ಹೊರತು ಮೂರ್ಖನಂತೆ ಯಾವದನ್ನೂ ನಂಬಲಾಗದು. ಇದು ವಿಜ್ಞಾನ ಯುಗ ಎಲ್ಲಕ್ಕೂ ಕಾರಣ ಪ್ರಮಾಣ ಪ್ರಸಂಗಗಳನ್ನು ಪ್ರತಿಯೊಬ್ಬರೂ ಕೇಳುವರು. ಶಿವನು ಪಾರ್ವತಿಗೆ ಹೇಳಿದನು, ಶಿವನು ಷಣ್ಮುಖನಿಗೆ ಹೇಳಿದನು, ನಾರದನು ಬೋಧಿಸಿದನು, ರಾಮನು ಬೋಧಿಸಿದನು, ಕೃಷ್ಣನು ಬೋಧಿಸಿದನು ಎಂದು ಈಗಿನವರೂ ಕೂಡ ಅನೇಕ ಗ್ರಂಥಗಳನ್ನು ಬರೆದದ್ದು ಕಂಡು ಬರುತ್ತದೆ. ಆದರೆ ಅದರ ಅರ್ಥವೇನಂದರೆ, ತಾನು ಸ್ವತಃ ಹೇಳಲಿಲ್ಲ. ತನ್ನಲ್ಲಿ ಉದ್ಭವಿಸಿದ ಶಿವ, ಪಾರ್ವತಿ, ನಾರದ, ರಾಮ, ಕೃಷ್ಣರೆಂಬ ಶಕ್ತಿಗಳು ಬೋಧಿಸಿದರೆಂದು ಅರ್ಥ ಮಾಡಿಕೊಳ್ಳಬೇಕೇ ಹೊರತು, ಅವರೇ ಬೋಧಿಸಿದ ಗ್ರಂಥಗಳೆಂದು ಯಾರೂ ತಿಳಿಯಬಾರದು. ಅದರಂತೆ ವೇದಗಳು, ಕುರಾನ, ಬಾಯಬಲ್ಲ, ಮೊದಲಾದ ಗ್ರಂಥಗಳು ಅಪೌರುಷೇಯವೆಂದು ಹೇಳುವದು. ದೇವರಿಂದಲೇ ಬಂದವೆಂದು ಹೇಳುವರು. ಇದಕ್ಕೂ

ಅರ್ಥವಿರುವದು. ಶರೀರ ಭಾವ ಮರೆತಾಗ, ದೇವಭಾವದಲ್ಲಿ ಇದ್ದಾಗ ಬರೆದ ಗ್ರಂಥಗಳೆಂದು ಅರ್ಥ ಮಾಡಬೇಕು. ಇಲ್ಲದ ಅರ್ಥ ಮಾಡಿ ಮಾನವರು ದುರಭಿಮಾನಿಗಳಾಗಿ ಬಡಿದಾಡಿ ಸತ್ತ ಅನೇಕ ಉದಾಹರಣೆಗಳುಂಟು. ಆದಕ್ಕೆ ಗೀತೆಯನ್ನು ಶ್ರೀಕೃಷ್ಣನು ಅರ್ಜುನನಿಗೆ ರಣರಂಗದಲ್ಲಿ ಬೋಧಿಸಿದ್ದದಲ್ಲ. ವ್ಯಾಸ ಮಹರ್ಷಿಗಳು ಈ ಶರೀರದಲ್ಲಿಯ ಗುಣಗಳಿಗೆ ಹೋಲಿಸಿ ಬೋಧಿಸಿದ ಸಕಲರ ಗ್ರಂಥವೆಂದು ತಿಳಿಯಬೇಕು. ಈ ಹೆಸರನ್ನು ಕೇಳಿ ಇದು ಬ್ರಾಹ್ಮಣರ ಗ್ರಂಥವೆಂದು ಅವರಿಗೆ ಭಾವ. ಆದರಂತೆ ಅವರು ಗ್ರಂಥವನ್ನೇಕೆ ಓದಬೇಕೆಂದು ತಿರಸ್ಕಾರಮಾಡಿಬಿಟ್ಟಿದ್ದಾರೆ. ಇದು ಯಾವ ಮತಧರ್ಮ, ಪಂಥ, ಜಾತಿಯ ಗ್ರಂಥವಲ್ಲ, ಇದು ಎಲ್ಲರ ಶರೀರದಲ್ಲಿ ನಡೆಯುವ ದ್ವಂದ್ವ ಯುದ್ಧಗಳ ನಡುವೆ ಹೊರಟ ದಿವ್ಯ ಉಪದೇಶವಾಗಿದೆ. ಆದಕ್ಕೆ ಗೀತೆಗೆ ಇಷ್ಟೊಂದು ಮಹತ್ವಬಂದಿದೆ. ಬರೀ ವೈಷ್ಣವರ ಗ್ರಂಥ ಅಥವಾ ನಾರಾಯಣನ ಗ್ರಂಥ, ಕೃಷ್ಣನ ಗ್ರಂಥವೆಂದಿದ್ದರೆ ಉಳಿದವರು ಯಾರೂ ಇದನ್ನು ಓದುತ್ತಿರಲಿಲ್ಲ. ಈ ಗ್ರಂಥವು ಜಾತ್ಯತೀತ, ರಾಷ್ಟ್ರಾತೀತ ಇದ್ದುದರಿಂದಲೇ ಇಷ್ಟು ಪ್ರಸಿದ್ಧಿಯನ್ನು ಪಡೆದಿದೆ. ಇದೊಂದು ಆತ್ಮಪುರಾಣ ಅಥವಾ ಆತ್ಮಬೋಧೆಯ ಮುಕ್ತಿಸಾಧನೆಯ ಗ್ರಂಥವಾಗಿರುವದು. ಇಂಥ ಮಂತ್ರದ ಇಂಥ ದೇವರನ್ನು ಧ್ಯಾನಿಸಬೇಕು ಎಂದು ಸಹ ಎಲ್ಲಿಯೂ ಹೇಳಿಲ್ಲ. ಸಾಮಾನ್ಯವಾಗಿ ಓಂಕಾರಕ್ಕೆ ಮಹತ್ವಕೊಟ್ಟಿದ್ದಾನೆ. ಆದರೆ ವಿಶ್ವರೂಪ ದರ್ಶನದಲ್ಲಿ ಸಕಲ ದೇವಾದಿದೇವತೆಗಳನ್ನು ದರ್ಶನ ಮಾಡಿಸಿದ್ದಾನೆ. ಆದಕ್ಕೆ ಈ ಗ್ರಂಥವು ಯಾವ ಮತಪಂಗಡ ಜಾತಿ ಧರ್ಮಕ್ಕೆ ಸಂಬಂಧಿಸಿಲ್ಲ. ಇಡೀ ಮಾನವ ಕುಲಕ್ಕೆ ಮಾತ್ರ ಸಂಬಂಧಿಸಿದ ದಿವ್ಯ ಗ್ರಂಥವಾಗಿದೆ. ಅದಕ್ಕೆ ಸಕಲರೂ ಇದನ್ನು ಅರಿತು ಇದರ ಅಧ್ಯಯನ ಮಾಡಿ ಇದರಲ್ಲಿಯ ಆತ್ಮಸ್ವರೂಪವ ಬೋಧೆಯನ್ನೂ ಪರಿಭಕ್ತಿಯನ್ನೂ ನಿಷ್ಕಾಮಕರ್ಮವನ್ನೂ ದಿವ್ಯಜ್ಞಾನವನ್ನೂ ಅರಿತುಕೊಂಡು ಸಾಧನ ಮಾಡಿ ನಡೆದು ಪಡೆದು ಕೃತಾರ್ಥರಾಗಬೇಕು ಹೊರತು ನಮ್ಮದಲ್ಲ ಎಂದು ತಿರಸ್ಕರಿಸಿದರೆ ಮಹಾ ಹಾನಿ ಬರುವದು ಸಹಜವಿದೆ. ಯಾವ ದೇಶದಲ್ಲಿ ಯಾವ ಪರ್ವತದಲ್ಲಿ ಯಾವ ವ್ಯಕ್ತಿಯಿಂದ ರತ್ನ ತೆಗೆದರೆಂಬುದನ್ನು ನೋಡದೆ ರತ್ನದ ನಿಜವಾದ ಬೆಲೆಯರಿತು ಈ ರತ್ನದ ಸದುಪಯೋಗ ಮಾಡಿಕೊಳ್ಳಬೇಕೆಂದು ಸೂಚಿಸದೆ ಇರಲಾರೆವು.

———

# ಅಣ್ಣ ಕಟ್ಟಿದ ಬುತ್ತಿ.

(ಲೇಖಕರು:— ಶ್ರೀ ನಾ. ಮ. ಸಿದ್ಧರಾಮಯ್ಯ ನಾಗರಹಾಳು.)

ಅಣ್ಣ! ನಮ್ಮ ಬಸವಣ್ಣ ಕಟ್ಟಿದಬುತ್ತಿ! ಬುತ್ತಿಯೆಂದರೆ ಎಲ್ಲರಬಾಯಲ್ಲೂ ನೀರೂರ ಬಹುದಲ್ಲವೇ? ಬುತ್ತಿಎಂದರೆ ಅದರಲ್ಲಿ ವಿಶೇಷತೆ ಇದ್ದೇ ಇರಬೇಕು. ಬುತ್ತಿಯೆಂದರೆ ರೈತನ ಹೆಂಡತಿ ನೇಗಿಲು ಹೆಗಲಲ್ಲಿ ಹೊತ್ತು ಹೊಲಗದ್ದೆಗಳಿಗೆ ಕೆಲಸಮಾಡಲಿಕ್ಕಾಗಿ ಮುಂಜಾವದಲ್ಲಿ ಹೋಗುವ ತನ್ನ ಇನಿಯನಿಗೆ ಕಟ್ಟುವಬುತ್ತಿ – ಬುತ್ತಿಯಲ್ಲ. ತಾಯಿ ತನ್ನ ಮಗಳು ಗಂಡನ ಮನೆಗೆ ಹೋಗುವಾಗ ಕಟ್ಟುವಬುತ್ತಿ–ಬುತ್ತಿಯಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಯಾವುದೇ ವಿಧದಿಂದ ಕಟ್ಟಿದ ದಾರಿಯಬುತ್ತಿಅಲ್ಲ. ಹಾಗಾದರೆ ಅಣ್ಣ 'ಬಸವಣ್ಣ' ತಮ್ಮಂದಿರಿಗೆ ಕಟ್ಟಿದ ಬುತ್ತಿ ಎಂಥಹದು? ಅಣ್ಣನು ಕಟ್ಟಿದಬುತ್ತಿಯಲ್ಲಿ ಕಜ್ಜಾಯ ಭಕ್ಷ್ಯಾದಿಗಳನ್ನು ಸಂಗ್ರಹಿಸಿ ಕಟ್ಟಿರುವನೇ ಅಲ್ಲ. ಅವಾವೂ ಅಲ್ಲ. ಕಜ್ಜಾಯ ಭಕ್ಷ್ಯಾದಿಗಳ ಸವಿಗಿಂತ ಹೆಚ್ಚಾಗಿ ರುಚಿಎನಿಸುವ ಸುಮಧುರವಾದ ಅನೇಕ ವಚನಗಳನ್ನು ಕೂಡಿಸಿ ಕಟ್ಟಿದ ಬುತ್ತಿ ಅದು ಹಳಸದೇ ಸದಾ ಸವಿಯಾಗಿರುವ ಬುತ್ತಿ. ಈ ಬುತ್ತಿಯಿಂದ ಬಹು ತಮ್ಮಂದಿರು ಉಂಡು ಚನ್ನಾಗಿ ಜೀರ್ಣಿಸಿಕೊಂಡು ಸದೃಢ ಕಾಯಗಳಾಗಿದ್ದಾರೆ. ಅರ್ಥಾತ್ ಅಣ್ಣನವರ ವಚನಗಳಿಂದ ಜ್ಞಾನಿಗಳಾಗಿದ್ದಾರೆಂಬರ್ಥ, ಮತ್ತೇನಲ್ಲ. ಅಣ್ಣನವರ ಒಂದೊಂದು ವಚನ ಸಮಾಜ ಸುಧಾರಕರಿಗೆ ಮಾರ್ಗದರ್ಶಕವಾಗಿ ವಿದ್ಯುದ್ದೀಪಗಳಂತೆ ರಾರಾಜಿಸುತ್ತವೆ. ಕಟ್ಟಿದ ಬುತ್ತಿಯನ್ನು ಗಬಗಬನೆ ತಿಂದು ಅಜೀರ್ಣದ ಶರೆ ಸಿಕ್ಕಿದರೆ ತನ್ನ ದೇಹವನ್ನು ತಾನೇ ಸುಲಭವಾಗಿ ಕೆಡಸಿಕೊಂಡಂತೆ ಆಗುತ್ತದೆ. ಯೋಗ್ಯ ರೀತಿಯಿಂದ ಮಧುರತೆಯು ಸವಿ ಅನುಭವಿಸಿದರೆ ಯೋಗ್ಯವೆನಿಸುವುದು. ಅನೇಕ ತಮ್ಮಂದಿರು ಅಣ್ಣನು ಕಟ್ಟಿದ ಬುತ್ತಿಯಲ್ಲಿ ಅನೇಕ ವಚನದ ತಿಂಡೆತಿನಸುಗಳನ್ನು ತಿಂದು ಅವರ ಸವಿಯನ್ನು ಚನ್ನಾಗಿ ಅನುಭವಿಸಿ ಆ ಯಾವ ತಮ್ಮ ಅನುಭವದಿಂದ ಬೇರೆ ಬೇರೆಯವರಿಗೆ ಆ (ವಚನಗಳ) ತಿಂಡಿಗಳ ಅನುಭವ ಮಾಡಿ ಕೊಟ್ಟಿದ್ದಾರೆ. ಎಲ್ಲರಂತೆ ಅಣ್ಣನವರು ಕಟ್ಟಿದ ಬುತ್ತಿಯೆಂದರೆ ನನಗೂ ಇಷ್ಟ. ಬುತ್ತಿ ನೋಡಿದರೆ (ವಚನಸಾಹಿತ್ಯದ ಬುತ್ತಿ)

ತಾವರೆಯ ಮೊಗ್ಗು ಅರಳುವಂತೆ ನನ್ನ ತುಂಬು ಹೃದಯದ ಮೊಗ್ಗು ಅರಳಿ ಬೇಗ ಉಣ್ಣು ಉಣ್ಣಬೇಕೆಂದು ಬಾಯಲ್ಲಿ ಲಾಲಾರಸ ಬರುವುದು. ಆ ಬುತ್ತಿಯಲ್ಲಿ—

"ಕಳಬೇಡ ಕೊಲಬೇಡ................................" ಎಂಬ ವಚನದ ತಿಂಡಿ ನನಗೆ ಬಹು ರುಚಿ ಕಂಡಿತು. ಆದ್ದರಿಂದ ಅದರ ಸವಿಯುಂಡು ಆ ತಿನಿಸಿಗೆ ಬೇಕಾದ ಸಾಮಾಗ್ರಿ ಹೇಗೆ ಪ್ರಮಾಣಕ್ಕೆ ಸರಿಯಾಗಿ ಹಾಕಿ ಸವಿಯಾದ ತಿಂಡಿ ಮಾಡಬೇಕು? ಎಂಬುದರ ಬಗ್ಗೆ ವಿಚಾರಿಸಬೇಕು. ಅಂದರೆ ಅಣ್ಣನವರ ಅನೇಕ ವಚನಗಳಿವೆ. ಅವುಗಳನ್ನು ಚನ್ನಾಗಿ ತಿಳಿದು ಅದರಂತೆ ನಡೆದರೆ 'ನೈತಿಕ ಸುಭಾಷಿತ ಬೆಳಕಿನಿಂದ ಸಮಾಜ ಮತ್ತು ದೇಶವೂ ಪ್ರಜ್ವಲಿಸುತ್ತದೆ. ಜಾತಿ ಜಾತಿಗಳಲ್ಲಿ ಯಾವ ವಿಧವಾದ ದ್ವೇಷಾಸೂಯಗಳಿಲ್ಲದೆ ದೇಶವು ಸಸ್ಯ ಸಮೃದ್ಧಿಗೊಂಡು ಶಾಂತ ವಾತಾವರಣವೇರ್ಪಡುತ್ತದೆ. ಇನ್ನು ಅಣ್ಣನ ಬುತ್ತಿಯಿಂದ ಆರಿಸಿದ ವಚನದ (ತಿಂಡಿಯ) ಸವಿ ನೋಡುತ್ತೇನೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ
ಇದಿರ ಹಳಿಯಲುಬೇಡ, ತನ್ನ ಬಣ್ಣಿಸಬೇಡ,
ಇದೇ ಅಂತರಂಗ ಶುದ್ಧಿ ಇದೇ ಬಹಿರಂಗದ ಶುದ್ಧಿ
ಇದೇ ನಮ್ಮ ಕೂಡಲಸಂಗಮದೇವನನೊಲಿಸುವ ಪರಿ.

—"ಭಗವಾನ್ ಬಸವೇಶ್ವರ'.

ನೈತಿಕದ ನೆಲೆಯರಿಯದೆ ಮನಬಂದಂತೆ ನಡೆದು ವಿಪತ್ತಿಗೀಡಾಗಿ ಕಣ್ ನೆಲೆ ನಿಲ್ಲಿಸಿ ಬಾಯ್ ಬಾಯಿ ಬಿಡುತ್ತಿರುವ ಸಾಮಾಜಿಕರಿಗೆ ಮೇಲಿನ ವಾಕ್ಯವು ಜೀವನೌಷಧವಾಗಿದೆ. ಈ ಅಮೂಲ್ಯವಾದ ವಚನವು ಎಲ್ಲ ದೇಶ ಕಾಲಗಳಿಗೂ ಎಲ್ಲ ಮತಪಂಥಗಳಿಗೂ ಹೊಂದಿಕೊಳ್ಳುವಂತಹುದಾಗಿದೆ. ಮತ-ಧರ್ಮಗಳಿಗೆ ನೀತಿಯೇ ತಳಹದಿಯಲ್ಲವೇ? ನೀತಿಇಲ್ಲದ ಧರ್ಮ ಅಧರ್ಮ, ಮತ ದುರ್ಮತ. ದೇಹ, ಮನಸ್ಸು, ಆತ್ಮ (ಜೀವ) ಇವುಗಳ ವಿಕಾಸ (ಏಳ್ಗೆ)ಕ್ಕೆ ನೀತಿಯೇ ಕಾರಣವೆಂದರೆ ಅತಿಶಯೋಕ್ತಿಯಾಗಲಾರದು. 'ಕಳಬೇಡ' ಎಂಬ ಈ ಮಾತು ಎಷ್ಟು ಮಹತ್ವಪೂರ್ಣವಾದದ್ದು! 'ಇನ್ನೊಬ್ಬರ ಒಡವೆಯನ್ನು ಕದಿಯಬೇಡ' ಎಂಬುದಿಷ್ಟೇ ಇದಕ್ಕೆ ಅರ್ಥ. ಆದ್ದ

ರಿಂದ ಆದರಲ್ಲೇನು ಮಹತ್ವ? ಎಂದು ಯಾರಾದರೂ ವಿಚಾರಿಸಬಹುದು. ಆದರೆ ಕದಿಯದಿರುವ (ಅಸ್ತೇಯ) ಗುಣವು ಸಮಾಜದಲ್ಲಿ ಅಳವಟ್ಟು ನಲೆ ನಿಂತಾಗ ಎಂತಹ ಪರಿಸ್ಥಿತಿಯುಂಟಾದೀತು! ಎಂಬುದನ್ನು ಪರಿಕಿಸಿದರೆ "ಕಳಬೇಡ" ಎರಿಬಲ್ಲಿ ಎಷ್ಟು ಮಹತ್ವವಿದೆ. ಎಂಬುದು ತಿಳಿದೀತು. ಶರೀರದಿಂದ ಇತರ ವಸ್ತುವನ್ನು ಅಪಹರಿಸಬಾರದು ಇಷ್ಟೇಅಲ್ಲ, ಮಾತಿನಿಂದಲೂ ಮನದಿಂದಲೂ ಅವರ ಬಗೆಗೆ ಅನಾಸ್ಥೆ ತಾಳಿರಬೇಕೆಂದು 'ಕಳಬೇಡ' ಎಂಬ ಮಾತು ಹೇಳುತ್ತದೆ. ಎಷ್ಟು ಸೂಕ್ಷ್ಮವಾದ ನೀತಿ ಇದು! ಮಹಾತ್ಮಾ ಗಾಂಧಿಯವರು ತಮ್ಮ 'ಮನೋರಂಗ' ಎಂಬ ಪುಸ್ತಕದಲ್ಲಿ "ತನಗೆ ಸಾಕಾಗುವಷ್ಟು ಊಟ ಮಾಡಿದ ಮೇಲೆ ರುಚಿಗಾಗಿ ಆಶೆಯಿಂದ ಒಂದು ತುತ್ತು ಹೆಚ್ಚು ತಿಂದರೆ ಆಯಿತು. ಅದು ಕಳ್ಳತನವಾಗುತ್ತದೆ ಎಂದು ಹೇಳಿದ್ದಾರೆ. ಹೆಚ್ಚಾದ ತುತ್ತು ತಿನ್ನುವುದರಿಂದ ಅಜೀರ್ಣವಾಗುವುದಲ್ಲದೇ ಇನ್ನೊಬ್ಬರ ಹಸಿವೆಯನ್ನು ಹಿಂಗಿಸಲು ತಕ್ಕುದಾದ ಪಾಯಾವ ತತ್ವ ವ್ಯರ್ಥವಾಗಿ ಹೋಗುವುದು. ಮತ್ತು ಇನ್ನೊಬ್ಬರ ತುತ್ತನ್ನು ನಾವು ತಿಂದಂತಾಗಿ ಕಳ್ಳತನವಾಗುವದಿಲ್ಲವೇ?

'ಕೊಲಬೇಡ' ಇದು ಕೂಡ ಅಷ್ಟೇ ಮಹತ್ವವುಳ್ಳ ನುಡಿ. ಶರೀರದಿಂದ ಯಾದ ಪ್ರಾಣಿಯನ್ನೂ ಕೊಲ್ಲಬಾರದು. ಅಷ್ಟೇಅಲ್ಲ, ಮಾತಿನಿಂದಲೂ ಮನದಿಂದಲೂ ಕೊಲ್ಲುವದನ್ನು ಬಿಡಬೇಕು. 'ಕೊಲ್ಲುವವನೇ ಮಾದಿಗ, ಹೊಲಸು ತಿಂಬುವವನೇ ಹೊಲೆಯ' ಎಂದು ಅಣ್ಣನು ಹೇಳಿದ್ದಾನೆ. ಇತರರ ಮನ ನೋಯುವಂತೆ ಮಾತಾಡುವುದೇ ಮಾತಿನ ಕೊಲೆ. ಮೂರು ಅಂಗುಲ ಉದ್ದದ ನಾಲಿಗೆಯು ಆರಡಿ ಮನುಷ್ಯನನ್ನೂ ಜಯಿಸಬಲ್ಲುದು" ಮನಸ್ಸಿನಿಂದ ಬೇರೆಯವರನ್ನು ಕೊಲ್ಲಬೇಕೆಂದು ಯೋಚಿಸುವುದು ಮಾನಸಿಕ ಕೊಲೆ. ಈ ತ್ರಿಕರಣಗಳಿಂದ ಕೊಲೆಯನ್ನು ಬಿಡಬೇಕೆಂಬುದೇ 'ಕೊಲಬೇಡ' ಎಂಬುದರ ರಹಸ್ಯ.

'ಮಾ ಹಿಂಸ್ಯಾತ್ ಸರ್ವ ಭೂತಾನಿ' ಎಂಬ ವೇದದ ಸಾರವನ್ನೇ ಈ ವಚನ ಒಳಗೊಂಡಿದೆ.

'ಹುಸಿ' ಎಂದರೆ ಸುಳ್ಳು, ಇದ್ದುದನ್ನು ಇದ್ದಹಾಗೆ ಹೇಳುವುದು ಸತ್ಯ. ಸತ್ಯವು ಜಗತ್ತಿನ ಮೂಲಕಾರಣವಾಗಿದ್ದು ಸರ್ವ ವ್ಯವಹಾರಗಳಿಗೂ ಮೂಲವಾಗಿದೆ. ಒಬ್ಬ ಇಂಗ್ಲಿಷ ಕವಿ ಹೇಳಿದಂತೆ "Truth is beauty, Beauty is truth" "ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ"

ಸುಳ್ಳಿಗೆ ಎಂದಾದರೂ ಸುಖಉಂಟೇ? ಎಂದಿಗೂ ಇಲ್ಲ. ಕೆಲವು ಮೂಢರು ಹಾಗೆ ತಿಳಿದದ್ದೇ ಆದರೆ 'ಬಿಸಿಲ್ಗುದುರೆಯನ್ನು ನೀರೆಂದು ಭ್ರಮಿಸುವ' ಭ್ರಾಂತಿಕರ ಹಾಗೆ ಅವರ ಅಭಿಪ್ರಾಯ ಅಸ್ಪಷ್ಟವಾಗಿದೆ. ಸತ್ಯವನ್ನು ಹೇಳ ಬೇಕಾದರೂ ವಿಚಾರಪೂರಿತವಾಗಿ ಹೇಳಬೇಕು. "ಸತ್ಯಂ ಬ್ರೂಯಾತ್, ಪ್ರಿಯಂ ಬ್ರೂಯಾತ್' ಎಂದಿರುವದರಿಂದ ಅಪ್ರಿಯವಾದ ಸತ್ಯವನ್ನು ಹೇಳ ಬಾರದು. ಉದಾಹರಣೆಗಾಗಿ ನಮ್ಮ ಮಿತ್ರನ ಸತಿ ವ್ಯಭಿಚಾರಣಿ ಇದ್ದಾ ಳೆಂದು ಇಟ್ಟುಕೊಳ್ಳಿ. ಆ ವಿಷಯ ಸತ್ಯವಾದರೂ ನಮ್ಮ ಮಿತ್ರನಿಗೆ ಅದನ್ನು ಹೇಳಿದರೆ ಆವನ ಮನನೋಯುವದಲ್ಲದೇ ದಾಂಪತ್ಯವಿಚ್ಛೇದವೂ ಅಗಬಹುದು. ಆದ್ದರಿಂದ ಆ ಮಾತು ಸತ್ಯವಾದರೂ ಪ್ರಿಯವಾಗಿಲ್ಲ. ಸತ್ಯವೂ ಪ್ರಿಯವೂ ಆದಮಾತನ್ನೇ ಹೇಳಬೇಕು. "ಸತ್ಯಂವದ" ಎಂಬ ವೇದವಚನವು ಈ ನೀತಿಯಿಂದ ಬಾಧಿತವಾಗುವುದಿಲ್ಲವೇ? ಎಂದರೆ ಉದಾ:– ಒಬ್ಬ ಋಷಿ ಏನೋ ಯೋಚಿಸುತ್ತ ಕುಳಿತಿದ್ದ. ಆಗ ಒಂದು ಚಿಗರೆಯು ಮರಣ ಭೀತಿಯಿಂದ ಅವನ ಮುಂದೆಯೆ ಒಂದು ಕಡೆಗೆ ಓಡಿಹೋಯಿತು. ಕೆಲವು ನಿಮಿಷಗಳ ಮೇಲೆ 'ಕಲಿ' 'ಮರುಳ' ಎಂಬಿಬ್ಬರು ಬೇಟೆಗಾರರು ಬಂದು, "ಚಿಗರೆಯನ್ನು ನೋಡಿದಿರಾ" ಎಂದು ಋಷಿಯನ್ನು ಕೇಳಿದರು. ಋಷಿಗೆ ಪ್ರಾಣಸಂಕಟ ಕ್ಕಿಟ್ಟು ಕೊಂಡಿತು. ಸತ್ಯಹೇಳಿದರೆ ಚಿಗರೆಯ ಪ್ರಾಣಹೋಗುತ್ತೆ, ಸುಳ್ಳು ಹೇಳಿದರೆ ತಪಸ್ಸಿಗೆ ಭಂಗ ಬರುತ್ತೆ ಎಂದು ಯೋಚಿಸಿ ಕಡೆಗೆ ಒಂದು ಯುಕ್ತಿ ಯನ್ನು ಕಂಡು:– "ಅಯ್ಯಾ! ನೋಡಿದವನಿಗೆ ಹೇಳುವದಕ್ಕೆ ಬರುವುದಿಲ್ಲ. ಹೇಳುವವನು ನೋಡಿಯೇ ಇಲ್ಲ" ಎಂದು ಹೇಳಿದೆ. ಇದನ್ನು ಕೇಳಿದ ಕಲಿ ಮರುಳರಿಬ್ಬರು ಬೇಟೆಗಾರರು ಇವನನ್ನು ಹುಚ್ಚನೆಂದು ತಿಳಿದು ಮುಂದೆ ಸಾಗಿದರು. ಇಲ್ಲಿ ನೋಡಿದವನೆಂದರೆ ಕಣ್ಣು, ಇದಕ್ಕೆ ಹೇಳಲು ಬರುವುದಿಲ್ಲ ಹೇಳುವವನೆಂದರೆ ನಾಲಿಗೆ, ಇದು ನೋಡುವುದಿಲ್ಲ.

"ಇದಿರ ಹಳಿಯಲುಬೇಡ" ಎಂದರೆ ಬೇರೆಯವರನ್ನು ದೂಸಿಸ ಬಾರದು. ನಿಂದೆಯು ಅಪಾಯಕರವಾದದು. ಇನ್ನೊಬ್ಬರ ತಪ್ಪುಗಳನ್ನು ಮೊದಲು ತಿದ್ದಿಕೊಳ್ಳವುದೊಳ್ಳೇದು. ಇನ್ನೊಬ್ಬರನ್ನು ನಿಂದಿಸುವದರಿಂದ ನಮಗೇನು ಲಾಭವೇನು? ಪ್ರತಿಯಾಗಿ ನಿಂದೆಗೆ ಪಾತ್ರನಾದ ವ್ಯಕ್ತಿಗೇ ಲಾಭವಾಗುತ್ತದೆ. ಏಕೆಂದರೆ ಅವನು ತನ್ನ ತಪ್ಪುಗಳನ್ನು ತಿದ್ದಿಕೊಳ್ಳ ಬಹುದು. "ಒಬ್ಬರ ಮುಖಕ್ಕೆ ಮಸಿಹಚ್ಚಬೇಕಾದರೆ ಮೊದಲು ತಾನು

ಹಚ್ಚಿಕೊಳ್ಳಬೇಕಲ್ಲವೇ ? " ಒಮ್ಮೊಮ್ಮೆ ನಮ್ಮ ಮೇಲೆ ಸಿಟ್ಟಾಗಿ ಮತ್ತು ತಪ್ಪು ಮಾಡಬಹುದು. ಇನ್ನೊಬ್ಬರು ಕೆರಳುವಂತೆ ನಾವು ಅವರನ್ನು ನಿಂದಿಸಿದರೆ ನಮ್ಮ ಪ್ರಗತಿಗೆ ಬಾಧೆ ಬರುತ್ತದೆ. ಇನ್ನೊಬ್ಬರ ಮನ ನೋಯದಂತೆ ವರ್ತಿಸುವುದು ಒಳ್ಳೆಯವನ ಲಕ್ಷಣ. ತಪ್ಪುಗಾರರನ್ನು ಪ್ರತ್ಯಕ್ಷವಾಗಿ ಕಂಡು ಅವರು ಮಾಡುವ ತಪ್ಪಿನ ಅರಿವು ಅವರಿಗುಂಟಾಗುವಂತೆ ಮಾಡಿ ಅವರನ್ನು ತಿದ್ದಬೇಕಲ್ಲದೆ ಪರೋಕ್ಷವಾಗಿ ಅವರು ಇಂತಹವರು ಅಂತಹವರು " ಎಂದು ನಾಡಕಟ್ಟೆಗಳ ಮೇಲೆ ಕೂತು ಪರರನ್ನು ನಿಂದಿಸುವುದರಿಂದ ಪ್ರಯೋಜನವಿಲ್ಲ.

" ತನ್ನ ಬಣ್ಣಿಸಬೇಡ " ಅಂದರೆ ತನ್ನನ್ನು ತಾನು ಹೊಗಳಿಕೊಳ್ಳಬಾರದು. (Boasting) ' ತುಂಬಿದ ಕೊಡ ತುಳುಕುವದಿಲ್ಲ ' ಎಂದಂತೆ ತಾನು ಎಷ್ಟು ದೊಡ್ಡ ಗುಣಶಾಲಿಯಾಗಿದ್ದರೂ ತನ್ನ ಗುಣಗಳು ಅಣುವಿಗೆ ಸಮಾನ ( *equal to Atoms* ) ಗಳೆಂತಲೂ ಬೇರೆಯವರ ಗುಣಗಳು ಅಣುಸಮಾನವಾಗಿದ್ದರೂ ಪರ್ವತ ಪ್ರಾಯಗಳೆಂತಲೂ ಭಾವಿಸಬೇಕು. ಈ ಭಾವನೆಯು ಆತ್ಮೋನ್ನತಿಗೆ ಕಾರಣವಾಗಿದೆ.

"ಎನಗಿಂತ ಕಿರಿಯರಿಲ್ಲ" ಎಂಬ ಅಣ್ಣನವರ ಮಾತಿನಲ್ಲಿ ಈ ರಹಸ್ಯ ಹುದುಗಿದೆ. 'ಕೀಳಿಂ'ಗೆ ಹಯನ ಕರೆವುದಲ್ಲದೆ ಮೇಲಾಗಲೊಲ್ಲೆನು' ಎಂದೂ ಅವರು ಹೇಳಿದ್ದಾರೆ. ಈ ಮಾತುಗಳನ್ನು ಮಾನವನು ಅಳವಡಿಸಿ ಕೊಂಡಲ್ಲಿ ಕೆಲವೇ ದಿನಗಳಲ್ಲಿ ಪ್ರಗತಿಯನ್ನು ಸಾಧಿಸಬಲ್ಲನು.

ನೈತಿಕಾಚಾರ (ಸದಾಚಾರ) ವು ಎಲ್ಲ ಮತ ಧರ್ಮಗಳ ತಳಹದಿಯಾಗಿದೆ, ಜೀವಾಳವಾಗಿದೆ. ಅತ್ಯಾಚಾರ, ಅನಾಚಾರ ಮಾಡಬೇಕೆಂದು ಯಾವ ಮತಗ್ರಂಥಗಳಲ್ಲಿಯೂ ಉಕ್ತವಾಗಿಲ್ಲ. ಆದರೂ ಬಹು ಜನರು ಅತ್ಯಾಚಾರ ಅನಾಚಾರಗಳಲ್ಲಿ ತೊಡಗಿದ್ದಾರೆ. ನಮ್ಮ ದೇಶವು ಒಂದು ಕಾಲದಲ್ಲಿ ಸದಾಚಾರಶೀಲರ ನೆಲೆವೀಡಾಗಿತ್ತು. ಅಗಸ್ತ್ಯನೂ, ಶ್ರೀರಾಮನೂ ಇತರ ಮನು ಮುನಿಗಳೂ ಮಹಾಚಾರ್ಯರೂ ಮಹಾರಾಜರೂ ಅಘಟಿತ ಘಟನೆಗಳನ್ನು ಮಾಡಿ ಅಜರಾಮರರಾಗಿರುವುದು ನೈತಿಕ ಸದಾಚಾರದ ಅರ್ಥಾತ್ ಕ್ರಿಯಾಸಿದ್ಧಿಯ ಬಲದಿಂದಲೆ. ಆದ್ದರಿಂದ ನಾವೂ ಸದಾಚಾರಿಗಳಾಗಲು ಇಂದೇ ಪ್ರತಿಜ್ಞಾಬದ್ಧರಾಗೋಣ. ಕತ್ತಲೆಯಿಂದ ಬೆಳಕಿನೆಡೆಗೆ ಸಾಗೋಣ.

———

# ಬಸವಣ್ಣ.

[ "ಕಾವ್ಯಕಲಾಪಿ" ಕವನ ಸಂಗ್ರಹದಿಂದ. ]

( ಲೇಖಕ:— ಶ್ರೀ. ಜಿ. ಎಚ್. ಹನ್ನೆರಡುಮಠ-ಹಳೇಹುಬ್ಬಳ್ಳಿ )

---

ಹೃದಯ ಕೊಡಿನಲಿಹ ಹುಲಿಯು ನಾಡಿ ಮಿಡಿಸುತಲಿ
ಅಂತರಂಗದ ವೀಣೆ ನುಡಿಸ ಬಾ ಬಸವಣ್ಣ
ಕಾಡು ಈ ದೇಹದಲಿ ನಾಡ ಮೂಡಿಸುತ ತೀಡುತಲಿ
ಬೀಡು ಮಾಡ ಬಾ ಬೇಗ ಓ ನಮ್ಮೆಲ್ಲರಣ್ಣ !

ಹುಲಿತನದ ಛಲವಿದ್ದು ಇಲಿಯಾಗಿ ಇದ್ದಿಹೆವು
ಭಯದಿ ಮರೆತಿಹೆವು ನೈಜ ತೇಜವನ್ನು
ಮಿನುಗು ಮೆರಗಿನ ವರ್ಣ ವೈಚಿತ್ರ್ಯ ಮಾಯಪಾಶವು
ಗುಡುಗಿ ಘರ್ಜಿಸುತಿದೆ; ಬದುಕಲಾರೆವಿನ್ನು

ನಿನ್ನ ಸಾತ್ವಿಕತೆಯ ಓಜಸ್ಸು ಹೊಮ್ಮಿ ತೇಜಸ್ಸು ಮೂಡಿ
ಮುಗಿಲಿನಾಚೆಯ ರವಿಯು ಮಂದಾದನು
ಹಿಂದೊಮ್ಮೆ ನಿನ್ನ ವಚನ ವೃಷ್ಟಿ ನಮ್ಮೊಡಲ ಕೂಡಿ
ಓಡಿಸಿತು ಕವಿದ ಕಾರ್ಮೋಡಗಳನು

ದಿವ್ಯ ಜ್ಯೋತಿಯ ಹೊಲವು ಶರಣ ಛಲವು
ಸತ್ವ ಸಾತ್ವಿಕತೆಯ ನಾಂದಿ ಬಲದ ಮಂದಿರ ಭೇರಿ
ಮುಗಿಲು ಇಲ್ಲದ ಗಗನ ತಿಂಗಳನ ಇರವು
ಮಾಯೆ ಹೊದ್ದದ ಮನವು ವಿಶ್ವಾತ್ಮಿ ಪರಮಾತ್ಮನಕೇರಿ

ಶರಣ ಚರಣದ ವರ್ಣ ಬಸವಣ್ಣ ಹೇಳಿ
ಭವವೇಶ ಪಾಶವನು ನಾಶಮಾಡೆಮ್ಮ ತಂದನಿಲ್ಲಿ
ಸವಿ ತಿರುಳ ವಿಷ ಒಡಲ ವೈಚಿತ್ರ್ಯ ಹೇಳಿ
ನೈಜ ಜ್ಯೋತಿಯನಿತ್ತು ಬಾ ಇತ್ತ ಎಂದು ಕರೆದನಲ್ಲಿ

ಕಿರಿ ಹೃದಯ ಕೆಲ್ಮಿಷ ಘೋರ ಗವಿಯಲಿ
ನುಸುಳಿ ಬಂದೆಮ್ಮ ಕಿವಿಯೊಳುಸುಂದ ವಚನವ
ಬಲ ಬಂಧನ ವ್ಯೂಹ ಝಾಡ್ಯದಲಿ
ಮೌಢ್ಯತೆಯ ಮುರಿದೊತ್ತಿ ಎತ್ತುವನೆಮ್ಮ ಬಸವ

ಹಗಲು ಶಂಕೆಯಾಗಿ ಇರುಳು ಭಯವಾಗಿ
ಮಾಗದಾ ಘಾಯ ಮಾಡಿಹುದು ಕಾಯಕಾಮಾಯ
ಮದ್ದು ಇನ್ನೆಲ್ಲಿ ? ಓ ಕಾಣದಾ ಯೋಗಿ
ಇಹುದು ಬಾರಲ್ಲಿ ; ಬಸವ ನುಡಿಯಲ್ಲಿ ನೈಜ ಧ್ಯೇಯ !

ಚುಕ್ಕೆ ಲತೆಯಾಗಿ, ರವಿಯು ಫಲವಾಗಿ
ಹೂವು ಚಂದಿರನಾಗಿ, ನೆಲನೀರು ಶಾಮ ಮುಗಿಲಾಗಿ
ಮಿನುಗು ಮೆರುಗು ಜೀವನವು ಮಿಂಚಾಗಿ
ಹೋಂಚಿ ಸಿಡಿಲನು ಹೊಡೆಯುವದದೋ ಮಾಯ ಕೂಗಿ

ರೇಗಿ ಎದ್ದಿಹೆ ರುಚಿಗೆ ಸೀಗಿ ಬಿದ್ದಿದೆ ಶಕ್ತಿ
ಬಲವಾಗು ಬಾ ಮೊದಲು ಹೃದಯ ಹದವಾಗಿ ಮಾಡು
ಜನ್ಮ ಸಾರ್ಥಕತೆಯೆ ನೈಜ ಮುಕ್ತಿ
ಆ ಮಾರ್ಗ ಬಸವಣ್ಣ ನುಡಿದ ವಚನ ನೋಡು

---

# ಅಕ್ಕನನ್ನು ಅರಿಯುವ ದೃಷ್ಟಿ
# ಹಾಗೂ
# ನಿಜಚರಿತೆಯ ಸಾರ

ಬರೆದವರು:— ಶ್ರೀ ಶಿವಾನಂದ ಸ್ವಾಮಿಗಳು ಗವಿಮಠ ತೆಗ್ಗಿಹಳ್ಳಿ (ಇಂಡಿ)

---

ಮಹದೇವಿ ಅಕ್ಕನ ಚರಿತೆಯನ್ನು ಅನೇಕರು ಅನೇಕ ಬಗೆಯಾಗಿ ಬರೆದಿರುವರು. ಆದರೂ ಇನ್ನೂ ಆಕೆಯ ಬಗ್ಗೆ ಬರೆಯುವುದು ಮುಗಿದಿಲ್ಲ, ಮುಗಿಯುವಂತೆಯೂ ಇಲ್ಲ. ಯಾಕೆಂದರೆ ಜಗತ್ತಿನ ಮಾನವರಿಗೆ ಆಕೆ ಯೊಂದು ಬಹು ದೊಡ್ಡ ಒಡೆಯಲಾರದ ಒಗಟಾಗಿದ್ದಾಳೆ. ನಮ್ಮ ನಾಡಿಗೆ ಒಂದು ದೊಡ್ಡ ಸಮಸ್ಯೆಯಾಗಿದ್ದಾಳೆ. ಈಕೆಯನ್ನು ಅರಿಯುವದೆಂದರೆ ಶಿವ-ಶಕ್ತಿಯರನ್ನು ಅರಿತಂತೇ ಸರಿ. ಅನೇಕರು ಅರಿಯಲಿಕ್ಕೆ ಹೋಗಿ ಎಡ ವಿದ್ದಾರೆ. ಬರೆಯಲಿಕ್ಕೆ ಹೋಗಿ ಲೇಖಣಿ ಮೊಂಡಾಗಿದೆ. ಚಿತ್ರಿಸಲಿಕ್ಕೆ ಹೋಗಿ ಕುಂಚು ಮುರಿದಿದೆ. ಆದರೂ ಅನೇಕರು ತಮ್ಮ ತಮ್ಮ ದೃಷ್ಟಿ ಯಿಂದಲೇ ನೋಡಿ ತಪ್ಪಿದ್ದಾರೆ. ಈಕೆಯನ್ನು ನೋಡಲು ಅರಿಯಲು ಸಮ್ಯಕ್ ದೃಷ್ಟಿಬೇಕು; ಆದರೆ ಈ ಹಿಂದೆ ಬರೆದ ಅನೇಕರ ದೃಷ್ಟಿಗಳಾ ವವು? ಅವರು ಎಲ್ಲಿ ತಪ್ಪಿದರು? ಎಂದು ವಿಚಾರಿಸಿ ಮುಂದೆ ಸಾಗುವಾ.

ಬಹುತರ ಅನೇಕರು ಹರಿಹರನ ರಗಳೆಯನ್ನೇ ಆಧಾರವಾಗಿಟ್ಟು ಕೊಂಡು ಬರೆದಿದ್ದಾರೆ. ಅದು ಮೊದಲೇ ರಗಳೆ. ಏನು ನಿನ್ನ ಗೊಳ್ಳ ರಗಳೆ ಯನ್ನು ಹಚ್ಚಿದಿ? ಸಾಕುಮಾಡು ಎನ್ನುವಂತೆ ಹರಿಹರನ ರಗಳೆಯ ಸ್ಥಿತಿ ಇರುವದು. ಇವನಂತೂ ಕವಿ. ಕವಿಕಪಿಗಳಲ್ಲಿ ಅಂತರವಿಲ್ಲ. ರವಿ ಕಂಡದ್ದು ಕವಿ ಕಾಣುವನು. ಆದರೆ ಕವಿ ಕಂಡದ್ದನ್ನು ರವಿ ಕಾಣನೆಂದು ಗಾದೆ ಇದೆ. ತನ್ನ ಹೃದಯ ಮಿದಳುಗಳಲಿದ್ದದ್ದನ್ನೇ ಕವಿ ಶೃಂಗಾರ ಅಲಂಕಾರಗಳಿಂದ ಕಲ್ಪಿಸಿ ಅನ್ಯರ ಚರಿತ್ರೆಯನ್ನು ಬರೆಯುವನು. ಇವನು ಮಹಾಕವಿ ಎಂದು ಬಗೆದು ಎಲ್ಲರೂ ತಮ್ಮ ವಿಚಾರ ಸ್ವಾತಂತ್ರ್ಯವನ್ನು ಇವರಿಗೆ ಮಾರಿ ಕೊಂಡಿದ್ದಾರೆ. ಇವನಂತೂ ಸಮ್ಯಕ್ ದೃಷ್ಟಿ ಪಡೆದವನಲ್ಲಂತೇ ಶರಣ ಶರಣಿಯರ ಚರಿತೆಗಳನ್ನು ಅವಹೇಳನಮಾಡಿ ಚಿತ್ರಿಸಿದ್ದಾನೆ. ಹರಿಹರನು

ಅಕ್ಕನ ಚರಿತೆ ಬರೆಯುವದರಲ್ಲಿ ತಪ್ಪಿದ್ದಾನೆಂದು ಹೇಳುವಷ್ಟು ಧೈರ್ಯ ವನ್ನು ಯಾರೂ ಮಾಡಿಲ್ಲ. ಆದರೆ ಶ್ರೀ ತೋಟಪ್ಪ ಶಿವಬಸಪ್ಪ ಕೊಟಗಿ ಬಿ. ಎ. ಬಿ. ಟಿ. ಶಿಕ್ಷಕರು ಮುನಸಿಪಲ್ ಹಾಯಸ್ಕೂಲ ಗದಗ ಇವರು ಮಾತ್ರ ಹರಿಹರನು ನಿಜವಾಗಿ ತಪ್ಪಿದ್ದಾನೆಂದು ಧೈರ್ಯವಾಗಿ ಹೇಳಿ ಬಿಟ್ಟಿದ್ದಾರೆ. ಇದು ಇವರ ಪವಿತ್ರ ಶುದ್ಧ ಹೃದಯದ ಸತ್ಯಕೂಗು. ಇದು ನಿಜವಾಗಿ ಸಮ್ಯಕ್ ದೃಷ್ಟಿಯು ಅರಳಿದ್ದರ ದ್ಯೋತಕವೇ ಆಗಿರುತ್ತದೆ. ಶ್ರೀ ಕೊಟಗಿಯವರು ವ್ಯಕ್ತಿ ನಿಷ್ಠರಲ್ಲ. ತತ್ವ ನಿಷ್ಠರು. ಉಳಿದ ಅನೇಕರು ಮಾತ್ರ ಹರಿಹರನ ನಿಷ್ಠರೇ ಆಗಿದ್ದಾರೆ, ಅವರು ಅವನ ಮೇಲಿನ ಅಂಧ ಶ್ರದ್ಧೆಯಿಂದ ಅಕ್ಕನ ತತ್ವವನ್ನೆ ಕೊಲೆ ಮಾಡಿದ್ದಾರೆ. ಅಲ್ಲದೆ ತಮ್ಮ ವಿಚಾರ ಸ್ವಾತಂತ್ರ್ಯವನ್ನು ಕಳಕೊಂಡಿದ್ದಾರೆ. ಅಕ್ಕನು ಬರೇ ಸಾಹಿತಿ ಗಳಿಗೆ ಸಾಧ್ಯವಾಗಳು. ಪಂಡಿತರಿಗೆ ಹೊಳೆಯಳು; ಕವಿಗಳಿಗೆ ನಿಲುಕಳು. ಪುರಾಣಕರಿಗೆ ಸಿಗಳು. ಕಾದಂಬರಿಕಾರರಿಗೆ ಕಾಣಿಸಳು. ಬರೇ ಬಿ. ಎ. ಎಮ್. ಎ. ಗಳಿಗೆ ತಿಳಿಯಳು. ಯಾಕಂದರೆ ಇವರಿಗೆಲ್ಲರಿಗೆ ಬರೆ ಲೌಕಿಕ ದೃಷ್ಟಿ ಇರುವದು. ಇವರಿಗೆ ಸಮ್ಯಕ್ ದೃಷ್ಟಿ ಬಂದರೆ ಮಾತ್ರ ಬಂಗಾರಕ್ಕೆ ಕುಂದಣ ಕೂಡ್ರಿಸಿದಂತೆ ಆಗುವದು. ಈ ಸಮ್ಯಕ್ ದೃಷ್ಟಿ ಬರಬೇಕಾದರೆ ಇವರಲ್ಲಿ ಮೊದಲಿನಿಂದಲೂ ಸತ್ಯ ತ್ಯಾಗ, ವೈರಾಗ್ಯ, ಬ್ರಹ್ಮಚರ್ಯಪಾಲನ, ಸತ್ಸಂಗ ಸಾದಾ ಜೀವನ, ಉದಾತ್ತ ವಿಚಾರ, ಧ್ಯಾನ, ಭಕ್ತಿ ಜ್ಞಾನ ಅನುಭವ, ಮೊದಲಾದ ಪಾರಮಾರ್ಥಿಕ ಸಾಧನಗಳು ಬೇಕು. ಅಂದರೆ ಮಾತ್ರ ಅಕ್ಕನು ತಿಳಿತಿಳಿಯಾಗಿ ಹೊಳೆಯುವಳು. ಇದನ್ನು ದೊರಕಿಸದೆ ಬರೇ ಅಂಧಶ್ರದ್ಧೆ ಯಿಂದ ಹಿಂದಿನವರೆಲ್ಲ ಶ್ರೇಷ್ಠರೆಂದು ಬಗೆದು ಹರಿಹರ ಚಾಮರಸ ಚನ್ನ ಬಸವಾಂಕರನ್ನೇ ಅನುಸರಿಸುವದು ಮೂಢತನವೇ ಸರಿ. ಹೀಗೆ ಅನುಸರಿ ಸುವದಕ್ಕಿಂತ ಮೊದಲು ಆ ಕವಿ, ಗ್ರಂಥಕಾರ, ಪುರಾಣಿಕ, ಸಾಹಿತಿ, ಮೊದಲಾದವರು ಎಷ್ಟು ಪಾರಮಾರ್ಥಿಕ ಸಾಧನಮಾಡಿ ಯಾವ ದೃಷ್ಟಿ ಯನ್ನು ಪಡೆದಿದ್ದಾರೆಂದು ಅರಿತುಕೊಂಡು ತಮ್ಮ ಸ್ವತಂತ್ರ ವಿಚಾರವನ್ನು ಅದಕ್ಕೆ ಹೋಲಿಸಿ ಯೋಗ್ಯವೆನಿಸಿದರೆ ಅನುಸರಿಸ ಬಹುದು. ಅಥವಾ ಬಿಡ ಬಹುದು ೩೦-೪೦ ಜನ ಗ್ರಂಥಕಾರರು ಅಂಧಶ್ರದ್ಧೆಯಿಂದ ಸಾಗಿ ಜನರನ್ನು ಅಡ್ಡಹಾದಿಗೆ ತುಳಿಸಿದ್ದರೂ ಕೂಡ ತತ್ವ ನಿಷ್ಠರಾದ ವಿಚಾರ ಶೀಲರಾದ ಶುದ್ಧ ಪವಿತ್ರ ಹೃದಯಿಗಳಾದ ಶ್ರೀ ಕೊಟಗಿಯವರು ಮಾತ್ರ ಎಲ್ಲ ಈಗಿನ

ಚರಿತ್ರಕಾರರ ಕೂಡ ಸತ್ಯದ ಸಲುವಾಗಿ ಬಂಡೆಬ್ಬಿಸಿದ್ದು ನೋಡಿದರೆ ಇವರ ಪವಿತ್ರ ದೃಷ್ಟಿ ಧರ್ಮ ದೃಷ್ಟಿ ಸಮ್ಯಕ್ ದೃಷ್ಟಿ ಎಂಥಹದೆಂಬುದನ್ನು ವಾಚಕರೇ ಊಹಿಸಲಿ. ಕುರಿಯಂತೆ ಎಲ್ಲರೂ ಒಬ್ಬರನ್ನೊಬ್ಬರು ಅನುಸರಿಸಿ ಕೌಶಿಕನ ಕೂಡ ಅಕ್ಕನು ಲಗ್ನವಾಗಿದ್ದಳು, ಮೂರು ಕರಾರು ಹಾಕಿದ್ದಳು, ರಾಜಕಾರಭಾರ ಣಾಗಿಸಿದ್ದಳು. ಐಷ ಆರಾಮಿಯಲ್ಲಿದ್ದಳು, ಕರಾರುಗಳನ್ನು ಅರಸನು ಮುರಿಯಲು ಅದಕ್ಕೆ ದಿಗಂಬರಿಯಾಗಿ ಹೊರಟಳು. ಎಂದೇ ಚಿತ್ರಿಸಿ ಬಹು ಪ್ರಮಾದ ಮಾಡಿದ್ದಾರೆ. ಇದನ್ನು ಎಲ್ಲರೂ ಅವಶ್ಯ ಶ್ರೀ ಕೊಟಗಿಯವರ "ಅಕ್ಕನ ಐತಿಹಾಸಿಕ ಜೀವನ ದರ್ಶನ" ಎಂಬ ಗ್ರಂಥದಂತೆ ತಿದ್ದಿಕೊಳ್ಳಬೇಕು.

ಅಕ್ಕನ ಚರಿತೆ ಈ ಯಾರಿಗೂ ಇದ್ದಕ್ಕಿದ್ದಂತೆ ಕಂಡಿಲ್ಲ. ಮಾತ್ರ ಕೊಟಗಿಯವರು ಇದ್ದಕ್ಕಿದ್ದಂತೆ ಅಕ್ಕನ ಚರಿತೆಯನ್ನು ಹೆಣೆಯಲಿಕ್ಕೆ ಹೆಚ್ಚಾಗಿ ಯತ್ನಿಸಿದ್ದಾರೆಂದು ಧಾರಾಳವಾಗಿ ಹೇಳಬಹುದು. ಅಕ್ಕನ ನೈಜ ಚಿತ್ರವನ್ನು ಬಹು ಮಾರ್ಮಿಕವಾಗಿ ಇವರು ಚಿತ್ರಿಸಲು ಯತ್ನಿಸಿದ್ದಾರೆ.

೮೦೦ ವರ್ಷಗಳ ಹಿಂದೆ ಆಗಿ ಹೋದ ಅಕ್ಕನನ್ನು ಚಿತ್ರಿಸಲಿಕ್ಕೆ ಯಾವ ಐತಿಹಾಸಿಕ ಸಾಧನಗಳು ಅಷ್ಟು ಸಿಗುವದಿಲ್ಲ. ಕಲ್ಯಾಣದಲ್ಲಿ ಅಕ್ಕನ ಗವಿಯೊಂದಿದೆ. ಅಲ್ಲದೆ ಆಕೆಯ ಹಾಗೂ ಶರಣರ ವಚನ ಸಂಗ್ರಹ ಒಂದಿದೆ. ಉಳಿದ ಯಾವ ಆಧಾರಗಳೇ ಇಲ್ಲ. ಇದನ್ನು ಬಿಟ್ಟು ಹರಿಹರ ಚಾಮರಸ, ಚನ್ನಬಸವಾಂಕ ಕವಿಗಳನ್ನು ಎಂದೂ ಆಧಾರವಾಗಿ ತಕ್ಕೊಳ್ಳಕೂಡದು. ಅವರೂ ಕೂಡ ಈಗಿನ ತರಗತಿಯ ಕವಿಗಳು ಸಾಹಿತಿಗಳು. ಅವರೇನು ಸಮ್ಯಕ್ ದೃಷ್ಟಿ ಪಡೆದವರಲ್ಲ. ಹಿಂದಿನ ಕವಿಗಳೆಂದು ಮಹತ್ವ ಕೊಡಕೂಡದು. ಶ್ರೀ ಕೊಟಗಿಯವರು ಬರೇ ಶರಣರ ವಚನಗಳ ಆಧಾರದಿಂದಲೇ ಅಕ್ಕನ ಚಿತ್ರವನ್ನು ಚಿತ್ರಿಸಲು ಯತ್ನಿಸಿದ್ದು ಒಳ್ಳೇ ಸಮಂಜಸವಾಗಿದೆ. ಮುಂದಿನ ಭಾಗವೂ ಕೂಡ ಇದಕ್ಕೂ ಉತ್ತಮವಾಗುವದೆಂದು ನಾವು ಧೈರ್ಯವಾಗಿ ಹೇಳಬಲ್ಲೆವು.

ಅನುಭವ ಮಂಟಪಕ್ಕೆ ಅಕ್ಕನು ಬಂದಾಗ ಆಕೆಯನ್ನು ಬಸವಣ್ಣ ಪ್ರಭುದೇವರು, ಚನ್ನಬಸವಣ್ಣ, ಸಿದ್ಧರಾಮ, ಮಡಿವಾಳ ಮಾಚಿದೇವ ಮೊದಲಾದವರು ಅಕ್ಕನ ನಿಲುಮೆಯ ಬಗ್ಗೆ ಅನೇಕ ವಚನಗಳನ್ನು ಹಾಡಿ ಅವರಿಗೂ ಕೂಡ ಅಕ್ಕನನ್ನು ಪರಿಪೂರ್ಣ ತಿಳಿಯುವದು ಕಠಿಣವೆಂದು ಹೇಳಿ

ರುವಾಗ ಅಕ್ಕನನ್ನು ಅನ್ಯರು ಅರಿಯುವದು ಎಷ್ಟು ಬಿಗೀ ಎಂಬುದನ್ನಷ್ಟು
ಈಗಿನ ಸಾಹಿತಿಗಳು ಅರಿತು ಬರೆದಿದ್ದರೆ ಒಳಿತಾಗುತ್ತಿತ್ತು. ಆ ವಚನಗ
ಳನ್ನೆಲ್ಲ ಇಲ್ಲಿ ಸ್ಥಳದ ಸಂಕೋಚದ ಮೂಲಕ ಹಾಕಿಲ್ಲ. ಅವುಗಳ ಸಾರ
ನೋಡಿರಿ.

"ಬಾಲ್ಯ ತನದ ಅಂಗವ ನೋಡಿರಿ ಬ್ರಹ್ಮವನಾಚರಿಸಿ ತನ್ನ ಮರೆ
ದಿಪ್ಪಳು. ಭಾಷೆ ಬೀಸರವೋಗದೆ ಇಪ್ಪ ಇರವು ಅಕ್ಕನಿಗಾಯಿತ್ತು. ಕಂಗಳ
ನೋಟ ಸ್ವಯವಾದ ಇರವು. ತನ್ನ ತಾನರಿದ ನಿಜಶಕ್ತಿ. ಭಿನ್ನವಿಲ್ಲದಿ
ರವು ಮಮಕಾರವ ಮೀರಿದ ಭಾವ ತನ್ನಿಂದ ತಾನಾದಳು, ಅಕ್ಕನ ನಿಲ
ವಿಂಗೆ ನಮೋ ನಮೋ. ಅಜಕೋಟಿ ವರುಷದಪರು ಹಿರಿಯರಲ್ಲ, ಅನು
ವರಿದು, ಘನವ ಬೆರೆದು, ಹಿರಿದು ಕಿರಿದೆಂಬ ಭೇದವ ಮರೆದು, ಶಿವನಲ್ಲಿ
ಬೆರಸಿ ಬೇರಿಲ್ಲದಿಪ್ಪ ಹಿರಿಯತನ ಅಕ್ಕನಿಗಾಯಿತ್ತು. ಮರಿಹಿಂಗೆ ಹಿರಿದು
ಕಿರಿದುಂಟು. ಅರುಹಿಂಗೆ ಹಿರಿದು ಕಿರಿದಿಲ್ಲ. ಅಕ್ಕನ ನಿಲುವಿಂಗೆ ಶರ
ಣೆಂದೇ ಶುದ್ಧನಾದೆ. ನಿಃಕಾಮಿ, ನಿಸ್ಸೀಮೆ, ಭವಬಾಧೆ ಹರಿದಳು, ನಿರ್ವ
ಯಲಾದಳು, ನುಡಿಗೆಡೆಗುಡದ ಘನವ ಹಿಡಿದಳು, ಎಡೆಕಲ್ಲದ ಪರಿಪೂರ್ಣ
ದೊಳು ನಡಿಗೆಟ್ಟಳು, ಸ್ವಯವಾದಳು. ಅಕ್ಕನ ನಿಲವ ಕೊಂಡಾಡುವ
ದಕ್ಕೆ ತೆರಹಿಲ್ಲ. ಆದ್ಯರ ಅರವತ್ತು ವಚನದ= ದಣ್ಣಾಯಕರ ಇಪ್ಪತ್ತು
ವಚನ= ಪ್ರಭುದೇವರ ಹತ್ತು ವಚನ= ಅಜಗಣ್ಣನ ಐದು ವಚನ= ಅಕ್ಕನ
ಒಂದು ವಚನ." ಎಂದು ಅನೇಕ ಬಗೆಯಾಗಿ ಅಕ್ಕನನ್ನು ಕೊಂಡಾಡಿ
ದ್ದಾರೆ. ಹೀಗಾಗಿ ಎಲ್ಲರೂ ಕೂಡಿ ಅಕ್ಕ ಅಕ್ಕ ಎಂದು ಆಕೆಗೆ ಸಂಬೋ
ಧಿಸಿದ್ದಾರೆ. ನಿಜವಾಗಿ ಜಗತ್ತಿಗೇನೇ ಆಕೆ ಅಕ್ಕನಾಗಿರುವಳು. ಆಸ್ಥಾನ
ಆಕೆಗೆ ಸಿಕ್ಕದ್ದು ಆಕೆಯು ವಯಸ್ಸಿನಿಂದಲ್ಲ, ಆದರೆ ಆಕೆಯು ಜ್ಞಾನ ಅನು
ಭವ ಉಚ್ಚಸ್ಥಿತಿಗಳ ಮೇಲಿಂದ ಆಕೆಗೆ ಎಲ್ಲರೂ ಅಕ್ಕನೆಂದರು. ಸಕಲ
ಶರಣ ಶರಣೆಯರಿಗಿಂತ ಅನುಭಾವ ಶೀಲಳ ವಿರತೆ ತ್ಯಾಗ ವೈರಾಗ್ಯ ಬ್ರಹ್ಮ
ಚರ್ಯಪಾಲನ ಭಕ್ತಿ ಜ್ಞಾನ ಮೊದಲಾದವುಗಳಿಂದ ಹೆಚ್ಚಾಗಿದ್ದಳೆಂಬ ಕಾರ
ಣಗಳಿಂದಲೇ ಆಕೆಗೆ ಅಕ್ಕನೆಂವರು ಹೊರತು ಬೇರಾವ ಕಾರಣದಿಂದಲೂ
ಅಲ್ಲ.

ಇನ್ನು ಅಕ್ಕನ ನೈಜಜೀವನದ ಸಂಕ್ಷೇಪ ವಿವರಣೆಯನ್ನು ಮಾಡು
ವೆವು. ಅವತಾರಿ ಯೋಗಭ್ರಷ್ಟ ಜೀವಿಯಲ್ಲ ಮುಕ್ತಾತ್ಮಳು, ಜಗತ್ತಿಗೆ

ಅವಶ್ಯಕಂಡಾಗ ಇಳಿದುಬಂದು ರೂಪತಾಳುವಳು. ಈಕೆ ಬಂದುದು ಸ್ತ್ರೀಯರು ಪಾರತಂತ್ರ್ಯದಲ್ಲಿ ಗಂಡಸಿನ ಭೋಗ ವಸ್ತುವಾಗಿ ತೊಳಲಾಡುವಾಗ ಸ್ತ್ರೀಯರಿಗೆ ಧಾರ್ಮಿಕ ಸಾಮಾಜಿಕ ಸಮಾನತೆ ಸ್ವಾತಂತ್ರ್ಯವಿರದಾಗ ಬಂದಳು. ಸ್ತ್ರೀಯರಿಗೆ ದೇವರ ಪೂಜೆ, ಭಕ್ತಿ, ಜ್ಞಾನ, ವೈರಾಗ್ಯ ತ್ಯಾಗಿಗಳಿಗೆ ಎಳ್ಳಷ್ಟು ಅಧಿಕಾರವಿಲ್ಲೆಂದು ಗುಲ್ಲು ಹೆಚ್ಚಾದಾಗ ಬಂದಳು. ಸಕಲ ಜಗದ ಸ್ತ್ರೀಯರಿಗೆ ಪುರುಷರಷ್ಟೇ ಪ್ರತಿಯೊಂದರಲ್ಲಿ ಸ್ವಾತಂತ್ರ್ಯ ಅಧಿಕಾರವಿದೆ ಎಂದು ತೋರಿಸಿಕೊಡಲು ಬಂದಳು. ಸ್ತ್ರೀ ಅವತಾರಿಕರಲ್ಲಿ ಇವಳ ಸ್ಥಾನ ಮೊದಲಿನದು ಹೆಚ್ಚಿನದು ಅಕ್ಕನನ್ನು ಅರಿಯಲಿಕ್ಕೆ ಅಕ್ಕನ ಅಣ್ಣನಾಗಬೇಕು ಇಲ್ಲವೆ ಅಕ್ಕನ ಅಕ್ಕನಾಗಬೇಕೇ ಹೊರತು ಉಳಿದ ಕೆಳ ದರ್ಜೆಯ ಸಾಹಿತಿಗಳಿಂದೂ ಅರಿಯಲಾರರು ಅಕ್ಕನು ನಿರ್ಮಲ ಸುಮತಿಯರ ತಪದ ಮೂರ್ತಿಯಾಗಿ ಅವರಿಂದ ಅವತರಿಸಿದಳು.

**ಮೊದಲೇ ಅಕ್ಕನ ಲಗ್ನ ವಾಗಿತ್ತು:—** ಬಾಲ್ಯದಲ್ಲಿಯೇ ಚನ್ನಮಲ್ಲಿಕಾರ್ಜುನನ ಪುರಾಣ ಪ್ರವಚನ ಮಹಿಮೆ ಲೀಲೆ ಪವಾಡ ಕೇಳಿ ಆತನಿಗೆ ಸಂಪೂರ್ಣ ಅರ್ಪಣವಾಗಿ ಆತನನ್ನೇ ಲಗ್ನವಾಗಿದ್ದಳು. ಇದರಂತೆ ಮೀರಾ ಮಾತವಾಲಿಯೂ ಕೂಡ ಶ್ರೀ ಕೃಷ್ಣನನ್ನು ಲಗ್ನವಾಗಿದ್ದಳು.

**ಅಕ್ಕನಿಗೆ ಉಪದೇಶ:—** ಇದು ಪ್ರತಿಯೊಬ್ಬರಿಗೆ ಮೊದಲು ಬೇಕೇ ಬೇಕು ಇದಿಲ್ಲದಿದ್ದರೆ ಮುಂದೆ ಯಾವ ಮಾರ್ಗ ಕ್ರಮಿಸಲಾಗದು. ಶ್ರೀ ಗುರುಲಿಂಗ ದೇವನು ಇವಳಿಗೆ ಲಿಂಗದ ನೆಲೆಕಲೆಗಳನ್ನು ತಿಳಿಸಿ ಓಂನಮಃ ಶಿವಾಯ" ಮಂತ್ರವನ್ನು ಉಪದೇಶಿಸಿದನು. ಇದೆಲ್ಲ ಅಕ್ಕನ ವಚನಗಳಿಂದಲೇ ಹೊಳೆಯುವದು. (೧) ಶ್ರೀಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಳೇ ಎನ್ನ ಭವಂ ನಾಸ್ತಿಯಾಯಿತು. ಸರ್ವಾಂಗದೊಳ ಹೊರಗೆ ತೆರಹಿಲ್ಲದಳವಡಿಸಿದ ಶ್ರೀಗುರುಲಿಂಗದೇವ ಚನ್ನಮಲ್ಲಿಕಾರ್ಜುನ (೨) ಸಂಸಾರ ನಿಸ್ಸಾರೆಂದು ತೋರಿದ ನೆನಗೆ ಗುರು;.. ಚನ್ನಮಲ್ಲಿಕಾರ್ಜುನನ ನಿಜವನರುಹಿದ ನನ್ನ ಗುರು (೩) ಲಿಂಗದಲ್ಲಿ ಆಚಾರವ ತೋರಿದ ೪) ಅಯ್ಯಪಾತಾಳ ಮಿತ್ತ ಮೊದಲಾದ ವಚನಗಳಿಂದ ಅಕ್ಕನ ಗುರು ಭಕ್ತಿ ಪ್ರಕಟವಾಗುವದು.

**ಅಕ್ಕನಿಗೆ ದೇವರ ಹುಚ್ಚು:—** ಜಗದಲ್ಲಿ ಎಲ್ಲರೂ ಹುಚ್ಚರೇಸರಿ. ಕೆಲವರು ಹೆಣ್ಣಿಗಾಗಿ ಕೆಲವರು ಮಣ್ಣಿಗಾಗಿ ಕೆಲವರು ಹೊನ್ನಿಗಾಗಿ ಕೆಲವರು

ಅಧಿಕಾರಕ್ಕಾಗಿ ಕೆಲವರು ಚಟಗಳಿಗಾಗಿ ಕೆಲವರು ಚಮುನಿಗಾಗಿ ಹುಚ್ಚರಾಗಿದ್ದಾರೆ. ಆದರೆ ಅಕ್ಕನು ಮಾತ್ರ ರಾಮಕೃಷ್ಣ ಪರಮಹಂಸರಂತೆ ದೇವರಗಾಗಿ ಹುಚ್ಚಳಾಗಿರುವಳು. ಅದಕ್ಕೆ ಅನೇಕ ವಚನಗಳನ್ನು ಉದಹರಿಸಬಹುದು. ಕಣ್ಣೀರಕರೆದಿದ್ದಾಳೆ ಊಟ ನಿದ್ರೆ ಬಿಟ್ಟಿದ್ದಾಳೆ.

**ಅಕ್ಕನ ಸಂಸಾಸದ ನಿರಸನ:—** ಗುರೂಪದೇಶ ಹಾಗೂ ದೇವರ ಹುಚ್ಚುಗಳಿಂದ ಅಕ್ಕನು ಸಂಸಾರ ನಿಸ್ಸಾರೆಂದು ಪೂರ್ಣತಿಳಿದು ಅದಕ್ಕೆ ಯಾವ ರೀತಿಯಿಂದಲೂ ಮೊಗಗೊಳ್ಳದೆ ಸದಾ ಅಧ್ಯಾತ್ಮಸಾಧನಗಳನ್ನು ಮಾಡಿದಳು. ಸಂಸಾರ ಹೇಯಸ್ಥಲದ ಅನೇಕ ವಚನಗಳನ್ನು ಹೇಳಬಹುದು.

**ಅಕ್ಕನ ಸಾಧನೆ:—** ಅನೇಕ ಬಗೆಯಿಂದ ಲಿಂಗಪೂಜೆ ಧ್ಯಾನ ಜಪ ತಪ ಧ್ಯಾನ ಏಕಾಂತವಾಸ ಮೊದಲಾದ ಸಾಧನಗಳನ್ನು ಅಹೋರಾತ್ರಿ ಮಾಡುತ್ತ ಬಲವನ್ನು ಗಳಿಸಿದಳು. ಈ ಪ್ರಕಾರ ನಿತ್ಯ ಸಾಧನೆಯಲ್ಲಿಯೇ ಶಿವನಕೂಡ ಲಗ್ನವನ್ನುಮಾಡಿ ಕೊಂಡಳು.

**ಯೌವ್ವನ:—** ೧೪-೧೫ ವರ್ಷತನಕ ಲಿಂಗಪತಿ-ತಾನುಸತಿ ಎಂಬ ಪರಿಪೂರ್ಣ ಭಾವದಿಂದ ಉತ್ತಮ ಸಾಧನಮಾಡಿ ಪರಿಪೂರ್ಣ ಶರಣೆ ಪೂರ್ಣಯೋಗಿ ಜ್ಞಾನಿ ಅನುಭಾವಿಯಾಗಿ ಸಕಲ ಸಿದ್ಧಿಗಳನ್ನು ಸಹ ಪಡೆದಳು. ಗರಡೀ ಮನೆಯಲ್ಲಿ ಕುಸ್ತಿ ಗಡಿಯು ಸರಿಯಾದ ವ್ಯಾಯಾಮ ಸಾಧನೆ ಮಾಡಿ ಸರಿಯಾದ ಬಲಗಳಿಸಿದ ಮೇಲೆ ಗರಡೀ ಮನೆಯಲ್ಲಿಯೇ ಎಷ್ಟುದಿನ ಕುಸ್ತಿಯನ್ನು ಹಿಡಿಯಬೇಕೆಂದು ಜನ ಅವನನ್ನು ಪರೀಕ್ಷಿಸಿ ನಿರೀಕ್ಷಿಸಬೇಕೆಂದು ಬೇರೆ ಕಡೆಯ ದೊಡ್ಡ ಗಡಿಯ ಕೂಡ ಕುಸ್ತಿಹಚ್ಚಿ ಅವನ ಶಕ್ತಿ ಸಾಮರ್ಥ್ಯ ಯುಕ್ತಿಗಳನ್ನು ಪರೀಕ್ಷಿಸುವಂತೆ ಪರಮಾತ್ಮನು ಅಕ್ಕನ ತ್ಯಾಗ, ವೈರಾಗ್ಯ, ವಿರತಿ ನಿರ್ಮೋಹತ್ವ, ನಿರಹಂಕಾರತ್ವ, ನಿರಭಿಮಾನತ್ವ ಕಾಯದಭಿಮಾನ ತ್ಯಾಗ ಮೊದಲಾದವುಗಳನ್ನು ಜಗತ್ತಿಗೆ ತೋರಿಸಿ ಕೊಡಲು ಅಕ್ಕನು ಯಾರ ಪರೀಕ್ಷೆಗೂ ಎಂದೂ ಸೋಲದ ಅಜೆಯ ಮಹಾ ಶರಣೆ ಸ್ವಾತಂತ್ರಪ್ರಿಯ ಮಹಾ ಮಹಾತ್ಮಳೆಂದು ತೋರಿಸಿ ಕೊಡಲು ಒಂದು ಆಟ ಹೂಡಿದನು. ಅದೇ ಅಕ್ಕನ ಮೇಲೆ ಕೌಶಿಕನ ಕಣ್ಣು. ಕೌಶಿಕನ ವೈಹಾಳಿಗೆ ಬಂದಾಗ ಅಕ್ಕನನ್ನು ದೂರಿಂದ ಕಂಡು ಆಕೆಯ ರೂಪ ಯೌವ್ವನ ತೇಜ ಸೌಂದರ್ಯಗಳಿಗೆ ಮರುಳಾಗಿ ಮೋಹಿತನಾದ. ಆಕೆಯನ್ನು ವಶಪಡಿಸಿ

ಕೊಳ್ಳಲು ಅನೇಕ ಸ್ತ್ರೀಪುರುಷರನ್ನು ಕಳಿಸಿಕೊಟ್ಟನು. ಆಗ ಅಕ್ಕನು ಅವರೆಲ್ಲರಿಗೆ ವಚನಗಳಿಂದಲೇ ಉತ್ತರಿಸಿದಳು. ಇವೇ ಇದಕ್ಕೆ ಆಧಾರಗಳು. ಇಷ್ಟಾದರೂ ಹಣಿಯದ ಮಣಿಯದ ಅಕ್ಕನನ್ನ ಬಲಾತ್ಕಾರದಿಂದ ತನ್ನ ಅರಮಂದಿರಕ್ಕೆ ತರಬೇಕೆಂದು ಆಜ್ಞೆಕೊಟ್ಟು ಕಳುಹಿದನು. ಇದನ್ನು ತಿಳಿದ ಅಕ್ಕನು ತಾನೇ ಆತನ ಅರಮಂದಿರಕ್ಕೆ ಹೋಗುವ ಧೈರ್ಯ ಸಾಹಸಗಳನ್ನು ಮಾಡಿದಳು. ಆಗ ಅಕ್ಕನನ್ನು ತನ್ನ ಉಪಭೋಗ್ಯವಸ್ತುವನ್ನಾಗಿ ಇರಿಸಿ ಕೊಳ್ಳಬೇಕೆಂದು ಅನೇಕ ಬಗೆಯಿಂದ ಕೇಳಿದನು. ಅದಕ್ಕೆ ಅರಸನಿಗೆ ಧೈರ್ಯದಿಂದ ದಿಟ್ಟತನದಿಂದ ವಚನಗಳಿಂದ ಉತ್ತರ ಕೊಟ್ಟಿರುವಳು. ಸಿಟ್ಟಿನಿಂದ ಕೌಶಿಕನು ಆಕೆಯ ಸೆರಗಹಿಡಿದು ಎಳೆಯ ಹೋಗಲು ಉಟ್ಟ ಸೀರೆಯನ್ನು ಬಿಸಾಡಿ ವಚನವನ್ನು ಹೇಳಿ ಕೋಪದಿಂದ ಕೆಂಗಣ್ಣುಮಾಡಿ ನೋಡ ಹತ್ತಲು ಒಂದು ದಿವ್ಯ ಪ್ರಭೆ ಅಕ್ಕನಿಂದ ಹೊರಟು ಅವನಿಗೆ ಬಡಿಯಲು ವಿನಯ ನಮ್ರತೆಯಿಂದ ಕೂಡಿದವನಾಗಿ ಸಾಷ್ಟಾಂಗ ಹಾಕಿ ಕೈ ಜೋಡಿಸಿಕೊಂಡು ನಿಂತು ಕ್ಷಮೆಯನ್ನು ಬೇಡಿಕೊಳ್ಳುವನು. ಇವನು ಜೈನ ಅರಸನು ದಿಗಂಬರ ಮೂರ್ತಿಯನ್ನು ಪೂಜಿಸುವವನು ಪರಸ್ತ್ರೀಯರ ಮೇಲೆ ಬಲಾತ್ಕಾರ ಮಾಡಿದ್ದರಿಂದ ಅವನ ಹೃದಯಕ್ಕೆ ಒಂದು ತರದ ಪೆಟ್ಟು ಕೂಡ ಬಿದ್ದಿತ್ತು. ಹೀಗಾಗಿ ಅವನು ಕ್ಷಮಾಯಾಚನೆ ಬೇಡಿಕೊಂಡನು. ಅವ ನಿಗೆ ಪಶ್ಚಾತ್ತಾಪ ಪ್ರಾಯಶ್ಚಿತ್ತಗಳು ಆಗಲೇ ಸಿಕ್ಕಿದ್ದವು. ಇದರಂತೆ ಅನೇಕ ಹಿಂದಿನ ಸ್ತ್ರೀಯರ ಚರಿತೆಗಳಿರುವವು.

**ದಿಗಂಬರೆ**— ದಿಗಂಬರೆಯಾಗಿ ಹೊರಟುಹೋಗಬೇಕಾದರೆ ಆಕೆಯು ಯಾವ ಉಚ್ಚಮಟ್ಟದಲ್ಲಿ ಇದ್ದಳೆಂಬುದನ್ನು ತಲೆ ಇದ್ದವರು ವಿಚಾರಿಸಿರಿ. ಆಕೆಗೆ ಹುಚ್ಚು ಹಿಡಿದು ಹೀಗೆ ದಿಗಂಬರೆಯಾಗಿ ಹೊರಟಳೇ? ಅದು ಇಲ್ಲ. ಸನ್ನಿಪಾತ ಮೊದಲಾದ ರೋಗರುಜೆಯಾಗಿತ್ತೆ? ಅದು ಇಲ್ಲ ಭೂತಪಿಶಾಚಿಗಳು ಬಡಿದುಕೊಂಡವೆಂದು ಹೇಳಬೇಕೆ? ಅದೂ ಶಕ್ಯವಿಲ್ಲ ಯಾರಾದರೂ ಆಕೆಗೆ ಚೇಡಿ, ವಶೀಕರಣ, ಮೆಚ್ಚುಮದ್ದು ಮಾಡಿಸಿ ಹಾಗೆ ಬತ್ತಲೆ ತಿರಗುವಂತೆ ಮಾಡಿದರೇ? ಇದೂ ಇಲ್ಲ. ಜ್ಞಾನಪೂರ್ಣೆ ಅನ ಭವಪೂರ್ಣೆ ನುಡಿದಂತೆ ನಡೆದು ತೋರಿಸಿದಳು. ಹೊಳೆದಂತೆ ಬಾಳಿ ತೋರಿಸಿದಳು. ಜ್ಞಾನದಂತೆ ಕ್ರಿಯೆಯಿರಬೇಕೆಂದು ಹಾಗೆ ಮಾಡಿದಳು. ಇದೇ ಕೃತಿಯಿಂದ ಆಕೆಯ ಪರೀಕ್ಷೆ ಪ್ರಾರಂಭವಾಯಿತು. ಅಕ್ಕನ ನಿಲುವು

ದಿಗಂಬರೆಯಾದಕೂಡಲೆ ಪ್ರಾರಂಭವಾಯಿತು. ಉಚ್ಚಮಟ್ಟದ ತ್ಯಾಗ, ಉಚ್ಚಮಟ್ಟದ ವೈರಾಗ್ಯ ಎಳೆವಯಸ್ಸು ಗಾಳಿ ಮಳೆ ಕಲ್ಲು ಮುಳ್ಳುಗಳ ಕಲ್ಪನೆ ಇಲ್ಲ. ಮನೆಯಲ್ಲಿ ಪ್ರೇಮದಿಂದ ಬೆಳದಾಕೆ. ಒಂದೇ ಏಟಿಗೆ ವೈರಾಗ್ಯದ ಪ್ರಸಂಗಬರಲು ಎಲ್ಲವನ್ನು ತೊರೆದಳು. ಈ ಕೃತಿಯಿಂದ ಸ್ತ್ರೀಯರಿಗೆ ಧರ್ಮ ದಲ್ಲಿ ಸಮಾಜದಲ್ಲಿ ಎಷ್ಟು ಸ್ವಾತಂತ್ರ್ಯ, ಸ್ವಾವಲಂಬನ, ಸರಿಸಮಾನತೆ, ಅಧಿಕಾರ, ಸ್ಥಾನಮಾನಗಳಿರುವವೆಂಬುದನ್ನು ತೋರಿಸಿಕೊಡಲು ಎಲ್ಲರ ಹಾಗೂ ಎಲ್ಲದರ ಹಂಗುಹರಿದು ಶರೀರದ ಪರಿವೆಯು ಬಿಟ್ಟು ಏಕಾಕಿ ಯಾಗಿ ಕಾನನ ವಾಸಿಯಾದಳು. ಅರಿವೆಅಂಚಡಿ ಇಲ್ಲ, ಹಾಸಿಗೆಹೊದಿಕೆ ಗಳಿಲ್ಲ, ಗುಡಿಸಲು ಇಲ್ಲ, ಬೇಡಿಕೊಳ್ಳಲು ಜೋಳಿಗೆ ಇಲ್ಲ, ಉಣಲಿಕ್ಕೆ ತಾಟು ಮುಚ್ಚಳಗಳೂ, ಕುಡಿಯಲಿಕ್ಕೆ ತಂಬಿಗೆ ಮಗಿಯೂ ಇಲ್ಲ. ತನ್ನ ಜೊತೆಗೆ ಇಷ್ಟಲಿಂಗವನೊಂದು ಮಾತ್ರ ತಕ್ಕೊಂಡು ನಡೆದಳು. ಇದೊಂದು ವಿಚಿತ್ರ ತ್ಯಾಗ.

ಶಿವನಿಗೆ ದಿಗಂಬರನೆಂದು ಹೆಸರು ಸಹ ಇರುವದು. ನಿರಂಜನ ನಿರ್ಲೇಪ, ನಿರ್ವಿಕಾರಿ, ನಿರವಯುವ ಮೊದಲಾದ ಅನ್ವೈತಪರ ನಾಮ ಗಳುಂಟು. ಶಿವನ ಸತಿಯಾದ ಅಕ್ಕನು ಕೂಡ ತನ್ನ ಗಂಡನಂತೆ ತಾನೂ ಆದಷ್ಟು ನಿರ್ಲೇಪ ನಿರ್ವಿಕಾರಿ ದಿಗಂಬರೆಯಾಗಿ ಉಳಿದುಕೊಳ್ಳಬೇಕೆಂದು ಬಗೆದು ಹಾಗೆ ಆಗಲು ಅವಕಾಶ ಬರಲು ದಿಗಂಬರೆಯಾಗಿ ಬಿಟ್ಟಳು. ಶಿವನ ಪ್ರೇರಣೆಯಿಂದ ಇದೆಲ್ಲ ಘಟನೆ ನಡೆದಿದೆ ಎಂದು ಬಗೆದು ಶಾಂತ ಳಾಗಿಯೇ ಇದ್ದಳು.

ಕಾನನದಲ್ಲಿ ಊರಲ್ಲಿ ಜನರಲ್ಲಿ ಸ್ತ್ರೀಪುರುಷರಲ್ಲಿ ಅನುಭವವುಂಟಿಸ ದಲ್ಲಿ ಅಕ್ಕನು ಕೂಡ ಸಣ್ಣ ಹೆಣ್ಣು ಹುಡಿಗೆಯರು ಸಹಜ ಯಾವ ಸಂಕೋ ಚವಿಲ್ಲದೆ ಬತ್ತಲೆಯಾಗಿ ಊರಲ್ಲಿ ತಿರುಗುವರೊ ಅದರಂತೆ ಸಹಜ ಯಾವ ಭೇದಭಾವವಿಲ್ಲದೆ ಯಾವ ಸಂಕೋಚವಿಲ್ಲದೆ ದಿಗಂಬರೆಯಾಗಿ ಇದ್ದಳು. ಆದಕ್ಕಂತೆ ಅವಳಿಗೆ ಯಾವ ತ್ರಾಸೂ ಆಗಲಿಲ್ಲ. ಆಕೆಯ ದಿವ್ಯಾಂಗವು ತೇಜ, ಪ್ರಭಾವ, ಕಳೆಯೋಗ, ಸ್ಥಿತಿ, ಸಿದ್ಧಿ ಮೊದಲಾದವುಗಳನ್ನು ನೋಡಿ ಜನ ಪಿಟ್ಟೆನ್ನದೆ ಮಂತ್ರ ಮುಗ್ಧರಾಗಿ ಬಿಡುತ್ತಿದ್ದರು. ಅಂತೇ ಆಕೆಗೆ ಜನ ರಿಂದ ಯಾವ ತ್ರಾಸೂ ಆಗಲಿಲ್ಲ. ಅಲ್ಲದೆ ಆಕಗೆ ಭಯಭಕ್ತಿಯಿಂದ ನಡೆ ದುಕೊಳ್ಳುತ್ತಿದ್ದರು. ಆದರೂ ಪ್ರವಾಸದಲ್ಲಿಯು ಜನರ ರೀತಿಯನ್ನು

ಗಂಗಾಂಬಿಕೆ, ನೀಲಾಂಬಿಕೆಯರ ಮುಂದೆ ಒಂದು ವಚನದಿಂದ ಹೇಳಿದ್ದಾಳೆ. "ಕಿಚ್ಚಿಲ್ಲದ ಬೇಗೆಯಲಿ ಬೆಂದೆನವ್ವಾ! ಏರಿಲ್ಲದ ಗಾಯದಲ್ಲಿ ನೊಂದೆನವ್ವಾ! ಸುಖವಿಲ್ಲದ ಧಾವತಿಗೊಂಡೆನವ್ವಾ ಚನ್ನಮಲ್ಲಿಕಾರ್ಜುನನ ದೇವರಿಗೊಲಿದು ಬಾರದ ಭವಂಗಳಲಿ ಬಂದೆನವ್ವಾ" ಎಂದು ತನ್ನ ಪಯಣದಲ್ಲಿ ಆದ ಕಷ್ಟವನ್ನು ತೋಡಿಕೊಂಡಿದ್ದಾಳೆ ಮೊದಲೇ ಹೆಣ್ಣುಮಗಳು ರೂಪವತಿ, ಜವ್ವನೆ, ಸುಂದರಿ, ಏಕಾಕಿ ದಿಗಂಬರೆ ನೆರಗು ಬಣ್ಣದಾಕಿ ಹೀಗಿದ್ದರೆ ಅನ್ಯರು ಏನುಮಾಡಬಹುದು, ವಿಚಾರಿಸಿರಿ. ಆಕೆಯಲ್ಲಿ ದಿವ್ಯ ಶಕ್ತಿಗಳಿದ್ದುದರಿಂದ ಅವುಗಳನ್ನೆಲ್ಲ ಸಹಿಸಿಕೊಂಡು ಸಹಜ ಇದ್ದಳು.

**ವನವಾಸ:**— ಹಣ್ಣುಹಂಪಲ ತಿನ್ನುತ್ತ ಪ್ರಸಂಗಬಂದರೆ ಭಿಕ್ಷೆಬೇಡುತ್ತ ಗಿಡದಡಿಯಲ್ಲಿ ಮಲಗುತ್ತ ಕಾಲಕಳೆಯುವಳು. ಸ್ನಾನ ತೀರಿಸಿಕೊಂಡು ಲಿಂಗಾರ್ಚನೆಗೆ ಹೂಪತ್ರಿಗಳನ್ನು ತಂದು ಲಿಂಗ ಪೂಜಾ ನಿರತಳಾಗುವಳು. ಸದಾಶಿವ ಜಪ ಮಾಡುವಳು. ಹುಲಿಕರಡಿ ಹಾವು ಸಿಂಹ ಮೊದಲಾದ ಕಾಡ ಮೃಗಗಳ ಕೂಡ ಆಡುವಳು. ಅವುಗಳ ಸಹವಾಸದಲ್ಲಿ ಇರುವಳು. ಅವು ಅವಳ ತಪಃ ಪ್ರಭಾವಕ್ಕೆ ಬಗ್ಗಿದ್ದವು. ತಮ್ಮ ದುಷ್ಟ ಗುಣಗಳನ್ನು ಬಿಟ್ಟು ಆನಂದದಿಂದ ಆಕೆಯ ಕೂಡ ನಲಿಯುತ್ತಿದ್ದವು.

**ಕಲ್ಯಾಣಕ್ಕೆ ಆಗಮನ:**— ಈ ಪ್ರಕಾರ ದಿಗಂಬರೆಯಾಗಿ ಕಾನನದಲ್ಲಿ ತಿರಗುತ್ತ ಅನೇಕ ಊರುಗಳನ್ನು ನೋಡಿಕೊಂಡು ಕಡೆಗೆ ಕಲ್ಯಾಣದ ಸಮೀಪಕ್ಕೆ ಬಂದಳು. ಇದನ್ನು ಮೊದಲೇ ಅರಿತ ಬಸವಣ್ಣನವರು ಆ ಕಿನ್ನರಿಯ ಬ್ರಹ್ಮಯ್ಯನನ್ನು ಕರೆದುಕೊಂಡು ಬರಲಿಕ್ಕೆ ಕಳುಹಿದರು. ಆಗ ಅವನೂ ಕೂಡ ಅಕ್ಕನನ್ನು ನೋಡಿ ವಿಕಾರವಶನಾದವನಂತೆ ನಟಿಸಿ ಅನೇಕ ಪ್ರಶ್ನೆಗಳನ್ನು ಕೇಳಲು ಅವನಿಗೆ ಅಕ್ಕನು ಸರಾಗವಾಗಿ ಸರಸ ವಚನಗಳಿಂದಲೇ ಒಳ್ಳೇ ಬುದ್ಧಿಗಲಿಸಿದ್ದಾಳೆ. ಒಳ್ಳೇ ಸರಸವಾದ ಪ್ರಸಂಗ ಇಬ್ಬರಲ್ಲಿ ನಡೆದಿದೆ. ಅದೆಲ್ಲವನ್ನು ಸ್ಥಳದ ಸಂಕೋಚ ಮೂಲಕ ವಿವರಿಸಿಲ್ಲ. ಈ ಪ್ರಕಾರ ಕೌಶಿಕನಿಂದ ಹಿಡಿದು ಬೊಮ್ಮಯ್ಯನ ತನಕ ನಡುದಾರಿಯಲ್ಲಿ ಸಕಲರು ಸಕಲತರದಿಂದ ಕಾಡಿನೋಡಿ ಪರೀಕ್ಷಿಸಿ ಬಿಟ್ಟಿರುವರು. ಇದನ್ನೆಲ್ಲ ಚಿತ್ರಿಸವದು ಬಹು ಕಷ್ಟ. ಒಂದೆರಡು ಪ್ರಸಂಗದಿಂದ ಅದರ ಮರ್ಮವು ಹೊಳೆಯುವದು.

**ಅಕ್ಕನು ಅನಭವ ಮಂಟಪಕ್ಕೆ ಬಂದುದು:**— ದಿಗಂಬರೆಯಾದ ಅಕ್ಕನನ್ನು ನೋಡಿ ಬಹುಜನ ಶರಣ ಶರಣೆಯರಿಗೆ ಅಚ್ಚರಿ ಅಗಾಧ

ವಾಯಿತು. ಆಕೆಯ ಯೋಗ್ಯತೆಯನ್ನು ಎಲ್ಲರಿಗೂ ಗೊತ್ತುಪಡಿಸಲೋಸುಗ ಪ್ರಭುದೇವರಿಗೂ ಅಕ್ಕನಿಗೂ ಸರಸವಾದ ಪ್ರಸಂಗಗಳು ನಡೆದವು. ಇಬ್ಬರೂ ವಚನಗಳ ಸೂರಿ ಮಾಡಿದ್ದಾರೆ. ಅದನ್ನು ಶೂನ್ಯ ಸಂಪಾದನೆಯಲ್ಲಿ ಓದಿದರೆ ಪಂಡಿತರು ದಂಗುಬಡಿಯುವರು. ಅದನ್ನು ಕೇಳಿದ ಶರಣೀಯರು ಬೊಟ್ಟು ಕಚ್ಚಿದರು. ಆಗ ಮನದುಬಿ ಅಕ್ಕನನ್ನು ಹೊಗಳಿದರು.

**ಅಕ್ಕನ ಸ್ವಪ್ನ ಹಾಗೂ ದರ್ಶನಗಳುಃ** - ಆಕೆಗೆ ಅನೇಕ ಶಿವನ ಸಂಬಂಧದ ಸುಖ ಸ್ವಪ್ನಗಳು ಶಿವನ ದರ್ಶನಗಳು ಆಗಿವೆ. ಸರ್ವಾಂಗ ಲಿಂಗಿಯಾದರೆ ತೀರಿತು. ಅತೀಂದ್ರಿಯ ವಸ್ತುಗಳು ಸ್ಪಷ್ಟ ಕಾಣಿಸುವವು. ಕೇಳಿಸುವವು. ಸ್ಪರ್ಶಿಸುವವು. ರುಚಿಸುವವು. ಸುವಾಸಿಸುವವು. ದಿವ್ಯ ಸವಿ ವಚನಗಳು ತನಗೆ ತಾನೇ ಅನಾಯಾಸ ಸಹಜ ಹೊರ ಹೊಮ್ಮುವವು. ಇವುಗಳನ್ನೆಲ್ಲ ಅನೇಕ ವಚನಗಳಿಂದ ಚಿತ್ರಿಸಬಹುದು ಗೀತೆಯಲ್ಲಿಂದ ವಿಶ್ವರೂಪ ದರ್ಶನಗಳನ್ನು ಸಹಕಂಡಳು ಉಚ್ಚತರಗತಿಯ ಸಾಧಕರಿಗೆ ಅದೆಲ್ಲ ಸಹಜವಿದೆ. ಸುಲಭವಿದೆ. ಅಕ್ಕನು ಶ್ರೇಷ್ಠ ಸಾಧಕಳು. ಆಕೆ ಕಾಣುವನು ಯಾವ ಚೋದ್ಯವೇ ಇಲ್ಲ. ಅನೇಕ ವಚನಗಳು ಇದಕ್ಕೆ ಸಂಬಂಧಿಸಿದವುಗಳಿರುವವು. ಅವುಗಳನ್ನು ನೋಡಿದರೆ ತಿಳಿಯುವದು.

**ಅಕ್ಕನ ಜಯಗಳುಃ**—ಸಕಲ ಇಂದ್ರಿಯಗಳನ್ನು ಜಯಿಸಿದಳು. ಮನಸ್ಸನ್ನು ಗೆದ್ದಳು. ಮಾಯೆಯನ್ನು ಜಯಿಸಿದಳು. ಪಂಚಭೂತಗಳನ್ನಾಳಿದಳು. ಷಡ್ರಸಗಳನ್ನು ಜಯಿಸಿದಳು. ಅರಿಷಡ್ವರ್ಗ ಷಡ್ಭ್ರಮೆಗಳನ್ನು ಮೆಟ್ಟಿದಳು. ಷಡ್ವಿಕಾರ ಪಂಚಕ್ಲೇಶ ಅಹಂಕಾರತ್ರಯ ಷಡೂರ್ಮಿ ಸಪ್ತವ್ಯಸನ ಅಷ್ಟಮದಗಳು ಮೊದಲಾದವುಗಳನ್ನು ಸಹ ಜಯಿಸಿದಳು. ತ್ರಿಗುಣಗಳನ್ನು ಮೀರಿದಳು. ಷಟ್ ಚಕ್ರವನ್ನು ಏರಿದಳು ಈ ಪ್ರಕಾರ ಸಕಲವನ್ನು ಗೆದ್ದಳು. ಇದನ್ನು ಅವಳ ವಚನಗಳಿಂದಲೇ ಉದಹರಿಸಬಹುದು. ಅನೇಕ ವಚನಗಳಿರುವವು ವಾಚಕರು ಅವುಗಳನ್ನು ಅರಿಯಬೇಕು.

**ಅಕ್ಕನ ಮಧುರ ಭಾವಃ**— ಅಕ್ಕನದು ಮಧುರಭಾವ ರಾಧೆ, ಮೀರಾ, ಗೋಪಿಯರು, ಚಿಂತಾಮಣಿ, ಮೊದಲಾದವರಂತೆ ಅಕ್ಕನು ಮಧುರ ಭಾವ ಸಾಧನೆ ಮಾಡಿದಳು. ಶಿವನೇ ತನ್ನ ಗಂಡನೆಂದು ಬಗೆದಳು. ಅದೇ ಭಕ್ತಿ ಬಹು ಹೆಚ್ಚಿನದು. ಸೇವಾಭಾವ (ಹನುಮಂತ) ಸಖ್ಯಭಾವ ( ಅರ್ಜುನ )

ಶಾಂತಭಾವ (ಪ್ರಭುದೇವ) ಮಧುರಭಾವ (ಗೋಪಿಯರು) ವಾತ್ಸಲ್ಯಭಾವ (ಎಶೋಧಾ) ಹೀಗೆ ಪಂಚ ಮಹಾಭಾವಗಳನ್ನು ಶ್ರೀ ರಾಮಕೃಷ್ಣ ಪರಮ ಹಂಸರು ಸಾಧಿಸಿದ್ದರು ಇದರಲ್ಲಿ ಅಕ್ಕನದು ಮಧುರಭಾವ ಬಹು ಕಠಿಣ ಕಷ್ಟಸಾಧ್ಯ ಬಾಲ್ಯದಲ್ಲಿಯೇ ಇದನ್ನು ಸಾಧಿಸಿದ್ದಳು.

**ಅಕ್ಕನ ಜ್ಞಾನದ ಮಟ್ಟ:—** ನಿರ್ಗುಣ ನಿರಾಕಾರ ಸ್ಥಿತಿ ಬಂದಿತ್ತು ನಿರ್ವಿಕಲ್ಪ ಸಮಾಧಿ ಅನೇಕ ಸಲ ಆಗಿತ್ತು ತೂರ್ಯ ತೂರ್ಯಾತೀತ ಸ್ಥಿತಿ ಮುಟ್ಟಿದಳು ಆರು ಚಕ್ರದಾಟಿ ಪಶ್ಚಿಮ ಚಕ್ರ ಶಿಖಾಚಕ್ರ ಅನುಚಕ್ರ ದಾಟಿ ಇದಾ ಪಿಂಗಳದ ನಾಳಗುಂಟ ಈ ಸುಷುಮ್ನಾನಾಡಿಯು ಇಳಿದು ಪಾದ ಗಳ ಹೆಬ್ಬೆರಳು ಗೆಳತನಕ ಬಂದಿತ್ತು ಇಂಥ ಶಕ್ತಿ ಪತವು ಅಕ್ಕನಿಗೆ ಆಗಿತ್ತು.

**ಅಕ್ಕನ ಮಾಯೆಯ ಕಲ್ಪನೆ:—** ಇದರ ಬಗ್ಗೆ ಅನೇಕ ವಚನಗಳನ್ನು ಅಕ್ಕನು ಹಾಡಿದ್ದಾಳೆ. ದುರುಳವೇದಾಂತಿಯಂತೆ ಜಗಬ್ರಾಂತಿ ಭ್ರಮೆ ಎಂದು ಹೇಳಲಿಲ್ಲ ಮಾಯೆಯೊಂದು ಶಿವನ ಶಕ್ತಿಎಂದು ಚನ್ನಾಗಿ ಅರಿತ್ತಿದಳು. ನಸುಗತ್ತಲಲ್ಲಿ ಹಗ್ಗವನ್ನು ನೋಡಿ ಹಾವೆಂದು ಭ್ರಮಿಸಿದಂತೆ ಜಗವೆಂದು ಆಕೆ ಹೇಳಲಿಲ್ಲ ಆಕೆಯ ವಚನಗಳನ್ನು ಉದಹರಿಸಬಹುದು.

**ಅಕ್ಕನ ಸತ್ಯ ನಿಷ್ಠೆ:—**ಅಕ್ಕನಿಗೆ ರೋಮ ರೋಮ ಅಂಗೋಪಾಂಗ ಸತ್ಯ ಅಳವಟ್ಟಿತ್ತು ಅಂತೇ ಸತ್ಯಕ್ಕಾಗಿ ವನವಾಸಿಯಾದಳು ದಿಗಂಬರೆ ಯಾದಳು. ಶಿವನೇ ಗಂಡನೆಂದು ಬಾಲ್ಯದಲ್ಲಿ ಮನಸ್ಸಿನಿಂದ ಒಪ್ಪಿಕೊಂಡ ದ್ದನ್ನು ಕಡೆತನಗ ಬೇಕಾದ ಎಡರುತೊಡರು ಬಂದರೂ ಎಂದೂ ಯಾವ ಕಾಲದಲ್ಲಿಯೂ ಎಂಥ ಪ್ರಸಂಗದಲ್ಲಿಯೂ ಬಿಡಲಿಲ್ಲ ಆಕೆಯ ಸತ್ಯ ನಿಷ್ಠೆ ಬಲು ಹಿರಿದು ಇಕೆಯ ವಚನಗಳನ್ನು ಇದಕ್ಕೆ ಉಧಾರಣೆಯಾಗಿ ಕೊಡ ಬಹುದು.

**ಅಕ್ಕನ ನೀತಿ ಶೀಲ ಭಮಿಯ ವಿಚಾರಗಳು:—** ನೀತಿಯ ನೆಲೆಗಟ್ಟು ನೀತಿಯ ಮೂರ್ತಿ ನೀತಿಯ ನಿಧಿ ಆಗಿದ್ದಳು ಶೀಲವು- ಸಾಮಾನ್ಯ ಜನ ಶೀಲವಂತರೆಂದು ಹೇಳುವರಂತೆ ಮಾತ್ರ ಇದ್ದಿರಲಿಲ್ಲ. ಅವಳ ಶೀಲದ ಅರ್ಥ ವನ್ನು ಆಕೆಯ ವಚನಗಳಿಂದಲೇ ಕಾಣಬಹುದು. ಅದರಂತೆ ಭಮಿಯ ವಿಚಾರವನ್ನೂ ಸಹ ಬಹು ಚನ್ನಾಗಿ ಸುಂದರವಾಗಿ ವಚನಗಳಿಂದ ಹೇಳಿ

ದ್ದಾಳೆ ಅವುಗಳಿಂದಲೇ ನೀತಿ, ಶೀಲ, ಭವಿಗಳನ್ನು ತಿಳಿದುಕೊಳ್ಳುವದುತ್ತಮ.
**ಅಕ್ಕನ ನಿಲುಮೆ:—** ಕೇಳಿದ್ದನ್ನು ತಿಳಿದದ್ದನ್ನು ಒರೆಗಲ್ಲಿಗೆ ಹಚ್ಚಿ ನೋಡು ತ್ತಿದ್ದಳು. ತನ್ನನ್ನು ತಾನೇ ಒರೆಗಲ್ಲಿಗೆ ತಿಕ್ಕಿ ನೋಡುವಳು. ಸಕ್ರಿಯ ವಾಗಿ ಆಚರಿಸಿ ಅನುಭವಮಾಡಿ ತೋರಿಸುವಳು. ನುಡಿದಂತೆ ನಡೆಯುವಳು ಹೊಳೆದಂತೆ ಬಾಳುವಳು ತಿಳಿದಂತೆ ತಿಳಿಯುವಳು. ಅನುಭವ ಜ್ಞಾನವನ್ನು ಅನ್ಯರಿಗೆ ಮಾಡಿಕೊಡಲು ಬಾಯಿಂದ ಹೇಳುತಿರಲಿಲ್ಲ ಆದರೆ ತನ್ನ ಕ್ರಿಯ ಗಳಿಂದಲೇ ಆಚರಿಸಿ ತಿಳಿಸಿಹೇಳುವಳು ಭಕ್ತಿಯಿಂದ ಸಾಗಿ ಭಕ್ತಿಯಲ್ಲಿ ಮಿಂದು ಭಕ್ತಿಯಲ್ಲಿ ಕೊನೆಗೊಂಡು ಭಕ್ತಿಯಲ್ಲಿಯೇ ಐಕ್ಯವಾಗಿದ್ದಳು. ಪರ ಶಕ್ತಿ ನಿಷ್ಕಾಮ ಭಕ್ತಿಗಳ ಕಡೆಯ ಮಟ್ಟದಲ್ಲಿ ವಿಹರಿಸುತ್ತಿದ್ದಳು. ಅಕ್ಕನ ನಿಲುವು ಸರ್ವಾಂಗದಲ್ಲಿ ಸ್ಫುರಣಗೊಂಡು ಹೊರ ಸೂಸಿಹರಿಯುತ್ತಿತ್ತು. ಅಕ್ಕನನ್ನು ಕಂಡಾಗಲೇ ಅಕ್ಕನ ನಿಲುವಿಯ ಕಲ್ಪನೆ ಬಲ್ಲವರಿಗೆ ಬರು ವಂತಿತ್ತು ಅಕ್ಕನ ಬಗ್ಗೆ ಅನೇಕ ಶರಣರು ಹಾಡಿದ್ದಾರೆ ಅವುಗಳನ್ನು ಉದಹರಿಸಬಹುದು. ಹರ ಭಕ್ತಿಯೇ ಪರಜ್ಞಾನವೆಂದು ತೋರಿಸಿಕೊಟ್ಟಳು. ತಾನೂ ಶಿವನೂ ಒಂದೇ ಸ್ಥಿತಿ ಪಡೆದವರೆಂದು ಹೇಳುತ್ತಿದ್ದಳು. ಭೇದವಿಲ್ಲ ಭಾವವಿಲ್ಲ,

**ಅಕ್ಕನ ಅಷ್ಟಾವರಣ ಷಟ್‌ಸ್ಥಲಗಳ ಕಲ್ಪನೆ:–** ಗುರುಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ ಮಂತ್ರಗಳ ಬಗ್ಗೆ ವಚನಗಳನ್ನು ಹೇಳಿದ್ದಾಳೆ ಅವುಗಳನ್ನು ಉದಹರಿಸಬಹುದು. ಅದರಂತೆ ಆಕೆ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ ಎಂಬ ಷಟ್‌ಸ್ಥಲಗಳ ಬಗ್ಗೆ ಕೂಡ ವಚನಗಳನ್ನು ಹೇಳಿದ್ದಾಳೆ ಇವುಗಳಿಂದ ಷಟ್‌ಸ್ಥಲಗಳನ್ನು ಅರಿಯಬಹುದು.

**ಕಲ್ಯಾಣವನ್ನು ಅಗಲುವಿಕೆ:—**ಅಕ್ಕನು ಕಲ್ಯಾಣವನ್ನು ಅಗಲುವಾಗ ಶರಣರಿಗೂ ಬಹು ಕೆಡಕೆನಿಸಿದೆ ಅಕ್ಕನಿಗೂ ತ್ರಾಸಾಗಿದೆ. ಪವಿತ್ರ ಕಲ್ಯಾಣ ಅವಿಮುಕ್ತ ಕ್ಷೇತ್ರವನ್ನೂ ಅಗಲವದೂ ಅಕ್ಕನಿಗೆ ಕಷ್ಟವೆನಿಸಿದೆ. ಎಲ್ಲಿ ಶರಣ ಶರಣೆಯರು ಪವಿತ್ರ ಬಳಗವನ್ನು ಅಗಲುವದು ಕಷ್ಟಸಾಧ್ಯ ವಾಗಿದೆ. ಇದೇ ನಿಜವಾದ ಭಕ್ತಿ ಪ್ರೀತಿ ಉಳಿದೆಲ್ಲ ನಿಸ್ಸಾರ. ಎಲ್ಲರೂ ಗೋಳಾಡಿದ್ದಾರೆ. ಅನೇಕರು ಅನೇಕಬಗೆಯಿಂದ ದುಃಖವನ್ನು ವ್ಯಕ್ತ ಮಾಡಿದ್ದಾರೆ. ಆಗ ಪ್ರಭುದೇವರು ಅಕ್ಕನ ಅಕ್ಕ ಬೊಂತಾದೇವಿ ನಿಮಗಾಗಿ

ಇಲ್ಲೋ ಇರುವಳೆಂದು ಆಕೆಯ ಪರಿಚಯವನ್ನು ಕಲ್ಯಾಣದ ಎಲ್ಲ ಉಳಿದ ಶರಣರಿಗೆ ಮಾಡಿಕೊಟ್ಟು ಪ್ರಭು ದೇವರು ಮತ್ತು ಅಕ್ಕನು ಕೂಡಿ ಕಲ್ಯಾಣ ವನ್ನು ಅಗಲಿದರು.

ಶ್ರೀಶೈಲಕ್ಕೆ ಆಗಮನಃ– ಕಳವಳದಿಂದ ಶರಣ ಶರಣೆಯರ ಸಂಗವನ್ನು ಅಗಲಿ ಬಂದಳು. ಮುಲದ್ವಾರದ ಬೇರವ ಮೆಟ್ಟಿ ಭೂಮಂಡಲವಸೇರಿದರೆ ಆಚಾರದ ಬೇರಹಿಡಿದು ಐಕ್ಯದ ತುದಿಯ ಸೇರದೆ ವೈರಾಗ್ಯದ ಸೋಪಾನ ದಿಂದ ಶ್ರೀಗಿರಿಯನ್ನೇರಿದೆ. ಕೈ ಎಡಿದು ತಗೆದುಕೊಳ್ಳಾ ಚನ್ನಮಲ್ಲಿಕಾ ರ್ಜುನಾ ಅಕ್ಕನು ಶ್ರೀಶೈಲಕ್ಕೆ ಪ್ರಭು ದೇವರೊಡಗೂಡಿ ಬಂದಳು. ಪ್ರಭು ಅಕ್ಕನಿಗೆ ಶ್ರೀಗಿರಿಯ ಮಹಿಮೆಯನ್ನು ಹೇಳುವನು.

ಅಕ್ಕನ ಐಕ್ಯ—ಲಿಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ ಆಯಿತೆನ್ನೆ ಆಗದೆನ್ನೆ ನಾನೆನ್ನೆ ಚನ್ನಮಲ್ಲಿಕಾರ್ಜುನನಲ್ಲಿ ಲಿಂಗೈಕ್ಯವಾದ ಬಳಿಕ ಏನೂ ಅನ್ನೆ. ಕ್ರಿಯೆಯಗಾಳೊಡಂ ತೊಂದಾಸೆ. ಸದ್ಭಕ್ತರ ನುಡಿಗಡಣವುಳ್ಳೊಡಂ ತೊಂದಾಸೆಶಿಗಿರಿಯನೇರಿ ನಿಮ್ಮ ಬೆರಸಿದರೆ ಎನ್ನಸೆಗೆ ಕಡೆಯೇ ಅಯ್ಯ ಆವ ಆಶೆಯೂ ಇಲ್ಲದೆ ನಿಮ್ಮ ನಂಬಿರ್ದೆನಯ್ಯ ಚನ್ನಮಲ್ಲಿಕಾರ್ಜುನಾ. ಅಕ್ಕನ ಈ ವಚನಗಳ ಮೇಲಿಂದ ಶ್ರೀಗಿರಿಗೆ ಹೋಗಿ ಐಕ್ಯಳಾದದ್ದು ನಿಜ ವಾದ ಸಂಗತಿ ಎಂದು ಸಹಜ ಸಿದ್ಧವಾಗುವದು. ಪ್ರಭು ದೇವರು ಅಲ್ಲೇ ಒಂದು ಕಡೆಗೆ ಐಕ್ಯರಾದರು. ಈವಂರಾರಿಗೂ ಯಾವ ತರದ ರೋಗ ವಗೈರೆ ಬಾರದೆ ಕಾಯವನ್ನು ಬಯಲು ಮಾಡಿದರು. ಇವರು ಕಾಯದ ಮೇಲೆ ಪರಿಪೂರ್ಣ ಸ್ವಾಮಿತ್ವವನ್ನು ಪಡೆದಿದ್ದರು. ನಮ್ಮ ಮಠದ ಮೂಲಪುರುಷ ರಾದ ಶ್ರೀ ಸಿದ್ಧಲಿಂಗ ದೇವರು ಮೂರು ತಿಂಗಳು ಮೊದಲೋ ಲಿಂಗೈಕ್ಯ ರಾಗುವರೆಂದು ಹೇಳಿ ಗೌರಿ ಹುಣ್ಣಿಮೆದಿನ ಸಾವಿರಾರು ಜನರ ಮಧ್ಯದಲ್ಲಿ ರೋಗರುಜೆ ಏನೂ ಇಲ್ಲದೆ ಪದ್ಮಾಸನ ಹಾಕಿ ಶರೀರದಿಂದ ಜೀವಹಂಸನನ್ನು ಹಾರಿಸಿ ಬಿಟ್ಟರು. ನೋಡಿದವರು ಇನ್ನೂ ಇರುವರು. ಇದೆಲ್ಲ ಉಚ್ಚತರ ಗತಿಯ ಸಾಧಕರಿಗೆ ಶಕ್ಯವಿದೆ. ಅಕ್ಕನಿಗೂ ಇದೇನು ದೊಡ್ಡ ಮಾತಲ್ಲ. ಅವಳು ಇದರಂತೇ ಐಕ್ಯಳಾದಳು. ಆಕೆಯ ಸಮಾಧಿ ಶ್ರೀಗಿರಿಯಲ್ಲಿ ಇರುವದು.

ಅಕ್ಕನ ಸಿದ್ಧಾಂತ:— ಶರಣಸತಿ ಲಿಂಗ ಪತಿ ಎಂಬ ವೀರಶೈವರ ಪರಮ ಶ್ರೇಷ್ಠ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅನುಸರಿಸಿ ಜಗಕೆ

ಬೋಧಿಸಿದಳು. "ಈಕೀಳುಭುವನವುಂ ಬೆಳಗುವ ದಿವ್ಯ ಸ್ವರೂಪನ ಕಂಡೆ ನಾನು. ಕಂಡಿನ್ನ ಕಂಗಳ ಬರಹಿಂಗಿತ್ತಿಂದು. ಗಂಡ ಗಂಡರೆಲ್ಲ ಹೆಂಡ ಹೆಂಡರಾಗಿ ಆಳುವ ಗುರುವಿನ ಕಂಡೆ. ನಾನು ಜಗದಾದಿ ಶಕ್ತಿಯೊಳು ಬೆರಸಿ ಒಡನಾಡೂನ ಪರಮ ಗುರು ಚನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೇನು. ಇದು ವೀರಶೈವರ ಶರಣಸತಿ ಲಿಂಗಪತಿಯನ್ನು ಮತ್ತು ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಬೋಧಿಸುವವು. ಜಗತ್ತು ಸತ್ಯ ಶಿವನೂ ಸತ್ಯವೆಂದರು ಶರಣರು ಸರ್ವಂ ಬಲ್ವಿದಂ ಬ್ರಹ್ಮ ಎಂಬ ವಿಶಾಲ ತತ್ವಕ್ಕೆ ಮನ್ನಣೆಕಟ್ಟರು. ಶಿವಶಕ್ತಿ ಪ್ರಕೃತಿ ಪುರುಷರನ್ನು ಒಪ್ಪಿಕೊಂಡು ಈ ಲೋಕದಲ್ಲಿ ಮತ್ತನಂತ ಲೋಕಗಳೆಂದು ಹೇಳಿದರು.

———

# ಅಧ್ಯಾತ್ಮ ಸಾಧನ.

(ಲೇಖಕರು:- ಶ್ರೀ. ಅನ್ನದಾನೀಶ್ವರ ವಿರಕ್ತಮಠ. ಬಿ. ಎ. ಆನರ್ಸ ಸೆಕೆಂಡಕ್ಲಾಸ
ಬಿ. ಟಿ. ಸೆಕೆಂಡಕ್ಲಾಸ, ಕಾಂದೀವಲಿ ಟ್ರೇಂಡ್.)

---

ಅಧ್ಯಾತ್ಮ ಸಾಧಕನು ಅಧ್ಯಾತ್ಮಿಕ ಅನುಭಾವ ವಿದ್ಯೆಯಲ್ಲಿ ಪ್ರಗತಿ ಹೊಂದಿದ ಗುರುವಿನ ಸಹಾಯ ಪಡೆಯಲಿಕ್ಕೇಬೇಕು. ಗುರುವಿನ ಪ್ರತ್ಯಕ್ಷ ನಡೆನುಡಿಗಳು ನಮ್ಮ ಜೀವನವನ್ನೇ ರೂಪಿಸುತ್ತವೆ. ನಮ್ಮ ಜ್ಞಾನಾನುಭವಗಳು ಅಭಿವೃದ್ಧಿ ಹೊಂದುವದಕ್ಕೂ ನಮ್ಮ ಆಚರಣೆಯು ದೃಢಗೊಳ್ಳುವದಕ್ಕೂ ಸದ್ಗುರುವು ಬೇಕು. ಜೀವದಿಂದ ಜೀವ ಜೀಕುವದು. ಭಾವದಿಂದ ಭಾವ ಮಿಡಿಯುವದು. ಆತ್ಮದಿಂದ ಆತ್ಮ ಸ್ಫುರಿಸುವದು. ಶಿವಾನುಭವದಲ್ಲಿ ನೆಲೆಗೊಳಿಸಲಿಕ್ಕೆ ಗುರುವುಬೇಕು.

ಅಧ್ಯಾತ್ಮ ಸಾಧಕನು ಸ್ವಾನುಭವಕ್ಕೆ ತಂದುಕೊಳ್ಳುವ ಯತ್ನ ಮಾಡಲಿಕ್ಕೆಬೇಕು. ಸ್ವಾನುಭವವಿಲ್ಲದ ವಿದ್ಯೆಯು ನಿಷ್ಪ್ರಯೋಜಕವು. ಸ್ವಾನುಭವದ ಒರೆಗಲ್ಲಿಗೆ ಹಚ್ಚದ ವಿನಃ ಸಾಕ್ಷಾತ್ಕಾರವು ಸಾಧ್ಯವಾಗುವದಿಲ್ಲ. ಎತ್ತು ಗಾಣವನ್ನು ಸುತ್ತಿಬಂದಂತೆ ಜ್ಞಾನರಹಿತ, ಅನುಭವರಹಿತ ಕರ್ಮಗಳನ್ನು ಮಾಡುವದರಿಂದ ಭವಬಂಧನವು ತಪ್ಪದು. ದಿನಾಲು ನಿಯಮಿತವಾಗಿ ಸಾಧನ ಮಾಡಲಿಕ್ಕೆಬೇಕು. ಧ್ಯಾನ, ಧಾರಣ, ಸಮಾಧಿಗಳಿಂದ ಶಿವಶಕ್ತಿಯು ಸ್ಫುರಿಸುವದು. ಲಿಂಗಲೀಲೆಯು ಆರಂಭವಾಗುವದು. ಲಿಂಗವೇ ತಾನಾಗಿರುವ ಬ್ರಹ್ಮಸ್ಥಿತಿಯು ಪ್ರಾಪ್ತವಾಗುವದು ಸ್ವಾನುಭವದಿಂದಲೇ ಸಾಧ್ಯ.

ಅಧ್ಯಾತ್ಮಸಾಧಕನು ಶಬ್ದಬ್ರಹ್ಮದ ಸಹಾಯ ಪಡೆಯಬೇಕು. ಬ್ರಹ್ಮವಿದ್ಯೆಗೆ ಸಂಬಂಧಿಸಿದ ಶಾಸ್ತ್ರಗಳನ್ನು ಅರಿಯಬೇಕು. ಸ್ವಾನುಭವಕ್ಕೆ ಪೋಷಕವಾಗುವಂತೆ ಶಾಸ್ತ್ರದ ಉಪಯೋಗ ಮಾಡಿಕೊಳ್ಳಬೇಕು. ಕಾಕುಪೋಕು ಶಾಸ್ತ್ರಗಳನ್ನು ಅನೇಕ ಓದಿದರೇನು ? ಕಾನನದ ಬೆಳದಿಂಗಳಂತೆ ನಿಷ್ಫಲವು. ಶಬ್ದಬ್ರಹ್ಮದ ಆಚೆಗೆ ಇರುವ ಶಿವಶಕ್ತಿಯ ಸಂಕಲ್ಪವು ತಕ್ಕ ಕಾಲಕ್ಕೆ ಈಡೇರುವದು. ಸಾಧಕನು ತಾಳ್ಮೆಯುಳ್ಳವನಾಗಿರಲಿಕ್ಕೆಬೇಕು.

ವಿಶ್ವಾತೀತ ದೈವೀಶಕ್ತಿಯ ಅನುಸಂಧಾನ ನಡೆಸಿದರೆ ಸಾಧಕನಿಗೆ ಅನುಪಮ ಆನಂದವು ಸ್ಫುರಿಸುವದು. ವಿಶ್ವಾತ್ಮಕ ದೈವೀಶಕ್ತಿಯ ಅನುಸಂಧಾನದಿಂದ ಲಿಂಗೈಕ್ಯ ಶರಣ ಸ್ಥಿತಿಯು ಪ್ರಾಪ್ತವಾಗುವದು. ಲಿಂಗೈಕ್ಯ ದಿವ್ಯಾನುಭವವನ್ನು ಅನುಭವಿಸಿ ಶರಣಸ್ಥಲದಲ್ಲಿ ನಿಂತು ಸಮರ್ಪಣ ಭಾವದಿಂದ ಜಗದಲ್ಲಿ ದೈವೀ ವಿದ್ಯುಚ್ಛಕ್ತಿಯನ್ನು ಹರಿಸಲಿಕ್ಕೆ ಬೇಕು. ಹರಿಯುವದು. ಕೇವಲ ವ್ಯಕ್ತಿಯ ಸಾಕ್ಷಾತ್ಕಾರವು ಗುರಿಯಲ್ಲ. ಮಾನವ ಸಮಾಜದ ದಿವ್ಯೀಕರಣಕ್ಕೆ ಸಾಧಕನು ಮೊದಲು ಸಿದ್ಧಿಪಡೆಯಲಿಕ್ಕೆಬೇಕು.

ಸಚ್ಚಿದಾನಂದರ ಅನುಭವವು ಮೈ ಮನಭಾವ ಪ್ರಾಣಗಳಲ್ಲಿ ಪ್ರದರ್ಶಿಸುವಂತೆ ಸಾಧಕನು ಶರಣನಾಗಲಿಕ್ಕೆ ಬೇಕು. ಶರಣನು ಜಗದ್ಗುರುವು. ವಿಶ್ವಸೇವಕನೂ ಆಹುದು. ಶರಣನಾಗದವನು ಜಂಗಮನಾಗಲಾರನು. ಗುರು ಆಗಲಾರನು. ಲಿಂಗವಾಗಲಾರನು. ಸತ್, ಚಿತ್, ಆನಂದಗಳ ಜ್ಞಾನಾನುಭವಗಳು ಆಧ್ಯಾತ್ಮಿಕ ಶಕ್ತಿಯನ್ನು, ಬೆಳಕನ್ನು, ಶಕ್ತಿಯನ್ನು ದೈವೀಶಕ್ತಿಯನ್ನು ಹೊರಸೂಸಬಲ್ಲವು. ಅಧ್ಯಾತ್ಮ ಜೀವನವೇ ನಿಜವಾದ ಜೀವನ ಎಂಬ ಅರಿವು ಯಾವಾಗಲೂ ಸಾಧಕನಲ್ಲಿರಲಿಕ್ಕೆಬೇಕು. ಅಧ್ಯಾತ್ಮವು ಜೀವನದ ಗುರಿಯಲ್ಲ ಅದೇ ಜೀವನವು ಎಂದು ತಿಳಿಯಬೇಕು.

ಸಾಧಕನು ತನ್ನ ಎಲ್ಲ ವಿಚಾರಗಳನ್ನು ಒಂದೇ ತತ್ವದ ಮೇಲೆ ಕೇಂದ್ರೀಕರಿಸಲಿಕ್ಕೆ ಬೇಕು. ತನ್ನ ಅಂತಃಕರಣವನ್ನು ಅನಂತ ಶಕ್ತಿಯ ಮೇಲೆ ಸ್ಥಿರಗೊಳಿಸಲಿಕ್ಕೆ ಬೇಕು. ತನ್ನ ಇಚ್ಛಾ ಶಕ್ತಿಯನ್ನು ಅಮರ ಶಾಂತಿಯ ಸ್ಥಿರೀಕರಣಕ್ಕಾಗಿ ಉಪಯೋಗಿಸಬೇಕು. ಸಾಧಕನು ದೈವೀ ಆವಿರ್ಭಾವಕ್ಕೆ ವಿರೋಧವಿದ್ದ ಆಸುರೀ ಶಕ್ತಿಗಳನ್ನು ನಿವಾರಿಸಲಿಕ್ಕೆ ಬೇಕು. ಎಲ್ಲೆಲ್ಲು ದೈವೀಶಕ್ತಿಯನ್ನೇ ಸ್ವೀಕರಿಸಬೇಕು. ತನ್ನ ಪ್ರಯತ್ನಕ್ಕೆ ದೈವದ ಬಲವು ಬರುವದು. ಅನುಭವವಾದಾಗ ತನ್ನ ಮೈ ಮನ ಭಾವ ಪ್ರಾಣಗಳನ್ನು ಶಿವಶಕ್ತಿಯೇ ಹಿಡಿದು ವ್ಯಾಪಿಸಿ ತನ್ನ ದಿವ್ಯ ಲೀಲೆಯನ್ನೆಸಗಲು ಪ್ರಾರಂಭಿಸುವರು. ಆಗ ದೈವೀ ಸ್ವಭಾವವೇ ವಿಜಯಿಯಾಗುವದು.

ಸಾಧಕನು ಜಗದಲ್ಲಿದ್ದ ತನ್ನ ಕರ್ತವ್ಯ ಕರ್ಮಗಳನ್ನು ಶಿವಭಾವದಿಂದ ಮಾಡಲು ಸಾಧಿಸಬೇಕು. ಫಲಾಪೇಕ್ಷೆಯಿಲ್ಲದೇ ಶಿವಾರ್ಪಣ ಭಾವ

ಬುದ್ಧಿಗಳಿಂದ ಕಾರ್ಯ ಗೈಯಬೇಕು. ನಿಷ್ಕಾಮಕರ್ಮವು ಸಾಧಕನನ್ನು ದೈವೀಶಕ್ತಿಯತ್ತ ಒಯ್ಯುವದು. ಆಶೆ ಅಹಂಕಾರಗಳಿಂದ ದೈವೀ ಸಾಕ್ಷಾತ್ಕಾರವಾಗಲಾರದು. ಎಲ್ಲ ಅವಸ್ಥೆಗಳಲ್ಲಿಯೂ ಸಾಧಕನು ಸಮತ್ವವನ್ನು ಕಾಯ್ದುಕೊಳ್ಳಲಿಕ್ಕೆ ಯತ್ನಿಸಬೇಕು. ಏನೇ ಸಂಭವಿಸಿದರೂ ಅಂತರಂಗದ ಶಾಂತಿಯು ಕದಡಬಾರದು. ಹಾಗೆ ಧ್ಯಾನದಿಂದ ಮಾಡಲಿಕ್ಕೆ ಬೇಕು.

ಋಷಿಗಳು, ಶರಣರು, ದಾಸರು, ಭಕ್ತರು, ಕವಿಗಳು ಮತ್ತು ಕಲಾಕಾರರು ಅಂತರಂಗ ಜೀವನದ ತಿರುಳನ್ನು ಅರಿತವರು. ಸಾಧಕನು ಅಂತರಂಗ ಬಹಿರಂಗ ಎರಡರಲ್ಲಿಯೂ ಸಾಮರಸ್ಯವನ್ನು ಸಾಧಿಸಲಿಕ್ಕೆ ಬೇಕು. ಅಂತರಂಗ ಬಹಿರಂಗಗಳಲ್ಲಿಯೂ ಶಿವಸಂಕಲ್ಪವೇ ಮಿನಗಬೇಕು. ಹೊಳೆಯಬೇಕು. ವಿಚಾರ ಮತ್ತು ಭಾವಗಳು ಪರಿವರ್ತನಹೊಂದಿದರೆ ತೀರಲಿಲ್ಲ. ಸ್ಥೂಲಾಂಗ ಮತ್ತು ಅಂತರಾತ್ಮಗಳು ದಿವ್ಯತೆಯನ್ನು ಹೊಂದಲಿಕ್ಕೆ ಬೇಕು ಮನಸ್ಸಿನ ಲೋಕವನ್ನು ದಾಟದ ಹೊರತು ಶುದ್ಧ ಚೇತನದ ಅರಿವು ಆಗಲಾರದು. ಮನಸ್ಸು ಸುಮನಸು, ಆಗಲಿಕ್ಕೆ ಬೇಕು. ಸುಮನಸ್ಸು ದೈವೀ ತೇಜಸ್ಸಿನ ಮನಸಾಗಬೇಕು. ದೈವೀತೇಜಸ್ಸಂಪನ್ನ ಮನಸ್ಸು ಶಿವಶಕ್ತಿ ಅಳವಟ್ಟಾಗ ಅವತಾರ ಶಕ್ತಿಯು ಬರುವದು. ಅವತಾರಕರಲ್ಲಿ ದೈವೀ ವಿಭೂತಿಯು ಸ್ವಯಂಸಿದ್ಧ. ಅವತಾರಿ ಪುರುಷರ ಮತ್ತು ವಿಭೂತಿಗಳ ಮುಖಾಂತರ ಲಿಂಗವಾಗಿಸುವ ಕ್ರಿಯೆಯು ಶಿವಲೀಲೆಯು ವಿಶ್ವದಲ್ಲಿ ಸಾಗುವದು.

ಲಿಂಗಾಂಗ ಸಾಮರಸ್ಯ, ಶಿವ ಜೀವೈಕ್ಯ ಸ್ಥಿತಿಯನ್ನು ಮುಟ್ಟಿದಾಗ ಅಹಂಕಾರ, ಆಶೆ ಆಲಸ್ಯ ವಿಷಯಲಾಲಸೆಗಳಿಗೆ ಕ್ಷುದ್ರ ಜೀವದ ಆಕಾಂಕ್ಷೆಗಳು ನಾಶವಾತ್ತವೆ. ನಿಜವಾದ ಸ್ವತಂತ್ರ್ಯವು ಜೀವನ ಇಚ್ಛೆಯು ಶಿವ ಸಂಕಲ್ಪಕ್ಕೆ ದೈವೀ ಇಚ್ಛೆಗೆ ಶರಣರಾದಾಗ ನಿಜವಾದ ಸ್ವತಂತ್ರ ಜೀವನವು ಅಳವಡುವದು. ದೈವೀ ಸ್ವಾತಂತ್ರ್ಯದಲ್ಲಿ ಜೀವಿಸುವದನ್ನು ಕಲಿತಾಗ ಅಜ್ಞಾನದ ಮಾಯೆಯು ಹರಿದು ಹೋಗುವದು.

ದೈವೀಶಕ್ತಿಯು ಆತ್ಮದ ಹತ್ಯ ಅಥವಾ ನಾಶವನ್ನು ಕೇಳುವದಿಲ್ಲ. ಆತ್ಮದ ಅರ್ಪಣವನ್ನು ಇಚ್ಛಿಸುವದು. ಆತ್ಮಾರ್ಪಣೆಯೆಂದರೆ ನಾಶವಲ್ಲ. ಆತ್ಮಾರ್ಪಣೆ ಮಾಡಿದವರಿಗೆ ದೈವೀಶಕ್ತಿಯು ತನ್ನನ್ನೇ ಅರ್ಪಿಸಿಬಿಡುತ್ತದೆ.

ಇಡೀ ಮಾನವ ಸ್ವಭಾವವು ಅರ್ಪಿತವಾದರೆ ಶಿವಶಕ್ತಿಯು ಸರ್ವತ್ರ ದೃಗ್ಗೋಚರವಾಗುವದು. ನಮ್ಮ ಇಡೀ ಇರವನ್ನು ದಿವ್ಯ ಅರಿವನ್ನಾಗಿ ಬದಲಿಸಿದರೆ ಮಾತ್ರ ಕೈಲಾಸವು ಧರೆಗಿಳಿಯಬಲ್ಲುದು. ಆಗ ಭೂಕೈಲಾಸವಾಗಬಲ್ಲುದು.

ಸಾಧಕನು ಮೊದಲು ತನ್ನೊಳಗೆ ದೈವೀಶಕ್ತಿಯ ಸಾಕ್ಷಾತ್ಕಾರ ಮಾಡಿಕೊಂಡು ನಂತರ ವಿಶ್ವಾತ್ಮನ ಆಮೇಲೆ ವಿಶ್ವಾತೀತ ಶಿವಶಕ್ತಿಯ ಅಥವಾ ಪರಾಸಂಪತ್ತಿನ ಸಾಕ್ಷಾತ್ಕಾರ ಮಾಡಿಕೊಳ್ಳಲಿಕ್ಕೇಬೇಕು. ಸರ್ವಂ ಶಿವಮಯಾ ಜಗತ್— ಈ ಅವಸ್ಥೆಯು ಶಿವಶಕ್ತಿಯ ಲೀಲೆಗೆ ಅವಕಾಶಕೊಡುವದು. ಅದ್ವಯ ಶಿವಶಕ್ತಿಯನ್ನು ಅಳವಡಿಸಿಕೊಂಡು ಜ್ಞಾನಿಗೆ ಶುದ್ಧ ಅರಿವಿನಿಂದ ಆನಂದದಲ್ಲಿರುತ್ತ ಹೋಗುವದು, ಸೇರುವದು. ಕವನಯೋನಿಗೆ ದೇವನಂತೆ ಪೂರ್ಣನಾಗುವದುಬೇಕು. ಭಕ್ತಿ, ಜ್ಞಾನ, ಕರ್ಮಯೋಗಗಳಲ್ಲಿ ಸಾಮರಸ್ಯ ಸಾಧಿಸಲಿಕ್ಕೆಬೇಕು. ಇವು ಒಂದನ್ನೊಂದು ಬಿಟ್ಟು ಭಿನ್ನವಿಲ್ಲ. ಇವು ಮೂರೂ ಯೋಗಗಳೂ ಶಿವಶಕ್ತಿಯ ಅಭಿವ್ಯಕ್ತಿ ಎಂಬ ದಿವ್ಯ ಲೀಲೆಯ, ದಿವ್ಯಯೋಗದ ತಳಹದಿಯ ಮೇಲೆ ಸ್ಥಾಪಿಸಲ್ಪಡಲಿಕ್ಕೆಬೇಕು. ಆಗ ಬಾಹ್ಯ ಮತ್ತು ಅಂತರ್ಯ ಇರುವಿಕೆಯೇ ಅಧ್ಯಾತ್ಮಮಯವಾಗುವದು. ಒಂದು ಅಖಂಡ ದಿವ್ಯ ಜೀವನವಾಗುವದು. ಸಾಗುವದು. ಅಂತರಾತ್ಮನ ಜಾಗೃತಿಯಾದರೆ ವಿಶ್ವಾತೀತ ಶಿವಶಕ್ತಿಯು ವಿಶ್ವದೊಳಗಿನ ಅಣುಚಕ್ರದೊಳಗಿನಿಂದ ಸಾಧಕನ ಬ್ರಹ್ಮರಂಧ್ರಕ್ಕೆ ಅವತರಿಸಿ ಎಲ್ಲ ಒಂಭತ್ತೂ ಚಕ್ರಗಳನ್ನು ಅವುಗಳ ಶಕ್ತಿಗಳನ್ನೂ ಎಚ್ಚರಗೊಳಿಸಿ ಮಾನವ ಜೀವನವು ದಿವ್ಯ ಜೀವನವಾಗುವದು. ವ್ಯಷ್ಟಿ, ಸಮಷ್ಟಿ ಜೀವನಗಳ ಪರಿಪೂರ್ಣತೆಯು ಕೇವಲ ಉಚ್ಚ ನೈತಿಕ ಆದರ್ಶದಿಂದ ಸಾಧ್ಯವಾಗದೇ ಮನದಾಚೆಯ ದಿವ್ಯ ದೈವೀ ನಿಯಮದಿಂದ ಸುಲಭವಾಗಿ ಆಗುವದು. ಆ ದಿವ್ಯ ದೈವೀ ನಿಯಮವನ್ನು ಆಧ್ಯಾತ್ಮಿಕ ಸತ್ವದಿಂದ, ಬೆಳಕಿನಿಂದ ಅಳವಡಿಸಿ ಸಾಧಕನು ಉಳಿದವರಿಗೆ ನೀಡಬಲ್ಲನು.

ಸಾಧಕನು ಯೋಗಸಾಧನದಲ್ಲಿದ್ದಾಗ ಮೂರು ಅವಸ್ಥೆಗಳನ್ನು ಹೊಂದುತ್ತಾನೆ. ತನ್ನ ಬುದ್ಧಿ, ಹೃದಯ, ಮತ್ತು ಇಂದ್ರಿಯಗಳು ಸಾಧಕನಿಗೆ ತನ್ಮಾತ್ರ ಕರೆಯುತ್ತವೆ. ಸಾಧನವು ಹೆಚ್ಚಾದಂತೆ ದೈವೀ ಸ್ಫೂರ್ತಿ ಮತ್ತು ದೈವೀ ಬೆಳಕು ಒಮ್ಮೊಮ್ಮೆ ತೋರಿ ಅಡಗುತ್ತವೆ. ಇದು ಮೊದಲನೆಯ ಅವಸ್ಥೆ.

ಎರಡನೆಯ ಅವಸ್ಥೆಯಲ್ಲಿ ಬುದ್ಧಿಯು ಹೆಚ್ಚು ತಿಳಿಯಾಗುತ್ತ ಅಧ್ಯಾತ್ಮಿಕವಾಗುತ್ತ ದೈವೀ ಪ್ರೇರಣೆಯು ಹೆಚ್ಚುತ್ತ ಹೋಗುವದು. ಹೊರ ಮುಖವಾದ ಹೃದಯವು ಒಳಮುಖವಾಗುತ್ತ ಸಾಗಿ ಅಂತರಾತ್ಮದ ಜಾಗೃತಿಯಾಗುವದು. ಇಂದ್ರಿಯಗಳು ಒಳಗಿನ ಶುದ್ಧ ಪ್ರಾಣಶಕ್ತಿಯಿಂದ ಆವರಿಸುತ್ತವೆ.

ಮೂರನೆಯ ಅವಸ್ಥೆಯಲ್ಲಿ ಆಧ್ಯಾತ್ಮಿಕ ಮನದ ಸೀಮೆಯನ್ನು ದಾಟಿ ದೈವೀ ಸ್ವಭಾವದ ಅತಿ ಮಾನವ ಸೀಮೆಗ ಪ್ರಯಾಣವು ಸಾಧ್ಯವಾಗುವದು. ಇದೇ ಕೊನೆಯ ಅವಸ್ಥೆಯು. ಆ ದೈವೀ ಸ್ವಭಾವವೇ ಮಾನವ ಸ್ವಭಾವವನ್ನು ದಿವ್ಯವನ್ನಾಗಿಸುವದು. ಭೂಮಿಯನ್ನು ಕೈಲಾಸವನ್ನಾಗಿ ಮಾಡುವದು. ಸತ್ಯಯುಗವು ಸ್ಥಾಪಿತವಾಗುವದು.

———

# ತವರಿಗೆ ಹೋದಾಕೆ

ಇನ್ನೂ ಯಾಕ ಬರಲಿಲ್ಲಾಕೆ ತವರೀಗೆ ಹೋದಾಕೆ ।
ನನ್ನನು ಬಿಟ್ಟು ಒಂದರಗಳಿಗೆ ಇರದಲೆ ಇರುವಾಕೆ ॥ಪಲ್ಲ॥

ಸವಿ-ಸವಿ ಮಾತನಾಡಿ ಮನಕ್ಕೆ ಶಾಂತಿ ಕೊಡುವಾಕೆ ।
ಶಿವನು-ಗೌರಿ ಕೂಡಿದಂತೆ ಕೂಡಿ ಇರುವಾಕೆ ।
ರವಿಗೆ ಮುನ್ನ ಎದ್ದು ಪೂಜಾ ಸಾಹಿತ್ಯ ಇಡುವಾಕೆ ।
ಶಿದಪೂಜೆಗೆ ಹೊತ್ತಾಯಿತು ಏಳಿರಿ ಎನುವಾಕೆ ॥೧॥

ತಂದೆ-ತಾಯಿ ಬಿಟ್ಟು ಎನ್ನ ಕೈಯ ಹಿಡಿದಾಕೆ ।
ಕಾಯುದ ನೆರಳಿನಂತೆ ಎನ್ನ ಇಚ್ಛೆಯೊಳಿರುವಾಕೆ ।
ರಾಯರ ಮಂತ್ರಿಯಂತೆ ಮುಂದಿನ ಯೋಚನೆ ಮಾಡಾಕೆ ॥
ಆಯುದಷ್ಟು ಮನೆಯ ಖರ್ಚು ಮಾಡುವಾಕೆ ॥೨॥

ಜನನಿಯಂತೆ ಕರೆದು ಭೋಜನ ಮಾಡಿಸುವಂಥಾಕೆ ।
ಘನತಾಪವನ್ನು ಸಹಿಸುವಲ್ಲಿ ಭೂಮಿಯಂಥಾಕೆ ।
ಅನುಕೂಲಾಗಿ ಧರ್ಮ ಕಾರ್ಯ ಮಾಡುವಂಥಾಕೆ ।
ಭಕ್ತಿಲಿಂದ ಬಸವನ ವಚನ ಹೇಳಿರೆನುವಾಕೆ ॥೩॥

ಅಕ್ಕರದಿಂದ ಅಕ್ಕನ ವಚನ ಕೇಳಿರೆನುವಾಕೆ ॥
ಶಿವಾನುಭವ ಸಂಚಿಕೆಯನ್ನು ತಪ್ಪದೆ ಓದುವಾಕೆ ।
ವಚನಶಾಸ್ತ್ರವ ಓದುವಾಗ ನನ್ನನು ಕರವಾಕೆ ।
ತಿಳಿಯದ್ದನ್ನು ಆತುರದಿಂದ ನನ್ನ ಕೇಳುವಾಕೆ ।
ತಿಳಿಸಿಹೇಳಿದ ಮೇಲೆ ಸರಿಯೆಂದು ಗೋಣುಹಾಕುವಾಕೆ ॥೪॥

**ಲೀಲಾವತಿ ಹೋಳೀಕಟ್ಟಿ**
ಮೈದರಗಿ ಜಿ. ಸೊಲ್ಲಾಪುರ

ಶ್ರೀ ಮರುಳಸಿದ್ಧನು ವೀರಶೈವ ಪಂಚಪೀಠಗಳ ಪಂಚ ಆಚಾರ್ಯರಲ್ಲಿ ಒಬ್ಬನಾಗಿದ್ದಾನೆ. ಪಂಚ ಆಚಾರ್ಯರಲ್ಲಿ ಪ್ರಸಿದ್ಧನಾದ ರೇವಣಸಿದ್ಧನಂತೆ ಮರುಳುಸಿದ್ಧನೂ ಮಹಾಸಿದ್ಧ ಪುರುಷನೂ, ಶಿವಯೋಗಿಯೂ ಆಗಿದ್ದಾನೆ. ಮರುಳಸಿದ್ಧನು ಧರ್ಮ ಪ್ರಚಾರ ಕಾರ್ಯವನ್ನೂ, ಪತಿತೋದ್ಧಾರ ಕಾರ್ಯವನ್ನೂ ಹಿರಿದಾದ ರೀತಿಯಲ್ಲಿ ನಡೆಸಿ ಶರಣರ ಉದಾತ್ತ ಹಾಗೂ ಉದಾರ ತತ್ವಗಳನ್ನು ಹರಡಿರುತ್ತಾನೆ. ಮರುಳಸಿದ್ಧನು ಪ್ರಚಂಡ ಪ್ರವಾಸಿಯು; ಬಳ್ಳಾರಿ ಜಿಲ್ಲೆಯ ಕೂಡಗಿ ತಾಲೂಕಿನ ಕಗ್ಗಲ್ಲು ಪುರದಲ್ಲಿ ಜನ್ಮತಾಳಿ ಸುತ್ತಮುತ್ತಣ ಪ್ರಾಂತಗಳಲ್ಲಿ ಹರಿದಾಡಿ, ಅನೇಕ ಪವಾಡಗಳನ್ನು ಮೆರೆದು ಕೊಲ್ಲಾಪುರದ ಹೊರಗಿನ ಉತ್ತರ ಪ್ರಾಂತಗಳಲ್ಲಿಯೂ ಸಂಚರಿಸಿ ಅನೇಕ ಮಹತ್ಕಾರ್ಯಗಳನ್ನು ಮಾಡಿರುತ್ತಾನೆ. ಈತನ ವಿಷಯವಾಗಿ ಅನೇಕ ಗ್ರಂಥಗಳು ಹುಟ್ಟಿವೆ. ಗುರುಪಾದಚಾರಿತ್ರ್ಯ ಮತ್ತು ಚಮರಾಚಾರ್ಯ ಪುರಾಣ-ಇವುಗಳಲ್ಲಿ ಈತನ ಕಥೆಯು ವರ್ಣಿಸಲ್ಪಟ್ಟಿವೆ. ಈಚೆಗೆ ಮೈಸೂರ ಪ್ರಾಚ್ಯ ಸಾಹಿತ್ಯ ಭಂಡಾರದವರಿಗೆ ಸಿಕ್ಕಿರುವದು ಪಸುಕ ಕವಿಯ ಮರುಳಸಿದ್ಧ ಚಾರಿತ್ರ್ಯದಲ್ಲಿ ಈತನ ಚರಿತ್ರೆಯು ಹೆಚ್ಚು ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಈ ಕೃತಿಯು ಚಾರಿತ್ರಿಕ ದೃಷ್ಟಿಯಿಂದ ಮಹತ್ವದ್ದಾಗಿದೆ. ಈ ಗ್ರಂಥದ ಪ್ರಕಟನೆಯಿಂದ ವೀರಶೈವಧರ್ಮದ ಚರಿತ್ರೆಯ ಮೇಲೆ ಹೆಚ್ಚಿನ ಬೆಳಕು ಬೀಳುವುದರಲ್ಲಿ ಸಂದೇಹವಿಲ್ಲ. ಈ ರೀತಿಯಲ್ಲಿ ಪುರಾಣ ಪ್ರಸಿದ್ಧನೂ, ಚಾರಿತ್ರ್ಯ ಪ್ರಸಿದ್ಧನೂ ಆದ ಮರುಳುಸಿದ್ಧನ ಕೆಲವು ಪುಣ್ಯ ಕ್ಷೇತ್ರಗಳನ್ನು ಶ್ರೀ ಜೀರಗೆ ಕಟ್ಟಿಬಸಪ್ಪ ಬಿ. ಎ. ಈ ಮಹನೀಯರು ಸಂದರ್ಶಿಸಿ ಅಲ್ಲಿಯ ವಿವರಗಳನ್ನು ಬರೆದು ನಮ್ಮ ಕಡೆಗೆ ಕಳಿಸಿಕೊಟ್ಟಿದ್ದಾರೆ. ಅವರು ಬರೆದುದೇನೆಂದರೆ—

ಸುಮಾರು ೯ ದಿನಗಳ ಪ್ರವಾಸದಲ್ಲಿ ನಾನು ಮರುಳಸಿದ್ಧನ ಕೆಲವು ಪುಣ್ಯ ಕ್ಷೇತ್ರಗಳನ್ನು ನೋಡಿಕೊಂಡು ಬಂದೆನು. ತಿಪಟೂರಿನ ಶ್ರೀಮಾನ ಎಸ್. ಆರ್. ಮಲ್ಲಪ್ಪನವರು ಈ ಪ್ರವಾಸಕ್ಕೆ ವಿಶಿಷ್ಟ ಅನುಕೂಲತೆಗಳನ್ನು ಏರ್ಪಡಿಸಿ, ನನ್ನೊಡನೆ ಸಂಚರಿಸಿ ಉಪಕಾರ ಮಾಡಿದ್ದಾರೆ. ಅಲ್ಲದೆ ಬೆಣ್ಣೆಹಳ್ಳಿಯ ಶ್ರೀಮಾನ ಚನ್ನನಗೌಡರೂ, ಕೂಲಳ್ಳಿಯ ಶ್ರೀಮಾನ ದೊಡ್ಡಬಸವಾರಾಧ್ಯರವರೂ ಮತ್ತು ಜಗಳೂರು ತಾಲ್ಲೋಕಿನ ಸಾ॥ ಶ್ರೀಮಾನ ಕಲ್ಲಲಿಂಗನಗೌಡರವರೂ ಸಹ ನನ್ನೊಡನೆ ಕೆಲವು ಕ್ಷೇತ್ರಗಳಿಗೆ ಬಂದು ಕ್ಷೇತ್ರಗಳ ಅವಲೋಕನ ಮತ್ತು ಪರೀಕ್ಷಣೆಗಳಿಗೆ ಹೆಚ್ಚಿನ ನೆರವನ್ನು ಉಂಟು ಮಾಡಿ

ಕೊಟ್ಟಿರುತ್ತಾರೆ. ಇದೂ ಅಲ್ಲದೆ ಆಯಾಯ ಸ್ಥಳಗಳ ನಿವಾಸಿಗಳು ಗ್ರಾಮಾಧಿಕಾರಿಗಳು ಸಹ ಮರುಳಸಿದ್ಧನ ಚರಿತ್ರೆಗೆ ಸಂಬಂಧಪಟ್ಟ ಸ್ಥಳ ಪುರಾಣ, ಸಾಂಪ್ರದಾಯ ಮತ್ತು ಐತಿಹ್ಯಗಳ ಸಂಗ್ರಹಿಸಿದ ವಿಚಾರದಲ್ಲಿಯೂ ಮತ್ತು ಸ್ಮಾರಕ ಮತ್ತು ಅವಶೇಷಗಳ ಪರಿಶೀಲನೆಯ ವಿಚಾರದಲ್ಲಿಯೂ ನನಗೆ ಬಹಳವಾಗಿ ಇಂಬನ್ನು ಕೊಟ್ಟಿರುತ್ತಾರೆ. ಇವರೆಲ್ಲರಿಗೂ ನಾನು ನನ್ನ ಕೃತಜ್ಞತೆಗಳನ್ನು ಸೂಚಿಸುತ್ತೇನೆ. ಈ ಪ್ರವಾಸದಲ್ಲಿ ನಾನು ಪರಿಶೀಲಿಸಿ ಸಂಗ್ರಹಿಸಿದ ಮರುಳಸಿದ್ಧನ ಸಂಬಂಧವಾದ ಕ್ಷೇತ್ರಗಳ ವಿವರಣೆಯನ್ನೂ ಸಮಾಜ ಬಂಧುಗಳ ಮತ್ತು ಕನ್ನಡ ಸೋದರರ ಅವಗಾಹನೆಗಾಗಿ ಇಲ್ಲಿ ವಿವರಿಸಿರುತ್ತೇನೆ.

## ಕ್ಷೇತ್ರಗಳ ಪರಿಚಯ.

### ತೆಲಗುಬಾಳು.

ಇದು ಒಂದು ಬೇಚಿರಾಕು ಗ್ರಾಮ, ಇದು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿಗೆ ಸೇರಿದೆ. ಇದು ಹೊಸಪೇಟೆಗೆ ಸುಮಾರು ೧೯ ಮೈಲುಗಳ ದೂರದಲ್ಲಿಯೂ ಕೂಡ್ಲಿಗಿಗೆ ಸುಮಾರು ೧೦ ಮೈಲುಗಳ ದೂರದಲ್ಲಿಯೂ, ಸೊಂಡೂರು ಸಂಸ್ಥಾನಕ್ಕೆ ಸುಮಾರು ೧೫ ಮೈಲುಗಳ ದೂರದಲ್ಲಿಯೂ ಇದೆ. ಸರಕಾರದವರು ಮುದ್ರಣಗೊಳಿಸಿರುವ ಹೊಸಪೇಟೆ ತಾಲೂಕಿನ ರಿವೆನ್ಯೂ ನಕ್ಷೆಗಳಲ್ಲಿ ಈ ಗ್ರಾಮವು ೧೫೪ ನೇ ನಂಬರಿನ ನಕ್ಷೆಯಾಗಿ ಮುದ್ರಿಸಲ್ಪಟ್ಟಿದೆ. ಹರಪನಹಳ್ಳಿ, ತಿಮ್ಮಲಾಪುರ, ಚಿಲಕನಹಟ್ಟಿ ಈ ಊರುಗಳ ಮಧ್ಯೆ ಊರುಗುಟ್ಟೆ ಮತ್ತು ಚಿಲಕಗುಟ್ಟೆ ಎಂಬ ಎರಡು ಗುಟ್ಟೆಗಳ ನಡುವೆ ೩೬ ಮತ್ತು ೩೭ ನೆಯ ಸರ್ವೆನಂಬರುಗಳ ಪ್ರದೇಶವೇ ತೆಲಗುಬಾಳು ಗ್ರಾಮವಾಗಿದೆ. ಮನೆಗೋಡೆಯ ಅಸ್ತಿಭಾರಗಳೂ, ಜೋಳ ತುಂಬುವ ಹಗೆವುಗಳೂ, ಒಡೆದುಹೋದ ಒರಳುಕಲ್ಲುಗಳೂ ಮತ್ತು ಕಲ್ಲು ಕಟ್ಟಿದ ಒಂದು ಹುಡೇವೂ (ಬುರುಜವೂ) ಈಗಲೂ ಕಣ್ಣಿಗೆ ಕಾಣುತ್ತವೆ. ಮರುಳಸಿದ್ಧನ ಕಾರುಣ್ಯವನ್ನು ಗಳಿಸಿ, ಅವನ ಉತ್ತರಾಧಿಕಾರಿಯಾಗಿ "ತರಳುಜರಳು" ಸಂತತಿಯ ಮೂಲಪುರುಷನಾದ ಸಿದ್ಧನು ಈ ಗ್ರಾಮದವನೆಂದು ಐತಿಹ್ಯವಿದೆ. ಈ ಗ್ರಾಮಕ್ಕೆ ಈಗಲೂ ತರಳುಬಾಳು ವಂಶದವರೇ ಪಟೇಲರಾಗಿರುತ್ತಾರೆ.

## ಉಜ್ಜಯನಿ

ಈ ಊರು ಬಳ್ಳಾರಿ ಜಿಲ್ಲೆ ಕೂಡ್ಲಗಿ ತಾಲ್ಲೋಕಿನಲ್ಲಿ ತೆಲಗುಬಾಳಗೆ ಸುಮಾರು ೩೦ ಮೈಲಿಗಳದೂರದಲ್ಲಿದೆ. ಈ ಊರಿಗೆ ಮೊದಲು ಕೇತನಹಳ್ಳಿ ಎಂಬ ಹೆಸರಿತ್ತೆಂದೂ, ಮರುಳು ಸಿದ್ಧನ ಅವತಾರದ ಮೇಲಿಂದ ಉಜ್ಜಯಿನಿ ಎಂಬ ಹೆಸರು ಬಂತೆಂದೂ ಐತಿಹ್ಯವಿದೆ. ಈಗಲೂ "ಕೇತನ ಹಳ್ಳಿ ಪರುವು" ಎಂಬ ಹೆಸರಿನ ಸ್ಥಳವು ಈ ಊರಿನ ಪಕ್ಕದಲ್ಲಿ ಇರುತ್ತದೆ. ಈ ಊರಿನಲ್ಲಿ ಮರುಳಸಿದ್ಧನಿಗೆ ಸಂಬಂಧ ಪಟ್ಟ ಅನೇಕ ಸ್ಮಾರಕಗಳು ಇರುತ್ತವೆ.

## ಮರುಳಸಿದ್ಧನ ದೇವಸ್ಥಾನ

ದೇವಸ್ಥಾನವು ಉಜ್ಜಯಿನಿಯಲ್ಲಿರುವ ಮರುಳುಸಿದ್ದನ ಸಂಬಂಧವಾದ ಸ್ಮಾರಕಗಳಲ್ಲಿ ಮಹತ್ವದ ಸ್ಮಾರಕವಾಗಿದೆ. ಈ ದೇವಸ್ಥಾನವನ್ನು ಮರುಳ ಸಿದ್ದನೇ ಜಕ್ಣಾಚಾರ್ಯನ ಕೈಯಿಂದ ಕಟ್ಟಿಸಿ ಅಲ್ಲಿಯೇ ಸಮಾಧಿಸ್ಥನಾದನೆಂದು ಐತಿಹ್ಯ ಉಂಟು. ಈ ದೇವಾಲಯವು ಸುಂದರ ಶಿಲ್ಪಕಲೆಯಿಂದ ಕೂಡಿದುದಾಗಿದೆ. ಹೊರಗಡೆ ಗರ್ಭಗುಡಿಯ ಮೇಲಣ ಶಿಖರವು, ಒಳಗಡೆ ಗರ್ಭಗುಡಿ ಮುಂದಣ ನವರಂಗದ ಎಡಬಲಗಳ ಗೂಡುಗಳಲ್ಲಿ ಸ್ಥಾಪಿಸಲ್ಪಟ್ಟಿರುವ ವಿಗ್ರಹಗಳು. ನವರಂಗದ ಮಧ್ಯ ಕಂಬಗಳು ಮತ್ತು ಗರ್ಭಗುಡಿಯ ಮುಂಬಾಗದ ಅಂಕಣದಲ್ಲಿ ಕಡೆದಿರುವ ಕಮಲವು ಮನ ಮೋಹಕಗಳಾದ ಶಿಲ್ಪಕಲಾ ಕೃತಿಗಳಾಗಿರುತ್ತವೆ. ಆದರೆ ಜನರು ಶಿಖರಕ್ಕೂ ಮತ್ತು ವಿಗ್ರಹಗಳಿಗೂ ವರ್ಷಂ ಪ್ರತಿ ಮಾಡುವ ಎಣ್ಣೆ ಮಜ್ಜನದ ಸೇವೆಯ ದೆಸೆಯಿಂದ ಮೂಲ ಶಿಲ್ಪ ಕಲೆಯ ಮೇಲೆ ಸುಮಾರು ಎರಡು-ಮೂರು ಅಂಗುಲಗಳಷ್ಟು ಎಣ್ಣೆ ಕಿಟ್ಟವು ಮೆತ್ತಿಕೊಂಡು ಶಿಲ್ಪ ಕಲೆಯ ಅಂದವು ಅಗೋಚರವಾಗಿದೆ. ಆದಾಗ್ಯೂ ಕಣ್ಣಿಗೆ ಕಾಣುವ ಒಂದೆರಡು ಶಿಲ್ಪ ಕೃತ್ಯಗಳ ಅವಲೋಕನದಿಂದ ದೇವಸ್ಥಾನದ ಉಳಿದ ಶಿಲ್ಪ ಕೃತ್ಯಗಳು ಮೇಲ್ತರಗತಿಯವುಗಳೆಂದು ಧಾರಾಳವಾಗಿ ಹೇಳಬಹುದಾಗಿದೆ. ಗರ್ಭ ಗುಡಿಯ ಹೊರ ಭಾಗವು ಮತ್ತು ಗರ್ಭಗುಡಿ ಮೇಲಣ ಸಿಖರವು ಮೇಲೆ ಹೇಳಿದಂತೆ ಪೂರ್ತಿಯಾಗಿ ಎಣ್ಣೆಯಿಂದ ಮುಚ್ಚಿಹೋಗಿದ್ದರೂ ಇವುಗಳಲ್ಲಿ ಸುಂದರವಾದ ಕೆತ್ತನೆಯ ಕೆಲಸಗಳು ವಿವಿಧ ವಿಗ್ರಹಗಳು ಇರುವವು ಎಂಬುದು ಬಾಕ್ಯದ ಪಬ್ಬು ಕಗ್ಗುಗಳಿಂದ ಮನವರಿಕೆ ಯಾಗುತ್ತದೆ. ಈ ವಿವಿಧ ವಿಗ್ರಹಗಳು ೬೩ ಪುರಾತನರ ವಿಗ್ರಹಗಳು ಆಗಿರುತ್ತವೆ ಎಂದು

ಐತಿಹ್ಯ ಉಂಟು. ನವರಂಗದ ಎಡಬಲಗಳ ಗೋಡೆಯ ಗಳ ಗೂಡುಗಳಲ್ಲಿ
ಗಳ ವಿಗ್ರಗಳೂ ಇರುತ್ತವೆ. ನವರಂಗ ಉತ್ತರ ಭಾಗದ ಗೋಡೆಯಿಂದ
ಮುಂದಕ್ಕೆ ಮತ್ತೊಂದು ನವರಂಗವು ಕಟ್ಟಲ್ಪಟ್ಟಿರುತ್ತದೆ. ಇದು ಹೊಸ
ದಾಗಿ ಕಟ್ಟಲ್ಪಟ್ಟುದಾಗಿದೆ ಎಂಬುದು ಕಟ್ಟಡದ ಕೆಲಸದಿಂದಲೇ ಗೊತ್ತಾ
ಗುತ್ತದೆ. ಎರಡನೇ ನವರಂಗದಲ್ಲಿ ಮೊದಲನೆಯ ನವರಂಗದಲ್ಲಿ ಇದ್ದಂತೆ
ವಿಗ್ರಹಗಳು ಇರುವದಿಲ್ಲ. ಹಲವಾರು ಲಿಂಗಗಳು ಮತ್ತು ಬಸವಣ್ಣಗಳು ಇರು
ತ್ತವೆ. ಆದರೆ ಎರಡನೆ ನವರಂಗದ ದಕ್ಷಿಣಭಾಗದಲ್ಲಿ ಎಂದರೆ ಮೊದಲ
ನೆಯ ನವರಂಗದ ಉತ್ತರಬಾಗಿಲಿನ ಎಡಬಲಗಳಲ್ಲಿ ಎರಡು ವಿಗ್ರಹಗಳು
ಇರುತ್ತವೆ. ಎಡಭಾಗದ ವಿಗ್ರಹವು ಉದ್ದಾನವೀರ ಭದ್ರವಿಗ್ರಹವಾಗಿದ್ದು
ಬಲಗಡೆಯ ವಿಗ್ರಹವು ಕತ್ತಿಯನ್ನು ಹಿಡಿದಿರುವ ಒಂದು ಹೆಣ್ಣು ವಿಗ್ರಹ
ವನ್ನು ಚೌಡಾಂಬೆ ಎಂದು ಕರೆಯುತ್ತಾರೆ. ಈ ವಿಗ್ರಹವು ದಕ್ಷಿಣ ಗೋಡೆ
ಯಲ್ಲಿ ಹೊಸದಾಗಿ ಮಾಡಲ್ಪಟ್ಟ ಗೂಡಿನಲ್ಲಿ ನಿಲ್ಲಿಸಲ್ಪಟ್ಟಂತೆ ಕಾಣುತ್ತದೆ.
ವೀರಭದ್ರನ ವಿಗ್ರಹಕ್ಕೆ ಯಾವ ಗೂಡೂ ಇರುವುದಿಲ್ಲ ಅತಿ ಉದ್ದವಾದುದು
ದೊಡ್ಡದಾದುದು ಆಗಿದೆ. ಈ ಎರಡು ವಿಗ್ರಹಗಳು ಎಲ್ಲಿಯವೊ ಗೊತ್ತಾಗು
ವುದಿಲ್ಲ. ಅಂತೂ ಮೊದಲನೆಯ ನವರಂಗ ಮತ್ತು ಎರಡನೆಯ ನವ
ರಂಗದ ಮಧ್ಯ ಗೋಡೆಯಲ್ಲಿ ಕೆಲವು ಮಾರ್ಪಾಟುಗಳು ಆಗಿರುವುದು
ಗೋಚರವಾಗುತ್ತದೆ. ಮೊದಲನೆಯ ನವರಂಗದ ಪಶ್ಚಿಮ ಬಾಗಿಲ ಮುಂಬಾಗಿ
ಲಲ್ಲಿ ಎರಡು ಜಗುಲಿಗಳ ಮೇಲೆ ಒಂದುಕಡೆ ಒಂದು ಶಿಲಾಲಿಪಿಯು
ಮತ್ತೊಂದು ಕಡೆ ಕತ್ತಿಯನ್ನು ಹಿಡಿದಿರುವ ಒಂದು ಗಂಡುವಿಗ್ರಹವು ಇವೆ.
ಈ ಗಂಡು ವಿಗ್ರಹವು ಮರುಳಸಿದ್ಧನ ಸಾಕು ತಂದೆಯಾದ ಕಗ್ಗಲ್ಲಗೌಡ
ನೆಂದು ಊರಿನವರು ಹೇಳುತ್ತಾರೆ. ಕ್ಷೇತ್ರಪಾಲಕನೆಂದು ದೇವಸ್ಥಾನದವರು
ಹೇಳುತ್ತಾರೆ. ಮರುಳಸಿದ್ಧನು ಬಾಲನಾಗಿದ್ದಾಗ ಅವನು ಮನೆ ಹೊರಗಡೆ
ಹೋಗದಂತೆ ಅವನನ್ನು ತಡೆಯುವುದಕ್ಕಾಗಿ ಕಗ್ಗಲ್ಲು ಗೌಡನು ಮನೆ
ಹೊರಗಡೆ ಕಡ್ಗಧಾರಿಯಾಗಿನಿಂತು ಕಾಯ್ದನೆಂದು ಅದರಸ್ಮಾರಕವಾಗಿಯೇ
ಈ ವಿಗ್ರಹವು ದೇವಸ್ಥಾನದಲ್ಲಿ ಸ್ಥಾಪಿಸಲ್ಪಟ್ಟಿರುವದೆಂದು ಜನರು ಐತಿಹ್ಯ
ವನ್ನು ನುಡಿಯುತ್ತಾರೆ. ಈ ಐತಿಹ್ಯಕ್ಕೆ ಅನುಗುಣವಾಗಿ ಇಂದಿಗೂ ಮರುಳ
ಸಿದ್ಧನ ಉತ್ಸವ ವಿಗ್ರಹವನ್ನು ಈ ಬಾಗಿಲಿನಲ್ಲಿ ತರಲಾಗುವದಿಲ್ಲ. ಮರುಳ
ಸಿದ್ಧಲಿಂಗವು ಉದ್ಭವಲಿಂಗವಾಗಿರುತ್ತದೆ. ಈ ಲಿಂಗದ ಶಿಲೆಯು ಮತ್ತು ಇದರ
ಪಾರಣೀ ಪೀಠಶಿಲೆಯು ಬೇರೆ ಬೇರೆಯಾದವುಗಳಾಗಿವೆ. ಈ ಲಿಂಗದ ಹಿಂಭಾ

ಗವು ಪೂರ್ವಕಡೆಗೆ ಸ್ವಲ್ಪ ತಗ್ಗಾಗಿದೆ. ೯ ಪಾದಗಳ ಅಳತೆಯ ಭೂಮಿಯನ್ನು ಕೊಡೆಂದ ಮರುಳುಸಿದ್ಧನು ಕಗ್ಗಲ್ಲ ಗೌಡನನ್ನು (ಬಾಚಣಗೌಡನನ್ನು) ಕೇಳಿದನೆಂದು, ಗೌಡನು ಅದಕ್ಕೆ ಒಪ್ಪಿಕೊಳ್ಳಲು ಮರುಳುಸಿದ್ಧನು ತನ್ನ ಪಾದ ಗಳಿಂದ ೯ ಪಾದಗಳಿಂದ ಅಳತೆಮಾಡಿ ಅತ್ಯಂತ ವಿಸ್ತಾರವಾದ ಭೂಮಿಯನ್ನು ಆಕ್ರಮಿಸಿ ಕೊಂಡನೆಂದು ಇದನ್ನು ಕಂಡು ಗೌಡನು ಕುಪಿತನಾಗಿ ತನ್ನ ವಾಗ್ದಾ ನವನ್ನು ಉಲ್ಲಂಘಿಸಿ ಆ ಭೂಮಿಯನ್ನು ಉತ್ತನೆಂದು ಉತ್ತಾಗ ನೇಗಿಲಕುಳ ಲಿಂಗಕ್ಕೆ ತಾಕಿತೆಂದೂ, ಅದರಿಂದಲೇ ಈಗಲೂ ಲಿಂಗದ ಹಿಂಭಾಗವು ತಗ್ಗಾಗಿರುವುದೆಂದೂ ಜನರು ಐತಿಹ್ಯವನ್ನು ಹೇಳುತ್ತಾರೆ. ಈ ಭೂಮಿಯ ವಿಚಾರದಲ್ಲಿ ಕುಪಿತನಾದ ಗೌಡನು ಮರುಳಸಿದ್ಧನನ್ನು ಕತ್ತಿಯಿಂದ ಹೊಡೆ ಯುವುದಕ್ಕೆ ಹೋದನೆಂಬೂ, ಇದರ ಸ್ಮಾರಕವಾಗಿಯೇ ದೇವಸ್ಥಾನದಲ್ಲಿ ಕತ್ತಿಯನ್ನು ಹಿಡಿದಿರುವ ಕಗ್ಗಲ ಗೌಡನ ವಿಗ್ರಹವು ನಿರ್ಮಿಸಲ್ಪಟ್ಟಿತೆಂದೂ ಸಹ ಜನರು ಐತಿಹ್ಯವನ್ನು ಹೇಳುವುದುಂಟು. ಅಲ್ಲದೆ ಭೂಮಿಯ ವಿಚಾ ರದಲ್ಲಿ ಕಗ್ಗಲ್ಲಗೌಡನು ತನಗೆ ಅಪಚಾರ ಮಾಡಿದ್ದರಿಂದ ಕಗ್ಗಲ್ಲವರ ವಂಶವು ಈ ಒಂಬತ್ತು ಭಾಗಗಳ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆಯದಿರಲೆಂದು ಮರುಳು ಸಿದ್ಧನು ಶಾಪಕೊಟ್ಟನೆಂದೂ, ಈಗಲೂ ಈ ಪ್ರದೇಶದಲ್ಲಿ ಕಗ್ಗಲ್ಲವರ ವಂಶವು ಹೆಚ್ಚಾಗಿ ಬೆಳೆಯುವದಿಲ್ಲವೆಂದು ಸಹ ಜನರು ಒಂದು ನಂಬುಗೆಯನ್ನು ನುಡಿ ಯುತ್ತಾರೆ. ದೇವಸ್ಥಾನದ ಎರಡನೆಯ ನವರಂಗದ ಮುಂದಕ್ಕೆ ಪೂರ್ವ ಭಾಗದಲ್ಲಿ ಪಶ್ಚಿಮ ಮುಖವಾಗಿ ಎತ್ತರವಾದ ಮತ್ತು ಸುಂದರವಾದ ಬಸ ವಣ್ಣ ಇದೆ. ಅಲ್ಲಿಂದ ಮುಂದೆ ಎತ್ತರವಾದ ಎರಡು ದೀಪಮಾಲೆ ಕಂಬ ಗಳು ಇವೆ. ಈ ಕಂಬಗಳ ಮಧ್ಯೆ ಒಂದು ಜಗುಲಿ ಇದೆ. ಈ ಜಗುಲಿಯನ್ನು ಬ್ರಹ್ಮದೇವರೆಂದೂ, ಮರುಳಸಿದ್ಧನ ಆಪ್ತ ಶಿಷ್ಯರಾಗಿ ಕೆಲಸಮಾಡಿದ ಜಟ್ಟಿಗ ಬೈರ, ಬ್ರಹ್ಮ, ಮತ್ತು ಹನುಮ ಇವರುಗಳಲ್ಲಿ ಬ್ರಹ್ಮನ ಸ್ಮಾರಕವಾಗಿ ಈ ಜಗುಲಿಯು ನಿರ್ಮಿಸಲ್ಪಟ್ಟಿದೆಯೆಂದೂ ಜನರು ಐತಿಹ್ಯವನ್ನು ಹೇಳು ತ್ತಾರೆ. ಈ ಎರಡು ದೀಪಮಾಲೆ ಕಂಬಗಳು ಮತ್ತು ಜಗುಲಿ ಇವುಗಳ ಮುಂದೆ ದೇವಸ್ಥಾನದ ಮುಂದೆ ಮಹಾದ್ವಾರವಿದೆ. ಈ ಮಹಾದ್ವಾರದ ಮುಂದೆ ಹೊರಗಡೆ ಒಂದು ಹೋಕುಳಿಯ ಗುಂಡಿಯೂ, ಇದರ ಮುಂದೆ ಎತ್ತರವಾದ ಉಯ್ಯಾಲೆ ಕಂಬಗಳು ಇವೆ. ದೇವಸ್ಥಾನದ ಸುತ್ತ ಕಲ್ಲುಗ ಳಿಂದ ಕಟ್ಟಿದ ವಿಸ್ತಾರವಾದ ಪೌಳಿ ಇದೆ. ಈ ಪೌಳಿಯು ಒಳಗಡೆ ಮರುಳ ಸಿದ್ಧನ ದೇವಸ್ಥಾನದ ಎಡಭಾಗಕ್ಕೆ ಎಂದರೆ ಪಶ್ಚಿಮ ದಿಕ್ಕಿನಲ್ಲಿ ಅಮ್ಮನ

ವರ ಗುಡಿಯೂ ಮತ್ತು ಮರುಳಸಿದ್ಧನು ಸ್ಥಾಪಿಸಿದ ಉಜ್ಜಯಿನಿ ಮಠವೂ ಇವೆ. ಪೂರ್ವಕಡೆಯ ಪೌಳಿಯ ಒಂದು ಕಲ್ಲಿನ ಮೇಲೆ ಎರಡನೆಯ ನವ ರಂಗದ ಉದ್ಧಾನ ವೀರಭದ್ರನ ಬಲಭಾಗಕ್ಕೆ ಪಶ್ಚಿಮ ಮುಖವಾಗಿ ದಕ್ಷ ಬ್ರಹ್ಮನ ತಲೆಯ ಚಿತ್ರವು ಕೆತ್ತಲ್ಪಟ್ಟಿದೆ.

## ಉಜ್ಜಯಿನಿಯಲ್ಲಿರುವ ಇತರ ಸ್ಮಾರಕಗಳು

### ಜಟ್ಟಿಗೇಶ್ವರನ ದೇವಸ್ಥಾನ

ಈ ದೇವಸ್ಥಾನವು ಮರುಳಸಿದ್ಧನ ದೇವಸ್ಥಾನದ ಹಿಂದಕ್ಕೆ ಎಂದರೆ ದಕ್ಷಿಣದಿಕ್ಕಿನಲ್ಲಿ ಉತ್ತರ ಮುಖವಾಗಿದೆ. ಈ ದೇವಸ್ಥಾನದಲ್ಲಿ ಒಂಬತ್ತು ಚಪ್ಪಟೆಯಾದ ಶಿಲೆಗಳು ಸಾಲಾಗಿ ನೆಡಲ್ಪಟ್ಟಿವೆ. ಪೂಜೆ ಸಲ್ಲುವದು ಇವು ಗಳಿಗೇ. ಇವುಗಳ ಪೂಜೆಯನ್ನು ತಳವಾರರು ಮಾಡುತ್ತಾರೆ. ಮರುಳಸಿದ್ಧನ ದೇವಸ್ಥಾನಕ್ಕೆ ಹೋಗುವ ಭಕ್ತರು ಮೊದಲು ಈ ಜಟ್ಟಿಗೇಶ್ವರನ ದೇವ ಸ್ಥಾನಕ್ಕೆ ಹೋಗಿ ಇವುಗಳ ಪೂಜೆಯನ್ನು ಮಾಡಿ ಆಮೇಲೆ ಮರುಳಸಿದ್ಧನ ಪೂಜೆಯನ್ನು ಮಾಡುತ್ತಾರೆ. ತನ್ನ ಪರಮ ಶಿಷ್ಯನಾದ ಜಟ್ಟಿಗನಿಗೆ ಮೊದ ಲನೆಯ ಪೂಜೆಯು ಸಲ್ಲಲೆಂದು ಮರುಳಸಿದ್ಧನು ವರವನ್ನು ಕೊಟ್ಟುದೇ ಈ ಆಚರಣೆಗೆ ಕಾರಣವಾಗಿದೆಯೆಂದು ಐತಿಹ್ಯವಿದೆ.

### ಹನುಮಂತನ ದೇವಸ್ಥಾನ

ಈ ದೇವಸ್ಥಾನವು ಜಟ್ಟಿಗೇಶ್ವರನ ದೇವಸ್ಥಾನಕ್ಕೆ ಪಶ್ಚಿಮದಲ್ಲಿ ಉತ್ತರ ಮುಖವಾಗಿದೆ. ಹನುಮಂತನ ಮುಖವು ಪೂರ್ವಕ್ಕಿದೆ. ಹನುಮನು ಮರುಳ ಸಿದ್ಧನ ಆಪ್ತ ಶಿಷ್ಯರಲ್ಲಿ ಒಬ್ಬನಾಗಿದ್ದು ಅವನ ಸ್ಮಾರಕವಾಗಿ ಈ ದೇವ ಸ್ಥಾನವು ಕಟ್ಟಲ್ಪಟ್ಟಿದೆ.

### ಗದ್ದುಗೆ ರಾಮಿತಂದೆಯ ದೇವಸ್ಥಾನ

ಈ ದೇವಸ್ಥಾನವು ಮರುಳಸಿದ್ಧನ ದೇವಸ್ಥಾನದ ಬಲಭಾಗದಲ್ಲಿ ಸ್ವಲ್ಪ ಹಿಂದಕ್ಕೆ ಪೂರ್ವ ಮುಖವಾಗಿದೆ. ಈ ದೇವಸ್ಥಾನವನ್ನು ರಾಮಲಿಂಗನ ಗುಡಿಯೆಂದು ಕರೆಯುವದುಂಟು. ಈ ದೇವಸ್ಥಾನದಲ್ಲಿ ಒಂದು ಲಿಂಗವೂ ಒಡೆದು ಹೋದ ಕೆಲವು ಶಾಸನಗಳೂ ಇವೆ. ಗದ್ದುಗೆಯ ರಾಮಿತಂದೆಯೂ ಮರುಳಸಿದ್ಧನಿಗೆ ಗದ್ದುಗೆಯನ್ನು ಹಾಸುವ ಕಾಯಕವನ್ನು ಮಾಡುತ್ತಿದ ನೆಂದೂ ಇವನ ಸ್ಮಾರಕವಾಗಿ ಈ ದೇವಸ್ಥಾನವು ನಿರ್ಮಿಸಲ್ಪಟ್ಟಿದೆಯೆಂದೂ ಐತಿಹ್ಯವಿದೆ.

## ಬ್ರಹ್ಮದೇವರ ಗುಡಿ

ಈ ಗುಡಿಯು ಮರುಳಸಿದ್ಧನ ಪೌಳಿಯ ಹೊರಗಡೆ ಪೂರ್ವದಿಕ್ಕಿನಲ್ಲಿ ಪಶ್ಚಿಮ ಮುಖವಾಗಿದೆ. ಇದುವೊಂದು ಚಿಕ್ಕ ಗೂಡಿನ ಆಕೃತಿಯಲ್ಲಿದೆ. ಈ ಗೂಡಿನಲ್ಲಿ ಗುಂಡನೆಯ ಎರಡು ಶಿಲೆಗಳೂ ಇವೆ. ಇವುಗಳನ್ನು ಜನರು ಬ್ರಹ್ಮದೇವರೆಂದು ಕರೆಯುತ್ತಾರೆ ಈ ಗುಡಿಯು ಮರುಳಸಿದ್ಧನ ಶಿಷ್ಯನಾದ ಬ್ರಹ್ಮನಿಗೆ ಸಂಬಂಧಪಟ್ಟ ಸ್ಮಾರಕವಾಗಿದೆ.

## ತರಳಬಾಳು ಸಿದ್ಧನ ದೇವಸ್ಥಾನ

ಈ ದೇವಸ್ಥಾನವು ಮರುಳಸಿದ್ಧನ ದೇವಸ್ಥಾನಕ್ಕೆ ಸ್ವಲ್ಪ ದೂರದಲ್ಲಿ ಪಶ್ಚಿಮದಿಕ್ಕಿನಲ್ಲಿ ಉತ್ತರ ಮುಖವಾಗಿದೆ. ತೆಲಗುಬಾಳಿನಿಂದ ಮರುಳಸಿದ್ಧನ ಕಾರುಣ್ಯವನ್ನುಗಳಿಸಿ ಅವನು ಉತ್ತರಾಧಿಕಾರಿಯಾಗಿ ಅವನಿಂದ "ತರಳ-ಬಾಳು" ಎಂಬ ಆಶೀರ್ವಾದವನ್ನುಹೊಂದಿ, ತರಳಬಾಳು ವಂಶದ ಮೂಲ ಪುರುಷನಾದ ಸಿದ್ಧನ ಸ್ಮಾರಕವಾಗಿ ಈ ದೇವಸ್ಥಾನವು ನಿರ್ಮಿಸಲ್ಪಟ್ಟಿತೆಂದು ಐತಿಹ್ಯವಿದೆ.

## ಮಾದಿಗರ ಕೇರಿಯ ಮರುಳಸಿದ್ಧನ ದೇವಸ್ಥಾನ

ಈ ದೇವಸ್ಥಾವು (ಮಾದಿಗರ) ಬೇಗಾರರ ಕೇರಿಯಲ್ಲಿ ಇದೆ. ದೇವಸ್ಥಾನದ ಪೂಜೆಯನ್ನು ಮಾದಿಗರ ಪೂಜಾರಿಯಲ್ಲದೆ ಉಳಿದ ಮಾದಿಗರಾರೂ ಈ ದೇವಸ್ಥಾನದ ಗರ್ಭಗುಡಿಯೊಳಕ್ಕೆ ಹೋಗುವದಿಲ್ಲ. ಈ ಮಾದಿಗರ ಪೂಜಾರಿಗೆ ಪಟ್ಟವಾಗಿರಬೇಕು. ಈ ಪಟ್ಟವನ್ನು ಉಜ್ಜಯಿನಿ ಮಠದವರು ಕಟ್ಟುತ್ತಾರೆ. ಪಟ್ಟವನ್ನು ಕಟ್ಟುವಕಾಲದಲ್ಲಿ ಮಾದಿಗರ ಪೂಜಾರಿಗೆ ಕಾವಿ ಮತ್ತು ಬೆತ್ತ ಇವುಗಳನ್ನು ಕೊಡಲಾಗುವುದು. ಈ ಮಾದಿಗರ ಪೂಜಾರಿಯು ಮಾಂಸಾಹಾರವನ್ನು ತ್ಯಜಿಸುತ್ತಾನೆ.

ಮಾದಿಗರು ಮರುಳಸಿದ್ಧನ ವಿಚಾರದಲ್ಲಿ ಹೆಚ್ಚಿನ ಭಕ್ತಿಯುಳ್ಳವರಾಗಿರುವುದು ಮತ್ತು ಮರುಳಸಿದ್ಧನ ಸಂಬಂಧವಾದ ಉತ್ಸವಾದಿ ಕಾರ್ಯಗಳಲ್ಲಿ ಹೆಚ್ಚಿನ ಹಕ್ಕುಳ್ಳವರಾಗಿರುವದು ಗಮನಾರ್ಹವಾದ ಅಂಶಗಳಾಗಿವೆ. ಭಾರತದ ಹುಣ್ಣಿಮೆಯಲ್ಲಿ ಮರುಳಸಿದ್ಧನ ಪಾಲಿಕೆಯು ಉತ್ಸವವು ಹೊರಟಾಗ ಮರುಳಸಿದ್ಧನಿಗೆ ಮೊದಲನೆಯ ಆರತಿಯನ್ನು ಎತ್ತುವರು ಮಾದಿಗರೆ ಆಗಿರುತ್ತಾರೆ. ರಥೋತ್ಸವದಲ್ಲಿ ರಥದ ಗಾಲಿಗಳಿಗೆ ಎದ್ದುಹಾಕುವವರು ಮಾದಿ

ಗರೇ ಆಗಿರುತ್ತಾರೆ. (ದೇವರಿಗೆ ಆರತಿಯನ್ನು ಹಿಡಿಯುವಾಗ ಮಾದಿಗ ಮತ್ತು ರಥದ ಗಾಲಿಗಳ ಮೇಲೆ ಭಕ್ತರು ಹೊಡೆಯುವ ತೆಂಗಿನ ಕಾಯಿಗಳಲ್ಲಿ ಒಂದು ಭಾಗಕ್ಕೆ ಮಾದಿಗರೇ ಹಕ್ಕುಳ್ಳವರಾಗಿ ಇರುತ್ತಾರೆ. ಹಿಂದೆ ವರ್ಣಿಸಿದ ಮರುಳಸಿದ್ಧನ ಮೂಲದೇವಸ್ಥಾನದ ಪೌಳಿಯ ಒಳಭಾಗದ ಆವರಣದ ಕಸವನ್ನು ಗುಡಿಸುವವರು ಮಾದಿಗರೇ ಆಗಿರುತ್ತಾರೆ. ದೇವರಿಗೆ ಆರತಿಯನ್ನು ಹಿಡಿಯುವಾಗ ಮಾದಿಗರ ಹೆಂಗಸರು ಮರುಳಸಿದ್ಧನನ್ನು ಕುರಿತು ಅನೇಕ ಶೋಬಾನೆಯ ಪದಗಳನ್ನು ಹಾಡುತ್ತಾರೆ. ಮರುಳ ಜಟ್ಟಿಗ, ಹನುಮ ಮುಂತಾಗಿ ಮರುಳ ಸಿದ್ಧನಿಗೆ ಸಂಬಂಧ ಪಟ್ಟ ಹೆಸರುಗಳನ್ನು ಮಾದಿಗರು ಇಟ್ಟುಕೊಳ್ಳುತ್ತಾರೆ. ಮರಳಸಿದ್ಧನು ಮಾದಿಗರ ಹೊಟ್ಟೆಯಲ್ಲಿ ಹುಟ್ಟಿ ಮಹಾ ಮಹಿಮನಾಗಿ ಮೆರೆದನೆಂಬ ಐತಿಹ್ಯಕ್ಕೆ ಮೇಲೆ ಹೇಳಿದ ಎಲ್ಲಾ ಸ್ಮಾರಕಗಳೂ, ಸಂಪ್ರದಾಯಗಳೂ, ಮತ್ತು ಆಚರಣೆಗಳೂ ಪುಷ್ಟಿಯನ್ನು ಕೊಡುತ್ತವೆ.

## ಮೈಲಾರ ಲಿಂಗನ ಬಂಡೆ

ಈ ಬಂಡೆಯು ಮರಳಸಿದ್ಧನ ದೇವಸ್ಥಾನಕ್ಕೆ ಹಿಂದುಗಡೆ ಸುಮಾರು ೨ ಫರ್ಲಾಂಗುಗಳ ದೂರದಲ್ಲಿ ಇದೆ. ಈ ಬಂಡೆಯ ಮೇಲೆ ಎರಡು ಲಿಂಗಗಳೂ ಪಾದಗಳೂ ಇವೆ. ಮರುಳಸಿದ್ಧನ ಸಾಕು ತಂದೆಯಾದ ಕಗ್ಗಲ್ಲ ಗೌಡನ ವಂಶದವರು ಮೊದಲು ಮೈಲಾರ ಲಿಂಗನ ಭಕ್ತರಾಗಿದ್ದರೆಂದೂ ಮರುಳಸಿದ್ಧನು ಇವರ ಮನೆಯಲ್ಲಿ ದನಗಳನ್ನು ಕಾಯ್ದು ಪವಾಡಗಳನ್ನು ಮೆರೆದು ಮೈಲಾರನನ್ನು ಮನೆಯಿಂದ ಓಡಿಸಿದ ಮೇಲೆ ಇವರು ಮೈಲಾರನನ್ನು ಬಿಟ್ಟು ಮರುಳಸಿದ್ಧನನ್ನೇ ತಮ್ಮ ಮನೆದೇವರನ್ನಾಗಿಮಾಡಿ ಕೊಂಡರೆಂದೂ, ಇದರ ದ್ಯೋತಕವಾಗಿಯೇ ಮೈಲಾರ ಲಿಂಗನ ಬಂಡಿಯು ಮುರುಳಸಿದ್ಧನ ದೇವಸ್ಥಾನಕ್ಕೆ ದೂರವಾಗಿರುವುದೆಂದೂ ಜನರು ಐತಿಹ್ಯವನ್ನು ನುಡಿಯುತ್ತಾರೆ.

## ಮುಸಲವಂಡಿ ಬಸವಣ್ಣ

ಇದು ಮರುಳಸಿದ್ಧನ ದೇವಸ್ಥಾನಕ್ಕೆ ಹಿಂದುಗಡೆ ಮೈಲಾರಲಿಂಗನ ಬಂಡೆಗೆ ಸ್ವಲ್ಪದೂರದಲ್ಲಿ ಇದೆ. ಬಸವಣ್ಣನ ವಿಗ್ರಹವು ಉತ್ತರ ಮುಖವಾಗಿದೆ. ಇದರ ಪಕ್ಕದಲ್ಲಿ ಉದ್ಭವಶಿಲೆಯೊಂದಿಗೆ ಇದನ್ನೇ ಜನರು ಮರುಳ ಸಿದ್ಧನೆಂದೂ ಕರೆಯುತ್ತಾರೆ. ಮರುಳಸಿದ್ಧನೂ ಮತ್ತು ಈತನ ಶಿಷ್ಯರಾದ ಜಟ್ಟಿಗ ಹನುಮ, ಬೈರ, ಮತ್ತು ಬ್ರಹ್ಮ ಇವರುಗಳೂ ಈ ಸ್ಥಳದಲ್ಲಿ ಸೇರಿ ಮುಂದೆ

ತಾವು ಎಲ್ಲೆಲ್ಲಿ ನೆಲಸ ಬೇಕೆಂಬ ವಿಚಾರವನ್ನು ಮಸಲತ್ತು ಮಾಡಿದರೆಂದು ಐತಿಹ್ಯವಿದೆ. ಪ್ರತಿವರ್ಷವೂ ಮೊದಲು ಮಳೆ ಬರುವುದಕ್ಕೆ ಮುಂಚೆ ಮುಂಗಾರಿನಲ್ಲಿ ಅಥವಾ ಶ್ರಾವಣದಲ್ಲಿ ಊರಿನವರೆಲ್ಲರೂ ಈ ಸ್ಥಳದಲ್ಲಿ ಸೇರಿ ದಾಸೋಗವನ್ನು ನಡೆಸುತ್ತಾರೆ.

## ಪಾದಗಟ್ಟೆಗಳು

ಇವು ಉಜ್ಜಯಿನಿಯ ಸುತ್ತಲೂ ಇವೆ. ಒಟ್ಟು ೯ ಪಾದಗಟ್ಟೆಗಳಿವೆ. ಮರುಳಸಿದ್ದನು ೯ ಪಾದಗಳ ಅಳತೆಯ ಭೂಮಿಯನ್ನು ಕೊಡು ಎಂದು ಕಗ್ಗಲ್ಲ ಗೌಡನನ್ನು ಕೇಳಿದುದರ ಸ್ಮಾರಕವಾಗಿ ಈ ಪಾದಗಟ್ಟೆಗಳು ರಚಿಸಲ್ಪಟ್ಟಿರುತ್ತವೆಂದು ಐತಿಹ್ಯವಿದೆ. ಈ ಪಾದಗಟ್ಟೆಗಳಿಗೆ (೧) ಉಜ್ಜಯಿನಿ ಪಾದ (೨) ಮಾಚನಹಳ್ಳಿ ಪಾದ (೩) ಬೆಳದರ ಪಾದ (೪) ನಾಗೇನಹಳ್ಳಿ ಪಾದ (೫) ಬಿನಕನಹಳ್ಳಿ ಪಾದ (೬) ಸೊಕ್ಕೆ ಪಾದ (೭) ಸಾಸುವೆಹಳ್ಳಿ ಪಾದ (೮) ಅರಕನಾಳು ಪಾದ ಮತ್ತು (೯) ನಡುಮಾವಿನಹಳ್ಳಿ ಪಾದ ಎಂದು ೯ ಹೆಸರುಗಳುಂಟು ಒಂದೊಂದು ಪಾದದಲ್ಲಿ ಒಂದೊಂದು ಕಲ್ಲು ಮಂಟಪವಿದೆ. ಪ್ರತಿ ಮಂಟಪದಲ್ಲಿಯೂ ಎರಡೆರಡು ಪಾದಗಳೂ ಉತ್ಸವ ಮೂರ್ತಿಯು ಮಂಡಿಸಲು ಒಂದೊಂದು ಹಾಸುಗಲ್ಲೂ ಇವೆ.

## ಉಜ್ಜಯಿನಿಗೆ ಹತ್ತಿರದಲ್ಲಿರುವ ಇತರ ಸ್ಮಾರಕಗಳು

### ವಟವೃಕ್ಷ ಮತ್ತು ಸಿದ್ಧವರ್ತಿ

ಉಜ್ಜಯಿನಿಗೆ ಸುಮಾರು ಒಂದು ಮೈಲಿ ದೂರದಲ್ಲಿ ಒಂದು ದೊಡ್ಡ ಆಲದವೃಕ್ಷವೂ ಅದರ ಹತ್ತಿರ ಒಂದು ಸಣ್ಣ ನೀರಿನ ಕಟ್ಟೆಯೂ ಇವೆ. ಈ ಆಲದಮರದ ಕೆಳಗ ಕುಳಿತು ಈ ಕಟ್ಟೆಯ ನೀರನ್ನು ಕುಡಿದು ಮರುಳಸಿದ್ಧ ವಿಶ್ರಮಿಸಿಕೊಳ್ಳುತ್ತಿದ್ದನೆಂದು ಐತಿಹ್ಯವಿದೆ.

### ಬೈರೇದೇವರ ಗುಡ್ಡ

ಈ ಗುಡ್ಡವು ಉಜ್ಜಯಿನಿಗೆ ಸುಮಾರು ೩ ಮೈಲಿಗಳ ದೂರದಲ್ಲಿ ಉತ್ತರ ದಿಕ್ಕಿನಲ್ಲಿ ಇದೆ. ಈ ಗುಡ್ಡಕ್ಕೆ ಬೈರೇಶ್ವರ ದುರ್ಗ ಎಂಬ ಹೆಸರೂ ಉಂಟು. ಈ ಗುಡ್ಡದ ಮಧ್ಯಭಾಗದಲ್ಲಿ ಒಂದು ಪಟ್ಟರೆಯಲ್ಲಿ ಬೈರೇದೇವರ ಮೂರ್ತಿ ಇದೆ. ಇದರ ಪಕ್ಕದಲ್ಲಿ ಬ್ರಹ್ಮದೇವರೂ ಇದೆ. ಬೈರೇದೇವರ

ವಿಗ್ರಹಕ್ಕೆ ಹಿಂದೆ ಗುಡಿ ಇದೆ. ಬೈರೇದೇವರ ಕಾಲು ಮುರಿದಂತೆ ಕಾಣು ತ್ತದೆ; ನೆಲಸಲು ತನಗೆ ಸ್ಥಳ ಸಿಕ್ಕಿತೆಂದೂ ಉಳಿದವರಿಗೆ ಸಿಕ್ಕಲಿಲ್ಲ ಎಂದೂ ಬೈರನು ಅಹಂಕಾರದಿಂದ ನುಡಿಯಲು ಮರುಳಸಿದ್ಧನು ಕೋಪಗೊಂಡು ಬೈರನನ್ನು ದೂಡಲು ಬೈರನು ಹೋಗಿ ಈ ಗುಡ್ಡದಲ್ಲಿ ಬಿದ್ದು ಕಾಲು ಮುರಿದುಕೊಂಡನೆಂದೂ ಇದರ ಕುರು ಹಾಗೆಯೇ ಬೈರೆದೇವರ ವಿಗ್ರಹದ ಕಾಲು ಈ ರೀತಿ ಮುರಿದಂತೆ ಕಾಣುವುದೆಂದೂ ಐತಿಹ್ಯವಿದೆ. ಈ ಗುಡ್ಡದ ಮೇಲ್ಭಾಗದಲ್ಲಿ ಒಂದು ಕೋಠೆ ಇದೆ. ಈ ಕೋಠೆಯ ಪಕ್ಕದಲ್ಲಿದ್ದ ಊರಿನ ಅವಶೇಷಗಳು ಈಗಲೂ ಕಾಣಿಸುತ್ತವೆ. ಈ ಕೋಠೆಯು ಚಿರ ಮಲೆನಾಯ್ಕನದೆಂದೂ ಈ ಊರಿನಲ್ಲಿ ಕಗ್ಗಲ್ಲ ವಂಶದವರು ಕೆಲವರು ಹಿಂದೆ ವಾಸವಾಗಿದ್ದರೆಂದೂ ಈಗ ಅವರು ಉಜ್ಜಯಿನಿಯಲ್ಲಿರುವರೆಂದೂ ಅವರನ್ನು ಗುಡ್ಡದವರೆಂದು ಕರೆಯುವವಾಡಿಕೆ ಈಗಲೂ ಉಂಟೆಂದು ತಿಳಿದು ಬರು ತ್ತದೆ. ಕೋಟೆಯ ಹತ್ತಿರ ಕುಡಿಯುವ ನೀರಿನ ಒಂದು ಹೊಂಡವು ಇದೆ.

### ಕಗ್ಗಲ್ಲವರ ಕಟ್ಟೆ

ಈ ಕಟ್ಟೆಯು ಬೈರೇದೇವರ ಗುಡ್ಡಕ್ಕೆ ಆಗ್ನೇಯ ದಿಕ್ಕಿನಲ್ಲಿ ಇದೆ. ಗುಡ್ಡದಮೇಲೆ ನಿಂತು ನೋಡಿದರೆ ಕಾಣುತ್ತದೆ.

### ಕಗ್ಗಲ್ಲಪುರ

ಈ ಊರು ಬೈರೇದೇವರ ಗುಡ್ಡಕ್ಕೆ ಈಶಾನ್ಯದಲ್ಲಿದೆ. ಈಗ ಈ ಊರು ಬೇಚರಾಕಾಗಿದೆ. ಈ ಊರಲ್ಲಿ ಕಟ್ಟೆ (ಸಿದ್ದಯ್ಯನ ಕಟ್ಟೆ) ಮಠ, ಮನೆಗಳು ಮತ್ತು ತೇರುಬೀದಿ ಇವುಗಳ ಅವಶೇಷಗಳು ಈಗಲೂ ಕಾಣು ತ್ತವೆ ಎಂದು ಜನರು ಹೇಳುತ್ತಾರೆ. [ ಸಂಜೆಯ ಹೊತ್ತು ಮೀರಿದುದು ರಿಂದಲೂ ಈ ಪ್ರಾಂತದಲ್ಲಿ ಚಿರತೆಗಳ ಹಾವಳಿ ಬಹಳವೆಂದೂ ಜನರು ಹೇಳುವದರಿಂದಲೂ ।ಮತ್ತು ಮುಂದಿನ ಪ್ರಯಾಣವನ್ನು ತ್ವರೆಯಿಂದ ಕೈಕೊಳ್ಳಬೇಕಾಗಿದ್ದುದರಿಂದಲೂ ಈ ಊರನ್ನು ಪ್ರತ್ಯಕ್ಷವಾಗಿ ನೋಡಿ ಕೊಂಡು ಬರಲು ಸಾಧ್ಯವಾಗಲಿಲ್ಲ.

### ಜಟ್ಟಿಗಪ್ಪನ ಗುಡಿ.

ಈ ಗುಡಿಯು ಮೂಗಣ್ಣನ ದೇವಸ್ಥಾನದ ಆವರಣದಲ್ಲಿ ಮೂಗಣ್ಣ ಎದುರಾಗಿ ಇದೆ.

## ಸ್ಥಾಪನಕಟ್ಟೆ.

ಈ ಕಟ್ಟೆಯು ಮೂಗಣ್ಣನ ದೇವಸ್ಥಾನಕ್ಕೆ ಪೂರ್ವದಿಕ್ಕಿನಲ್ಲಿ ಸ್ವಲ್ಪ ದೂರದಲ್ಲಿ ಇದೆ. ಮರುಳಸಿದ್ಧನು ಈ ಕಟ್ಟೆಯನ್ನು ಸ್ಥಾಪಿಸಿದುದರಿಂದ ಈ ಕಟ್ಟೆಗೆ ಈ ಹೆಸರು ಬಂದಿದೆಂದು ಐತಿಹ್ಯ ಉಂಟು.

## ಕರುವಿನ ಕಲ್ಲಗುಡ್ಡ.

ಈ ಗುಡ್ಡವು ಈ ಮೂಗಣ್ಣನ ದೇವಸ್ಥಾನಕ್ಕೆ ಸ್ವಲ್ಪ ದೂರದಲ್ಲಿ ಉತ್ತರಕ್ಕಿವೆ. ಈ ಗುಡ್ಡದ ತುಟ್ಟತುದಿಯಲ್ಲಿ ಮರುಳಸಿದ್ಧನ ಒಂದು ಅಂಕಣದ ಗುಡಿಯಿದೆ. ಈ ಗುಡಿಯಲ್ಲಿ ಎರಡು ಲಿಂಗಗಳಿವೆ. ಈ ಗುಡಿಯ ಮುಂದೆ ಕರುಗಳು ನೀರು ಕುಡಿಯಲು ಪಟ್ಟೆಡೋಣಿಗಳು ಇವೆ. ಈ ಗುಡ್ಡದ ತಪ್ಪಲಿನಲ್ಲಿ ಒಂದು ತಾಳಿಯೂ ಅದರ ಮಧ್ಯದಲ್ಲಿ ಒಂದು ಮರವೂ ಇದೆ. ಈ ಸ್ಥಳಕ್ಕೆ ಕರುವಿನ ಹಟ್ಟಿ ಎಂದು ಹೆಸರಿದೆ. ಮರುಳಸಿದ್ಧನು ದನಗಳನ್ನು ಈ ಗುಡ್ಡಕ್ಕೆ ಹೊಡೆದುಕೊಂಡು ಬಂದು ಕರುಗಳನ್ನು ಹಟ್ಟಿಯಲ್ಲಿ ಕೂಡುತ್ತಿದ್ದವೆಂದು ಜನರು ಐತಿಹ್ಯವನ್ನು ನುಡಿಯುತ್ತಾರೆ. ಮರುಳಸಿದ್ಧನ ಪೂಜೆಗಾಗಿ ಈ ಗುಡ್ಡಕ್ಕೆ ಬರುವ ಭಕ್ತರು ಈ ಗುಡ್ಡದಲ್ಲಿರುವ ೨ ಕಲ್ಲುಗಳನ್ನು ಮನೆಗೆ ತೆಗೆದುಕೊಂಡು ಹೋಗಿ ಅವುಗಳನ್ನು "ಕರುವಿನಯ್ಯ" ಎಂದು ಕರೆದು ಪೂಜಿಸುತ್ತಾರೆ. ಈ ಆಚರಣೆಯಿಂದ ಕರುಗಳ ವೃದ್ಧಿ ಹೆಚ್ಚುವುದೆಂದು ಜನರಲ್ಲಿ ನಂಬುಗೆ ಇದೆ.

ಉಜ್ಜಿನಿಯ ಮರುಳಸಿದ್ಧೇಶ್ವರನ ಪೂಜೋತ್ಸವಾದಿಗಳಿಗೆ ಸಂಬಂದಪಟ್ಟ ಆಚರಣೆ ಮತ್ತು ಸಂಪ್ರದಾಯ ಮತ್ತು ಐತಿಹ್ಯಗಳು.

## ಕಾರ್ತೀಕೋತ್ಸವ

ಈ ಉತ್ಸವವು ೪೫ ದಿವಸಗಳವರೆಗೆ ನಡೆಯುತ್ತದೆ. ಈ ಉತ್ಸವದ ಮೊದಲನೆಯ ದಿನದ ಸೇವೆಯನ್ನು ಕಗ್ಗಲ್ಲು ವಂಶಕ್ಕೆ ಸೇರಿದ ಉಜ್ಜಯಿನಿಯ ಪಟೇಲರವರು ನಡೆಸುತ್ತಾರೆ. ಆದಿವಸ ಸುಮಾರು ಎರಡುವರೆ ಸಾವಿರ ದೀಪಗಳನ್ನು ಹಚ್ಚಿಡಲಾಗುವುದು. ಕಾರ್ತೀಕದಲ್ಲಿ ನಡೆಯುವ ಎಲ್ಲ ದಿವಸಗಳ ಉತ್ಸವವೂ ದೇವಸ್ಥಾನದ ಪೌಳಿಯ ಒಳ ಆವರಣದಲ್ಲಿಯೇ ನಡೆಯುತ್ತದೆ. ಕೊನೆಯ ದಿವಸ ಎಂದರೆ ಮಾರ್ಗಶಿರ ಶುದ್ಧ ಹುಣ್ಣಿಮೆಯ ದಿವಸ ನಡೆಯುವ ಉತ್ಸವದಲ್ಲಿ ಹೊಸ ನವಣೆಯಿಂದ ಮಾಡಿದ ತಂಬಿಟ್ಟನ್ನು ದೇವರಿಗೆ

ನೈವೇದ್ಯ ಮಾಡಲಾಗುವುದಲ್ಲದೆ ಅದರಿಂದಲೇ ದೇವರನ್ನು ಅಲಂಕಾರ ಮಾಡಲಾಗುವದು. ಈ ರೀತಿ ಹೊಸನವಣೆಯನ್ನು ದೇವರಿಗೆ ನಿವೇದಿಸಿದ ಮೇಲೆ ಜನರು ಅದನ್ನು ತಮ್ಮ ಸ್ವಂತಕ್ಕೆ ಉಪಯೋಗಿಸಿಕೊಳ್ಳುತ್ತಾರೆ.

## ಭಾರತಹುಣ್ಣಿಮೆಯ ಉತ್ಸವ

ಈ ಉತ್ಸವದಲ್ಲಿ ದೇವರು ೯ ಪಾದಗಟ್ಟೆಗಳಿಗೂ ಹೋಗಿ ಬರುತ್ತದೆ. ಈ ರೀತಿ ಹೋಗಿಬರುವುದಕ್ಕೆ "ದಿಗ್ವಿಜಯ ನಡೆಯಿಸಿಕೊಂಡು ಬರುವುದು" ಎಂದು ಹೇಳುತ್ತಾರೆ. ಹಿಂದೆ ಒಂದೊಂದು ಪಾದಗಟ್ಟೆಗೆ ಒಂದೊಂದು ದಿವಸಗಳವರೆಗೆ ದಿಗ್ವಿಜಯೋತ್ಸವವು ನಡೆಯುತ್ತಿದ್ದಿತು. ಆದರೆ ಈಗ ನೆಡೆಯುವುದು ಮೊದಲನೆಯ ದಿವಸ ಮತ್ತು ಕೊನೆಯ ೨ ದಿವಸಗಳು ಮಾತ್ರ ಮೊದಲನೆಯ ದಿವಸ ಯೆಂದರೆ ಮಾಘಶುದ್ಧ ಸಪ್ತಮಿ ದಿವಸ ದೇವರು ಉಜ್ಜಿಯಿನಿ ಪಾದಕ್ಕೆ ಹೋಗಿ ದಿಗ್ವಿಜಯದ ಶಾಸ್ತ್ರವನ್ನು ಮಾಡಿಕೊಂಡು ಬರುತ್ತದೆ. ಅದಾದ ಮೇಲೆ ೮ ದಿವಸ ಎಂದರೆ ಮಾಘಶುದ್ಧ ಚತುರ್ದಸಿಯ ದಿವಸ ಮತ್ತೆ ದಿಗ್ವಿಜಯದ ಉತ್ಸವವು ಪ್ರಾರಂಭವಾಗಿ, ದೇವರು ಮೊದಲು ಊರ ಮುಂದಿನ (ಉಜ್ಜಯಿನಿ) ಪಾದಕ್ಕೆ ಹೋಗುತ್ತದೆ. ಅಲ್ಲಿ ಪ್ರದಕ್ಷಣೆ ಪೂಜೆಗಳು ನಡೆದು ಮೇಲೆ ಸಿದ್ಧನವರ್ತಿ ಮತ್ತು ವಟ ವೃಕ್ಷಗಳ ಬಳಿಗೆ ಹೋಗುತ್ತದೆ ವಟವೃಕ್ಷದ ಕೆಳಗೆ ಬಿಜಯಮಾಡಿ ಪೂಜೆಗೊಂಡ ಮೇಲೆ ಅದೇ ದಿವಸವೇ ಮಾಚೇನ ಹಳ್ಳಿಪಾದ, ಬೆಳದರಿಪಾದ, ನಾಗೇನಹಳ್ಳಿಪಾದ ಬೆನಕನಹಳ್ಳಿಪಾದ, ಸೊಕ್ಕೆಪಾದ, ಈ ಪಾದಗಳಿಗೆ ಹೋಗಿ ಅಲ್ಲಿಂದ ಮುಂದೆ ಮೂಗಣ್ಣನ ದೇವಸ್ಥಾನಕ್ಕೆ ಹೋಗುತ್ತದೆ. ಅಲ್ಲಿ ಮಂಗಳಾರತಿ ನಡೆದ ಮೇಲೆ ಮುಂದೆ ಸಾಸುವೆ ಹಳ್ಳಿ ಪಾದಕ್ಕೆ ಹೋಗಿ, ಆ ರಾತ್ರಿ ಕಾಳಾ ಪುರದಲ್ಲಿ ಉತ್ಸವವು ನಡೆಯುತ್ತದೆ. ಆ ಊರಿನ ಗೌಡರ ಎಡೆ ಮೊದಲಾದ ಸೇವೆಗಳು ನಡೆದು ದೇವರು ಆ ರಾತ್ರಿ ಆ ಊರಿನಲ್ಲಿಯೇ ಶಿರಿಗುತ್ತದೆ. ಮಾರನೇ ದಿವಸ ದೇವರು ನಡು ಮಾವೆನ ಹಳ್ಳಿ ಪಾದಕ್ಕೆ ಹೋಗುತ್ತದೆ. ಅಲ್ಲಿ ಆರತಿ ಆದ ಮೇಲೆ ಮುಂದೆ ಅರಕಳು ಪಾದಕ್ಕೆ ಹೋಗುತ್ತದೆ ಅಲ್ಲಿ ಪ್ರತಿವಾದ "ಕರುವಿನ ಕಾಳಗವು" ನಡೆಯುತ್ತದೆ ಅರಕನಾಳವರು ಸಜ್ಜೆಯ ಧ್ಯಾಸದಿಂದ ಕಡಬುಗಳನ್ನು ತಯ್ಯಾರಿಸಿ, ಕೊಂಚವನ್ನು ತಾವಿಟ್ಟುಕೊಂಡು, ಇನ್ನು ಕೊಂಚವನ್ನು, ದೇವರ ಹಿಂದೆ ಬಂದಿರುವ ಉಜ್ಜಿನಿಯವರಿಗೆ ಕೊಟ್ಟು ಆ ಕಡಬುಗಳಿಂದ ಒಬ್ಬರನ್ನೊಬ್ಬರು ಹೊಡೆದಾಡುತ್ತಾರೆ. ಮರುಳಸಿದ್ದನು

ಅಶ್ವಾಸುರನನ್ನು ಸಂಹಾರಮಾಡಿದುದರ ಸ್ಮಾರಕವಾಗಿ ಈ ಕಾಳಗವು ಮುಗಿಯುವ ಹೊತ್ತಿಗೆ ಸಂಜೆಯಾಗಿ, ದೇವರು ಅಲ್ಲಿಂದ ಮುಂದೆ ನಡು ಮಾವಿನ ಹಳ್ಳಿಪಾದಕ್ಕೆ ಸಾಗಿ, ಆನೋಲೆ ಕಾಸಿ ಬಸವಣ್ಣನ ದೇವಸ್ಥಾನಕ್ಕೆ ಬರುತ್ತದೆ ಅಲ್ಲಿ ಸ್ವಲ್ಪ ಹೊತ್ತು ಮಹೋತ್ಸವಮಾಡಿದ ಮೇಲೆ ಸುಮಾರು ರಾತ್ರಿ ೮ ಘಂಟೆ ಹೊತ್ತಿಗೆ ಉಜ್ಜಯಿನಿಯ ಊರಹೊರಗಣ ಪಾದಕ್ಕೆ ಬಂದು ನಿಲ್ಲುತ್ತದೆ. ಆಗ ಕಗ್ಗಲ್ಲು ವಂಶದವರಾದ ಉಜ್ಜಯಿನಿಯ ಪಾಟೀಲದವರು ಕುಟುಂಬ ಸಪ್ಪನನ್ನು ಹೊರಡಿಸಿಕೊಂಡು ತಪ್ಪು ಕಾಣೆಯನ್ನು ಎರಡು ವಿಭೂತಿ ಗಟ್ಟಿಗಳನ್ನು ತೆಂಗಿನಕಾಯಿ ಮತ್ತು ದಕ್ಷಿಣೆ ಇವುಗಳನ್ನು ತೆಗೆದುಕೊಂಡು ಬಂದು ದೇವರಿಗೆ ಒಪ್ಪಿಸುತ್ತಾರೆ. ಆ ಮೇಲೆ "ದಿವಿಟಿಗೆಯ ಸಲಾಮು" ಅಲ್ಲಿಂದ ಮುಂದೆ ದೇವರು ಊರಿಗೆ ಬರುತ್ತದೆ. ಆಗ ತಳವಾರ ಸ್ತ್ರೀಯ ಆರತಿಯು ನಡೆಯುತ್ತದೆ. ಈ ಆರತಿಯನ್ನು ಎತ್ತುವ ತಳವಾರ ಗಂಡ ಹೆಂಡಿರು ಆ ದಿವಸ ಉಪವಾಸ ವಿದ್ದು ಈ ಸೇವೆಯನ್ನು ನಡೆಯಿಸುತ್ತಾರೆ. ಇವರ ಆರತಿಯಿಂದ ಮೇಲೆ ಮಾದಿಗರ (ಬೇಗಾರರ) ಆರತಿಯು ನಡೆಯುತ್ತದೆ. ಮರುಳಸಿದ್ಧನ ಮೇಲೆ ಶೋಬಾನೆಯ ಪದಗಳನ್ನು ಹೇಳಿಕೊಂಡು ಮಾದಿಗರ ಹೆಂಗಸರು ಆರತಿಯನ್ನು ಎತ್ತುತ್ತಾರೆ. ಆ ತರುವಾಯ ಉಳಿದ ಎಲ್ಲ ಕುಲದವರೂ ದೇವರಿಗೆ ಆರತಿಗಳನ್ನು ಎತ್ತುತ್ತಾರೆ. ಈ ರೀತಿ ಎಲ್ಲ ಕುಲ ದವರು ಆರತಿಗಳನ್ನು ಎತ್ತಿದ ಮೇಲೆ ದೇವರು ದೇವಸ್ಥಾನಕ್ಕೆ ವಿಜಯ ಮಾಡುತ್ತದೆ. ಆ ದಿವಸ ರಾತ್ರಿ ದೇವರಿಗೆ ಉರಳಿ ಗುಗ್ಗರಿ ಉಳ್ಳಿಕಡ್ಡಿ (ಈರುಳ್ಳಿ) ಮತ್ತು ಬೆಲ್ಲ-ಇವುಗಳನ್ನು ನೈವಿದ್ಯಮಾಡಲಾಗುವುದು ಮರುಳು ಸಿದ್ಧನು ದ್ವಿಗ್ವಿಜಯವನ್ನು ಮುಗಿಸಿಕೊಂಡು ಬಂದು ದಣಿಸಿದ ಕುದುರೆ ಗಳಿಗೆ ಉರುಳಿ ತಿನ್ನುಸಿದುದರ ಸ್ಮಾರಕವಾಗಿ ಈ ರೀತಿ ಉರುಳಿ ಗುಗ್ಗರಿಯ ನೈವೇದ್ಯವು ನಡೆಯುವದೆಂದು ಈ ಕಾರಣದಿಂದಲೇ ಈ ಭಾರತದ ಹುಣ್ಣಿ ಮೆಯ ಹಬ್ಬಕ್ಕೆ ಗುಗ್ಗರಿಯ ಹಬ್ಬವೆಂದು ಹೆಸರು ಇರುವುದೆಂದ ಐತಿಹ್ಯವಿದೆ.

## ರಥೋತ್ಸವ ಮತ್ತು ಎಣ್ಣೆ ಮಜ್ಜನ

ಮರುಳಸಿದ್ಧನ ರಥೋತ್ಸವವು ವೈಶಾಖ ಶುದ್ಧ ಪಂಚಮಿಯಲ್ಲಿ ನಡೆ ಯುತ್ತದೆ. ಹಿಂದೆ ಹೇಳಿದಂತೆ ಈ ರಥೋತ್ಸವದಲ್ಲಿ ಮಾದಿಗರು ರಥದ ಗಾಲಿ ಗಳಿಗೆ ಭಕ್ತರು ಒಡೆಯುವ ತೆಂಗಿನಕಾಯಿಗಳಲ್ಲಿ ಅರ್ಧ ಭಾಗದಷ್ಟನ್ನು ಹೊಂದಲು ಹಕ್ಕುಳ್ಳವರಾಗಿರುತ್ತಾರೆ. ರಥೋತ್ಸವದ ಮಾರನೆಯ ದಿವಸ

ದೇವರಿಗೆ ಎಣ್ಣೆ ಉಜ್ಜುನದ ಸೇವೆಯು ನಡೆಯುತ್ತದೆ. ಈ ಸೇವೆಯಲ್ಲಿ ಯಣ್ಣೆ ಯನ್ನು ಮರುಳಸಿದ್ಧನ ಗರ್ಭಗುಡಿಯ ಶಿಖರದ ಮೇಲೆ ಎರೆಯಲಾಗುವುದು. ಮೊದಲು ಎರೆಯುವ ಎಣ್ಣೆಯನ್ನು ಜರಿವಳಿಯ ರಾಜರು ಮೊಹರು ಮಾಡಿ ಕಳುಹಿಸಿ ಕೊಡುತ್ತಾರೆ. ಇವರ ಸೇವೆ ನಡೆದ ಮೇಲೆ ಉಳಿದ ಎಲ್ಲ ಭಕ್ತರ ಸೇವೆ ನಡೆಯುತ್ತದೆ. ಎಣ್ಣೆಯನ್ನು ಎರೆಯುತ್ತಾರೆ. ಮರಳಸಿದ್ಧನು ಎಲ್ಲ ಕುಲದವರನ್ನು ಕೂಡಿಕೊಂಡು ಉಂಡು, ಕುಲಹದಿನೆಂಟು ಜಾತಿಯನ್ನು ಬೆರಿಕೆ ಮಾಡಿ ಕೆಡಸಿದನೆಂದು ಬ್ರಾಹ್ಮಣರು ಕುಪಿತರಾಗಿ ಅವನನ್ನು ಹಗೇವಿನಲ್ಲಿ ಹಾಕಿ ಸುಣ್ಣವನ್ನು ತುಂಬಿ ನೀರನ್ನು ಹೊಯ್ಸಲು ಮರುಳು ಸಿದ್ಧ ಪವಾಡವನ್ನು ಮೆರೆದನೆಂದೂ, ಇದರ ಸ್ಮಾರಕವಾಗಿಯೇ ಈ ಎಣ್ಣೆ ಮಜ್ಜನದ ಸೇವೆಯನ್ನು ನಡೆಯಿಸಲಾಗುವುದೆಂದೂ ಐತಿಹ್ಯವಿದೆ.

## ಮರುಳಸಿದ್ಧನ ದೇವಸ್ಥಾನದಲ್ಲಿ ನಡೆಯುವ ನಿತ್ಯಪೂಜೆ

ಮರುಳಸಿದ್ಧನಿಗೆ ಪ್ರತಿ ದಿವಸವೂ ನಾಲ್ಕು ಪೂಜೆಗಳು ನಡೆಯುತ್ತವೆ. ಬೆಳಗಿನ ಜಾವದಲ್ಲಿ ನಡೆಯುವ ಮೊದಲನೆಯ ಪೂಜೆಯಲ್ಲಿ ದೇವರಿಗೆ ನೊಸರು ಅನ್ನ ಉಳ್ಳಿ ಇವುಗಳನ್ನು ನೈವೇದ್ಯಮಾಡಲಾಗುವುದು. ಮಧ್ಯಾಹ್ನದಲ್ಲಿ ನಡೆಯುವ ಎರಡನೆಯ ಪೂಜೆಯಲ್ಲಿ ಇಂತದೇ ಭಕ್ಷವೆಂಬ ನೇಮ ವಿರದೆ ಯಾವುದಾದರೂ ಭಕ್ಷ್ಯವನ್ನು ನೈವೇದ್ಯ ಮಾಡಲಾಗುವದು. ಸಂಜೆಯಲ್ಲಿ ನಡೆಯುವ ಮೂರನೆಯ ಪೂಜೆಯಲ್ಲಿ ಹಾಲು ಅನ್ನವನ್ನು ನೈವೇದ್ಯ ಮಾಡಲಾಗುವದು. ಈ ಮೂರು ಪೂಜೆಗಳೂ ಬಹಿರಂಗವಾದ ಪೂಜೆಗಳಾಗಿರುತ್ತವೆ. ರಾತ್ರಿಯಲ್ಲಿ ನಡೆಯುವ ನಾಲ್ಕನೆಯ ಪೂಜೆಯು ಗೋಪ್ಯವಾಗಿ ನಡೆಯುತ್ತದೆ.

## ಉಜ್ಜಿಯಿನಿಯ ಕೆಲವು ವಂಶದವರ ವಿಚಾರ.

### ಜಟ್ಟಿಗನ ವಂಶದವರು.

ಈ ವಂಶದವರು ಈಗಲೂ ಈ ಊರಿನ ತಳವಾರರಾಗಿದ್ದಾರೆ. ಮರುಳಸಿದ್ಧನ ಶಿಷ್ಯನಾದ ಜಟ್ಟಿಗೇಶ್ವರನ ಪೂಜೆಯನ್ನು ಈಗಲೂ ಇವರೇ ಮಾಡುತ್ತಾರೆ. ಭಾರತದ ಹುಣ್ಣಿಮೆಯಲ್ಲಿ (ಗುಗ್ಗರಿ ಹಬ್ಬದಲ್ಲಿ) ಮರುಳಸಿದ್ಧನಿಗೆ ಕ್ರಿಯದ ಆರತಿಯನ್ನು ಮೊದಲು ಎತ್ತುವವರು ಇವರೇ ಆಗಿದ್ದಾರೆ.

## ಕಗ್ಗಲ್ಲಗೌಡನ ವಂಶದವರು.

ಈ ವಂಶದವರು ಈಗಲೂ ಉಜ್ಜನಿಯ ಪಟೇಲರಾಗಿದ್ದಾರೆ. ಕಾರ್ತೀಕದ ಉತ್ಸವದಲ್ಲಿ ಮರುಳಸಿದ್ಧನಿಗೆ ಮೊದಲನೆಯ ದಿನದ ಸೇವೆಯನ್ನು ಇವರೇ ನಡೆಯಿಸುತ್ತಾರೆ. ಭಾರತದ ಹುಣ್ಣಿವೆಯಲ್ಲಿ (ಗುಗ್ಗರಿ ಹಬ್ಬದಲ್ಲಿ) ಕುಂಟೆ ಬಸವೇಶ್ವರನನ್ನು ಹೊರಡಿಸಿಕೊಂಡು ಹೋಗಿ ಮರುಳಸಿದ್ಧನಿಗೆ ತಪ್ಪುಗಾಣಿಕೆಯನ್ನು ಕೊಟ್ಟು ದೇವರನ್ನು ಊರಿಗೆ ಬಿಜಯ ಮಾಡಿಸಿಕೊಂಡು ಬರುವವರು ಇವರೇ ಆಗಿದ್ದಾರೆ. ಎಲ್ಲ ಉತ್ಸವಗಳಲ್ಲಿಯೂ ಮರುಳಸಿದ್ಧನ ಸ್ವಾಮಿ ಹೊರಡುವಾಗ "ಸ್ವಾಮಿ ಬೆಳೆಯಲಿ" ಎಂದು ಬಿನ್ನಹ ಮಾಡುವವರು ಇವರೇ ಆಗಿದ್ದಾರೆ. ಹಿಂದೆ ಹೇಳಿದಂತೆ ಮರುಳಸಿದ್ಧನ ಶಾಪದ ಮೇರೆಗೆ ಉಜ್ಜನಿಯ ೯ ಪಾದಗಳ ಪ್ರದೇಶದಲ್ಲಿ ವಾಸಮಾಡತಕ್ಕ ಈ ವಂಶದವರಿಗೆ ಹೆಚ್ಚಿಗೆ ಪುತ್ರಸಂತಾನವಾಗುವುದಿಲ್ಲವೆಂಬ ನಂಬಿಗೆ ಈಗಲೂ ಇದೆ.

## ಕರುವಿನಯ್ಯನವರ ವಂಶದವರು.

ಈ ವಂಶದವರು ಹೊಸಪೇಟೆಯಲ್ಲಿ ಬಾವಿಮಠದಿಂದ ಬಂದವರಾಗಿರುತ್ತಾರೆ. ಮರುಳಸಿದ್ಧನು ಇವರಿಂದ ಕರುಗಳನ್ನು ಕಾಯಿಸಿದನೆಂದೂ ಇವರನ್ನು ಮೆಚ್ಚಿಕೊಂಡು ಇವರ ಮನೆಯಲ್ಲಿ ಲಿಂಗಮುದ್ರೆ ಕಲ್ಲುಗಳನು ಹಾಕಿಸಿದನೆಂದು ಐತಿಹ್ಯವಿದೆ. ಮರುಳಸಿದ್ಧನ ಉತ್ಸವಕಾಲದಲ್ಲಿ ಈ ವಂಶದವರು ದೇವರ ಮುಂದೆ ತಾಳಮೇಳಗಳಿಂದ ಭಜನೆಯ ಮಾಡುತ್ತಾರೆಂದು ಇವರ ಈ ಸೇವೆಗಾಗಿ ಇವರಿಗೆ ಇನಾಂತಿಯು ಸಹ ಇರುವುದೆಂದು, ಇನಾಂತಿಗೆ "ಕರುಪಿನಯ್ಯನವರ ದಿನಾಂತಿ" ಎಂದು ಸರಕಾರದ ಧಾಕಲೆಗಳಲ್ಲಿ ಕರೆಯುವರೆಂದೂ ತಿಳಿದುಬರುತ್ತದೆ.

## ತೂಲಹಳ್ಳಿ.

ಈ ಊರು ಬಳ್ಳಾರಿ ಜಿಲ್ಲೆಯ ಕೂಡ್ಲಗಿ ತಾಲೂಕಿನಲ್ಲಿ ಉಜ್ಜನಿಗೆ ಸುಮಾರು ೪ ಮೈಲುಗಳ ದೂರದಲ್ಲಿದೆ. ಹಿಂದೆ ಈ ಊರಿಗೆ ತುಯ್ಯಲಾಳಪುರ ಎಂಬ ಹೆಸರಿತ್ತೆಂದೂ ಅದಕ್ಕೂ ಹಿಂದೆ ಈ ಊರು ಒಂದು ಗೊಂಡಾರಣ್ಯವಾಗಿತ್ತೆಂದೂ ತಿಳಿದುಬರುತ್ತದೆ. ಹಿಂದಿನ ಊರು ಹಾಳುಬಿದ್ದು ಹೊಸ ಊರಿಗೆ ಸುಮಾರು ೨ ಫರ್ಲಾಂಗುಗಳ ದೂರದಲ್ಲಿ ಇದೆ. ಹಿಂದಿನ ಹಾಳೂರನ್ನು "ಹಳೆಯ ಹಾಳು' ಎಂದು ಜನರು ಕರೆಯುತ್ತಾರೆ. ಈ ಹಳೆಯ

ಹಾಳೂರಿನಲ್ಲಿ ನಾಗರಕಲ್ಲಿನ ಮೇಲೆ ಬರೆದ ಒಂದು ಶಾಸನವಿದೆ. ಈ ಶಾಸನ ದಲ್ಲಿ ಕತ್ತಿಯನ್ನು ಎಳೆಯುವ ಒಬ್ಬನು ಮತ್ತೊಬ್ಬನನ್ನು ಹೊಡೆಯುತ್ತಿರುವ ಚಿತ್ರವು ಮತ್ತು ಅಕ್ಷರಗಳೂ ಕೆತ್ತಿವೆ.

## ಮರುಳಸಿದ್ಧೇಶ್ವರನ ದೇವಸ್ಥಾನ.

ಈ ದೇವಸ್ಥಾನವು ಹೊಸ ಊರಿನಲ್ಲಿ ಹಳೆಯ ಊರಿಗೆ ಹತ್ತಿರದಲ್ಲಿ ಇದೆ. ಈ ದೇವಸ್ಥಾನಕ್ಕೆ ೬೭ ಎಕರೆ ೪೧ ಗುಂಟೆಗಳ ಇನಾಂತಿಯು ಇದೆ. ಸರಕಾರಿ ದಾಕಲೆಗಳಲ್ಲಿ "ಶ್ರೀಸಿದ್ಧೇಶ್ವರಸ್ವಾಮಿ ದೇವಾಲಯ" ಎಂದು ಇದೆ. ಈ ದೇವಸ್ಥಾನದ ಪೂಜೆಯನ್ನು ಈಗಲೂ ಕಗ್ಗಲ್ಲ ವಂಶದವರೇ ಮಾಡುತ್ತಾರೆ.

ಈ ದೇವಸ್ಥಾನದಲ್ಲಿ ಅನೇಕ ಕಂಭಗಳಿವೆ. ಅವುಗಳಲ್ಲಿ ಗರ್ಭಗುಡಿಯ ಹತ್ತಿರದ ಒಂದು ಕಂಭವು ಸ್ವಾಭಾವಸಿದ್ಧವಾಗಿ ಬೆಳೆದ ಕಮರದ (ಹಾಸಿನ) ಮರವೇ ಹಾಗಿರುತ್ತದೆ. ಹಿಂದೆ ಮರುಳಸಿದ್ಧನು ಈ ಪ್ರಾಂತದ ಅರಣ್ಯದ ಒಂದು ಪೆಳೆಯಲ್ಲಿ ಇದ್ದನೆಂದು ಹಯನುಗಳು ಪ್ರತಿನಿತ್ಯವೂ ಅವರಬಳಿಗೆ ಹೋಗಿ ಅವನಿಗೆ ಹಾಲು ಕರೆಯುತ್ತಿದ್ದವೆಂದೂ, ಒಂದು ದಿವಸ ಕಗ್ಗಲ್ಲ ಗೌಡ ಹಯನೊಂದು ತಪ್ಪಿಸಿಕೊಂಡಿರಲು ಗೌಡನು ಅದನ್ನು ಹುಡುಕಿಕೊಂಡು ಬಂದು ನೋಡಲಾಗಿ ಅದು ಈ ಪೆಳೆಯಲ್ಲಿ ಬಾಲ ಮಳುಸಿದ್ಧಗೆ ಹಾಲು ಕರೆಯುತ್ತಿತ್ತೆಂದೂ, ಗೌಡನು ತನಗೆ ಮಕ್ಕಳಿಲ್ಲದೆ ಬಾಲ ಮರುಳಸಿದ್ಧನನ್ನು ಕಂಡು ಹಿಗ್ಗಿ "ಹಡೆಯದೆ ಮಕ್ಕಳು ದುಡಿಯದೆ ಬಂಗಾರ ಸಿಕ್ಕಂತೆ ಆಯಿತೆಂದು ಆ ಬಾಲನನ್ನು ಕರೆದುಕೊಂಡು ಹೋಗಿ ಪೋಷಿಸಿದನೆಂದೂ. ಯಾವ ವೇಳೆಯಲ್ಲಿ ಗೌಡನು ಬಾಲಮರುಸಿದ್ಧನನ್ನು ಕಂಡನೊ ಆಪೆಳೆಯ ಒಂದು ಮರವೇ ಮೇಲೆ ಹೇಳಿದಂತೆ ಈಗಲೂ ಈ ದೇವಸ್ಥಾನದ ಒಂದು ಕಂಭವಾಗಿರುವುದೆಂದೂ, ಗೌಡನು ಬಾಲ ಮರುಳಸಿದ್ಧನನ್ನು ಪೆಳೆಯಲ್ಲಿ ನೋಡಿದಾಗ ಬಾಲ ಮರುಳಸಿದ್ಧನು ವುಯ್ಯಾಲೆಯಲ್ಲಿ ಆಡುತ್ತಿದ್ದಂತೆ ಕಾಣಿಸಿದನೆಂದೂ, ಈ ಕಾರಣದಿಂದ ಈ ಊರಿಗೆ ಉಯ್ಯಾಲಪುರ (ಉಯ್ಯಾಲೇಪುರ) ಎಂಬ ಹೆಸರು ಬಂದಿತೆಂದೂ, ಕಾಲಕ್ರಮದಲ್ಲಿ ಉಯ್ಯಾಲಪುರವು ಕೂಲಳ್ಳಿಯಾಗಿತ್ತೆಂದೂ, ಗೌಡನು ಬಾಲಮರುಳ ಸಿದ್ಧನನ್ನು ಪ್ರತ್ಯಕ್ಷನಾಗಿ ಈ ಊರು ಹನಹಳ್ಳಹಾಲಿನ ಹಳ್ಳವಾಗಲೆಂದು ಹರಿಸಿದನೆಂದೂ, ಈಗಲೂ ಈಊರಿನಲ್ಲಿ ಹಾಲಿನರುದ್ಧಿ ಅಧಿಕವೆಂದೂ ಜನರು ಐತಿಹ್ಯ

ಮತ್ತು ಸ್ಥಳಪುರಾಣಗಳನ್ನು ಕುಡಿಯುತ್ತಾರೆ. ಫಾಲ್ಗುಣ ಶುದ್ಧ ಪಂಚಮಿಯಲ್ಲಿ ಜಾತ್ರೆಯಾಗುತ್ತದೆ. ಭಾರತದ ಹುಣ್ಣಿಮೆಯಲ್ಲಿ ಪಾಲುಕೆಯ ಉತ್ಸವವು ನಡೆಯುತ್ತದೆ. ಉತ್ಸವಗಳಲ್ಲಿ ಮೊದಲನೆಯ ಆರತಿಯನ್ನು ಮಾದಿಗರ ಹೆಂಗಸರು ಎತ್ತುತ್ತಾರೆ. ಆರತಿಯನ್ನು ಎತ್ತುವಾಗ ಅವರು ಮರುಳಸಿದ್ಧನಮೇಲೆ ಅನೇಕ ಶೋಬಾನೆಯ ಹಾಡುಗಳನ್ನು ಹಾಡುತ್ತಾರೆ. (ಈ ಊರಿನ ಮಾದಿಗ ಹೆಂಗಸರಿಂದ ಮರುಳಸಿದ್ಧನ ಸಂಬಂದವಾದ ಕೆಲವು ಶೋಬಾನೆಯ ಹಾಡುಗಳನ್ನು ಪ್ರತ್ಯಕ್ಷವಾಗಿ ಹೇಳಿಸಲಾಯಿತು. ಈ ಹಾಡುಗಳನ್ನು ಇವರು ಇಂಪಾಗಿಯೂ ಮತ್ತು ಭಕ್ತಿಯಿಂದಲೂ ಹಾಡುತ್ತಾರೆ. ಕಗ್ಗಲ್ಲವರ ಕರುಗಳಕಾಯಿಯುನೆ "ಕಾವಿಯ ಧರಿಸಿ ಕೈಲಾಸ ಸ್ವಾಮಿ ಬಂದರಲ್ಲಿಗೆ" ಕೋಟಿಜಂಗಮುಳ ನೆರವಿರ ಮರುಳಸಿದ್ಧಯ್ಯ" ಇವೇ ಮುಂತಾದ ನುಡಿಗಳು ಇವರು ಹಾಡಿದ ಶೋಬಾನೆಯ ಪದಗಳಲ್ಲಿ ಪಲ್ಲವಿಗಳಾಗಿದ್ದವು.) ಈ ಊರಿನವರು ಮರುಳಚಾರಿತ್ರ್ಯ ಎಂಬ ನಾಟಕವನ್ನು ಅಭಿನಯಿಸಿರುತ್ತಾರೆ.

## ತೂಲಳ್ಳಿಯಲ್ಲಿ ಇರುವ ಇತರ ಸ್ಮಾರಕಗಳು.

ಈ ಊರಿನ ಈಶಾನ್ಯದಲ್ಲಿ ಜಟ್ಟಿಗನ ದೇವಸ್ಥಾನವಿದೆ. ದಕ್ಷಿಣಕ್ಕೆ "ಪಾದಯ್ಯ"ಇದೆ. ಇದರ ೯ ಪಾದಗಳಿವೆ.

## ಉಗ್ಗಗಟ್ಟೆ.

ಈ ಊರು ಜಗಳೂರು ತಾಲ್ಲೂಕಿನ ಬಿಳಿಚೂಡು ಓಬಳಿಗೆ ಸೇರಿದೆ. ಈ ಸ್ಥಳದಲ್ಲಿ ಮರುಳಸಿದ್ಧನು ಕರುಗಳನ್ನು ಕಾಯುವವರಿಗ ಉರಲುಹಾಕಿದ್ದರಿಂದ ಈ ಊರಿಗೆ ಈ ಹೆಸರು ಬಂದಿತೆಂದ ಐತಿಹ್ಯವಿದೆ. ಈ ಊರಿನ ಬಾಗಿಲಲ್ಲಿ ೬ ಶಾಸನಗಳಿವೆ. ಇವು ಬಹಳವಾಗಿ ಜೀರ್ಣವಾಗಿವೆ.

## ಮರುಳಸಿದ್ಧೇಶ್ವರನ ಗುಡಿ.

ಈ ಗುಡಿಯು ಬಹು ಚಿಕ್ಕದು. ಮತ್ತು ಬಹಳವಾಗಿ ಜೀರ್ಣವಾಗಿದೆ. ಈ ಗುಡಿಯಲ್ಲಿ ಪ್ರತಿವರ್ಷವೂ ಶ್ರಾವಣ ಮಾಸದಲ್ಲಿ ಗಣಾರಾಧನೆ ನಡೆಯುತ್ತದೆ. ಭಾರತದ ಹುಣ್ಣಿಮೆಯಲ್ಲಿ ಉರುಳಿಯನ್ನು ಹಂಚುತ್ತಾರೆ. ಹಿಟ್ಟಿ ಹುಣ್ಣಿಮೆಯಲ್ಲಿ ಎಂದರೆ ಕಡೇಕಾರ್ತಿಕದಲ್ಲಿ ನವಣೆಯ

ಹಿಟ್ಟನ್ನು ದೇವರಿಗೆ ನೈವೇದ್ಯ ಮಾಡುತ್ತಾರೆ. "ಸಿದ್ದಪ್ಪನಂತ ದೇವರಿಲ್ಲ— ಮುದ್ದೆಯಂತ ಊಟವಿಲ್ಲ ಎಂಬುದೊಂದು ಗಾದೆ ಈ ಪ್ರಾಂತದ ಜನರಲ್ಲಿ ಬಳಕೆಯಲ್ಲಿದೆ.

### ಉರ್ಲಗಟ್ಟೆಯಲ್ಲಿರುವ ಇತರ ಸ್ಮಾರಕಗಳು.

ಈ ಊರಿನ ಬುಡದಲ್ಲಿರುವ ಗುಡ್ಡದಮೇಲೆ ಬಸವಣ್ಣ ದೇವರಿದೆ, ಇದೇ ಗುಡ್ಡದ ತಪ್ಪಲಿನಲ್ಲಿ ಮತ್ತೊಂದು ಬಸವಣ್ಣನ ದೇವರಿದೆ.

### ಉಜ್ಜಪ್ಪ ವಡೇರಹಳ್ಳಿ.

ಈ ಊರು ಜಗಳೂರು ತಾಲೂಕಿನ ಸೊಕ್ಕೆ ಓಬಳಿಗೆ ಸೇರಿದೆ. ಈ ಊರನ್ನು ಉಜ್ಜಪ್ಪ ಒಡೆಯನೆಂಬುವನೊಬ್ಬನು ಮೊದಲು ಕಟ್ಟಿದನೆಂದೂ, ಆಮೇಲೆ ಈ ಊರು ಎರಡು ಸ್ಥಳಗಳಿಗೆ ಸಾಗಿತೆಂದೂ, ಕ್ರಿ. ಶ. ೧೬೦೦ ರಿಂದಲೂ ಈ ಹೆಸರು ಚಿತ್ರದುರ್ಗ ಡಿಸ್ಟ್ರಿಕ್ಟು ಆಫೀಸ ಬಾಂಬಲೂತಿ ದಾಕಲೆಗಳಲ್ಲಿ ಸಿಕ್ಕುದೊಂದು ಊರಿನ ಹಿರಿಯರು ಹೇಳುತ್ತಾರೆ. ಈ ಊರಿನಲ್ಲಿ ೬೦ಕ್ಕೆ ಮೇಲ್ಪಟ್ಟ ಲಿಂಗಮುದ್ರೆ ಕಲ್ಲುಗಳು ಇವೆಎಂದೂ ಸಹ ಅವರು ಹೇಳುತ್ತಾರೆ. ಈ ಊರಿನ ಪಟೇಲರು ತರಳಬಾಳು ವಂಶದವರಾಗಿರುತ್ತಾರೆ. ಈ ಊರಿನಲ್ಲಿ ಬಸವೇಶ್ವರನ ದೇವಸ್ಥಾನವಿದೆ. ಆ ಊರಿಗೆ ಸುಮಾರು ಒಂದು ಮೈಲಿನ ದೂರದಲ್ಲಿ ವರನೇವನಹಳ್ಳಿ ಎಂಬ ಬೇಚಿರಾಕು ಗ್ರಾಮದಲ್ಲಿ ಮರುಳಸಿದ್ದೇಶ್ವರನ ಗುಡಿ ಇದೆ. ಮಾಘಶುದ್ಧ ಪೌರ್ಣಮಿಯಲ್ಲಿ ಗುಗ್ಗರಿ ಹಬ್ಬವು ಆಚರಿಸಲ್ಪಟ್ಟಿರುವುದು ಈ ಹಬ್ಬದಲ್ಲಿ ದೇವರಿಗೆ ಉರುಳಿಪೂರ್ಣವನ್ನು ನೈವೇದ್ಯ ಮಾಡುವುದು, ದೇವರಿಗೆ ಮೊಸರು ಮುದ್ದೆ ಉಳ್ಳಿಗಡ್ಡೆ– ಇವುಗಳನ್ನು ಎಡೆಮಾಡಿದರೆ ಮಳೆ ಬರುವದೆಂಬ ನಂಬುಗೆ ಜನರಲ್ಲಿದೆ. ಈ ಊರನ್ನು ಮೊದಲು ಕಟ್ಟಿ ಸ್ಥಳದಲ್ಲಿ ೫–೬ ಅಡಿ ಎತ್ತರ ಒಂದು ಶಾಸನವಿದೆ. ಹತ್ತಿರದಲ್ಲಿ ಒಂದು ಹಳ್ಳವಿದೆ. ಈ ಹಳ್ಳವು ಹಿಂದೆ ದೊಡ್ಡ ಕಲ್ಯಾಣಿ ಯಾಗಿತ್ತೆಂದೂ ಜನರು ಹೇಳುತ್ತಾರೆ. ಈ ಊರನ್ನು ಎರಡನೆಯ ಸಲ ಕಟ್ಟಿದ ಸ್ಥಳದಲ್ಲಿ ಸಣ್ಣ ಕೋಟೆ ಇದೆ. ಲಿಂಗಮುದ್ರೆಯ ಕಲ್ಲುಗಳು ಬಹಳವಾಗಿವೆ. ಹನುಮಂತನ ಗುಡಿಯು ಇನ್ನೊಂದು ಹಾಳು ಗುಡಿಯೂ ಇದೆ. ಈ ಹಾಳುಗುಡಿ ಮೊದಲು ಬಸವಣ್ಣನ ಗುಡಿಯಾಗಿತ್ತೆಂದೂ ತಿಳಿದು ಬರುತ್ತದೆ. ಈ ಎಲ್ಲಾ ಸ್ಮಾರಕಗಳು ಸುಮಾರು ಒಂದು ಫರ್ಲಾಂಗಿನ ವಾಸಲೆಯ ಒಳಗೆಯೇ ಇವೆ.

## ಪಲ್ಲಾ ಗಟ್ಟೆ

ಈ ಊರು ಜಗಳೂರು ತಾಲ್ಲೂಕಿನ ಬಳಿಜೋಡು ಹೋಬಳಿಗೆ ಸೇರಿದೆ. ಮರುಳಸಿದ್ಧನು ಈ ಊರಿನಲ್ಲಿ ಪಲ್ಲವನ್ನು ಅಟ್ಟುದ್ದರಿಂದ ಊರಿಗೆ ಈ ಹೆಸರು ಬಂತೆಂದು ಐತಿಹ್ಯವಿದೆ. ಈ ಊರಿನಲ್ಲಿ ಒಂದು ಮಹಸತಿಯ ಮುಕ್ತವನ ಕಲ್ಲು ಒಂದು ಯೋಗಿಯ ಚಿತ್ರವಿರುವ ಕಲ್ಲು ಇವೆ. ಈ ಊರಿನ ಹತ್ತಿರ ಸೊಕ್ಕೆಗೆ ಹೋಗುವದಾರಿಯಲ್ಲಿ ಒಂದು ಶಾಸನವು ಸ್ವಲ್ಪ ದೂರದಲ್ಲಿ ಇನ್ನೂ ೨ ಶಾಸನಗಳು ಇವೆ. ಮರಳಸಿದ್ಧನು ಪಲ್ಲವನ್ನು ಅಟ್ಟ ಒಲೆಯ ಗುಂಡುಗಳೆಂದೂ ಹೇಳುವ ೨ ಕಲ್ಲು ಗುಂಡುಗಳು ಈಗಲೂ ಒಂದಿಲ್ಲ ಕಲ್ಲು ಜೋಪಡಿಯಲ್ಲಿ ಪೂರ್ವ ಮುಖವಾಗಿಯೇ ಈ ಜೋಪಡಿಯ ಬಾಗಿಲಲ್ಲಿ ಒಳಗಡೆ ಒಂದುಲಿಂಗ ಮುದ್ರೆ ಕಲ್ಲೂ ಇದೆ. ಅದರಹಿಂದೆ ಶಿದ್ಧೇಶ್ವರ ಎಂದು ಹೇಳುವದೊಂದು ಕಲ್ಲು ಇದೆ. ಜೋಪಡಿ ಎದುರಾಗಿ ಪಶ್ಚಿಮ ಮುಖ ವಾಗಿ ಸಿದ್ಧೇಶ್ವರನ ಚಿಕ್ಕದೊಂದು ದೇವಸ್ಥಾನವಿದೆ. ಈ ದೇವಸ್ಥಾನದ ಪಕ್ಕದಲ್ಲಿ ಚನ್ನಬಸಪ್ಪ ದೇವರ ಮಠವು ಇದೆ.

## ಮುಸಣಿ ಕೆಟ್ಟೆ

ಈ ಗ್ರಾಮವು ಸಹ ಬಳಿಜೋಡು ಓಬಳಿಗೆ ಸೇರಿದೆ. ಈ ಗ್ರಾಮವು ಈಗ ಬೇಚರಾಕಾಗಿದೆ. ಈ ಗ್ರಾಮದಲ್ಲಿ ಲಿಂಗ ಮುದ್ರೆ ಕಲ್ಲುಗಳು ಬಹಳ ವಾಗಿವೆ. ಒಂದು ಚಚ್ಚೌಕದ ಮೇಲೆ ನಾಲ್ಕು ತ್ರಿಶೂಲಗಳು ಗುರುತನ್ನು ವುಳ್ಳ ಸಂಬಂಧಪಟ್ಟುದೆಂದೂ ಜನರು ಹೇಳುತ್ತಾರೆ. ಮನೆಗಳ ಅವಶೇಶ ಗಳೂ ಕಾಣುತ್ತವೆ. ಒಂದುಕಡೆ ಎತ್ತರದಾದ ಸ್ಥಳದಲ್ಲಿ ಕಲ್ಲಿನ ಹತ್ತಿರವು ಕಾಣುತ್ತದೆ. ಇಲ್ಲಿ ಹಿಂದೆ ದೇವಸ್ಥಾನವಿತ್ತೆಂದು ಜನರು ಹೇಳುತ್ತಾರೆ.

ಈ ಊರಿನ ಪೂರ್ವಕಡೆ ಬಹಳ ಜೀರ್ಣವಾದ ಒಂದು ಕಲ್ಲಿನ ಜೋಪಡಿ ಇದೆ. ಇದರಲ್ಲಿ ಬಸವಣ್ಣಗಳನ್ನೂ ಸುಮಾರು ೨೦ ವರ್ಷಗಳ ಹಿಂದೆ ತುಪ್ಪದ ಹಳ್ಳಿಯವರು ತೆಗೆದುಕೊಂಡು ಹೋದರೆಂದು ಜನರು ಹೇಳುತ್ತಾರೆ. ಮರುಳಸಿದ್ಧನು ಈ ಊರಿಗೆ ಬಂದು ಮಾದಪ್ಪ (ಮಾರಪ್ಪ) ಎಂಬ ರೈತನ ಮನೆಗೆ ಹೋಗಿ ಭಿಕ್ಷೆಯನ್ನು ಕೇಳಿದನೆಂದೂ ರೈತನು ಎಳ್ಳು ಕಾಳಿನ ಬಿಕ್ಷಯನ್ನು ನೀಡಲು, ಮರುಳಸಿದ್ಧನು ಅದನ್ನು ಒಲ್ಲದೆ ಬಡಿದ

ಎಳ್ಳು ಕಡ್ಡಿಯನ್ನು ಮಾತ್ರವೇ ಸ್ವೀಕರಿಸಿ ಅದನ್ನು ಮತ್ತೆ ಬಡಿದು ಮೂಗಂಡುಗ ಎಳ್ಳನ್ನು ಮಾಡಿದನೆಂದೂ, ಈ ರೀತಿ ಮಾಡಿದ ಎಳ್ಳನ್ನು ಕಗ್ಗಲ್ಲಗೌಡನಿಗೆ ಕೊಟ್ಟು ರೈತನ ರುಣವನ್ನು ಪರಿಹರಿಸಿದನೆಂದೂ ಐತಿಹ್ಯವಿದೆ.

## ಅಸುಗೋಡು

ಈ ಊರು ಸಹ ಬಿಳಿಜೋಡು ಹೋಬಳಿಗೆ ಸೇರಿದೆ. ಈ ಊರಿನಲ್ಲಿ ಶಂಭುಲಿಂಗ ದೇವಸ್ಥಾನವಿದೆ. ಈ ದೇವಸ್ಥಾನಕ್ಕೆ ಶಂಭುಶಿದ್ಧೇಶ್ವರನ ದೇವಸ್ಥಾನ ಎಂಬು ಹೆಸರೂ ಉಂಟು. ಲಿಂಗವು ಉದ್ಭವ ಮೂರ್ತಿಯಾಗಿದೆ. ಲಿಂಗದ ಮುಖವು ಪಶ್ಚಿಮಕ್ಕೆ ಇದೇ ಪಾಣಿ ಪೀಠವು ಎಡಕ್ಕೆ ಎಂದರೆ ಉತ್ತರಕ್ಕೆ ಇದೆ. ಹಿಂದೊಮ್ಮೆ ಬೀಡಿಕೆಯುವರು ಎತ್ತುಗಳ ಮೇಲೆ ಮಾಲನ್ನು ಹೇರಿಕೊಂಡು ಬಂದು ಈ ಊರಿನಲ್ಲಿ ತಂಗಿ ಈ ಉದ್ಭವ ಮೂರ್ತಿಯನ್ನೇ ಒಲೆಯ ಗುಂಡಾಗಿ ಮಾಡಿಕೊಂಡು ಅಡಿಗೆಯನ್ನು ಮಾಡಿದರೆಂದೂ ಇದರಿಂದ ಅವರ ಎತ್ತುಗಳ ಕೊಂಬುಗಳು ಉದುರಿ ಹೋದವೆಂದೂ ಆ ಮೇಲೆ ಬೀಡಿಕೆಯುವರು ತಮ್ಮ ತಪ್ಪನ್ನು ತಿಳಿದುಕೊಂಡು ಆ ಶಂಭುಲಿಂಗ ಮೂರ್ತಿಯನ್ನು ಪೂಜಿಸಲು, ಎತ್ತುಗಳಿಗೆ ಹೋದ ಕೋಡುಗಳು ಬಂದುವೆಂದು ಈ ಕಾರಣದಿಂದಲೇ ಈ ಊರಿಗೆ "ಹೊಸಕೋಡು" ಎಂಬ ಹೆಸರು ಬಂದಿತೆಂದೂ ಕಾಲ ಕ್ರಮದಲ್ಲಿ "ಹೊಸಗೋಡು" ಹೋಗಿ ಹಸಗೋಡು ಎಂದಾಗಿತ್ತೆಂದೂ ಐತಿಹ್ಯವಿದೆ. ಈ ಶಂಭು ಲಿಂಗಕ್ಕೆ ಇದರಾಗಿ ಮತ್ತೊಂದು ಲಿಂಗವೂ ಆದರ ಮುಂದೆ ಬಸವಣ್ಣವು ಇವೆ. ಈ ಲಿಂಗದ ಮುಖವು ಪೂರ್ವಕ್ಕೆ ಇದೆ. ಇದರ ಪಾಣೀಪೀಠ ಬಲಕ್ಕೆ ಎಂದರೆ ಉತ್ತರಕ್ಕೆ ಇದೆ. ಮೊದಲು ವೈಶ್ಯರ ದೇವರಿತ್ತೆಂದೂ ಕೆಲವರು ಹೇಳುತ್ತಾರೆ. ಈ ಎರಡು ಲಿಂಗಗಳ ಮಧ್ಯ ಒಂದು ಬಾವಿ ಇತ್ತೆಂದೂ ಅದು ಆಗ ಮುಚ್ಚಲ್ಪಟ್ಟಿದೆ ಎಂದೂ ಸಹ ತಿಳಿದು ಬರುತ್ತದೆ. ಈ ಸ್ಥಳವನ್ನು ಕಾಲಿನಿಂದ ಗುದ್ದಿದರೆ ಒಳಗೆ ಪೊಳ್ಳಾಗಿರುವಂತೆ ಒಂದು ವಿಧವಾದ ಶಬ್ದವೂ ಈಗಲೂ ಕೇಳಿಸುತ್ತದೆ.

ಈ ಎರಡು ಲಿಂಗಗಳಲ್ಲಿ ಮೊದಲನೆಯ ಲಿಂಗದ ಗುಡಿಯು ಮೊದಲು ಕಟ್ಟಿದುದಾಗಿಯೂ ಎರಡನೆಯ ಲಿಂಗದ ಗುಡಿಯು ಆಮೇಲೆ ಕಟ್ಟಿದುದಾಗಿಯೂ ಕಟ್ಟಿದ ವಿಧಾನದಿಂದ ಗೋಚರವಾಗುತ್ತದೆ. "ಅಸಗೋಡಿವಂತ ಊರಿಲ್ಲ ಶಂಭುಲಿಂಗನಂಥ ದೇವರಿಲ್ಲ" ಬಿಸಿಲಿಲ್ಲದಂತ ಬಾವಿಯಿಲ್ಲ ಹೆಸರಿಲ್ಲ

ದಂತ ವರವಿಲ್ಲ” ಎಂಬ ಗಾದೆ ಜನರ ಬಾಯಲ್ಲಿದೆ. “ಹೆಸರಿಲ್ಲದಂತ ಮಠ” ಯಾವುದೆಂಬುದು ತಿಳಿಯದಂತಾಗಿದೆ. ದೇವಸ್ಥಾನದ ಒಳಗಡೆ ದಕ್ಷಿಣದ ಕಡೆಗೆಯ ಗೋಡೆಯಲ್ಲಿ ಇಬ್ಬರು ಯೋಧರು ಕತ್ತಿಗಳನ್ನು ಹಿಡಿದಿರುವ ಮತ್ತು ಎಡಬಲಗಳಲ್ಲಿ ಇಬ್ಬರು ಹೆಂಗಸರು ನಿಂತಿರುವ ಒಂದು ಶಿಲಾ ಚಿತ್ರ ಸಿಕ್ಕಲ್ಪಟ್ಟಿದೆ. ಇದರ ಪಕ್ಕದಲ್ಲಿ ವಿನಾಯಕನ ವಿಗ್ರಹವೂ ಗೋಡೆಗೆ ಸಿಕ್ಕಲ್ಪಟ್ಟಿದೆ. ದೇವಸ್ಥಾನದ ಹೊರಗಿನ ಆವರಣದಲ್ಲಿ ಶಿಲಾಶಾಸನಗಳು ಇವೆ. ಚೈತ್ರ ಬಹುಳ ತದಿಗೆಯ ದಿವಸ ಜಾತ್ರೆ ನಡೆಯುತ್ತದೆ. ಮಾಘ ಶುದ್ಧ ದಲ್ಲಿ ಭಾರತ ಹುಣ್ಣಿಮೆ ಹಬ್ಬವನ್ನು ಆಚರಿಸಲಾಗದು. ಈ ಹಬ್ಬದಲ್ಲಿ ದೇವರಿಗೆ ಹುರುಳಿಯ ಹೂರ್ಣವನ್ನು ಎಡೆಮಾಡಲಾಗುವುದು. ಕಾರ್ತಿಕ ದಲ್ಲಿ ಒಂದು ತಿಂಗಳವರೆಗೆ ದೀಪೋತ್ಸವವು ನಡೆಯುತ್ತದೆ.

## ಮುಚ್ಚಿನೂರು

ಈ ಊರು ಸಹ ಬಿಳಿಚೋಡು ಹೋಬಳಿಗೆ ಸೇರಿದೆ. ಹಿಂದೊಮ್ಮೆ ಆನೆಗೊಂದಿಯ ರಾಜನು (ಕೆಲವರು ಬಿಜ್ಜಳ ರಾಜನೆಂದೂ ಹೇಳುವುದುಂಟು) ಸೇನೆಯೊಂದಿಗೆ ಆನೆಕೊಂಡಕ್ಕೆ ಬಂದಿದ್ದಾಗ ಅವನ ಬಳಿಯಲ್ಲಿದ್ದ ಬಿಳಿ ಆನೆಯೊಂದನ್ನು ಮರುಳಸಿದ್ಧ ಈ ಊರಿನಲ್ಲಿ ಮುಚ್ಚಿಕೊಂಡನೆಂದೂ, ಇದ ರಿಂದ ಈ ಊರಿಗೆ ಈ ಹೆಸರುಬಂದಿತೆಂದು ಐತಿಹ್ಯವಿದೆ.

## ಮರುಳಸಿದ್ಧನ ದೇವಸ್ಥಾನ.

ಈ ದೇವಸ್ಥಾನವು ಊರಿಗೆ ಸುಮಾರು ೨ ಫರ್ಲಾಂಗುಗಳ ದೂರದ ಲ್ಲಿದೆ. ಗಣಪತಿ, ಚಾಮುಂಡೇಶ್ವರಿ, ತ್ರಿಶೂಲ, ಹಾವುಗಳು ಸಹ ಇವೆ. ಅಲ್ಲದೆ ಎಡಭಾಗದಲ್ಲಿ ನಾಲ್ಕು ಮೂಲೆಯ ಶಿಲಾ ಕಂಭ ಒಂದು ನೆಡ ಲ್ಪಟ್ಟಿದೆ. ಈ ಕಂಭದ ಉತ್ತರ ಮತ್ತು ಪೂರ್ವಮುಖಗಳಲ್ಲಿ ಅಕ್ಷರಗಳು ಕೆತ್ತಿವೆ. ಪಶ್ಚಿಮ ಮುಖದಲ್ಲಿ ಹಸುಕರುಗಳ ಚಿತ್ರವು ಕೆಳಗಡೆ ಕೆಲವು ಸಾಂಕೇತಕರೇ ರೇಖಾಚಿತ್ರಗಳು ಕೆತ್ತಿವೆ. ದಕ್ಷಿಣ ಮುಖದಲ್ಲಿ ಆನೆ ಚಿತ್ರವು ಕೆಳಗಡೆ ಅಕ್ಷಗಳೂ ಕೆತ್ತಿವೆ. ದೇವಸ್ಥಾನದ ಪೌಳಿಯಲ್ಲಿ ಪೂರ್ವಕಡೆ ದೇವಸ್ಥಾನಕ್ಕೆ ಎದುರಾಗಿ ಒಬ್ಬರ ಹೆಗಲಮೇಲೊಬ್ಬರು ಕೈಗಳನ್ನು ಹಾಕಿ ಕೊಂಡು ನಿಂತಿರುವ ಇಬ್ಬರು ಆಗಸರ ಚಿತ್ರವೂ, ಮೇಲ್ಗಡೆಯ ಲಿಂಗ ವನ್ನು ಪೂಜೆ ಮಾಡುತ್ತ ನಿಂತಿರುವ ಮತ್ತು ಕುಳಿತಿರುವ ಇಬ್ಬರು ವ್ಯಕ್ತಿ

ಗಳ ಚಿತ್ರವೂ, ಇದರಮೇಲೆ ಅಕ್ಷರಗಳವೂ ಇವುಗಳ ಮೇಲೆ ಲಿಂಗ ಚಂದ್ರ ಸೂರ್ಯ ಇವುಗಳು ಕೆತ್ತಿರುವ ಒಂದು ಕಲ್ಲು ನೆಟ್ಟಿ ಚೈತ್ರದಲ್ಲಿ ಜಾತ್ರೆ ನಡೆಯುತ್ತದೆ. ಮಾಘದಲ್ಲಿ ಕಾಳಿನ ಹುಣ್ಣಿಮೆ ನಡೆಯುತ್ತದೆ ಕಾರ್ತಿಕ ದಲ್ಲಿ ದೀಪೋತ್ಸವವು ನಡೆಯುತ್ತದೆ. ಕಡೇ ಕಾರ್ತಿಕದಲ್ಲಿ ಹಿಟ್ಟಿನ ಹಬ್ಬ ವನ್ನು ಮಾಡಿ ಹೊಸ ನವಣೆ ಅಕ್ಕಿಯಿಂದ ಮಾಡಿದ ತಂಬಿಟ್ಟನ್ನು ದೇವ ರಿಗೆ ನೈವೇದ್ಯವನ್ನು ಮಾಡಲಾಗುವುದು.

## ಮುಷ್ಟು ನೂರಿನಲ್ಲಿ ಇರುವ ಸ್ಮಾರಕಗಳು.

ಮರುಳಸಿದ್ಧನ ದೇವಸ್ಥಾನಕ್ಕೆ ಉತ್ತರದಲ್ಲಿರುವ ಜಮೀನಿನಲ್ಲಿ ಕೆಲವು ಲಿಂಗಮುದ್ರೆಕಲ್ಲುಗಳು ಇವೆ. ಮರುಳಸಿದ್ಧನ ದೇವಸ್ಥಾನದ ಹಿಂದುಗಡೆ ಜಟ್ಟಿಗಪ್ಪನ ಗುಡಿ ಇದೆ. ಈ ಗುಡಿಯಲ್ಲಿ ಮುಕ್ಕಾದ ನಾಲ್ಕು ಪ್ರತಿಮೆ ಗಳು ಇವೆ. ಈ ಜಟ್ಟಿಗಪ್ಪನ ಗುಡಿಗೂ ಮರುಳಸಿದ್ಧನ ದೇವಸ್ಥಾನಕ್ಕೂ ಮಧ್ಯೆ ಒಂದು ಲಿಂಗಮುದ್ರೆ ಕಲ್ಲು ಇದೆ.

## ಕುರಡಿ.

ಈ ಊರು ದಾವಣಗೆರೆ ತಾಲೂಕಿನ ಆನಗೋಡು ಓಬಳಿಗೆ ಸೇರಿದೆ. ಈ ಊರಿನ ದನ ಕಾಯುವರೆಲ್ಲ ಜಾತಿಯ ಹುಡುಗರೂ ತರುತ್ತಿದ್ದ ಬುತ್ತಿ ಯನ್ನು ಮರುಳಸಿದ್ಧನು ಕೂಡಿಸಿ, ಪಾದದಿಂದ ತುಳಿದು, ಏಕಮಾಡಿ, ಒಬ್ಬ ರಿಗೆ ಒಂದೊಂದು ಮುಟ್ಟಿಗೆಯಂತೆ ಆ ಹುಡುಗರಿಗೆ ಹಂಚಿಕೊಟ್ಟು ತಾನೂ ಊಟ ಮಾಡುತ್ತಿದ್ದನೆಂದೂ ಇದು ಆ ಹುಡುಗರಿಗೆ ಬಹಳ ರುಚಿಯಾಗಿ ಇರುತ್ತಿದ್ದುತೆಂದೂ, ಇದನ್ನು ಕಂಡು ಊರಿನ ಬ್ರಾಹ್ಮಣರು ಕುಲ ಹದಿ ನೆಂಟ ಮರುಳಸಿದ್ಧನ ಮೇಲೆ ಕುಪಿತರಾಗಿ, ಮರುಳುಸಿದ್ಧನನ್ನು ಒಂದು ಹಗೆಯಲ್ಲಿ ಹಾಕಿ, ಸುಣ್ಣವನ್ನು ತುಂಬಿ ನೀರನ್ನು ಹೊಯ್ದಿದ್ದರೆಂದೂ, ಆಗ ಮರುಳ ಸಿದ್ದನ ಪವಾಡವನ್ನು ನಡೆಯಿಸಲು ಆ ಹಗೆವಿನಲ್ಲಿಯೇ ಲಿಂಗವು ಉದ್ಧರಿಸಿತೆಂದೂ, ಈ ಲಿಂಗಕ್ಕೆ ಹಗೇವು ಸಿದ್ಧೇಶ್ವರನೆಂಬ ಹೆಸರು ಬಂದಿ ತೆಂದೂ, ಮರುಳಸಿದ್ಧನು ಈ ರೀತಿ ಈ ಊರಿನಲ್ಲಿ ಕುಲಹದಿನೆಂಟು ಜಾತಿಯ ಹುಡುಗರೊಂದಿಗೆ ಕೂಡಿ ಉಂಡುದದರಿಂದ ಈ ಊರಿಗೆ ಕೂಡುಂಡಿ ಎಂದು ಹೆಸರಾಗಿತ್ತೆಂದೂ, ಕಾಲಕ್ರಮದಲ್ಲಿ ಕೂಡುಂಡಿಯು ಕುರುಡಿಯಾಯಿತೆಂದು ಐತಿಹ್ಯವಿದೆ.

## ಹಗೇವು ಸಿದ್ಧೇಶ್ವರನ ದೇವಸ್ಥಾನ

ಈ ದೇವಸ್ಥಾನವು ಪೂರ್ವವಾಗಿದೆ. ಇದಕ್ಕೆ ಮೂರು ಅಂತಸ್ತುಗಳಿವೆ. ಮೊದಲನೆಯ ಅಂತಸ್ತು ನೆಲದ ಮಟ್ಟಕ್ಕೆ ಮೇಲೆ ಇದೆ. ಎರಡನೆಯ ಅಂತಸ್ತು ನೆಲದ ಮಟ್ಟಕ್ಕೆ ಸುಮಾರು ೩ ಅಡಿಗಳಷ್ಟು ಕೆಳಗೆ ಇವೆ. ಮೂರನೆಯ ಅಂತಸ್ತು ಎರಡನೆಯ ಅಂತಸ್ತಿಗೆ ಸುಮಾರು ೬ ಅಡಿಗಳಷ್ಟು ಕೆಳಗೆ ಇದೆ. ಮೊದಲನೆ ಅಂತಸ್ತಿನಲ್ಲಿ ಉತ್ತರಕ್ಕೆ ಚೌಡಾಂಬಿಕೆ, ಗಣಪತಿ ಮತ್ತು ಇನ್ನು ಕೆಲವು ವಿಗ್ರಹಗಳಿವೆ. ಎರಡನೆಯ ಅಂತಸ್ತಿನಲ್ಲಿ ಗರ್ಭಗುಡಿಯ ಬಾಗಿಲಬಳಿ ಉತ್ತರದ ಗೋಡೆಯಲ್ಲಿ ಬೈರೇ ಸಿದ್ಧನ ಪ್ರತಿಮೆಯೊಂದು ಸಿಕ್ಕಿಸಲ್ಪಟ್ಟಿದೆ. ಮೂರನೆಯ ಅಂತಸ್ತೇ ಗರ್ಭಗುಡಿಯದೇ ಹಗೆವು. ಇದು ಮೇಲೆ ಹೇಳಿದಂತೆ ಮೊದಲನೆಯ ಮತ್ತು ಎರಡನೆಯ ಅಂತಸ್ತುಗಳಿಗಿಂತ ಬಹಳ ತಗ್ಗಾಗಿದೆ. ಗರ್ಭಗುಡಿಯೊಳಕ್ಕೆ ಹೋಗಬೇಕಾದರೆ ಮೈ ತಗ್ಗಿಸಿ ಇಳಿಯ ಬೇಕಾಗುತ್ತದೆ. ಲಿಂಗದ ಪಾಣೀ ಪೀಟವು ಬಲಕ್ಕೆ ಇದೆ. ಲಿಂಗ ಬಸವಣ್ಣಗಳ ಪಕ್ಕದಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವ ನಾಲ್ಕು ಕೈಗಳ ವಿಗ್ರಹವೂ ವಿನಾಯಕ ನಾಗರ ಕಲ್ಲುಗಳೂ ಇವೆ. ಈ ದೇವಸ್ಥಾನದ ಹೊರಗಡೆ ಒಂದು ಬಿಲ್ಲು ಪತ್ರೆಯ ಮರವಿದೆ. ಈ ಮರದ ಕೆಳಗೆ ಬ್ರಹ್ಮದೇವರಿದೆ. ಇದರ ಹಿಂದೆ ಹಗೇವು ಸಿದ್ಧೇಶ್ವರನ ದೇವಾಸ್ಥಾನದ ಗೋಡೆಯ ಹತ್ತಿರ ಒಂದು ಶಿಲೆಯಿದೆ. ಇದಕ್ಕೂ ಪೂಜೆ ನಡೆಯುತ್ತದೆ. ಇದು ಯಾವ ದೇವರೆಂಬುದು ತಿಳಿಯದಾಗಿದೆ. ಹಗೇವು ಸಿದ್ಧೇಶ್ವರನ ದೇವಸ್ಥಾನದ ಪಕ್ಕದಲ್ಲಿ ಉತ್ತರ ಭಾಗದಲ್ಲಿ ರೇವಣಸಿದ್ಧೇಶ್ವರನ ಗುಡಿಯಿದೆ. ಈ ಗುಡಿಯಲ್ಲಿ ಲಿಂಗ ಬಸವಣ್ಣಗಳು ಇವೆ. ಲಿಂಗ ಪಾಣಿಪೀಟವು ತಗ್ಗಾಗಿ ನೆಲದ ಮಟ್ಟದಲ್ಲಿ ಇದೆ. ಈ ಗುಡಿಯ ಹತ್ತಿರದಲ್ಲಿ ಒಂದು ಆಲದ ಮರವಿದೆ. ಹಗೇವು ಸಿದ್ಧೇಶ್ವರನ ದೇವಸ್ಥಾನದ ಮುಂದೆ ಪೊರಗಡೆಯಲ್ಲಿ ಲಿಂಗ ಬಸವಣ್ಣಪಾದ ಇವು ಇವೆ. ಪೂರ್ವಕಡೆ ಒಂದು ಚಿಕ್ಕ ಗೂಡಿನಲ್ಲಿ ಜಟ್ಟಿಗಪ್ಪ ದೇವರಿದೆ. ಪೂಜಿಗೆ ಬರುವ ಭಕ್ತರು ಮೊದಲು ಈ ಜಟ್ಟಿಗಪ್ಪನಿಗೆ ಪೂಜೆಯನ್ನು ಸಲ್ಲಿಸಿ, ಆಮೇಲೆ ಹಗೇವು ಸಿದ್ಧೇಶ್ವರ ಮತ್ತು ರೇವಣಸಿದ್ಧೇಶ್ವರ ಇವರುಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಚೈತ್ರಶುದ್ಧ ದಶಮಿಯಲ್ಲಿ ತೇರಾಗುತ್ತದೆ. ಮಾಘಶುದ್ಧ ಪೌರ್ಣಮಿಯಲ್ಲಿ ಕಾಳುಹುಣ್ಣುಮಿ ಹಬ್ಬವನ್ನು ಆಚರಿಸಲಾಗುತ್ತದೆ. ಈ ಕಾಳು ಹುಣ್ಣಿಮಿಯಲ್ಲಿ ಹುರುಳಿ ಕಾಳನ್ನು ದೇವಸ್ಥಾನ

ದಲ್ಲಿಯೇ ಬೇಯಿಸಿ ದೇವರಿಗೆ ನೈವೇದ್ಯ ಮಾಡಲಾಗುವುವು. ಕಾರ್ತಿಕ ದಲ್ಲಿ ದೀಪೋತ್ಸವವು ಕದಳೀ ಅಲಂಕಾರವೂ ನಡೆಯುತ್ತದೆ. ಕಡೇ ಕಾರ್ತಿಕದಲ್ಲಿ ಹೊಸ ನವಣೆಯಿಂದ ತಂಬಿಟ್ಟನ್ನು ಮಾಡಿ ದೇವರಿಗೆ ನೈವೇದ್ಯ ಮಾಡಲಾಗುವುದು. ಈ ಹಬ್ಬಕ್ಕೆ ಉಂಡೇ ಹುಣ್ಣುಮಿ ಅಥವಾ ಹಿಟ್ಟಿನ ಹುಣ್ಣುಮಿ ಎಂಬ ಹೆಸರುಗಳು ಉಂಟು.

## ಕುರುಡಿಯಲ್ಲಿರುವ ಇತರ ಸ್ಮಾರಕಗಳು

ಈ ಊರಿನ ಶ್ರೀ ಉಜ್ಜಪಳ್ಳಿ ರೇವಪ್ಪನವರ ಕಣದಲ್ಲಿ ಕೆಲವು ಶಿಲಾ ಸ್ಮಾರಕಗಳು ಇರುತ್ತವೆ. ಅವುಗಳ ವಿವರವು ಈ ಮುಂದೆ ಕಂಡಂತೆ ಇರುತ್ತದೆ:-ಸೇಬರ ಇದು ಒಂದು ಸುಂದರವಾದ ಕಲ್ಲಿನ ಚೌಕಟ್ಟು. ಈ ಚೌಕಟ್ಟಿನ ನೆತ್ತಿಯಲ್ಲಿ ರಮ್ಯವಾದ ತ್ರಿಶೂಲವಿದೆ. ಇದರ ಕೆಳಭಾಗದ ಒಂದು ಕಲ್ಲಿನ ಮೇಲೆ ಒಂದು ಪಕ್ಕದಲ್ಲಿ ಲಿಂಗ ಬಸವಣ್ಣಗಳು ಮತ್ತೊಂದು ಪಕ್ಕದಲ್ಲಿ ಶಕ್ತಿ ವಿಗ್ರಹಗಳೂ ಕೆತ್ತಿವೆ. ಚೌಕಟ್ಟಿನ ಕೆಳಕಟ್ಟಿನಲ್ಲಿ ಮಧ್ಯದಲ್ಲಿ ನಾಲ್ಕು ಪಾದಗಳೂ ಅವುಗಳ ಸುತ್ತ ನಾಲ್ಕು ಹಾವುಗಳೂ ಸುಂದರವಾಗಿ ಕೆತ್ತಿವೆ. ಈ ಚೌಕಟ್ಟಿನ ಒಂದು ಕಂಭದಲ್ಲಿ ಕೆಳಭಾಗದಲ್ಲಿ ಒಂದು ಶಾಸನವಿದೆ. ಅಕ್ಷರಗಳೂ ಮುದ್ದಾದವೂ ಸ್ಫುಟವಾದವೂ ಆಗಿವೆ. ಈ.ಚೌಕಟ್ಟನ್ನು ಶೇಬರವೆಂದೂ, ಮೈಲಾರ ಲಿಂಗಪ್ಪನೆಂದು ಜನರು ಕರೆಯುತ್ತಾರೆ. (ಅ) ನಾಲ್ಕು ಶಿಲೆಗಳಲ್ಲಿ ಆಕೃತಿಯುಶಿಲೆ. ಇದು ಬ್ರಹ್ಮದೇವರೆಂದು ಕಾಣಿಸುತ್ತದೆ. (ಇ) ಎರಡು ಪಕ್ಕಗಳಲ್ಲಿ ಆನೆಗಳು ಮಧ್ಯೆಸ್ತ್ರೀ ಪ್ರತಿಮೆಯು ಕೃತಿ. ಇದು ಗಜಗೇರಿ ಯೋಗಜ ಲಕ್ಷ್ಮಿಯು ಆಗಿರಬಹುವೆಂದು ಕಾಣಿಸುತ್ತದೆ. (ಈ) ಮುಕ್ಕಾದ ಶಿಲಾಕೃತಿಗಳು. ಇವು ಅನೇಕವಾಗಿವೆ. ಈ ಎಲ್ಲಾ ಶಿಲಾಕೃತಿಗಳು ಮೇಲೆ ಹೇಳಿದವರ ಕಣದಲ್ಲಿ ಒಂದು ಬೇವಿನ ಮರದ ಸುತ್ತಲೂ ಅಸ್ತವ್ಯಸ್ತವಾಗಿ ಬಿದ್ದಿವೆ.

(೨) ಈ ಊರಿನ ಒಂದು ತಿಪ್ಪೆಗುಂಡಿಯಲ್ಲಿ ಒಂದು ಶಿಲಾಶಾಸನ ವಿದೆ. ಈಗ ಇದು ಬಹಳವಾಗಿ ಬಿದ್ದಿವೆ.

(೩) ಈ ಊರಿನ ಬಾಗಿಲಲ್ಲಿ ಎರಡು ಮುದ್ರೆಕಲ್ಲುಗಳು ಇವೆ. ಇವುಗಳು ಎರಡು ಮುದ್ರೆ ಕಲ್ಲುಗಳು ಎಂಬುದು ಮತಿಯುಬಾರದಾಗಿದೆ.

## ಬೇತೂರು

ಈ ಊರು ಕುರುಡಿಗೆ ಸುಮಾರು ಒಂದು ಮೈಲಿಯದೂರದಲ್ಲಿ ಇದೆ. ಈ ಊರನ್ನು ಯಮುನ ಬೇತೂರೆಂದೂ, ಕುರುಡಿ ಬೇತೂರೆಂದು ಕರೆಯುವುದುಂಟು. ಈ ಊರಿನ ಬಾಗಿಲಲ್ಲಿ ಎರಡು ಶಿಲಾಶಾಸನಗಳಿವೆ. ಒಂದರಲ್ಲಿ ೪ ತ್ರಿಶೂಲಗಳ ಗುರು ಇದೆ. ಇನ್ನೊಂದರಲ್ಲಿ ಚೌಕಟ್ಟಿನ ಗುರು ಮತ್ತು ಅಕ್ಷರಗಳೂ ಇವೆ. ಈ ಊರಿಗೆ ಸುಮಾರು ಎರಡು ಫರ್ಲಾಂಗುಗಳ ದೂರದಲ್ಲಿ ಮರುಳ ಸಿದ್ದೇಶ್ವರನ ದೇವಸ್ಥಾನವಿದೆ. ಇದು ಉತ್ತರ ಮುಖವಾಗಿದೆ. ಲಿಂಗವು ಸ್ವಲ್ಪ ಚಪ್ಪಟೆ ಆಕೃತಿಯುದಾಗಿದೆ. ಪಾಣಿಪೀಠ ಬಲಕ್ಕೆ ಇದೆ. ಈ ದೇವಸ್ಥಾನದ ನವರಂಗದ ಪಶ್ಚಿಮ ಭಾಗದಲ್ಲಿ ವೀರಭದ್ರ ದೇವರ ಕೋಣೆಯಿಂದೆ ಈ ಕೋಣೆಯಲ್ಲಿ ವೀರಭದ್ರ ದೇವರು, ಎರಡು ಗಣಪತಿಗಳು ಮತ್ತು ಸುಮಾರು ನಾಲ್ಕು ಅಡಿ ಎತ್ತರ ೨ ಶಿಲಾಶಾಸನಗಳು ಇವೆ. ಈ ಶಾಸನಗಳ ಅಕ್ಷರಗಳು ಚನ್ನಾಗಿ ಕಾಣುತ್ತವೆ. ಮರುಳ ಸಿದ್ಧನಲಿಂಗಕ್ಕೆ ಎದುರಾಗಿ ಬಸವಣ್ಣನ ಕೋಣೆ ಇದೆ. ಮರುಳ ಸಿದ್ಧನ ದೇವಸ್ಥಾನಕ್ಕೆ ಪಶ್ಚಿಮದಲ್ಲಿ ಪೂರ್ವಮುಖವಾಗಿ ಮತ್ತೊಂದು ಚಿಕ್ಕ ದೇವಸ್ಥಾನವಿದೆ. ಇದರ ಲಿಂಗವು ಭಿನ್ನವಾದುದರಿಂದ ಕಾಶಿಯಿಂದ ತರಿಸಿದ ಹೊಸಲಿಂಗವನ್ನು ಇಲ್ಲಿ ಸ್ಥಾಪಿಸಬೇಕೆಂದು ಊರಿನವರು ಉದ್ದೇಶಿಸಿರುತ್ತಾರೆ. ಬಸವಣ್ಣನ ಕೋಣೆಹಿಂದೆ ಒಟ್ಟೆಗಪ್ಪನ ಗುಡಿ ಇದೆ. ಈ ಗುಡಿಯೊಳಗೆ ಗುಂಡನೆಯ ಆಕೃತಿಯ ದೇವರು ಇದೆ. ಈ ಎಲ್ಲಾ ದೇವಸ್ಥಾನಗಳ ಆವರಣದಲ್ಲಿ ಪೌಳಿಯ ಒಳಗಡೆ ಮುಕ್ಕಾದ ಅನೇಕ ವಿಗ್ರಹಗಳು ಚಲ್ಲಾ ಪಿಲ್ಲಿಯಾಗಿ ಬಿದ್ದಿವೆ. ಇವುಗಳಲ್ಲಿ ಮೂರು ಭೈರವನ ವಿಗ್ರಹಗಳು, ೯ ಶಕ್ತಿ ವಿಗ್ರಹಗಳು ೨೦ ನಾರ ಕಲ್ಲುಗಳು, ಒಂದು ವಿಷ್ಣು ವಿಗ್ರಹವು ೧ ನಂದಿ ವಿಗ್ರಹವು; ೨ ಗಣಪತಿ ವಿಗ್ರಹಗಳು, ೧ ಶಕ್ತಿ ವಿಗ್ರಹವು ಸಪ್ತ ಮಾತೃ ಕೆವಾರ ವಿಗ್ರಹಗಳು ಕಣ್ಣಿಗೆ ಕಾಣುತ್ತವೆ- ಬಸವಣ್ಣನ ಗುಡಿ ಹಿಂದೆ ಒಂದು ದೀಪ ಮಾಲೆಯ ಕಂಭವಿದೆ. ಈ ಕಂಭದ ಮೇಲೆ ಪೂರ್ವ ದಿಕ್ಕಿನಲ್ಲಿ ತ್ರೀಶೂಲವು ಕೆತ್ತಿದೆ. ಈ ಕಂಭದ ಹತ್ತಿರದ ದಕ್ಷಿಣ ದಿಕ್ಕಿನಲ್ಲಿ ೨ ಪಾದಗಳಿವೆ. ಮತ್ತು ಪೂರ್ವದಿಕ್ಕಿನಲ್ಲಿ ಸುಂದರವಾಗಿ ಕಟೆದಿರುವ ಒಂದು ಪಾದಪೀಠವಿದೆ. ಪೌಳಿಯ ಬಾಗಿಲ ಬಳಿಯಲ್ಲಿ ಹನುಮಂತ ವಿಗ್ರಹವಿದೆ ಚೈತ್ರಶುದ್ಧ ಪೌರ್ಣಮೆಯಲ್ಲಿ ರಥೋತ್ಸವವು ನೆಡೆಯುತ್ತದೆ. ಕಾರ್ತೀಕದಲ್ಲಿ ಕದಳೀ ಕಟ್ಟೆ ದೀಪೋತ್ಸವವನ್ನು ನಡೆಯಿಸಲಾಗದು. ಈ ಹಬ್ಬದಲ್ಲಿ ಹಸ ನವಣೆಯ ತಂಬಿಟ್ಟನ್ನು ದೇವರಿಗೆ ನೈವೇದ್ಯ

ಮಾಡಲಾಗುವದು. ಮಾಘಶುದ್ಧ ಪೌರ್ಣಿಮೆಯಲ್ಲಿ ಕಾಳ ಹಬ್ಬವನ್ನು ಮಾಡಲಾಗುವದು. ಈ ಹಬ್ಬದಲ್ಲಿ ಉರಳಿಯನ್ನು ಬೇಯಿಸಿ ನೈವೇದ್ಯ ಮಾಡಲಾಗುವದು. ಮರುಳಸಿದ್ಧನು ತನ್ನ ಆಕೃತಿಯನ್ನು ಯಜ್ಞ ಕುಂಡ ದಲ್ಲಿ ತೋರಿಸಿದನೆಂದು, ಆಗ ಬ್ರಾಹ್ಮಣರು ಕೋಪಗೊಂಡು ಮರುಳಸಿದ್ಧ ನನ್ನು ಈ ದೇವಸ್ಥಾನದ ಮುಂದೆ ಹರಿಯುವ ಅಣಜೀ ಕೆರೆ ಹಳ್ಳಕ್ಕೆ ತಳ್ಳಿದ ರಿಂದೂ, ಮರುಳಸಿದ್ಧನು ಈ ಹಳ್ಳದಲ್ಲಿ ತೇಲುತ್ತಾ ಅಲ್ಲಿಗೆ ಬಂದಿದ್ದ ಬ್ರಾಹ್ಮಣ ಸ್ತ್ರಿ ಒಬ್ಬಳಿಗೆ ಸೋಂಕಲು ಅವಳು ಶೂದ್ರನ ಸೋಂಕಿನಿಂದ ಅಪ ವಿತ್ರ ಳಾಯಿತೆಂದೂ ಬ್ರಾಹ್ಮಣರಲ್ಲಿ ದೂರು ಹೇಳಿಕೊಳ್ಳಲು ಬ್ರಾಹ್ಮಣರು ಮತ್ತೆ ಮರುಳಸಿದ್ಧನನ್ನು ಹಿಡಿಯಲು ಪ್ರಯತ್ನಿಸಿದರೆಂದೂ ಆಗ ಮರಳ ಸಿದ್ಧನು ಬ್ರಾಹ್ಮಣರ ಊಟದ ಅನ್ನವು ಮಾಯವಾಗುವಂತೆ ಮಾಡಿದನೆಂದೂ ಇದರಿಂದ ಬ್ರಾಹ್ಮಣರು ಮತ್ತಷ್ಟು ಕುಪಿತರಾಗಿ ಮರುಳಸಿದ್ಧನ ಕೈ ಕಾಲು ಗಳನ್ನು ಕಟ್ಟಿ ಅಣಜೀ ಕೆರೆಗೆ ಹಾಕಿದರೆಂದೂ, ಮರುಳಸಿದ್ದನು ಮತ್ತೆ ಬದುಕಿ ಬರಲು ಬ್ರಾಹ್ಮಣರು ರಾಜನಲ್ಲಿ ದೂರು ಹೇಳಿದರೆಂದೂ, ರಾಜನು ಮರುಳ ಸಿದ್ಧನ ಮೇಲೆ ಆನೆಯೊಂದನ್ನು ಬಿಡಿಸಿದನೆಂದೂ, ಮುಂದೆ ಮರುಳಸಿದ್ಧನು ಪವಾಡವನ್ನು ನೆಡಸಿ ಜಯಶೀಲನಾದನೆಂದೂ ಐತಿಹ್ಯವಿದೆ.

## ಅಣಜಿ.

ಈ ಊರು ದಾವಣಗೆರೆ ತಾಲೂಕಿನ ಆನೇಗೋಡು ಹೋಬಳಿಗೆ ಸೇರಿದೆ. ಈ ಊರಿನ ಕೆರೆ ಬಹು ದೊಡ್ಡದು. ಈ ಕೆರೆಯ ಏರಿಯ ಪಕ್ಕದಲ್ಲಿ ಒಳ ಗಡೆ ಪೂರ್ವಾಭಿಮುಖವಾಗಿ ಒಂದು ದೇವಸ್ಥಾನವಿದೆ. ಇದರಲ್ಲಿ ಲಿಂಗ ಬಸವಣ್ಣಗಳಿವೆ. ಲಿಂಗದ ಪಾಣೀಪೀಠವು ಬಲಕ್ಕೆ ಇದೆ. ದೇವಸ್ಥಾನದ ಪೌಳಿಯು ಒಳಗಣ ಆವರಣದಲ್ಲಿ ಏರಿಗೆ ಅಂಟಿಕೊಂಡು ಒಂದು ಚಿಕ್ಕ ಗೂಡು ಇದೆ. ಈ ಗೂಡಿನಲ್ಲಿ ಗುಂಡನೆಯ ಆಕೃತಿಯ ಶಿಲೆಗಳಿವೆ. ಪೌಳಿಯ ಹೊರಗಡೆ ಕೆಲವು ನಾಗರ ಕಲ್ಲುಗಳಿವೆ.

ಕಾಲ ಪರಿಮಿತಿಯಿಂದ ಈ ಊರಿನ ಹೊಳಗೆ ಹೋಗಲು ಸಾಧ್ಯವಾಗದೆ ಹೋದ್ದರಿಂದ ಈ ದೇವಸ್ಥಾನದ ಐತಿಹ್ಯಯ ಸಂಪ್ರದಾಯಿ ಮುಂತಾದದುವು ಗಳನ್ನು ಸಂಗ್ರಹಿಸಲು ಅವಕಾಶವಾಗಲಿಲ್ಲ.

## ಆನೆಗೋಡು

ಈ ಊರು ದಾವಣಗೆರೆ ತಾಲ್ಲೂಕಿಗೆ ಸೇರಿದೆ. ಆನೆಯನ್ನು ಕಳೆದು ಕೊಂಡ ಆನೆ ಕೊಂದಿದ ರಾಜನು ಬೆನ್ನಟ್ಟಿ ಬಂದಾಗ ಮರುಳಸಿದ್ಧನು ಈ ಊರಿಗೆ ಬಂದು ಈ ಊರಿನ ನಡುಕೆರೆಯಲ್ಲಿ ನೀರಿನ ಮೇಲೆ ಕಂಬಳಿ ಯನ್ನು ಹಾಸಿ, ಅದರ ಮೇಲೆ ಕುಳಿತನೆಂದೂ, ಅದನ್ನು ಕಂಡು ದನ ಕಾಯುವ ಹುಡುಗರು "ಮರುಳಸಿದ್ಧ" ನೆಂದು ಬೊಬ್ಬೆ ಇಟ್ಟು ಆ ಊರ ವರನ್ನು ಕರೆಯಲು, ಕೆರೆಯ ಏರಿಯು ೭ ಭಾಗಗಳಾಗಿ ಹೊಡೆಯಿತೆಂದೂ, ಮರುಳಸಿದ್ಧನು ಅಲ್ಲಿಯೇ ಲಿಂಗವಾಗಿ ನೆಲಸಿದನೆಂದೂ, ಈ ಸ್ಥಳವೇ ಈಗ ದೇವಸ್ಥಾನವಾಗಿದೆ ಎಂದು ಐತಿಹ್ಯವಿದೆ. ಒಡೆದುಹೋದ ಕೆರೆಯ ಏರಿ ಈಗಲೂ ದೇವಸ್ಥಾನದ ಸುತ್ತಲೂ ಕಾಣಿಸುತ್ತದೆ. ಈ ಲಿಂಗವನ್ನು ಒಮ್ಮೆ ಮಳೆಬೆನ್ನೂರಿನ ವ್ಯಾಪಾರಸ್ಥರು ಒಲೆಯಗುಂಡಾಗಿ ಮಾಡಿಕೊಂಡು ಅಡಿಗೆಯನ್ನು ಮಾಡಿದರೆಂದೂ, ಇದರಿಂದ ಅವರ ಎತ್ತುಗಳಿಗೆ ಮತ್ತೆ ಕಣ್ಣುಗಳು ಬಂದವೆಂದೂ ಈ ದೇವಸ್ಥಾನದ ಉಳಿದ ಕಟ್ಟಡವು ಕಾಲ ಕ್ರಮದಲ್ಲಿ ಹೆಚ್ಚಿಸಲ್ಪಟ್ಟಿತೆಂದೂ ಸಹ ಐತಿಹ್ಯವಿದೆ. ಮರುಳಸಿದ್ಧನು ಆನೆಯ ಕೋರೆಗಳನ್ನು ಕಿತ್ತಿ ಅಂಬರಕ್ಕೆ ಎಸೆದುದರಿಂದ ಆ ಊರಿಗೆ ಆ ಹೆಸರೇ ಬಂದಿತೆಂದು ಸಹ ಐತಿಹ್ಯವಿದೆ.

## ಮರುಳಸಿದ್ಧೇಶ್ವರನ ದೇವಸ್ಥಾನ.

ಈ ದೇವಸ್ಥಾನವು ಮೇಲೆ ಹೇಳಿದಂತೆ ಈ ಊರಿನ ಕೆರೆಯ ಅಂಗಳ ದಲ್ಲಿ ಪೂರ್ವಮುಖವಾಗಿ ಇರುತ್ತದೆ. ಈ ದೇವಸ್ಥಾನದ ಮುಂಭಾಗದ ೨೨ ಕಂಭಗಳ ಜಗುಲಿ ಇದೆ. ಒಳಗಡೆ ಪಡಶಾಲೆಯು, ಅದರ ಹಿಂದೆ ನವರಂಗವು, ಅದರ ಹಿಂದೆ ಗರ್ಭಗುಡಿಗಳು ಇವೆ. ಪಡಶಾಲೆಯಲ್ಲಿ ನಾಲ್ಕು ಕಂಭಗಳು, ನವರಂಗದಲ್ಲಿ ೬ ಕಂಭಗಳು ಇವೆ. ಗರ್ಭಗುಡಿಯಲ್ಲಿ ಲಿಂಗ ಬಸವಣ್ಣಗಳು ಇವೆ. ಲಿಂಗದ ಪಾಣಿಪೀಠವು ಬಲಕ್ಕೆ ಇದೆ. ನವರಂಗದಲ್ಲಿ ಉತ್ತರಕ್ಕೆ ಗೌರಿಯ ಕೋಣೆಯಿದೆ. ಈ ಕೋಣೆಯಲ್ಲಿ ೪ ಕಂಭಗಳಿವೆ. ಗರ್ಭಗುಡಿಯು ಪೂರ್ವಮುಖವಾಗಿ ಇದೆ. ನವರಂಗದ ದಕ್ಷಿಣ ಭಾಗದಲ್ಲಿ ೧ ಬಾಗಿಲು ಇವೆ. ಈ ಬಾಗಿಲು ಮುಂದೆ ಎಡಬಲಗಳಲ್ಲಿ ೪ ಕಂಭಗಳ ಜಗುಲಿಗಳು ಇವೆ. ಪಡಶಾಲೆಯ ಉತ್ತರದಲ್ಲಿ ಒಂದು ಕೋಣೆಯೂ, ದಕ್ಷಿಣದಲ್ಲಿ ಅಡಿಕೆ ಶಾಲೆಯು ಇವೆ. ನವರಂಗದ ದಕ್ಷಿಣ ಭಾಗದ ಗೋಡೆ

ಯಲ್ಲಿ ೧೬೬೯ ನೆಯ ಸಾಲಿನ ಒಂದು ಶಿಲಾಲಿಪಿಯು ಸಿಕ್ಕಿಸಲ್ಪಟ್ಟಿದೆ. ಅದರ ಪಕ್ಕದಲ್ಲಿ ವೀರಭದ್ರನ ಸುಂದರವಾದ ಆದರೆ ಮುಕ್ಕಾದ ಶಿಲಾ ವಿಗ್ರಹವಿದೆ. ನವರಂಗದ ಉತ್ತರ ಭಾಗದ ಗೋಡೆಯಲ್ಲಿ ಚಾಮುಂಡಿ ವಿಷ್ಣು, ಮತ್ತು ಮಗುಗಳನ್ನು ಹಿಡಿದಿರುವ ಗ್ರಹ ಇವುಗಳು ಸಿಕ್ಕಿಸಲ್ಪಟ್ಟಿವೆ. ಈ ದೇವಸ್ಥಾನಕ್ಕೆ ಗದ್ದೆಯ ಇನಾಂತಿ ಇದೆ. ಚೈತ್ರ ಶುದ್ಧ ಪೌರ್ಣಮೆಯಲ್ಲಿ ರಥೋತ್ಸವವೂ, ಕಾರ್ತೀಕದಲ್ಲಿ ದೀಪೋತ್ಸವವು ನಡೆಯುತ್ತದೆ. ಕಾರಹುಣ್ಣಿವೆಯಲ್ಲಿ ಹುರುಳಿಯನ್ನು ಬೆಯಿಸಿ ದೇವರಿಗೆ ನೈವೇದ್ಯವಾಗುವುದು. ಈ ದೇವಸ್ಥಾನದ ಪೂಜೆಯನ್ನು ಈಗಲೂ ಕಗ್ಗಲ್ಲ ವಂಶದವರೇ ಮಾಡಂತ್ತಾರೆ. ರಥೋತ್ಸವದಲ್ಲಿ ರಥವನ್ನು ತಳವಾರರು (ನಾಯಕರು) ಒಂದುಕಡೆಯೂ, ಮಾದಿಗರು (ಬೇಗಾರರು) ಮತ್ತೊಂದು ಕಡೆಯೂ ೧೫–೧೨ ಜನರಂತೆ ನಿಂದು ನೂಕುತ್ತಾರೆ. ರಥೋತ್ಸವವು ದಿನಕ್ಕೆ ಹಿಂದಿನ ೩ ದಿನಗಳಲ್ಲಿ ಭಕ್ತರ ಅನೇಕ ಸೇವೆಗಳು ನಡೆಯುತ್ತವೆ.

## ಆನಗೋಡಿನಲ್ಲಿರುವ ಇತರ ಸ್ಮಾರಕಗಳು.

ಮರುಳುಸಿದ್ಧನ ದೇವಸ್ಥಾನಕ್ಕೆ ದಕ್ಷಿಣದಲ್ಲಿ ಜಟ್ಟಿಗಪ್ಪನ ಗುಡಿಯು ಬಸವಣ್ಣನ ಗುಡಿಯು ಉತ್ತರ ಮುಖವಾಗಿವೆ. ಬಸವಣ್ಣನ ಗುಡಿಯು ಹಿಂದಕ್ಕೆ ಮೈಲಾರದೇವರ ಗುಡಿಯು ಪೂರ್ವವಾಗಿವೆ. ಈ ಗುಡಿಯಲ್ಲಿ ೩ ಹೆಣ್ಣು ವಿಗ್ರಹಗಳಿವೆ. ಈ ಗುಡಿಯ ಮುಂದೆ ೨ ವೀರಗಲ್ಲುಗಳಿವೆ. ಈ ಗುಡಿಯ ಪಕ್ಕದಲ್ಲಿ ಹನುಮಂತನ ಗುಡಿಯು ದಕ್ಷಿಣ ಮುಖವಾಗಿದೆ. ಈ ಗುಡಿಯ ಪಕ್ಕದಲ್ಲಿ ಕೇಶವನ ಗುಡಿಯು ಪೂರ್ವ ಮುಖವಾಗಿದೆ. ಈ ಎಲ್ಲ ಗುಡಿಗಳ ಮುಂಭಾಗದ ಪೂರ್ವ ದಿಕ್ಕಿನಲ್ಲಿ ೪ ಕಂಭಗಳ ಗೋಮಂಟಪವಂದಿವೆ. ಇದರ ಮುಂದುಗಡೆ ಪೂರ್ವ ದಿಕ್ಕಿನಲ್ಲಿ ದೊಡ್ಡದೊಂದು ಮಜ್ಜನ ಬಾವಿ ಇದೆ. ಈ ಬಾವಿಗೆ ದಕ್ಷಿಣ ದಿಕ್ಕಿನಲ್ಲಿ ಕಲ್ಲೇಶ್ವರನ ದೇವಸ್ಥಾನವು ಉತ್ತರ ಮುಖವಾಗಿದೆ.

## ಆನಗೋಡಿಗೆ ಹತ್ತಿರದಲ್ಲಿರುವ ಇತರ ಸ್ಮಾರಕಗಳು

### ಸಿದ್ಧೇಶ್ವರನ ದೊಣೆ.

ಆ ದೊಣೆಯು ಆನೆಗೋಡಿಗೆ ಸುಮಾರು ೧ ಮೈಲಿನ ದೂರದಲ್ಲಿಯೂ, ಸಿದ್ಧನೂರಿಗೆ ಸುಮಾರು ೨ ಫರ್ಲಾಂಗುಗಳ ದೂರದಲ್ಲಿಯೂ ಇದೆ. ಈ

ದೋಣಿಯು ಒಂದು ದೊಡ್ಡ ಬಂಡೆಯು ೧೦-೧೫ ದೊಗರುಗಳಿಂದ ಕೂಡಿ ರುತ್ತದೆ. ಈ ದೊಗರುಗಳಲ್ಲಿ ಪೂರ್ವಕಡೆಯ ಒಂದು ದೊಡ್ಡ ದೊಗರಿನಲ್ಲಿ ನೀರು ಸದಾ ಇರುತ್ತದೆ. ನೀರು ಹಸು ಬಣ್ಣದ್ದಾಗಿದ್ದು ೧೦೬ ಕಪ್ಪೆಗಳು ವಟಗುಡುತ್ತಿರುತ್ತವೆ. ಆನೆಯನ್ನು ಕಳೆದುಕೊಂಡಿದ್ದ ಆನೇಗುಂದಿಯ ರಾಜನು ಬೆನ್ನಟ್ಟಿಬಂದಾಗ ಮರುಳಸಿದ್ದ ಆ ಆನೆಯನ್ನು ಈ ಬಂಡೆಯೊಳಗೆ ತುಳಿದನೆಂದೂ, ಹಾಗೆ ತುಳಿದ ಭಾಗನೇ ಈ ಬಂಡೆಯ ದೊಗರಾಗಿ ಈ ದೋಣೆಯಾಯಿತೆಂದು ಅಲ್ಲಿಂದ ಈ ದೋಣೆ ಸಿದ್ಧೇಶ್ವರನ ದೋಣೆ ಎಂಬ ಹೆಸ ರಿನಿಂದ ಪ್ರಸಿದ್ಧವಾಯಿತೆಂದು ಐತಿಹ್ಯವಿದೆ.

## ಸಿದ್ಧೇಶ್ವರನ ಗುಡಿ.

ಈ ಗುಡಿಯು ಸಿದ್ಧೇಶ್ವರ ದೋಣೆಗೆ ಪೂರ್ವ ದಿಕ್ಕಿನಲ್ಲಿ ಪೂರ್ವ ಮುಖವಾಗಿದೆ. ಗರ್ಭಗುಡಿಯಲ್ಲಿ ಲಿಂಗ ಬಸವಣ್ಣಗಳು ಇವೆ. ಗರ್ಭ ಗುಡಿಯ ಎಡಬಲಗಳಲ್ಲಿ ಎರಡು ವಿಗ್ರಹಗಳು ಗೋಡೆಗೆ ಸಿಕ್ಕಿಸಲ್ಪಟ್ಟಿವೆ. ಗರ್ಭಗುಡಿಯ ಮುಂದೆ ಎರಡು ಕಂಭಗಳುಇವೆ. ಈ ಕಂಭಗಳಿಗೆ ಉತ್ತ ರದಲ್ಲಿ ಗೋಡೆಯ ಪಕ್ಕದಲ್ಲಿ ರೇವಣೇಶ್ವರ ಲಿಂಗವಿದೆ. ಈ ಗುಡಿಹೊರಗೆ ಆವರಣದಲ್ಲಿ ಒಂದು ಗೂಡು, ಒಂದು ಬೇವಿನಮರವು ಇವೆ. ಈ ಗೂಡಿ ನಲ್ಲಿ ಪಾದಗಳಿವೆ. ಇವುಗಳನ್ನು ಪಾದರಕ್ಷೆ ಎಂದು ಜನರು ಕರೆಯುತ್ತಾರೆ. ಈ ಬೇವಿನಮರವು ಸಿಹಿ ಆಗಿರುತ್ತವೆ. ಶ್ರಾವಣಮಾಸದಲ್ಲಿ ಮೂರು ಸೋಮ ವಾರ ದೇವರ ಉತ್ಸವ ನಡೆಯುತ್ತದೆ.

## ಹನುಮಂತನ ಗುಡಿ.

ಈ ಗುಡಿ ಸಿದ್ಧೇಶ್ವರನ ಗುಡಿಗೆ ದಕ್ಷಿಣದಲ್ಲಿ ೧೦೦ಅಡಿಗಳ ದೂರ ದಲ್ಲಿ ದಕ್ಷಿಣಮುಖವಾಗಿದೆ. ಹನುಮಂತನ ಮುಖವು ಪಶ್ಚಿಮಕ್ಕೆ ಇದೆ. ರಾಜನ ದಂಡು ಬಂದಿತೇ ಎಂಬುದನ್ನು ನೋಡೆಂದು ಮರುಳಸಿದ್ಧನು ಹನುಮಂತನಿಗೆ ನೋಡೆಂದು ಅಪ್ಪಣೆ ಮಾಡಿದ ಕಾರಣ ಹನುಮಂತನು ರಾಜನ ದಂಡನ್ನು ನೋಡಲು ತನ್ನ ಮುಖವನ್ನು ಪಶ್ಚಿಮಕ್ಕೆ ತಿರುಗಿಸಿದ ನೆಂದು ಐತಿಹ್ಯವಿದೆ. ಹನುಮಂತನ ವಿಗ್ರಹ ಕೆಳಭಾಗದಲ್ಲಿ ಮತ್ತೊಂದು ಚಿಕ್ಕಹನುಮಂತನ ವಿಗ್ರಹವಿದೆ. ಇದರ ಮುಖವು ಪೂರ್ವಕ್ಕಿದೆ.

## ಉಳುಪನ ಕಟ್ಟೆ.

ಬಸ್ಸಿನ ದೆಸೆಯಿಂದ ಈ ಊರಿಗೆ ಪ್ರತ್ಯಕ್ಷ ಹೇಳಲು ಸಾಧ್ಯವಾಗಲಿಲ್ಲ. "ಆನೆಗೋಡಿಗೆ ಬಂದಿದ್ದ. ಈ ಊರಿನ ಪಟೇಲರಾದ ಶ್ರೀಮಾನ್ ನಾರಪ್ಪರವರನ್ನು ಕೇಳಿ ತಿಳಿದುಕೊಂಡ ವಂಶಗಳು ಈ ಮುಂದೆ ಕಂಡಂತೆ ಇರುತ್ತವೆ.

ಈ ಊರು ಆನೆಗೋಡಿಗೆ ಸುಮಾರು ಒಂದು ಮೈಲಿನದರಲ್ಲಿ ಇದೆ. ಈ ಊರಿನ ಮುಂದೆ ಒಂದು ಆಲದ ಮರವಿದೆ. ಈ ಆಲದ ಮರದ ಬುಡದಲ್ಲಿ ಒಂದು ಬಂಡೆ ಇದೆ. ಈ ಬಂಡೆಯ ಮೇಲೆ ಹೆಜ್ಜೆಯ ಗುರುತುಗಳು ಇವೆ. ಈ ಹೆಜ್ಜೆಗಳ ಗುರುತುಗಳು ಮರುಳಸಿದ್ದನವೆಂದು ಐತಿಹ್ಯ. ಈ ಬಂಡೆಗೆ ಊರಿಗೆ ಮಾರಿನ ದೂರದಲ್ಲಿ ಒಂದು ಬಾವಿ ಇದೆ. ಈ ಬಾವಿಯು ಮರುಳಸಿದ್ಧನು ಬಾಯಾರಿ ತನ್ನ ಹೆಬ್ಬೆಟ್ಟಿನಿಂದ ನೆಲದಲ್ಲಿ ವರ್ತಿಯನ್ನು ತೆಗೆದು ನಿರ್ಮಾಣ ಮಾಡಿದನೆಂದೂ, ನೀರನ್ನು ಕುಡಿದಮೇಲೆ ಮರುಳಸಿದ್ಧ ಈ ಆಲದ ಮರದಕೆಳಗೆ ಬಂದನೆಂದೂ, ಆಗ ಅಲ್ಲಿ ಆನೆಯನ್ನು ಕಳೆದು ಕೊಂಡಿದ್ದ ಆನೇಗುಂದಿ ರಾಜನ ಕಡೆಯವರು ಬಂದು ಬಿಳಿಯಾನೆಯನ್ನು ಕಂಡೆಯಾ ಎಂದು ಮರುಳಸಿದ್ಧನನ್ನು ಕೇಳಲು ಮರುಳಸಿದ್ಧನು "ಕಂಡ ಹಾಗು ಆಯಿತು ಕಾಣದ ಹಾಗು ಆಯಿತು" ಎಂದು ನುಡಿಯಲು ರಾಜನ ಕಡೆಯವರು ಮರುಳಸಿದ್ಧನನ್ನು ಹುಚ್ಚನೆಂದು ಪರಿಗಣಿಸಿ ಅವನನ್ನು ಬಿಟ್ಟು ಮುಂದಕ್ಕೆ ಹೋದರೆಂದೂ, ಅಲ್ಲೀದ ಮುಂದೆ ಮರುಳಸಿದ್ಧನು ಆನೆಗೋಡಿಗೆ ಹೋಗಿ ಪವಾಡವನ್ನು ನೆಡಸಿದನೆಂದು ಸಹ ಐತಿಹ್ಯವಿದೆ. ಮರುಳಸಿದ್ದನು ಕಾಲಿನಹುಳವನ್ನು ಸೋಸುತ್ತಾ ಈ ಊರಿನಲ್ಲಿ ಉಳಿದುದರಿಂದಲೂ, ಈ ಊರಿಗೆ ಈ ಹೆಸರು ಬಂದಿತೆಂದು ಐತಿಹ್ಯ ಉಂಟು.

## ಸಿರಿಗೆರೆ

ಈ ಊರು ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಬೆಂಗಳೂರು ಹರಿಹರ ರೈಲ್ವೇ ಮಾರ್ಗದಲ್ಲಿರುವ ಸಾಸಲು ಸ್ಟೇಷನ್ನಿಗೆ ಸುಮಾರು ೯ ಮೈಲಿಗಳ ದೂರದಲ್ಲಿದೆ. ಹಿಂದೆ ಈ ಊರಿಗೆ ಹಿರಿಯಾಳೆಂಬ ಹೆಸರಿತ್ತೆಂದೂ, ಈ ಊರಿನ ಎಲ್ಲಾ ಕೇರಿಗಳು ಹಾಳಾಗದೆ ಉಳದುಕೊಂಡಿತೆಂದೂ, ಈ ಕಾರಣದಿಂದ ಈ ಕೇರಿಗೆ ಸಿರಿಯುಳ್ಳಕೇರಿ ಎಂಬ ಹೆಸರು ಬಂದಿತೆಂದೂ, ಕಾಲಕ್ರಮದಲ್ಲಿ ಈ ಹೆಸರು ಸಿರಿಗೆರೆ ಎಂಬ ರೂಪಾಯನಾಯಿತೆಂದೂ, ಈ

ಊರಿನ ಸ್ಥಳ ಪುರಾಣವಿದೆ. ಈಊರಿನಲ್ಲಿ ಉಜ್ಜಯಿನಿಯ ತರಳಬಾಳು ಸಂಸ್ಥಾದ ಭವ್ಯವಾದ ಮಠವಿದೆ. ಹಿಂದೆ ಹರಪನಹಳ್ಳಿಯ ನಾಯಕನಿಗೂ ಜರಮಲೆಯ ನಾಯಕನಿಗೂ ಲಿಂಗಧಾರಣೆಯ ವಿಚಾರದಲ್ಲಿ ಮನಸ್ತಾಪ ಉಂಟಾಗಲು ಉಜ್ಜಯಿನಿಯಲ್ಲಿ ವಿಪ್ಲವವು ನಡೆದು ಸುಮಾರು ೩೫೦ ವರ್ಷ ಗಳ ಕೆಳಗ ಉಜ್ಜಯಿನಿಯ ತರಳಬಾಳು ಮಠದ ಪಟ್ಟದ ಸ್ವಾಮಿಗಳಾದ ಜಂಬಪ್ಪ ದೇವರೆಂಬುವರು ಈ ಊರಿಗೂ (ಸಿರಿಗೆರೆಗೂ) ಚರಮೂರ್ತಿಗಳಾದ ಸಪ್ಪೆಸಿದ್ಧಲಿಂಗ ದೇವರೆಂಬುವರು ಪಾಲ್ಕುರಿಗೂ (ಈಗಿನ ಹಾಲು ಕುಲ್ಕು ಕೆಗೂ) ನೆಲಸಿದರೆಂದೂ, ಮುಂದೆ ಪಾಲ್ಕುರಿಕೆಯ ಮಠದವರು ಎಲ ಹಂಕಕ್ಕೆ ಹೋಗಿ ಅಲ್ಲಿ ಒಂದು ಮಠವನ್ನು ಸ್ಥಾಪಿಸಿದರೆಂದೂ ಐತಿಹ್ಯವಿದೆ. ಈ ಊರಿನ ತರಳಬಾಳು ಮಠದ ಈಗಿನ ಶ್ರೀಗಳವರು ಈ ಮೂರು ಮಠಗಳ ಒಡೆತನವನ್ನು ಉಳ್ಳವರಾಗಿರುತ್ತಾರೆ.

## ಉಪಸಂಹಾರ

ಇಲ್ಲಿಗೆ ಮರುಳಸಿದ್ಧನ ಕೆಲವು ಪುಣ್ಯಕ್ಷೇತ್ರಗಳ ಪರಿಚಯವು ಮುಗಿ ಯುತ್ತದೆ. ಮರುಳಸಿದ್ಧನ ಧರ್ಮ ಪ್ರಸಾರ ಕಾರ್ಯವನ್ನು ಪ್ರತಿಕೋದ್ಧಾರ ಕಾರ್ಯವನ್ನು ಕೈ ಗೊಂಡ ಮಹದ್ವ್ಯಕ್ತಿಯಾಗಿದ್ದ ಈತನ ಚರಿತ್ರೆಯು ಅಪಾರವಾದುದ್ದಾಗಿದೆ. ಈತನು ವಿಶಾಲಭಾರತದಲ್ಲಿ ವಿಫಲವಾಗಿ ಹಂದಾಡಿ ಅತುಳವಾದ ಕಾರ್ಯವನ್ನು ಮಾಡಿರುವುದರಿಂದ ಈತನ ಕ್ಷೇತ್ರಗಳು ಭಾರತ ಸಹಲವರು ಕರೆಗಳಲ್ಲಿ ಇರುತ್ತವೆ. ಈತನ ಚರಿತ್ರೆ ಸಂಗ್ರಹಣಕ್ಕೆ ಈ ಎಲ್ಲಾ ಕ್ಷೇತ್ರಗಳ ಪರಿಚಯವೂ ಆವಶ್ಯಕವಾಗಿದೆ. ಮರುಳಸಿದ್ಧನು ನಡೆಲಲ್ಲದ ನುಡಿಯಲ್ಲಿಯೂ ಶಕ್ತನಾಗಿದ್ದನೆಂದೂ ತಿಳದು ಬರುತ್ತದೆ. ಮೊದಲೇ ಪೀಠಿಯಲ್ಲಿ ಹೇಳಿದಂತೆ ಈತನ ವಚನಗಳನ್ನು ಬರೆದುದಾಗಿ ಪಂಡಿತರ ಶೋಧನೆಯಿಂದ ಗೊತ್ತಾಗುತ್ತದೆ. ಈ ವಚನಗಳು ನಮಗೆ ಉರುಲಬ್ಧ ವಾದಲ್ಲಿ ಮರುಳಸಿದ್ಧನ ಚರಿತ್ರೆಯನ್ನು ತಜ್ಞರು ಬಹಳವಾಗಿ ಅರುಹಾಗು ವುದು. ಆದುದರಿಂದ ಕನ್ನಡಿಗ ಇತಿಹಾಸಜ್ಞರು ಮರುಳಸಿದ್ಧನ ಕ್ಷೇತ್ರ ಗಳ ಪರಿಚಯವನ್ನು ಮಾಡಿಕೊಳ್ಳುವುದಲ್ಲದೆ ಮರುಳಸಿದ್ಧನು ರಚಿಸಿರುವ ಚಿತ್ರಗಳ ಸಂಗ್ರಹಣವನ್ನು ಸಹ ಮಾಡಬೇಕು. ಈ ಎರಡು ಕೆಲಸಗಳನ್ನು ಕೊಳ್ಳುವ ಸಮರ್ಥರಿಗೆ ಶ್ರೀಮಂತರೂ ಮಠಾಧಿಪತಿಗಳೂ, ಸಂಪೂರ್ಣ

ವಾದ ಬೆಂಬಲವನ್ನು ಕೊಡಬೇಕು. ಇಷ್ಟು ಹೇಳಿ ಎಲ್ಲರಿಗೂ ಸುಬುದ್ಧಿಯ ಸುಶಕ್ತಿಯನ್ನು ಅನುಗ್ರಹಿಸುವಂತೆ ಶ್ರೀ ಮರುಳಸಿದ್ಧನನ್ನು ಪ್ರಾರ್ಥಿಸಿ ಈ ಲೇಖನವನ್ನು ಇಲ್ಲಿಗೆ ಮುಕ್ತಾಯಗೊಳಿಸುತ್ತೇನೆ.

ಶ್ರೀ ಮರುಳಸಿದ್ಧೇಶ್ವರದೇವರ ಅನುಗ್ರಹದಿಂದ ಉಪದೇಶಪಡೆದವರು ತರಳಬಾಳಸಿದ್ಧೇಶ್ವರದೇವರು, ಶ್ರೀ ಉಜ್ಜನಿ ಆದಿಮಠದಲ್ಲಿ ತರಳಬಾಳು ಸಿದ್ಧೇಶ್ವರ ಸೂತ್ರದ ಪಟ್ಟದ ಮರಿಗಳ ನಾಮಂಗಳು:—

೧. ಉಜ್ಜಯಿನಿಯಲ್ಲಿ ಗಡ್ಡದಸಿದ್ಧಲಿಂಗದೇವರು.
೨. ಪಟ್ಟದ ಕೆಂಪಪ್ಪದೇವರು.
೩. " ಚನ್ನಬಸವದೇವರು.
೪. ಗುರುಸಿದ್ಧದೇವರು.
೫. ಶಿವಲಿಂಗದೇವರು.
೬. ಗುರುಬಸವದೇವರು.
೭. ಕರಿಸಿದ್ಧದೇವರು.
೮. ಶಾಂತವೀರದೇವರು.
೯. ಕರಿಸಿದ್ಧದೇವರು.
೧೦. ಜಂಬಪ್ಪದೇವರು.

ಈ ಪ್ರಕಾರ ಬಳಿವಿಡಿದು ಬಂದು ಸಿರಿಗೆರೆಯಲ್ಲಿ ನಿಂತವರು ಜಂಬಪ್ಪ ದೇವರು.

೧. ಪಟ್ಟದ ಗುರುಸಿದ್ಧದೇವರು.
೨. " ಸಿದ್ಧಲಿಂಗದೇವರು.
೩. ಗುರುಸಿದ್ಧದೇವರು.
೪. ಶಿವಲಿಂಗದೇವರು.
೫. ಗುರುಸಿದ್ಧದೇವರು.
೬. ಶಿವಲಿಂಗದೇವರು.
೭. ಗುರುಶಾಂತದೇವರು.

———

**R. N. B. 2554**

From
*Shivanubhava*
*Office*
BIJAPUR

ಚನಮಲ್ಲಪ್ಪ ಶಿದ್ದಪ್ಪ ಬಡೇವಿ
ಪೊ— ಬನಹಟ್ಟಿ
ವ್ಹಾಯಾ— ಕುಡಚಿ ಸ್ಟೇಶನ



---

ಈ ಪತ್ರಿಕೆಯನ್ನು ಇದರ ಸಂಪಾದಕರಾದ ರಾ|| ಬ|| ಪಿ. ಜಿ. ಹಳಕಟ್ಟಿ, ಬಿ. ಎ. ಎಲ್. ಎಲ್. ಬಿ. ಇವರು ವಿಜಾಪೂರ ವಾರ್ಡ ನಂ. ೨. ಮನೆ ೧೩೬೮ ರಲ್ಲಿರುವ ಹಿತಚಿಂತಕ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಮುದ್ರಿಸಿ ಅಲ್ಲಿಯೇ ಪ್ರಸಿದ್ಧಿಸಿದರು.

ಸಂಚಿಕೆ ೧೦ ಸಂಪುಟ ೩

# ಶಿವಾನುಭವ

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,
ಬಿ. ಎ. ಎಲ್; ಎಲ್. ಬಿ.
ವಿಜಾಪುರ.



ಅಕ್ಟೋಬರ ೧೯೫೮

ವಾರ್ಷಿಕ ಚಂದಾ ] [ ೫ರೂ. ೭೫ನ.ಪೈ.

# ಶಿವಶರಣೆಯರ ಚರಿತ್ರೆಗಳು.

## ೧. ಬೊಂತಾದೇವಿ.

ಬೊಂತಾದೇವಿಯು ಕಾಶ್ಮೀರ ದೇಶದಲ್ಲಿಯ ಮಾಂಡವ್ಯಪುರವೆಂಬ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದ ಅರಸನ ಮಗಳು. ಆಕೆಯು ಹುಟ್ಟಿದಾಗ ಆಕೆಗೆ ಇಟ್ಟ ಹೆಸರು ನಿಜದೇವಿ. ಅವಳು ಚಿಕ್ಕಂದಿನಿಂದಲೂ ಕೇವಲ ಶಿವಭಕ್ತಿಯಿಂದ ಆಚರಿಸುವವಳಾಗಿದ್ದಳು. ಅವಳು ದೊಡ್ಡವಳಾದ ಬಳಿಕ ಸಹ ಅವಳಲ್ಲಿ ಭಕ್ತಿಭಾವವು ಹೆಚ್ಚುತ್ತಲೇ ಬಂದಿತು. ಆಗ ಅವಳು ತನ್ನ ತಂದೆಯ ರಾಜವೈಭವಗಳನ್ನು ತೊರೆದಳು. ತನ್ನ ಉಡಿಗೆ ತೊಡಿಗೆ ಗಳನ್ನು ಸಹ ಬಿಟ್ಟುಕೊಟ್ಟು ದಿಗಂಬರಿಯಾದಳು! ಆಗ ತಂದೆತಾಯಿಗಳು ಅವಳಿಗೆ- ಎಲೆ ಮಗಳೇ, ಇದೆಲ್ಲಿಯ ಭ್ರಾಂತಿ ನಿನಗೆ? ಈ ಮಾರ್ಗವನ್ನು ಬಿಟ್ಟುಬಿಡು, ಎಂದು ಎಷ್ಟು ಬೋಧಿಸಿದರೂ ಅದು ಅವಳಿಗೆ ರುಚಿಸಲಿಲ್ಲ. ಅವಳು ಅವರಿಗೆ ನನಗೆ ಶಿವನ ಭ್ರಾಂತಿಯುಂಟಾಗಿದೆ. ನನಗೆ ನಿಮ್ಮ ರಾಜ ವೈಭವಗಳು ಬೇಡ. ಕಲ್ಯಾಣದಲ್ಲಿ ಬಸವಾದಿ ಪ್ರಮಥರಿದ್ದು ಅವರು ಶಿವಾ ನುಭವದ ಮಾರ್ಗವನ್ನು ಬೋಧಿಸುತ್ತಲಿದ್ದಾರೆ. ಅವರಿದ್ದೆಡೆಗೆ ನಾನು ಹೋಗುವೆನು, ಎಂದು ಹೇಳಿ ತನ್ನ ದೇಶವನ್ನು ಬಿಟ್ಟು ಕಲ್ಯಾಣಕ್ಕೆ ಹೊರಡಲನುವಾದಳು. ಶಿವದೇವಿಗೆ ಆಗ ತಂದೆ ತಾಯಿಗಳು ಎಷ್ಟು ಪರಿಯಿಂದ ಹೇಳಿದರೂ ಅವಳು ತನ್ನ ನಿಶ್ಚಯವನ್ನು ಬಿಡಲಿಲ್ಲ- ಅವಳು ಪಾದಚಾ ರಿಯಾಗಿ ಘೋರಾರಣ್ಯಗಳನ್ನು ಮತ್ತು ಮರುಳು ಪ್ರದೇಶಗಳನ್ನು ಪ್ರವೇ ಶಿಸುತ್ತ ಮಾರ್ಗಕ್ರಮಣ ಮಾಡಹತ್ತಿದಳು. ಅವಳು ಅತ್ಯಂತ ಲಾವಣ್ಯ ವತಿಯು. ಮಾರ್ಗದಲ್ಲಿ ಅವಳನ್ನು ಬಹು ಜನರು ಕಂಡು ಅವಳಿಗೆ ಮೋಹಿ ತರಾದರು. ಅವರು ತಮ್ಮೊಡನೆ ಸುಖವಾಗಿರಲು ಅವಳಿಗೆ ಬಹಳ ಹೇಳಿ ಕೊಂಡರು. ಆದರೆ ವೈರಾಗ್ಯಶೀಲೆಯಾದ ನಿಜದೇವಿಯು ಅವರನ್ನು ನಿರಾ ಕರಿಸಿದಳು. ಒಂದುದಿನ ಶಿವನು ಅವಳನ್ನು ಪರೀಕ್ಷಿಸಬೇಕೆಂದು ಒಬ್ಬ ಸುಂದರ ಪುರುಷನ ವೇಷವನ್ನು ಧಾರಣ ಮಾಡಿ ಅವಳಿದ್ದೆಡೆಗೆ ಬಂದು, ಎಲೌ ನಿಜದೇವಿಯೇ, ನೀನು ನನ್ನ ಸತಿಯಾಗಿ ನನ್ನೊಡನೆ ಸುಖವಾಗಿ

ಬಾಳ್ಳು, ಎಂದು ಹೇಳಿಕೊಂಡನು. ಆದರೆ ನಿಜದೇವಿಯು ಅವನು ಶಿವನೆಂಬುದನ್ನು ತನ್ನ ಸುಜ್ಞಾನದಿಂದ ತಿಳಿದು ನಗುತ್ತ— ನೀನಾರೆಂಬುದು ನನಗೆ ತಿಳಿಯಿತು. ನೀನು ಕಾಮವೈರಿಯು ಎಂಬುದನ್ನು ನಾನು ಬಲ್ಲೆನು. ಆದರೆ ಆ ಕಾಮ ನನಗಿಲ್ಲ, ಹೋಗು ಎಂದೆನಲು ಶಿವನು— ಆಹಾ ಇವಳು ನನ್ನನ್ನು ಗುರುತಿಸಿದಳು. ಎಂದು ನಾಚಿ ಬಯಲಾಗಿ ಹೋದನು. ಮುಂದೆ ನಿಜದೇವಿಯು ಮಾರ್ಗಕ್ರಮಣ ಮಾಡುತ್ತಿರಲು, ಶಿವನು ಒಬ್ಬ ವಾಣಿಜನ ವೇಷವನ್ನು ಧರಿಸಿ ಪುನಃ ಅವಳಿದ್ದೆಡೆಗೆ ಬಂದು—ನಿಜದೇವಿಯೇ, ನನಗೆ ಯಾರೂ ಇಲ್ಲ. ನೀನೆನಗೆ ಸತಿಯಾಗಿರು ಎಂದೆನ್ನಲು ಅವಳು ಅವನು ಶಿವನೆಂಬುದನ್ನು ಗುರುತಿಸಿ ಅವಳು— ನಿನ್ನ ಜಡೆ, ತೊಡೆಗಳ ಮೇಲೆ ಗಂಗೆ ಗೌರಿಯರೆಂಬ ಸ್ತ್ರೀಯರಿದ್ದಾರೆ. ಷಣ್ಮುಖ, ವೀರಭದ್ರ, ವಿನಾಯಕರೆಂಬ ಪುತ್ರರು ಇದ್ದಾರೆ, ಇಂಥ ನಿನ್ನನ್ನು ನಾನು ವರಿಸಿದರೆ, ಕಲ್ಯಾಣದಲ್ಲಿಯ ಶರಣರು ನನ್ನನ್ನು ನೋಡಿ ನಗಲಿಕ್ಕಿಲ್ಲವೇ? ಕೈಲಾಸದ ಪ್ರಮಥರು ಹೇಗೆ ಮೆಚ್ಚುವರು? ಎಂದು ನುಡಿಯಲು ಶಿವನು ಅವಳ ವಿರಕ್ತಿಯನ್ನು ನೋಡಿ ಮೆಚ್ಚಿ ಪ್ರತ್ಯಕ್ಷನಾಗಿ— ಎಲೌ ನಿಜದೇವಿಯೇ, ನಿನ್ನ ವೈರಾಗ್ಯಕ್ಕೆ ನಾನು ಮೆಚ್ಚಿದೆನು. ನನ್ನ ಮಾತನ್ನು ನೀನು ಕೇಳು. ನೀನು ಹೀಗೆ ದಿಗಂಬರಿಯಾಗದೆ ನಾನು ನಿನಗೆ ಈಗ ಕೊಡುವ ಈ ಬೊಂತೆ(೧) ಯನ್ನು ತೆಗೆದುಕೋ; ಇದನ್ನು ನೀನು ಹೊದ್ದುಕೊಂಡು, ಮಾರ್ಗಕ್ರಮಣ ಮಾಡು, ಎಂದು ಹೇಳಲು, ನಿಜದೇವಿಯು ಶಿವನ ಈ ಅಪ್ಪಣೆಯನ್ನು ಮೀರಲಾರದೆ ಹಾಗೆಯೇ ಮಾಡುವೆನೆಂದು ಅವನಿಗೆ ಹೇಳಿ ಅದನ್ನು ಹೊದೆಯಲಿಕ್ಕೆ ಪ್ರಾರಂಭಿಸಿದಳು. ಅಂದಿನಿಂದ ಅವಳಿಗೆ 'ಬೊಂತಾದೇವಿ' ಎಂಬ ಹೆಸರು ಪ್ರಾಪ್ತವಾಯಿತು.

ಹೀಗೆ ಬೊಂತಾದೇವಿಯು ಅನೇಕ ಕಷ್ಟಗಳನ್ನು ಸಹಿಸುತ್ತ ಕಲ್ಯಾಣ ಪಟ್ಟಣಕ್ಕೆ ಬಂದು ತಲುಪಿದಳು. ಆದರೆ ಅವಳು ಅಲ್ಲಿ ತಾನಾರೆಂಬುದನ್ನು ಯಾರಿಗೂ ತಿಳಿಸಲಿಲ್ಲ. ಗುಪ್ತ ಭಕ್ತಿಯಿಂದ ಪಟ್ಟಣದಲ್ಲಿ ಇರಲಿಕ್ಕೆ ಹತ್ತಿದಳು. ಅವಳು ಬಸವೇಶ್ವರ, ಅಲ್ಲಮಪ್ರಭು ಮೊದಲಾದ ಶಿವಶರಣರಿದ್ದ ಶಿವಾನುಭವ ಮಂಟಪವನ್ನು ಪ್ರವೇಶಿಸಿ, ಅಲ್ಲಿ ನಡೆಯುತ್ತಿದ್ದ ಶಿವಾನುಭವವನ್ನು ಪಾಲಿಸುವವಳಾದಳು. ಇಷ್ಟೇ ಅಲ್ಲ, ಅವಳೂ ತನ್ನ

---

(೧) ಕೌದಿ.

ಶಿವಾನುಭವವನ್ನು ವಚನಗಳ ಮೂಲಕ ನಿರೂಪಿಸ ಹತ್ತಿದಳು. ಅವಳು ಬಸವೇಶ್ವರನ ಸನ್ನಿಧಿಯಲ್ಲಿ ಅವನ ದಿವ್ಯವಾದ ಮಂದಿರದಲ್ಲಿರಲಿ, ಇಲ್ಲವೆ ಪಟ್ಟಣದಲ್ಲಿದ್ದ ತಿಪ್ಪೆಗಳ ಮೇಲಿರಲಿ, ಅವೆಲ್ಲವೂ ಸರಿ ಎಂದು ಭಾವಿಸಿ ಕಲ್ಯಾಣ ಪಟ್ಟಣದಲ್ಲಿ ಕಾಲಕಳೆಯ ಹತ್ತಿದಳು. ಆದರೆ ಅವಳಾರೆಂಬು ದನ್ನು ಯಾರೂ ಅರಿತಿರಲಿಲ್ಲ. ಅವಳನ್ನು ಅರಿತವನು ಶಿವಜ್ಞಾನಿಯಾದ ಅಲ್ಲಮಪ್ರಭುವು ಒಬ್ಬನೇ ಮಾತ್ರ.

ಹೀಗೆ ಬೊಂತಾದೇವಿಗೆ ಅನೇಕ ವರ್ಷಗಳು ಸಂದಿಹೋದವು. ಮುಂದೆ ಪಟ್ಟಣದಲ್ಲಿ ಮಧುವರಸ ಹರಳಯ್ಯಗಳ ಮೂಲಕ ಬಿಜ್ಜಳನಿಗೂ ಶಿವ ಶರಣರಿಗೂ ಮನಸ್ತಾಪಗಳುಂಟಾದವು. ಹರಳಯ್ಯ ಮಧುವರಸರು ತಮ್ಮ ತಮ್ಮೊಳಗೆ ತಮ್ಮ ಮಕ್ಕಳಲ್ಲಿ ಲಗ್ನವನ್ನು ಜರುಗಿಸಿಕೊಂಡರು. ಮಧು ವರಸನು ಬ್ರಾಹ್ಮಣನು, ಹರಳಯ್ಯನು ಮಚ್ಚಿಗನು, ಆದರೆ ಈ ಉಭಯ ತರು ಶಿವಾನುಭವಿಗಳು, ಕಟ್ಟಾಚರಣೆಯಿಂದ ಅದನ್ನು ಪಾಲಿಸುವವರು- ಆಗ ಬಿಜ್ಜಳನು ಹರಳಯ್ಯ ಮಧುವಯ್ಯಗಳನ್ನು ಕಂಸಿ ಅವರನ್ನು ಕೊಲೆ ಬಡಿಸಿದನು. ಇದರಿಂದ ಪಟ್ಟಣದಲ್ಲಿ ರಕ್ತಪಾತಗಳುಂಟಾಗ ಹತ್ತಿದವು. ಬಹು ಜನ ಶಿವಶರಣರು ಪಟ್ಟಣವನ್ನು ಬಿಟ್ಟು ಹೊರ ಹೊರಟರು. ಅವ ರಲ್ಲಿ ಮಹಾದೇವಿಯಕ್ಕನೂ ಶ್ರೀಶೈಲಕ್ಕೆ ಹೊರಡಲು ಸನ್ನದ್ಧಳಾದಳು. ಅವಳು ಹೋಗುವದನ್ನು ನೋಡಿ ಶಿವಶರಣರು ಮಹಾದೇವಿಯಕ್ಕನಂಥ ವೀರ ಭಕ್ತೆಯರು ಕಲ್ಯಾಣದಲ್ಲುಂಟೇ? ಅವಳನ್ನು ಬಿಟ್ಟು ನಾವು ಹೇಗೆ ಇರಬೇಕು, ಎಂದು ದುಃಖಿಸುತ್ತಿರಲು, ಅಲ್ಲಮಪ್ರಭುವು ಇದನ್ನು ತಿಳಿದು ಬೊಂತಾದೇವಿಯನ್ನು ಅವರಿಗೆ ತೋರಿಸಿ— ಈಕೆಯನ್ನು ನೋಡಿರಿ, ಅವಳ ಪರಿಚಯವು ನಿಮಗೆ ಇಲ್ಲ. ಈ ಬೊಂತಾದೇವಿಯು ಕಾಶ್ಮೀರ ದೇಶದ ಅರಸನ ಕುವರಿಯು. ಇವಳ ಚರಿತೆಯು ಬಹು ಅದ್ಭುತವಾದದ್ದು. ಅವಳು ವೀರ ವಿರಕ್ತಿ ಭಾವವುಳ್ಳವಳು. ಅವಳು ಯಾವ ಸಮಯದಲ್ಲಿಯೂ ಕಲ್ಯಾಣ ಪಟ್ಟಣವನ್ನು ಬಿಟ್ಟು ಹೋಗುವವಳಲ್ಲ. ಅವಳು ಇಲ್ಲಿಯೇ ಇರುವಳು ಎಂದು ಆಕೆಯ ಮಹತ್ವವನ್ನು ಅವರಿಗೆ ತಿಳಿಸಿ ಹೇಳಿ ಅವರನ್ನು ಸಂತೈಸಿ ತಾನು ಮಹಾದೇವಿಯಕ್ಕನೊಡನೆ ಶ್ರೀಶೈಲಕ್ಕೆ ಹೊರಡುವವ ನಾದನು.

ಬೊಂತಾದೇವಿಯು ಕಡೆಯ ವರೆಗೂ ಕಲ್ಯಾಣ ಪಟ್ಟಣದಲ್ಲಿಯೇ ಉಳಿದು ಅಲ್ಲಿಯೇ ಅವಳು ತನ್ನ ಲಿಂಗದಲ್ಲಿ ಅಡಗಿದಳು. ಆ ಸಮಯದಲ್ಲಿ ಒಂದು ಅದ್ಭುತವಾಯಿತು. ಅವಳು ತಾನುಟ್ಟಿದ್ದ ಶಿವನು ಕೊಟ್ಟಿದ್ದ ಬೊಂತೆಯನ್ನು ಗಗನಕ್ಕೆ ಹಾರಿಸಿದಳು. ಆಗ ಅದು ಹಾರಾಡುತ್ತ ಅಲ್ಲಿಯೇ ಬಯಲಾಯಿತು ಮತ್ತು ಅದರೊಡನೆಯೇ ಅವಳೂ ನಿರವಯವನ್ನು ಹೊಂದಿದಳು.

ಬೊಂತಾದೇವಿಯು ವಚನಕಾರಳಿದ್ದಾಳೆ. ಅವಳ ಎರಡು ವಚನಗಳು ಮಾತ್ರ ನಮಗೆ ದೊರಕಿವೆ. ಅವುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

ಬೊಂತಾದೇವಿಗೆ ಬಿಂತಲಾದೇವಿ ಎಂಬ ಇನ್ನೊಂದು ಹೆಸರಿದೆ. ಪುರಾತನ ದೇವಿಯರ ತ್ರಿವಿದಿಯಲ್ಲಿ ಈಕೆಯ ವಿಷಯವಾಗಿ ಹೇಳಿರುವದೇನೆಂದರೆ:—

ಭ್ರಾಂತಿ ಭ್ರಮೆಗಳನಳಿದು | ಶಂತು ಕಾಲರನೊರೆದು |
ಅಂತಕಾಂತಕನ ಧ್ಯಾನ ಮುಪ್ಪುರಿಗೊಂಡ |
ಬಿಂತಲಾದೇವಿ ಶರಣಾಗು.

ಇದರಲ್ಲಿ ಬೊಂತಾದೇವಿಯು ನಿಜವನ್ನರಿತವಳು, ಕಾಮನನ್ನು ಯಮನನ್ನು ಜಯಿಸಿದವಳು ಎಂದು ಕವಿಯು ಹೇಳಿ ಅವಳು ಪರಮಾತ್ಮನ ಧ್ಯಾನದಲ್ಲಿ ನಿರತಳಾದವಳು ಎಂದು ಅವಳನ್ನು ಸ್ತುತಿಸಿದ್ದಾನೆ.

## ವಚನಗಳು.

(೧) ಊರೊಳಗಣ ಬಯಲು, ಊರ ಹೊರಗಣ ಬಯಲು ಎಂದುಂಟೇ? ಊರೊಳಗಣ ಬ್ರಾಹ್ಮಣ ಬಯಲು, ಊರಹೊರಗಣ ಹೊಲೆಯ ಬಯಲೆಂದುಂಟೇ? ಎಲ್ಲಿ ನೋಡಿದಡೆ ಬಯಲೊಂದೇ ಭಿತ್ತಿಯಿಂದೊಳಹೊರಗೆಂಬ ನಾಮವೈಸೆ. ಎಲ್ಲಿ ನೋಡಿ ಕರೆದರೆ ಓ ಎಂಬಾತನೇ ಬಿಡಾಡ.

ಭಾವ:— ಜಾತಿಭೇದವೆಂಬುದಿಲ್ಲ. ಅದು ಕೃತ್ರಿಮವಾದುದು ಎಂಬುದನ್ನು ಬೊಂತಾದೇವಿಯು ಅತ್ಯಂತ ತಾತ್ವಿಕ ರೀತಿಯಿಂದ ಈ ವಚನದಲ್ಲಿ ಬೋಧಿಸಿದ್ದಾಳೆ.

(೨) ಪರಮಪುಟ್ಟನಾಥ ಎಂಬ ಲಿಂಗ ತರಗೆಲೆಗಳಿಗೊಂದೇ ಗಾಳಿ ಹಾರು ತಿಪ್ಪ ಒಂದೇ ಅನಿಲನಿಂದ ದೇಹಪರಪುಟ್ಟಗಳೊಳಗೆಲ್ಲ ಕರೆದರೆ ಓ ಎಂಬಾತನೇ ಬಿಡಾಡ,

ಭಾವ:— ವಚನವು ಅಶುದ್ಧವಿದೆ. ಆದರೆ ಭಾವವು ೧ನೇ ವಚನದಲ್ಲಿದ್ದಂತೆಯೇ ಇರುತ್ತಿದೆಂದು ತೋರುತ್ತಿದೆ.

ಈಕೆಯ ಮುದ್ರಿಕೆಯು 'ಓ ಎಂಬಾತನೆ ಬಿಡಾಡ' ಎಂದಿದ್ದು ಇದರ ಮೇಲಿಂದ ಪರಮಾತ್ಮನ ಸ್ವರೂಪವನ್ನು ಕುರಿತು ಅವಳ ವಚನಗಳಲ್ಲಿ ನಿರೂಪಣೆ ಹೆಚ್ಚಾಗಿ ಇದ್ದುದಾಗಿ ನಾವು ಊಹಿಸುತ್ತೇವೆ.

———

## ೨. ಗೊಗ್ಗವ್ವೆ.

ಕೇರಳ ದೇಶದಲ್ಲಿ (೧) ಅವಲೂರೆಂಬ ಪುರವಿದೆ. ಅಲ್ಲಿ ಅತ್ಯಂತ ಶಿವಭಕ್ತಿಯುತರಾದ ದಂಪತಿಗಳಿದ್ದು ಅವರ ಉದರದಲ್ಲಿ ಗೊಗ್ಗವ್ವೆಯು ಜನಿಸಿದಳು. ಅವರ ಸಹವಾಸದಿಂದ ಗೊಗ್ಗವ್ವೆಯೂ ಕೂಡ ಶಿವಭಕ್ತಿಯುತಳಾಗಿ ಬೆಳೆದಳು. ಅವಳಿಗೆ ಯೌವ್ವನವು ಪ್ರಾಪ್ತವಾಯಿತು. ಆಗ ಅವಳ ತಾಯಿ ತಂದೆಗಳು ಅವಳಿಗೆ ಲಗ್ನ ಮಾಡಬೇಕೆಂದು ಬಯಸಿ ಯೋಗ್ಯ ವರನನ್ನು ಶೋಧಿಸಲು ಪ್ರಾರಂಭಿಸಿದರು. ಇದನ್ನು ಗೊಗ್ಗವ್ವೆಯು ತಿಳಿದು ಅವಳು ತಾಯಿ-ತಂದೆಗಳಿಗೆ— ನಾನು ಲಗ್ನವಾಗುವದಿಲ್ಲ. ಶಿವಶರಣರಂತೆ ಶಿವನ ಸೇವೆಯಲ್ಲಿಯೇ ಇರುವೆನೆಂದು ಹೇಳಿದಳು. ಆದರೆ ತಾಯಿ-ತಂದೆಗಳು ಹೀಗಿರುವದು ಸರಿಯಾದುದಲ್ಲ, ಎಂದು ತಿಳಿಸಿ ವರನ ಶೋಧದಲ್ಲಿ ತೊಡಗಿದರು. ಆಗ ಗೊಗ್ಗವ್ವೆಯು ತನ್ನ ಇಚ್ಛೆಯು ಇಲ್ಲಿ ನೆರವೇರದೆಂದು ಭಾವಿಸಿ ಅವಳು ಯಾರಿಗೂ ತಿಳಿಯದಂತೆ ಮನೆಯನ್ನು ಬಿಟ್ಟು ಪಟ್ಟಣದಲ್ಲಿದ್ದ ಗೊಗ್ಗೇಶ್ವರನ ದೇವಾಲಯದಲ್ಲಿ ಹೋಗಿ ಅವಿತುಕೊಂಡು ಕುಳಿತಳು. ತಾಯಿ-ತಂದೆಗಳು ಅವಳನ್ನು ಎಷ್ಟು ಹುಡುಕಿದರೂ ಆಕೆಯು ಸಿಕ್ಕಲಿಲ್ಲ. ಮೂರು ದಿವಸಗಳವರೆಗೆ ಹುಡುಕಿದರೂ ಸಿಕ್ಕಲಿಲ್ಲ. ಆಗ

(೧) ಇದು ಮಲಬಾರ ಪ್ರಾಂತ.

ಅವರು ಅತ್ಯಂತ ಮನ ಮರುಗಿ ಮಗಳನ್ನು ಹುಡುಕುತ್ತಾ ಹುಡುಕುತ್ತಾ ಗೊಗ್ಗೇಶ್ವರನ ದೇವಾಲಯಕ್ಕೆ ಬಂದು ಅವರು ಲಿಂಗದ ಮುಂದೆ ನಿಂತುಕೊಂಡು, ಗೊಗ್ಗೇಶ್ವರನೇ! ನಿನಗೆ ಬೇಡಿಕೊಂಡು ನಾವು ಮಗಳನ್ನು ಪಡೆದೆವು. ಅವಳಿಗೆ ನಿನ್ನ ಹೆಸರನ್ನೇ ಇಟ್ಟೆವು. ಇನ್ನು ಮೇಲೆ ನೀನೇ ಆಕೆಗೆ ಕಲ್ಯಾಣವನ್ನು ಮಾಡು, ಎಂದು ಲಿಂಗಕ್ಕೆ ಬೇಡಿಕೊಂಡು ವಂದಿಸಿ ಮನೆಗೆ ಹೋದರು.

ಗೊಗ್ಗವ್ವೆಯು ದೇವಾಲಯದಲ್ಲಿ ಮರೆಗೆ ನಿಂತುಕೊಂಡು ಇದನ್ನೆಲ್ಲ ಕೇಳುತ್ತಿದ್ದಳು. ಅವಳು ತಾಯಿತಂದೆಗಳು ದೇವರಿಗೆ ಹೇಳಿದ ಮಾತನ್ನು ಕೇಳಿ ಗುಡಿಯಿಂದ ಮನೆಗೆ ಬಂದಳು. ಅವಳು ಬರಲು ತಾಯಿತಂದೆಗಳು ಅತ್ಯಂತ ಹರುಷಿತರಾಗಿ ಮಗಳಿಗೆ— ನೀನು ಮದುವೆಯನೊಲ್ಲದಿದ್ದರೆ ಬಿಟ್ಟುಬಿಡು. ನಿನ್ನ ಮನಸ್ಸಿಗೆ ಬಂದಂತೆ ಲಿಂಗ ಪೂಜೆಯನ್ನು ಮಾಡಿಕೊಂಡಿರು, ಎಂದು ಹೇಳಿದರು. ಅದಕ್ಕೆ ಗೊಗ್ಗವ್ವೆಯು— ನನಗೆ ಲಿಂಗಪೂಜೆಯ ರೀತಿಯು ಗೊತ್ತಿಲ್ಲ. ನಾನು ದಿನಾಲು ಶಿವಾಲಯಕ್ಕೆ ಹೋಗಿ ದೀಪವನ್ನು ಹತ್ತಿಸಿ, ದೇವರಿಗೆ ಧೂಪವನ್ನಿಕ್ಕಿ ಮಾತ್ರ ಬರುವೆನು. ಇದೇ ನನ್ನ ಪೂಜೆಯು, ಎಂದು ಹೇಳಿ ಅವಳು ದಿನಾಲು ಗುಡಿಗೆ ಹೋಗಿ ತುಪ್ಪದಿಂದ ದೀಪವನ್ನು ಹತ್ತಿಸಿ, ಕರ್ಪೂರ ಅಗರು ಕುಮುಂಜನದಿಂದ ಧೂಪವನ್ನಿಕ್ಕುವಳು. ಆಮೇಲೆ ಲಿಂಗಕ್ಕೆ ಶರಣೆಂದು ಮನೆಗೆ ತಿರುಗಿಬರುವಳು. ಇದೇ ಅವಳ ಲಿಂಗ ಪೂಜೆಯು. ಅವಳು ತಪ್ಪದೆ ಈ ಕ್ರಮವನ್ನು ಇಟ್ಟುಕೊಂಡಿದ್ದರಿಂದ ಅವಳಿಗೆ ಲೋಕದಲ್ಲಿ 'ಧೂಪದ ಗೊಗ್ಗವ್ವೆ' ಎಂಬ ಹೆಸರಾಯಿತು.

ಹೀಗಿರುವಲ್ಲಿ ಒಂದು ದಿನ ಶಿವನು ಅವಳನ್ನು ಪರೀಕ್ಷಿಸ ಬೇಕೆಂದು ಬಯಸಿ ಅವನು ರೂಪುಳ್ಳ ಸುಂದರ ಪುರುಷನಾಗಿ ಗೊಗ್ಗವ್ವೆಯನ್ನು ಭೆಟ್ಟಿಯಾಗಿ—ನೀನು ಇನ್ನು ಮೇಲೆ ನನ್ನ ಸತಿಯಾಗಿರಬೇಕು. ನನ್ನನ್ನು ನೀನು ವರಿಸಲೇ ಬೇಕು. ಎಂದು ಕಠೋರವಾಗಿ ನುಡಿಯುತ್ತ ಅವಳನ್ನು ಭೀತಿಗೊಳಿಸಿದನು. ಆದರೆ ಗೊಗ್ಗವ್ವೆಯು ಅದಕ್ಕೆ ಅಂಜಲಿಲ್ಲ. ಅವಳು ಅವನಿಗೆ— ನಾನು ನಿನ್ನನ್ನು ವರಿಸುವದಿಲ್ಲ, ಎಂದು ನುಡಿಯಲು ಆ ವೇಷಧಾರಿಯಾದ ಶಿವನು ಅವಳನ್ನು ಹಿಂಸಿಸಲು ಮುಂದಾದನು. ಆದರೆ ಆ ಶರಣೆಯು ಸ್ಮರಿಸುತ್ತ 'ಶಿವನೇ' ಎಂದು ಉಚ್ಚರಿಸಲು ಶಿವನು ಅವಳಿಗೆ ಪ್ರತ್ಯಕ್ಷನಾಗಿ— ನಾನು ನಿನಗೆ ಮೆಚ್ಚಿದೆನು. ನೀನು ಬೇಕಾದದ್ದನ್ನು ಬೇಡು,

ಕೊಡುವೆನೆಂದೆನಲು ಅವಳು— ನನಗೇನು ಬೇಡ. ನಾನು ಶಿವಭಕ್ತರ ಬಳಿ ಯಲ್ಲಿದ್ದುಕೊಂಡು ಅವರಿಗೆ ನನ್ನ ಭಕ್ತಿಯನ್ನು ಸಲ್ಲಿಸುವಂತೆ ಮಾಡು, ಎಂದೆನಲು ಶಿವನು ಪ್ರೀತನಾಗಿ ಹಾಗೆಯೇ ಆಗಲಿ ಎಂದು ನುಡಿದನು. ಆದರೆ ಅವನು ಅಷ್ಟಕ್ಕೆ ಬಿಡದೆ ಗೊಗ್ಗವ್ವೆಗೆ ತಾನೇ ಗುರುವಾಗಿ ಅವಳಿಗೆ ವೀರಶೈವೋಪದೇಶವನ್ನು ಮಾಡಿದನು. ಆಮೇಲೆ ಅವಳಿಗೆ ನೀನು ದಿನಾಲು ಶಿವಭಕ್ತರಲ್ಲಿಗೆ ಹೋಗಿ ಅವರ ಪೂಜೆಗೋಸ್ಕರ ಧೂಪವನ್ನರ್ಪಿಸುತ್ತಿರು, ಈ ಕಾಯಕವನ್ನು ತಪ್ಪದೆ ಅನುಸರಿಸು ಎಂದು ಹೇಳಿ ಅಂತರ್ಧಾನನಾದನು. ಅಂದಿನಿಂದ ಗೊಗ್ಗವ್ವೆಯು ತನ್ನ ಧೂಪದ ಕಾಯಕವನ್ನು ನಡಿಸುತ್ತ ಶಿವಾನು ಭವದಲ್ಲಿರುವವಳಾದಳು.

ಹೀಗೆ ಗೊಗ್ಗವ್ವೆಯು ಕಾಲಕಳೆಯುತ್ತಿರಲು ಕೇರಳ ದೇಶದ ರಾಜ ನಾದ ಚಾರಮರಾಯನು ಕೇವಲ ಶಿವಭಕ್ತಿಯುತನಾಗಿ ಕುಡಗಲೂರು ಎಂಬ ತನ್ನ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಅವನು ಒಂದು ದಿವಸ ಪರಮಾತ್ಮನು ನಂಬೆಣ್ಣನೆಂಬ ಶಿವಶರಣನನ್ನು ಕೈಲಾಸಕ್ಕೆ ಕರೆದೊಯ್ದನೆಂಬ ವಾರ್ತೆಯನ್ನು ಕೇಳಿ ಅವನು ನಂಬೆಣ್ಣನನ್ನು ಕಾಣಬೇಕೆಂದು ತನ್ನ ಸೇನೆಯೊಂದಿಗೆ ಅವ ನನ್ನು ಸುತ್ತಲೂ ಹುಡುಕಹತ್ತಿದನು. ಆಗ ಅವನು ಗೊಗ್ಗವ್ವೆಯು ಇದ್ದ ಅವಲೂರು ಗ್ರಾಮಕ್ಕೆ ಬರಲಾಗಿ ಅವಳು ಒಬ್ಬ ಭಕ್ತನ ಮನೆಯಲ್ಲಿ ಧೂಪವನಿಕ್ಕಿ ತಿರುಗಿಬರುತ್ತಿರುವದನ್ನು ಕಂಡನು. ಗೊಗ್ಗವ್ವೆಯು ದಾರಿ ಯಲ್ಲಿ ಚಾರಮರಾಯನನ್ನು ಕಂಡು ಅವನಿಗೆ— ನೀವಿದೆಲ್ಲಿಗೆ ಗಮಿಸುತ್ತೀರಿ, ಎಂದು ಕೇಳಲು, ಅವನು—ನಂಬೆಣ್ಣನು ಶಿವನೊಡನೆ ಕೈಲಾಸಕ್ಕೆ ಹೋದು ದನ್ನು ಕೇಳಿ ನಾನು ಅವನನ್ನು ಹುಡುಕುತ್ತಲಿದ್ದೇನೆ. ಅವನು ಇನ್ನೂ ಸಿಕ್ಕಿಲ್ಲ. ಅವನನ್ನು ಕಾಣುವ ಬಗೆ ಹೇಗೆ, ಎಂದು ಕೇಳಲು ಗೊಗ್ಗವ್ವೆಯು ಅದಕ್ಕೆ ನಕ್ಕು— ನಂಬೆಣ್ಣನು ಎಂದಾದರೂ ನಿಮಗೆ ಮರ್ತ್ಯಲೋಕದಲ್ಲಿ ಸಿಕ್ಕುವದುಂಟೇ ? ಅವನನ್ನು ಕಾಣಲು ನೀವು ಕೈಲಾಸಕ್ಕೆ ಹೋಗಬೇಕು, ಎಂದು ಹೇಳಿದಳು. ಅದಕ್ಕೆ ಚಾರಮರಾಯನು— ಆ ಕೈಲಾಸಕ್ಕೆ ಹೇಗೆ ಹೋಗಬೇಕು ? ಅದೆಷ್ಟು ದೂರವಿದೆ? ಎಂದು ಕೇಳಿದನು. ಅದಕ್ಕೆ ಗೊಗ್ಗವ್ವೆಯು — ಕೈಲಾಸವು ದೂರವಿಲ್ಲ. ಅದು ಇಲ್ಲಿಂದ ಒಂದೇ ಗೇಣು ಮಾತ್ರ ದೂರವಿದೆ ಎಂದು ನುಡಿದಳು. ಅದಕ್ಕೆ ಚಾರಮನು ಬಹಳ ಆಶ್ಚರ್ಯ ಭರಿತನಾಗಿ— ನನಗೆ ಆ ದಾರಿಯನ್ನು ತೋರಿಸುತ್ತೀಯಾ ಎಂದು ಕೇಳಲು ಗೊಗ್ಗವ್ವೆಯು ಆರಸನಿಗೆ ತನ್ನ ಧೂಪದ ಕಾಯಕದ ರೀತಿಯನ್ನು

ವಿವರಿಸಿ ನೀನು ಆತ್ಮಲಿಂಗಕ್ಕೆ ಹೀಗೆಯೇ ಭಕ್ತಿಯಿಂದ ಧೂಪವನಿಕ್ಕಿದಲ್ಲಿ ಮೇಲಕ್ಕೆ ಹೋಗುವ ಅದರ ಹೊಗೆಯಲ್ಲಿಯೇ ನಿನಗೆ ಕೈಲಾಸದ ದಾರಿಯು ಕಾಣುವದು. ಆ ದಾರಿಯಿಂದ ನೀನು ಅಲ್ಲಿಗೆ ಹೋಗಬೇಕು ಎಂದು ಅವನಿಗೆ ತಿಳಿಸಿದಳು. ಆಗ ಶಿವಭಕ್ತನಾದ ಚಾರಮನು ಆಕೆಯಿಂದ ಆತ್ಮಲಿಂಗದ ಸ್ವರೂಪವನ್ನು ತಿಳಿದುಕೊಂಡು ಧೂಪವನ್ನಿಕ್ಕಲು ಅದರೊಳಗಿಂದ ಕೈಲಾಸದ ದಾರಿಯು ಅವನಿಗೆ ಕಾಣಿಸಹತ್ತಿತು. ಅವನು ಅದರೊಳಗಿಂದಲೇ ಶಿವನೆಡೆಗೆ ಹೋದನು. ಹೀಗೆ ಗೊಗ್ಗವ್ವೆಯು ಚಾರಮರಾಯನಿಗೆ ತನ್ನ ಕಾಯಕದ ರೀತಿಯನ್ನು ತಿಳಿಸಿ ಅವನಿಗೆ ಮೋಕ್ಷದ ಹಾದಿಯನ್ನು ತೋರಿಸಿದ್ದಾಳೆ.

ಗೊಗ್ಗವ್ವೆಯು ವಚನಕಾರ್ತಿಯು ಇದ್ದಾಳೆ. ಅವಳು ತನ್ನ ಶಿವಾನುಭವದ ಜ್ಞಾನವನ್ನು ವಚನಗಳ ಮೂಲಕ ನಿರೂಪಿಸಿದ್ದಾಳೆ. ನಮಗೆ ದೊರೆತ ಅವಳ ಆರು ವಚನಗಳನ್ನು ನಾವು ಮುಂದೆ ಕೊಟ್ಟಿದ್ದೇವೆ.

ಈ ಪ್ರಕಾರ ಗೊಗ್ಗವ್ವೆಯು ಜನರಿಗೆ ಬೋಧಿಸುತ್ತ ತನ್ನ ಕಾಯಕವನ್ನು ನಡಿಸುತ್ತ ಲಿಂಗಕ್ಕೆ ಧೂಪವನ್ನು ನೀಡುತ್ತ ಅದರ ಹೊಗೆಯೊಳಗಿಂದಲೇ ಲಿಂಗದೊಳಗೆ ಬಯಲಾದಳು. ಇದರಲ್ಲಿ ಪ್ರಾಣಲಿಂಗವನ್ನು ಕಾಣುವ ರೀತಿಯು ಅಡಕವಾಗಿದೆ. ವಾಚಕರು ಇದನ್ನು ತಿಳಿದು ಆಚರಿಸಬೇಕು.

ಪುರಾತನ ದೇವಿಯರ ತ್ರಿವಿದಿಯಲ್ಲಿ ವರ್ಣಿಸಿರುವದು ಹೇಗೆಂದರೆ —

ಮೂರು ಲೋಕಗಳರಿಯೆ ಚಾರಮರಾಯನಿಗೆ।
ಮಾರಹರನೂರ ದಾರಿಯನ್ನು ತೋರಿಸಿದ ॥
ನೀರೆ ಗೊಗ್ಗವ್ವೆ ಶರಣಾಗು.

ಗೊಗ್ಗವ್ವೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಪುರಾತನರಲ್ಲಿ ಬರುತ್ತಾಳೆ. ಬಸವೇಶ್ವರನು ತನ್ನ ವಚನಗಳಲ್ಲಿ ಚಾರಮರಾಯನನ್ನು ಬಹಳ ಸ್ತುತಿಸಿದ್ದಾನೆ. ಆದ್ದರಿಂದ ನಂಬಿಯಣ್ಣನೂ, ಚಾರಮನೂ ಗೊಗ್ಗವ್ವೆಯೂ ಬಸವೇಶ್ವರನಕ್ಕಿಂತಲೂ ಮೊದಲಿನವರೆಂದು ತೋರುತ್ತದೆ.

ಗೊಗ್ಗವ್ವೆಯ ಹೆಸರು ಉತ್ತರಕರ್ನಾಟಕದಲ್ಲಿ ಇನ್ನೂ ರೂಢಿಯಲ್ಲಿ ಇದೆ. ಯಾವಳಾದರೂ ಬಾಲಿಕೆಯು ಅಥವಾ ಸ್ತ್ರೀಯು ತನ್ನ ತಲೆಗೂದಲುಗಳನ್ನು ಬಾಚಿಕೊಳ್ಳದೆ ಅಸ್ತವ್ಯಸ್ತವಾಗಿ ಬಿಟ್ಟುಕೊಂಡು ಹೊಲಸು ಬಟ್ಟೆಯನ್ನು

ಹೊದ್ದು ಕೊಂಡಿದ್ದರು! ಜನರು ಅವಳಿಗೆ ನೀನು "ದೀಪದ ಗೊಗ್ಗವ್ವೆ"ಯಾಗಿದ್ದಿಯೋ, ಎಂದು ಸಿಟ್ಟು ಮಾಡುವದುಂಟು. ಈ ಶಬ್ದವು ಕೃಷ್ಣಾ ತೀರ ಮತ್ತು ಉತ್ತರ ವಿಜಾಪೂರ ಭಾಗಗಳಲ್ಲಿ ಇನ್ನೂ ಪ್ರಚಲಿತವಿದೆ. ಆದರೆ ಪಶ್ಚಿಮ ಧಾರವಾಡ ಜಿಲ್ಹೆಯಲ್ಲಿ 'ದೀಪದ ಗೊಗ್ಗವ್ವೆ' ಎಂಬ ಶಬ್ದದ ಬದಲು "ನೀನು ಗೊಗ್ಗವ್ವೆಯಾಗಿದ್ದೀಯೋ" ಎಂದು ಮಾತ್ರ ಅನ್ನುವದುಂಟು.

ಜನರು ಹೇಗೆ ಕುಂಬಾರ ಗುಂಡಯ್ಯನನ್ನು ಪರಿಹಾಸ ಪೂರ್ವಕವಾಗಿ ಕರೆಯುವದುಂಟೋ, ಹಾಗೆಯೇ ಗೊಗ್ಗವ್ವೆಯನ್ನು ಈ ಪ್ರಾಂತದ ಜನರು ಪರಿಹಾಸಕ್ಕೋಸ್ಕರ ಉಪಯೋಗಿಸುತ್ತಿರುವದು ಬಹು ಖೇದಕರವಾದದ್ದು. ಈ ಉಭಯ ಶರಣಶರಣೆಯರ ಚರಿತ್ರೆಗಳು ಜನರಿಗೆ ಗೊತ್ತಿರುವದಿಲ್ಲಾದ್ದರಿಂದ ಈ ಸ್ಥಿತಿಯುಂಟಾಗಿರಬಹುದೆಂದು ತೋರುತ್ತದೆ. ಆದರೆ ಈ ಮಹಾನುಭಾವರು ಹೆಚ್ಚಿನ ತರಗತಿಯವರೆಂಬುದು ಅವರ ಚರಿತ್ರೆಗಳಿಂದ ತಿಳಿದುಬರುತ್ತಿದೆ.

## ವಚನಗಳು.

(೧) ಉದ್ದವನೆಯ್ದುವದಕ್ಕೆ ಗದ್ದುಗೆ ಇಲ್ಲದೆ ಏರಬಾರದು. ಚಿದ್ರೂಪನನರಿವುದಕ್ಕೆ ಅರ್ಚನೆ, ಪೂಜೆ ನಿತ್ಯನೇಮವಿಲ್ಲದೆ ಕಾಣಬಾರದು. ಅದನು ಸತ್ಯದಿಂದ ಮಾಡಿ ಅಸತ್ಯವ ಮರೆದಡೆ ಇದೇ ಸತ್ಯ ನಾಸ್ತಿ ನಾಥಾ.

(೨) ಅನಲಕೊಂಡ ಭೋಗಕ್ಕೆ ಪರಿಸ್ಕಾರ ಉಂಟೇ? ಲಿಂಗ ಮುಟ್ಟಿದಂಗಕ್ಕೆ ಮತ್ತೆ ಪುಣ್ಯವೆಂಬುದು ಹುಸಿ ನಾಸ್ತಿ ನಾಥಾ.

(೩) ಮೊಲೆ ಮುಡಿ ಬಂದರೆ ಹೆಣ್ಣೆಂಬರು. ಮೀಸೆ, ಕಾಸೆ ಬಂದರೆ ಗಂಡೆಂಬರು. ಈ ಉಭಯದ ಜ್ಞಾನ ಹೆಣ್ಣೋ ಗಂಡೋ? ನಾಸ್ತಿ ನಾಥಾ.

(೪) ಭಕ್ತರು ಜಂಗಮದಲ್ಲಿ ಕಟ್ಟಿ ಹೊರಲೇಕೆ? ಧೂಪದ ಹೊಗೆ ಎತ್ತ ಹೋದರೂ ಸರಿ. ಇದು ಸತ್ಯವೆಂದೆ ನಾಸ್ತಿ ನಾಥಾ.

(೫) ಮಾರುತನಲ್ಲಿ ಬೆರೆದ ಗಂಧದಂತೆ, ಸುರತದಲ್ಲಿ ಬೆರೆದ ಸುಖದಂತೆ, ಮೆಚ್ಚಿನಲ್ಲಿ ಕೊಡುವ ಉಚಿತದಂತೆ ಭಕ್ತರಿಗಿದೇ ಹಾದಿ ಎಂದೆ ನಾಸ್ತಿ ನಾಥಾ.

(೬) ಗಂಡು ಮೋಹಿಸಿ ಹೆಣ್ಣು ಹಿಡಿದರದು ಒಬ್ಬರೊಡನೆ ಎಂದರಿಯಬೇಕು. ಹೆಣ್ಣು ಮೋಹಿಸಿ ಗಂಡ ಹಿಡಿದರೆ ಉತ್ತಮವಾವುದೆಂದರಿಯಬೇಕು. ಈ ಎರಡರ ಭಯವ ಕಳೆದು ಸುಖಿಯು ತಾನಾಗಬಲ್ಲಡೆ ನಾಸ್ತಿನಾಥನು ಪರಿಪೂರ್ಣನೆಂಬೆ.

---

## ೩. ವೈಜವ್ವೆ.

ವೈಜವ್ವೆಯ ಚರಿತ್ರೆಯು ಈಗ ಹೈದ್ರಾಬಾದ ಪ್ರಾಂತದಲ್ಲಿರುವ 'ಪರಳಿ ವೈಜನಾಥ' ಎಂಬ ಹೆಸರಿನ ಪ್ರಸಿದ್ಧ ದೇವಾಲಯಕ್ಕೆ ಸಂಬಂಧಿಸಿರುತ್ತದೆ. ಆಕೆಯ ಮೂಲಕವಾಗಿಯೇ ಈ ದೇವಾಲಯದ ಮಹತ್ವವಿರುತ್ತದೆ.

ಪರಳೀ ಗ್ರಾಮವು ನಿಜಾಮ ಇಲಾಖೆಯಲ್ಲಿ ಬೀಡ ಜಿಲ್ಹೆಯಲ್ಲಿರುವ ಮೋಮಿನಾಬಾದ ಎಂಬ ತಾಲೂಕಿನಲ್ಲಿರುತ್ತತೆ. ಇದು ಗೋದಾವರೀ ತೀರ ಪ್ರದೇಶದಲ್ಲಿ ಗೋದಾವರೀ ನದಿಯ ಬಲಭಾಗದಲ್ಲಿದೆ. ಇದು ಸೊಲ್ಲಾಪುರ ಪಟ್ಟಣದ ಉತ್ತರಕ್ಕೆ ಸುಮಾರು ೧೩೦ ಮೈಲು ದೂರವಿರುತ್ತದೆ. ಗೋದಾವರಿಯು ಪರಳಿಯಿಂದ ಉತ್ತರಕ್ಕೆ ೧೫-೨೦ ಮೈಲುಗಳ ಮೇಲೆ ಹರಿಯುತ್ತಿದೆ. ಇದರ ಪೂರ್ವದ ಹೆಸರು ಪರಿವಳಿಗೆ ಎಂಬುದಾಗಿತ್ತು.

ಈ ಪರಿವಳಿಗೆಗೆ ಸಮೀಪವಾಗಿ ಒಂದು ಶಿವಪುರವಿದ್ದು ಅಲ್ಲಿ ಒಬ್ಬ ಶಿವಭಕ್ತನು ತನ್ನ ಹೆಂಡತಿಯೊಡನೆ ಸುಖವಾಗಿ ವಾಸ ಮಾಡುತ್ತಿದ್ದನು. ಉಭಯ ದಂಪತಿಗಳು ಶಿವನಲ್ಲಿ ಪೂರ್ಣ ವಿಶ್ವಾಸವುಳ್ಳವರು. ಯಾವಾಗಲೂ ಲಿಂಗಪೂಜೆಯಲ್ಲಿ ನಿರತರಾದವರು. ಅವರಿಗೆ 'ವೈಜವ್ವೆ' ಎಂಬ ಹೆಸರಿನ ಮಗಳು ಹುಟ್ಟಿದಳು. ಅವಳು ತನ್ನ ತಾಯಿತಂದೆಗಳಂತೆಯೇ ಲಿಂಗಭಕ್ತಿಯುಳ್ಳವಳಾಗಿ ಲಿಂಗಾನುಭವಿಯಾಗಿ ಆಚರಿಸುತ್ತ ಬಂದಳು. ಅವಳು ಹೀಗೆ ಬೆಳೆಯುತ್ತ ಯೌವ್ವನಾವಸ್ಥೆಯನ್ನು ಹೊಂದಿದಳು.

ಹೀಗಿರಲಾಗಿ ವೈಜವ್ವೆಯ ತಂದೆಯ ತಂಗಿಯು ಪರಿವಳಿಗೆ ಗ್ರಾಮದಲ್ಲಿರುತ್ತಿದ್ದಳು. ಅವಳು ಒಂದುದಿನ ತನ್ನ ಅಣ್ಣನನ್ನು ಕಾಣಲಿಕ್ಕೆಂದು ಅವನಿದ್ದ ಗ್ರಾಮಕ್ಕೆ ಬಂದಳು. ಅವಳು ವೈಜವ್ವೆಯನ್ನು ನೋಡಿ ಅವಳನ್ನು ತನ್ನ ಮಗನಾದ ನೇಮಿಸೆಟ್ಟಿಗೆ ಕೊಡಬೇಕೆಂದು ತನ್ನ ಅಣ್ಣನಿಗೆ

ಕೇಳಿದಳು. ಅದಕ್ಕೆ ಅವನು— ನೀವು ಜೈನರು. ನಾವು ಶಿವಭಕ್ತರು. ನೇಮಿಸೆಟ್ಟಿಯು ನನಗೆ ಶೋದರಳಿಯನಾದರೇನಾಯಿತು? ನಾನು ನನ್ನ ಮಗಳನ್ನು ಶ್ರವಣರಿಗೆ ಕೊಡುವದಿಲ್ಲ ಎಂದು ಹೇಳಿದನು. ಅದಕ್ಕೆ ಅವನ ತಂಗಿಯು— ಅಣ್ಣನೇ, ನೀನು ನಿನ್ನ ಬೆನ್ನುಬಿದ್ದ ತಂಗಿಗೆ ಲೇಸು ಮಾಡಿದೆ. ನಾನು ವೈಜವ್ವೆಯನ್ನು ಎಂದೂ ಬಿಡುವವಳಲ್ಲ. ಅವಳನ್ನು ನನ್ನ ಮಗನಿಗೆ ನೀನು ಕೊಡಲೇಬೇಕೆಂದು ಛಲ ಹಿಡಿದು ಮನೆಯಲ್ಲಿಯೇ ಕುಳಿತಳು. ಆದರೂ ಅವಳ ಅಣ್ಣನು ಅದಕ್ಕೆ ಒಪ್ಪದಿರಲು ಅವಳು ಎರಡು ಮೂರು ದಿನಗಳವರೆಗೂ ಉಪವಾಸ ಕುಳಿತಳು. ಆಗ ಬಂಧು ಬಳಗದವರು ಅದನ್ನು ನೋಡಿ ಅಣ್ಣನ ಮನೆಯಲ್ಲಿ ನೆರೆದು ಅವನಿಗೆ— ನೀನು ಹೀಗೆ ಕ್ರೂರತನ ಮಾಡಬೇಡ. ಹಿರಿಯರಲ್ಲಿ ನೆಂಟರಲ್ಲಿ ಹೀಗೆ ಛಲವಿರಬಾರದು. ನಿನ್ನ ತಂಗಿಯು ಜೈನಳಾದರೇನಾಯಿತು? ಅವಳ ಮಗನಿಗೆ ನಿನ್ನ ಮಗಳನ್ನು ಕೊಡುವದೇ ಉಚಿತವು, ಎಂದು ಹೇಳಲು ಅವನು ಕಡೆಗೆ ಅದಕ್ಕೆ ಒಪ್ಪಿ ತನ್ನ ತಂಗಿಗೆ– ನನ್ನ ಮಗಳನ್ನು ನಿನ್ನ ಮಗನಿಗೆ ಕೊಡುವೆನು ಎಂದು ಅವಳಿಗೆ ಮಾತನ್ನು ಕೊಟ್ಟನು. ಆ ಮೇಲೆ ಉಭಯತರು ಲಗ್ನದ ಸಿದ್ಧತೆಯಲ್ಲಿ ತೊಡಗಿದರು.

ಆದರೆ ವೈಜವ್ವೆಯು ಹರನಲ್ಲಿ ಪೂರ್ಣ ಭಕ್ತಿಯುಳ್ಳವಳಾಗಿದ್ದಳು. ಅವಳು ತನ್ನನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನ ಮಾಡುತ್ತಾರೆಂಬುದನ್ನು ಕೇಳಿ, ಮನದಲ್ಲಿ ಅತ್ಯಂತವಾಗಿ ನೊಂದು ತನ್ನಲ್ಲಿ– ಈಗ ನಾನೇನು ಮಾಡಲಿ? ನಾನು ಭವಿಯನ್ನು ಸೋಂಕವೆ। ಹೇಗಿರಲಿ? ತಿಳಿವಿನಲ್ಲಿ ಹುಟ್ಟಿದ ನಾನು ಮರವೆಯಲ್ಲಿ ಹೇಗೆ ಇರಲಿ? ಪರಮಾತ್ಮನೇ, ನಿನ್ನನ್ನು ಇನ್ನು ಮೇಲೆ ನಾನು ಹೇಗೆ ನೆನೆವೆನು? ನೀನು ನನ್ನನ್ನು ರಕ್ಷಿಸು, ಎಂದು ಶೋಕಿಸ ಹತ್ತಿದಳು. ಹೀಗಿರಲು ಆ ದಿನ ರಾತ್ರಿ ಅವಳ ಕನಸಿನಲ್ಲಿ ಪರಮಾತ್ಮನು ಬಂದು– ವೈಜವ್ವೆಯೇ ನೀನು ಚಿಂತೆ ಮಾಡಬೇಡ. ನಾನು ಯಾವಾಗಲೂ ನಿನ್ನ ಸಮೀಪದಲ್ಲಿರುವೆನು. ನನ್ನನ್ನು ನಂಬು. ನೀನು ನೇಮಿಸೆಟ್ಟಿಯನ್ನು ಮದುವೆಯಾಗು. ಜಗತ್ತಿನಲ್ಲಿ ನಿನ್ನ ಹೆಸರು ಕಡೆಯುವರೆಗೆ ಉಳಿಯು ವಂತೆಮಾಡುವೆನು ಎಂದು ಹೇಳಿದನು. ಮರುದಿವಸ ಲಗ್ನಕಾರ್ಯವು ಪ್ರಾರಂಭವಾಯಿತು. ಲಗ್ನವು ಮುಗಿಯಿತು. ತಂದೆಯು ಮಗಳನ್ನು ಅಳಿಯನಿಗೆ ಒಪ್ಪಿಸಿದನು. ಅಳಿಯನು ಅವಳನ್ನು ಕರೆದುಕೊಂಡು ತನ್ನ ಗ್ರಾಮವಾದ ಪಂವಳಿಗೆಗೆ ಹೋದನು.

ಆದರೆ ವೈಜವ್ವೆಗೆ ಗಂಡನ ಮನೆಯಲ್ಲಿ ಎಲ್ಲವೂ ಕತ್ತಲೆಯಾದಂತೆ ತೋರಹತ್ತಿತು. ಅವಳ ಮನಸ್ಸಿನಲ್ಲಿ ಎಷ್ಟು ಮಾತ್ರವೂ ಸಮಾಧಾನವಿರ ಲಿಲ್ಲ. ಅಲ್ಲಿ ತನ್ನ ಲಿಂಗಪೂಜೆಯಲ್ಲಿರಲು ಅವಳಿಗೆ ಎಷ್ಟುಮಾತ್ರವೂ ಅವ ಕಾಶವಿರಲಿಲ್ಲ. ಆದರೂ ಅವಳು ಯಾವಾಗಲೂ ಲಿಂಗಧ್ಯಾನದಲ್ಲಿಯೇ ಇರು ವಳು. ಹರಿಹರ ಮಹಾಕವಿಯು ಅವಳ ಈಗಿನ ಲಿಂಗಾಚರಣೆಯನ್ನು ವರ್ಣಿಸಿರುವದು ಹೇಗೆಂದರೆ— ಆಗ ಅವಳು ಭಸಿತ ರುದ್ರಾಕ್ಷಿಗಳನ್ನು ತನ್ನ ಮನವೆಂಬ ಶರೀರದಲ್ಲಿ ಧರಿಸಿದಳು. ಅದರಲ್ಲಿರುವ ಹುಸಿ, ಲೋಭಗಳೆಂಬ ಕಸವನ್ನು ಉಡುಗಿಬಿಟ್ಟಳು. ತನ್ನ ಹೃದಯ ಕಮಲದ ಕರ್ಣಿಕಾಪೀಠದಲ್ಲಿ ಸದಮಳ ಪ್ರಕಾಶ ರೂಪವಾದ ಲಿಂಗವನ್ನು ಸ್ಥಾಪಿಸಿಕೊಂಡು ಅದು ಬೆಳ ಗುವಂತೆ ಮಾಡಿದಳು. ತನ್ನ ಮನಸ್ಸು ಎಂಬುದನ್ನು ಅದಕ್ಕೆ ಅರ್ಪಿಸಿ ದಳು. ಲಿಂಗದ ಬಗ್ಗೆ ಅವಳಲ್ಲಿ ಉಂಟಾದ ಪ್ರೀತಿಯು ಸುಸಿರೇ ಅದಕ್ಕೆ ಧೂಪವಾಯಿತು. ತನ್ನ ನೆನಹಿನ ಅರಿವಿನ ಅಚ್ಚ ಬೆಳಗಿನ ಪ್ರಕಾಶವೇ ಅವಳಿಗೆ ದೀಪವಾಯಿತು. ಈ ತೆರದ ಭಕ್ತಿಯೋಗದಿಂದ ಪರಮಾತ್ಮನನ್ನು ಅವಳು ಧ್ಯಾನಿಸುತ್ತ ಲಿಂಗಾಂಗ ಸಾಮರಸ್ಯದಲ್ಲಿ ಜೈನನಾದ ಗಂಡನ ಮನೆ ಯಲ್ಲಿ ಲಿಂಗಸುಖದಲ್ಲಿರಹತ್ತಿದಳು. ಅವಳು ಜೈನರಲ್ಲಿದ್ದರೂ ತಿಲದ ತೈಲ ದಂತೆ ಹೊದ್ದಿಯೂ ಹೊದ್ದದಂತೆ ಇದ್ದಳು. ಹೀಗೆ ಗುಪ್ತ ಭಕ್ತಿಯಿಂದ ಅವಳು ತನ್ನ ಪತಿಯ ಮನೆಯಲ್ಲಿ ಕಾಲ ಕಳೆಯುಹತ್ತಿದಳು.

ಹೀಗಿರಲು ಒಂದುದಿನ ನೇಮಿಶೆಟ್ಟಿಯು ವೈಜವ್ವೆಗೆ— ನಾನು ಇಂದಿನ ದಿನ ಜೈನಮುನಿಗಳಿಗೆ ಊಟಹಾಕುತ್ತೇನೆ. ಅವರಿಗೆ ನಾನಾ ತರಹದ ಸೊಗ ಸಾದ ಅಡಿಗೆಯನ್ನು ಮಾಡು, ಎಂದು ಹೇಳಿ ಆಹಾರ ಪದಾರ್ಥಗಳನ್ನು ತಂದು ಅವಳಿಗೆ ಕೊಡಲು, ಅವಳು ಹಾಲೋಗರ, ಹಾಲುಂಡೆ, ಹಾಲು ಮಂಡಿಗೆ, ತರಗು, ಲಡ್ಡುಗೆ, ಇಡ್ಡಲಿಗೆ, ಹಾಲು ಪಾಯಸ ಬೋನ ಮೊದಲಾದ ರುಚಿ ಪದಾರ್ಥಗಳನ್ನು ಸಿದ್ಧಪಡಿಸಿದಳು. ಆಗ ಅವಳು ಮನ ಸ್ಸಿನಲ್ಲಿ— ಅಕ್ಕಟಾ, ಈ ವಸ್ತುಗಳು ನನ್ನ ದೇವನಿಗಾಗಲಿಲ್ಲ. ಅವುಗಳಿಂದ ನಾನು ಮಹೇಶ್ವರರನ್ನು ತೃಪ್ತಿಪಡಿಸಲಿಲ್ಲ. ಅವು ಭವಿಗಳಿಗೆ ಹೋಗುತ್ತವೆ. ನನ್ನ ತಂದೆಯು ನನ್ನನ್ನು ಭವಿಗಳಿಗೆ ಕೊಟ್ಟದ್ದರಿಂದ ಶಿವನೇ ನಿನ್ನ ಭಕ್ತರ ಸೇವೆ ಮಾಡುವದು ನನ್ನಿಂದ ಆಗದಂತಾಗಿದೆ, ಎಂದು ಮನದಲ್ಲಿ ನೊಂದು ಕಣ್ಣೀರಿಡುತ್ತ ಕುಳಿತಳು. ಹೀಗೆ ಅವಳು ಕುಳಿತಿರಲು ಶಿವನಿಗೆ ಕರುಣೆ ಯುಂಟಾಗಿ ಆತನು ಒಬ್ಬ ಜಂಗಮನ ವೇಷವನ್ನು ಧಾರಣಮಾಡಿಕೊಂಡು

ನೇಮಿಸೆಟ್ಟಿ ಇದ್ದ ಮನೆಯ ಮುಂದೆಬಂದು ನಿಂತು— ನಾನು ಪರವೂರಿಂದ ಬಂದಿದ್ದೇನೆ. ನಾನು ಹಸಿದಿದ್ದೇನೆ, ನಿಮಗೆ ಶಿವನ ಕರುಣವಾಗಲಿ ಎಂದು ನುಡಿಯಲು ವೈಜವ್ವೆಯು ಆ ಧ್ವನಿಯನ್ನು ಕೇಳಿ ಹೊರಗೆ ಬಂದು ಅಲ್ಲಿ ಒಬ್ಬ ಜಂಗಮನು ನಿಂತಿದ್ದನ್ನು ಕಂಡು ಅವಳು ಹರುಷಿತಳಾಗಿ— ಆ ಜಂಗಮನಿಂದ ನನ್ನ ಬಯಕೆಯು ಈಡೇರಿತು. ನೀವು ಒಳ್ಳೇ ಸಮಯಕ್ಕೆ ಬಂದಿರಿ ಎಂದು ನುಡಿಯುತ್ತ ಅವನಿಗೆ ಸಾಷ್ಟಾಂಗವೆರಗಿದಳು. ಆಮೇಲೆ ಅವಳು ತಾನು ಸಿದ್ಧಮಾಡಿದ್ದ ಪಕ್ವಾನ್ನಗಳನ್ನು ತಂದು ಅವನಿಗೆ ನೀಡಿ— ಇನ್ನುಮೇಲೆ ನೀವು ಇಲ್ಲಿ ನಿಲ್ಲಬೇಡಿರಿ. ಇಷ್ಟರಲ್ಲಿಯೇ ಶ್ರವಣರು ಬರತಕ್ಕವರಿದ್ದಾರೆ. ನೀವು ಅವರ ಕಣ್ಣಿಗೆ ಬೀಳದಂತೆ ಹೋಗಿಬಿಡಿರಿ ಎಂದು ಹೇಳಿದಳು. ಹೀಗೆ ಅವಳು ನುಡಿಯುವಷ್ಟರಲ್ಲಿಯೇ ನೇಮಿಸೆಟ್ಟಿಯು ಜಿನ ಮುನಿಗಳನ್ನು ಕರೆದುಕೊಂಡು ಮನೆಯ ಬಾಗಿಲನ್ನು ಪ್ರವೇಶಿಸಿದನು. ಆ ಮುನಿಗಳು ವೈಜವ್ವೆಯು ತಾನು ಮಾಡಿದ ಊಟದ ಪದಾರ್ಥಗಳನ್ನು ಒಬ್ಬ ಜಂಗಮನಿಗೆ ನೀಡುತ್ತಿರುವದನ್ನು ಕಂಡು ಅವರು ನೇಮಿಸೆಟ್ಟಿಗೆ— ನೀವು ಮಾಡಿದ ಅಡಿಗೆಯನ್ನು ನಾವು ಇನ್ನುಮೇಲೆ ಮುಟ್ಟುವದಿಲ್ಲ. ಆ ಗೊರವನು ಅದನ್ನು ಎಂಜಲು ಮಾಡಿದ್ದಾನೆ ಎಂದು ಅಂದು, ಅವರೆಲ್ಲರೂ ಮನೆಯನ್ನು ಬಿಟ್ಟು ಕೊರಗೆ ಹೊರಟುಹೋದರು.

ನೇಮಿಶೆಟ್ಟಿಯು ವೈಜವ್ವೆಯು ಮಾಡಿದ್ದನ್ನು ತಿಳಿದವನಾಗಿ ಅತ್ಯಂತ ಕುಪಿತನಾಗಿ ಅವಳಿಗೆ– ನೀನೇನು ಮಾಡಿದೆ? ಅನ್ನವನ್ನು ಜಂಗಮನಿಗೆ ನೀಡಿ ಕೆಡಿಸಿಬಿಟ್ಟೆಯಾ? ಮುನಿಗಳು ಊಟಮಾಡದೆ ಹಸಿದುಕೊಂಡು ಹೊರಟು ಹೋದರು. ನನ್ನ ಅರುಹನ ವ್ರತಕ್ಕೆ ಭಂಗತಂದೆ ಎಂದು ನುಡಿದನು. ಅದನ್ನು ಅವಳು ಕೇಳಿ ಕೆರಳಿದಳು. (ಪತಿಯು ಶಿವನಿಂದೆ ಮಾಡಿದನೆಂದು) ಆಗ ಅವಳು ರೌದ್ರರೂಪತಾಳಿ ಅಂದದ್ದು— ಜನರೆಲ್ಲ ಅಡಿಗೆ ಮಾಡುವದು ಅಗ್ನಿಯಿಂದ. ಆ ಅಗ್ನಿಯು ಶಿವನ ಹಣೆಗಣ್ಣಿನಿಂದ ಬಂದ ಎಂಜಲು. ಅಂಥ ಎಂಜಲಿಂದಾದ ಆಹಾರವನ್ನು ನೀವೆಲ್ಲ ಉಣ್ಣುತ್ತೀರಿ ಅದನ್ನ ಜಂಗಮನಿಗೆ ನೀಡಿದಲ್ಲಿ ಅದು ಎಂಜಲು ಹೇಗೆ? ನೀವು ಅರುಹನೆಂದು ಪೂಜಿಸುವ ವಸ್ತುವು ಭೂಮಿಯೊಳಗಿಲ್ಲ. ಅದು ವೇದದಲ್ಲಿಲ್ಲ. ಶಾಸ್ತ್ರದಲ್ಲಿಲ್ಲ. ಬತ್ತಲೆಯ ಬೊಂಬೆಗಳನ್ನು ನೀವು ಪೂಜಿಸಿ ಬಳಲುವದೇಕೆ ? ಎಂದು ನಿಷ್ಠುರವಾಗಿ ಸಿಟ್ಟಿನಿಂದ ನುಡಿದಳು. ಅದನ್ನು ನೇಮಿಶೆಟ್ಟಿಯು

ಕೇಳಿ ಕೆರಳಿದವನಾಗಿ ಅವಳನ್ನು ಹೊಡೆದು ಬಡಿದು ಘಾಸಿ ಮಾಡ ಹತ್ತಿದನು. ಆ ಅಬಲೆಯನ್ನು ಮುಟ್ಟಿ ಮುಟ್ಟಿ ಒಳಿತಾಗಿ ಬಡಿಯಹತ್ತಿದನು. ಆದರೆ ಅವಳನ್ನು ಹೊಡೆದ ಹಾಗೆ ಆ ಹೊಡೆತಗಳು ಆಕೆಗೆ ತಾಕಲಿಲ್ಲ. ಪಟ್ಟಣದಲ್ಲಿದ್ದ ಜೈನರಿಗೆ ತಾಕಹತ್ತಿದವು. ಆದರೆ ಅವರಿಗೆ ತಮಗೆ ಹೀಗೇಕಾಯಿತೆಂಬುದು ಏನೂ ತಿಳಿಯದೆ ಗಟ್ಟಿಯಾಗಿ ಆಕ್ರೋಶ ಮಾಡಹತ್ತಿದರು. ಅಷ್ಟರಲ್ಲಿ ಸೂರ್ಯಾಸ್ತಮಯವಾಯಿತು.

ವೈಜವ್ವೆಯು ತನ್ನ ಪತಿಯು ಹೀಗೆ ತನ್ನ ಕೂಡ ವರ್ತಿಸಿದ್ದರಿಂದ ಬಹಳ ನೊಂದು ದುಃಖಪಡುತ್ತ ಪರಮಾತ್ಮನ ಸ್ಮರಣೆಯಲ್ಲಿಯೇ ಮಲಗಿದಳು. ಆಗ ರಾತ್ರಿಯಲ್ಲಿ ಶಿವನು ಆಕೆಯ ಕನಸಿನಲ್ಲಿ ಬಂದು- ವೈಜವ್ವೆಯೇ ಅಂಜಬೇಡ, ಚಿಂತಿಸಬೇಡ. ನಾಳೆ ಪಟ್ಟಣದಲ್ಲಿ ಒಂದು ಅದ್ಭುತವಾಗುವದು. ನಾನು ಪಟ್ಟಣದಲ್ಲಿಯ ಜಿನನ ಶಿರವನ್ನೊಡೆದು ಅಲ್ಲಿ ಮೂಡುವೆನು, ಅಂಜಬೇಡ, ಎಂದು ಸಮಾಧಾನ ಹೇಳಿ ಅಂತರ್ಧಾನನಾದನು. ವೈಜವ್ವೆಯು ಅದನ್ನು ಕೇಳಿ ನನ್ನ ಮೇಲೆ ಶಿವನ ಕರುಣವಿದೆ ಎಂದು ತಿಳಿದು ಹರುಷಿತಳಾಗಿ ಬೆಳಗಿನಲ್ಲೆದ್ದು ಶಿವನ ಧ್ಯಾನಮಾಡುತ್ತ ಕುಳಿತಳು.

ಮರುದಿನ ಮುಂಜಾವಿನಲ್ಲಿ ಶ್ರಮಣರು ಎಂದಿನಂತೆ ಬಸದಿಗೆ ಹೋಗಿ ಅದರ ಬಾಗಿಲವನ್ನು ತೆರೆಯಲು ಪ್ರಯತ್ನಿಸಿದರು. ಆದರೆ ಅದು ತೆರೆಯದೆ ಹೋಯಿತು. ಅವರು ಎಷ್ಟು ಪ್ರಯತ್ನ ಮಾಡಿದರೂ ಅದು ತೆರೆಯಲಿಲ್ಲ. ಇದೇನು ಕಂಟಕ ಬಂದಿತೆಂದು ಅವರು ನುಡಿಯುತ್ತಿರಲು ಅವರಲ್ಲೊಬ್ಬನು ನೇಮಿಶೆಟ್ಟಿಯು ನಿನ್ನೆ ವೈಜವ್ವೆಯನ್ನು ಬಹಳ ಹೊಡೆದಿದ್ದಾನೆ. ಆದರೆ ಆ ಪೆಟ್ಟುಗಳು ಅವಳ ಮೇಲೆ ಬೀಳದೆ ಅವು ನಮ್ಮ ಮೇಲೆ ಬಿದ್ದವು. ಇದರಿಂದ ನಾವು ಗಾಸಿಯಾಗಿದ್ದೇವೆ. ಹೀಗೆ ಹೇಳಲು ಅಲ್ಲಿ ನೆರೆದವರು ನಮಗೂ ಪೆಟ್ಟುಗಳು ಬಿದ್ದಿವೆ.ಬಸದಿಯ ಬಾಗಿಲು ತೆರೆಯದ್ದಕ್ಕೆ ವೈಜವ್ವೆಯನ್ನು ನೇಮಿಸೆಟ್ಟಿಯು ಇದಕ್ಕೆ ಹೊಡೆದದ್ದೇ ಕಾರಣವಾಗಿರಬಹುದೆಂದು ಅವರು ಊಹಿಸಿದರು. ಆಗ ಅವರೆಲ್ಲರೂ ಕೂಡಿಕೊಂಡು ವೈಜವ್ವೆ ಇದ್ದಲ್ಲಿಗೆ ಬಂದು ಅವಳಿಗೆ ನಿನಗಾದ ನೋವಿನಿಂದ ನಾವು ಬಳಲಿದೆವು. ನಮ್ಮನ್ನು ಕ್ಷಮಿಸು. ಅಲ್ಲದೆ ಅರುಹನು ಕದವನ್ನಿಕ್ಕಿಕೊಂಡು ನಮ್ಮನ್ನು ಬಹಳ ಕಾಡಹತ್ತಿದ್ದಾನೆ. ನೀನು ಅಲ್ಲಿಯ ವರೆಗೆ ಬಂದು ಬಾಗಿಲವು ತೆರೆಯುವಂತೆ ಮಾಡು ಎಂದು ಹೇಳಿಕೊಂಡರು.

ಆಗ ವೈಜವ್ವೆಯು ಪರಮಾತ್ಮನ ಕರುಣೆಯು ನನ್ನ ಮೇಲೆ ಇದೆ, ಎಂಬ ನಂಬುಗೆಯಿಂದ ಅವನನ್ನು ಸ್ಮರಿಸುತ್ತ ಅವರೊಡನೆ ಜಿನಾಲಯಕ್ಕೆ ಹೋದಳು. ಅದರ ಬಾಗಿಲಲ್ಲಿ ನಿಂತು ಶಿವನನ್ನು ಕುರಿತು— (೧) ಸಕಲ ಭುವನ ತಿಮಿರ ಹರನೇ, ಕರುಣಿಸು, ಕರುಣಿಸು. ಹೀಗೆ ಸ್ತುತಿಸುತ್ತ ಆ ಚೈತ್ಯಾಲಯದ ಬಾಗಿಲನ್ನು ಮುಟ್ಟಿದಳು. ಅವಳು ಮುಟ್ಟಿದ ಕೂಡಲೆ ಆ ಬಾಗಿಲು ಫಕ್ಕನೇ ತೆರೆದುಬಿಟ್ಟಿತು. ಆದರೆ ಒಳಗೆ ನೋಡುತ್ತಾರೆಯೋ, ಜಿನಮೂರ್ತಿಯು ಶಿರವು ಒಡೆದು ಬಿದ್ದಿದೆ. ಆದರ ಸ್ಥಳದಲ್ಲಿ ಶಿವಲಿಂಗವು ಮೂಡಿದೆ. ಸುತ್ತುಮುತ್ತಲಿದ್ದ ಬತ್ತಲೆಗೊಂಬೆಗಳು ಅಲ್ಲಲ್ಲಿ ಉರುಳಿ ಬಿದ್ದಿವೆ. ಈ ಸ್ಥಿತಿಯಾದದ್ದನ್ನು ಕಂಡರು.

ಅಲ್ಲಿ ನೆರೆದಿದ್ದ ಜೈನರು ದೇವಾಲಯದಲ್ಲಿ ಈ ಅದ್ಭುತವಾದದ್ದನ್ನು ಕಂಡು ಅವರು ವೈಜವ್ವೆಗೆ ನಮಿಸಿ, ಇನ್ನುಮೇಲೆ ನಾವು ಜಿನ ಧರ್ಮವನ್ನು ಬಿಟ್ಟುಬಿಡುವೆವು. ನಮಗೆ ಲಿಂಗದೀಕ್ಷೆ ಮಾಡಿಸೆಂದು ಅವಳಿಗೆ ಹೇಳಿಕೊಂಡರು. ನೇಮಿಸೆಟ್ಟಿಯು ಸಹ ಲಿಂಗದೆದುರಿನಲ್ಲಿ ನಿಂತು ನಮನ ಸ್ಮರಿಸಿ, ವೈಜವ್ವೆಗೆ—ನಾನು ಪಾಪಿಷ್ಠನು, ನಿನ್ನನ್ನು ನಾನು ಬಹಳ ನೋಯಿಸಿದೆನು. ಇದಕ್ಕೋಸ್ಕರ ನೀನು ನನ್ನನ್ನು ಕ್ಷಮಿಸು ಕ್ಷಮಿಸು ಎಂದು ಬೇಡಿಕೊಂಡನು. ಅದಕ್ಕೆ ವೈಜವ್ವೆಯು— ನೀನು ನನ್ನ ಪತಿಯು, ಇದರಿಂದ ನಿನಗೆ ಯಾವ ಪಾಪವು ಉಂಟಾಗಲಾರದು ಎಂದು ನುಡಿದು ಎಲ್ಲರಿಗೆ ತ್ರಿಲಿಂಗಗಳ ರೀತಿಯನ್ನು ತಿಳಿಸಿ ಲಿಂಗದೀಕ್ಷೆಯನ್ನು ಮಾಡಿದಳು. ಆಗ ನೇಮಿಸೆಟ್ಟಿಯು ನನಗೇನಪ್ಪಣೆ ಎಂದು ಕೇಳಲು, ಅವಳು— ಪರಮಾತ್ಮನು ಲಿಂಗವಾಗಿ ಇಲ್ಲಿ ಮೂಡಿದ್ದಾನೆ. ಈ ದೇವನನ್ನು ನೀನು ಅರ್ಚಿಸುತ್ತ ಪರಮಾತ್ಮನಲ್ಲಿ ಬೆರೆಯು ಎಂದು ನುಡಿಯುತ್ತ ತಾನು ಆ ಲಿಂಗದಲ್ಲಿಯೇ ಐಕ್ಯಳಾದಳು. ಆ ಲಿಂಗವು ಅಂದಿನಿಂದ 'ವೈಜನಾಥಲಿಂಗ' ವೆಂಬ ಹೆಸರಿನಿಂದ ನಾಡಿನಲ್ಲಿ ಪ್ರಸಿದ್ಧವಾಯಿತು. ಈಗಲೂ ಅದಕ್ಕೆ ಇದೇ ಹೆಸರು ಇದೆ.

ವೈಜನಾಥ ಲಿಂಗವು ಉತ್ತರ ಕರ್ನಾಟಕದಲ್ಲಿಯೂ ಮಹಾರಾಷ್ಟ್ರ ದೇಶದಲ್ಲಿಯೂ ಅತ್ಯಂತ ಪವಿತ್ರ ಸ್ಥಾನವೆಂದು ಈಗಲೂ ಪ್ರಸಿದ್ಧವಾಗಿರು

(೧) ಇದು ಹರಹರ ಕವಿಯ ಉಕ್ತಿಯು.

ತ್ತದೆ. ಈ ಪ್ರಕಾರ ಪರಳೀ ವೈಜನಾಥ ಲಿಂಗವು ಶಿವ ಶರಣೆಯರಲ್ಲಿ ಅತ್ಯಂತ ಖ್ಯಾತಿಯನ್ನು ಪಡೆದ ವೈಜವ್ವೆಯದಾಗಿರುತ್ತದೆ. ಈ ಶಿವಾಲಯಕ್ಕೆ ಎಲ್ಲ ಸಮಾಜದವರು ಈಗಲೂ ಬಹು ಭಕ್ತಿಯಿಂದ ನಡೆದು ಕೊಳ್ಳುತ್ತಾರೆ.

ಕಥಾಂತರಗಳು:— ವೈಜವ್ವೆಯ ವಿಷಯವಾಗಿ ಕೆಲವು ಗ್ರಂಥಗಳಲ್ಲಿ ಕಥಾಂತರಗಳಿವೆ. ಅವುಗಳಲ್ಲಿ ಮುಖ್ಯವಾದುದು . ಯಾವದೆಂದರೆ ವೈಜವ್ವೆಯು ಜೈನ ಮುನಿಗಳಿಗೆಂದು ಸಿದ್ಧಮಾಡಿದ ಆಹಾರ ಪದಾರ್ಥಗಳನ್ನು ಒಬ್ಬ ಜಂಗಮನಿಗೆ ಕೊಟ್ಟದ್ದನ್ನು ಅವಳ ಗಂಡನು ನೋಡಿ ಬಹಳ ಕೋಪಗೊಂಡು ಅವಳನ್ನು ಬಹಳ ಹೊಡೆದು ಬಡಿದು ಮನೆಯ ಹೊರಗೆ ಹಾಕಿದನು. ಆಗ ಅವಳು ದುಃಖಿಸುತ್ತ ಬೀದಿಯಿಂದ ಹೋಗುತ್ತಿರುವಾಗ ಮಧ್ಯದಲ್ಲಿ ಒಂದು ದೇವಾಲಯವನ್ನು ಕಂಡು ಅದು ಹರನ ದೇವಾಲಯವೆಂದು ಭಾವಿಸಿ ಒಳಗೆ ಪ್ರವೇಶಿಸಿದಳು. ಆದರೆ ಅದು ಒಂದು ಚೈತ್ಯಾಲಯವಾಗಿತ್ತು. ದುಃಖದ ಭರದಲ್ಲಿ ಅವಳ ಕಣ್ಣಿಗೆ ಎಲ್ಲವೂ ಮಬ್ಬಾಗಿದ್ದು ಆವುದೂ ನಿಚ್ಚಳವಾಗಿ ಕಾಣುತ್ತಿದ್ದಿಲ್ಲ. ಅವಳು ಆ ದೇವಾಲಯವನ್ನು ಪ್ರವೇಶಿಸಿ ಅಲ್ಲಿಯ ಜಿನಮೂರ್ತಿಯು ಲಿಂಗವೆಂದು ಭಾವಿಸಿ ನಮಸ್ಕರಿಸಿದಳು. ಆಗ ಆ ಮೂರ್ತಿಯು ಒಡೆದು ಹೋಗಿ ಅದರ ಸ್ಥಳದಲ್ಲಿ ಒಂದು ಲಿಂಗವು ಉದ್ಭವಿಸಿತು. ಅದೇ ವೈಜನಾಥ ಲಿಂಗವಾಯಿತು. ಗ್ರಾಮದಲ್ಲಿದ್ದ ಜೈನರು ಈ ಅದ್ಭುತವನ್ನು ಕಂಡು ವೈಜವ್ವೆಯು ಮಹಾ ಶರಣೆ ಎಂದು ಭಾವಿಸಿ ಅವರೆಲ್ಲರೂ ಲಿಂಗ ಧಾರಿಗಳಾದರು.

ವೈಜವ್ವೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಅವಳು ಪುರಾತನಳು. ಅವಳು ವೀರಶೈವ ಚಳವಳಿಯ ಆರಂಭಕಾಲದಲ್ಲಿ ಇದ್ದಂತೆ ತೋರುತ್ತದೆ. ಬಹುಶಃ ಬಸವೇಶ್ವರನಕಿಂತಲೂ ಕೆಲಕಾಲ ಹಿಂದಿನವಳಿರಬಹುದು.

ಈ ಕಾಲದಲ್ಲಿ ಜೈನ, ವೀರಶೈವ ಮತ್ತು ಬ್ರಾಹ್ಮಣ ಸಮಾಜಗಳಲ್ಲಿ ಮತಾಂತರಗಳು ಪರಸ್ಪರ ಬಹಳ ಆಗುತ್ತಿದ್ದವು. ಆದ್ದರಿಂದಲೇ ವೈಜವ್ವೆಯ ತಂದೆಯು ಅವಳನ್ನು ಒಬ್ಬ ಜೈನನಿಗೆ ಕೊಟ್ಟು ಲಗ್ನಮಾಡಿದ್ದಾನೆ. ಇಂಥ ಉದಾಹರಣೆಗಳು ಹಿಂದಿನಕಾಲದಲ್ಲಿರುವ ಶಿವಶರಣರಲ್ಲಿ ಅನೇಕವಿರುತ್ತವೆ. ಆದರೆ ಬಸವೇಶ್ವರನ ಕಾಲದಲ್ಲಿ ಶಿವಶರಣರ ಉದಾರ ತತ್ವಗಳು ದೇಶದಲ್ಲಿ ಪ್ರಸಾರವಾಗುತ್ತ ಹೋದಹಾಗೆ ಕೆಲಕಾಲದ ಮೇಲೆ ಈ ಮೂರೂ ಸಮಾಜಗಳು ಶೀರ ಭಿನ್ನಭಿನ್ನವಾದವೆಂಬ ತೋರುತ್ತದೆ.

ಈ ಕಾಲದಲ್ಲಿ ಗೋದಾವರೀತೀರ ಪ್ರದೇಶದಲ್ಲಿ ಉರಿಲಿಂಗದೇವ, ಉರಿಲಿಂಗಪೆದ್ದಿ, ಕಾಳವ್ವೆ, ಕೋಲಂಟೆ ಮೊದಲಾದ ಶಿವಶರಣ ಶರಣೆಯರು ಆಗಿಹೋಗಿದ್ದಾರೆ. ಕುಂಬಾರ ಗುಂಡಯ್ಯನು ಇದ್ದ ಭಲ್ಲಾಕಿ ಅಥವಾ ಭಾಲ್ಕಿ ಗ್ರಾಮವಾದರೂ ಈ ಪ್ರಾಂತಕ್ಕೆ ಸಮೀಪವಾಗಿಯೇ ಇದೆ. ಇದರಿಂದ ಶಿವಶರಣರ ತತ್ವಗಳು ಈ ಭಾಗದಲ್ಲೆಲ್ಲ ಪ್ರಸಾರವಾಗುತ್ತಲಿದ್ದದರಿಂದ ವೀರಶೈವ ಸಮಾಜದ ಉದಯವಾದರೂ ಈ ಉತ್ತರ ಭಾಗದಲ್ಲಿ ಆಗುತ್ತ ಹೋಗಿರುತ್ತದೆಂದು ತೋರುತ್ತದೆ.

ಈ ಭಾಗದಲ್ಲಾದ ಶಿವಶರಣ ಶಿವಶರಣೆಯರಲ್ಲಿ ಕೆಲವರು ಕನ್ನಡ ವಚನಕಾರರಿದ್ದಾರೆ. ಈಗಲೂ ಇಲ್ಲಿಯ ಅನೇಕ ಗ್ರಾಮಗಳ ಹೆಸರುಗಳೂ ಕೂಡ ಕನ್ನಡವಿರುತ್ತವೆ. ಆದ್ದರಿಂದ ೧೧ನೇ ಮತ್ತು ೧೨ನೇ ಶತಮಾನಗಳಲ್ಲಿ ಈ ಗೋದಾವರೀ ತೀರ ಪ್ರದೇಶವು ಹೇಗೆ ೯ನೇ ಶತಮಾನದಲ್ಲಿ ಆಳಿದ ರಾಷ್ಟ್ರಕೂಟ ಅರಸನಾದ ನೃಪತುಂಗನ ಕಾಲದಲ್ಲಿ ಕನ್ನಡ ನಾಡಾಗಿತ್ತೋ ಹಾಗೆಯೇ ೧೩ನೇ ಶತಮಾನಕಾಲದಲ್ಲಿಯೂ ಇದು ಕನ್ನಡನಾಡಾಗಿತ್ತೆಂದು ತೋರುತ್ತದೆ. ದೇವಿಯರ ತ್ರಿವಿಧಿಯಲ್ಲಿ ವೈಜವ್ವೆಯ ಉಲ್ಲೇಖವಿರುತ್ತದೆ. ಅದು ಹೇಗೆಂದರೆ:-

ರಾಜಾನ್ನದಡಿಗೆಯನ್ನೂರ ಜೈನರಿಗುಣಿಸದೆ । ರಾಜಶೇಖರಗೆ
ಉಣಿಸಿ ನಿತ್ಯವ ಪಡೆದ । ವೈಜಕ್ಕವ್ವೆಯೆ ಶರಣಾಗು ॥

———

# ೪. ದುಗ್ಗಳೆ.

ದೇವರ ದಾಸಿಮಯ್ಯನು ಸ್ತ್ರೀಯರಿಗೋಸ್ಕರ ಆದರ ಭಾವವನ್ನು ತಾಳಿದವನು. ಆದ್ದರಿಂದ ಅವನ ಹೆಂಡತಿಯಾದ ದುಗ್ಗಳವ್ವೆಯು ಅವನ ಕಾಯಕದಲ್ಲಿ ಅವನಿಗೆ ಯಾವಾಗಲೂ ಸಹಾಯವಾಗುತ್ತಲೇ ಬಂದಳು. ಅವಳು ಅವನನ್ನು ಎಂದೂ ವಿರೋಧಿಸಲಿಲ್ಲ. ಅದರಿಂದ ಅವನಿಗೆ ಗೃಹ ಸೌಖ್ಯವು ಉಂಟಾಗಿ ಅವನು ತನ್ನ ಕಾಯಕಗಳನ್ನು ಷಟ್‌ಸ್ಥಲಾನು ಸಾರವಾಗಿ ಜರಗಿಸಲು ಸಾಧ್ಯವಾಯಿತು. ಇದು ಶರಣರ ಕಾಯಕದ ವೈಶಿಷ್ಟ್ಯವಾಗಿದೆ. ಈ ವಿಷಯವಾಗಿ ಕೆಳಗೆ ಕಾಣಿಸಿದ ಅವನ ಚರಿತ್ರೆ ಯಲ್ಲಿಯ ಆಖ್ಯಾಯಿಕೆಗಳು ವಿಚಾರಾರ್ಹವಾಗಿರುತ್ತವೆ.

ಒಂದು ದಿವಸ ಕೈಲಾಸ ಪರ್ವತದಲ್ಲಿ ಇಬ್ಬರು ಗಣಾಧೀಶ್ವರರು ವೈರಾಗ್ಯವಧಿಕವೋ ಸಂಸಾರವಧಿಕವೋ ಎಂಬುದರ ವಿಷಯವಾಗಿ ವಾಗ್ವಾದ ಮಾಡಹತ್ತಿದರು. ಅವರಲ್ಲಿ ಒಬ್ಬನು ಸಂಸಾರವಧಿಕವೆಂತಲೂ, ಇನ್ನೊಬ್ಬನು ವಿರಕ್ತಿ ಅಧಿಕವೆಂತಲೂ ವಾದಿಸಿದರು. ಆದರೆ ಇವುಗಳಲ್ಲಿ ಯಾವದು ಅಧಿಕವೆಂಬುದು ಅವರಿಗೆ ತಿಳಿಯದೆ ಹೋಗಲು ಅವರು ಶಿವನಲ್ಲಿಗೆ ಬಂದು ಈ ಎರಡರಲ್ಲಿ ಯಾವದು ಅಧಿಕವೆಂದು ಅವನನ್ನು ಕೇಳಿದರು. ಅದಕ್ಕೆ ಅವನು– ಭೂಲೋಕದಲ್ಲಿ ನನ್ನ ಭಕ್ತರಾದ ದಾಸ ದುಗ್ಗಳೆಯರೆಂಬ ಸತಿ-ಪತಿ ಗಳಿದ್ದಾರೆ ಅವರನ್ನು ನೀವು ಈ ವಿಷಯದಲ್ಲಿ ಕಾಣಿರಿ, ಎಂದು ಹೇಳಿ ದನು. ಹಾಗೆ ಅವರು ಮಾಹೇಶ್ವರರ ರೂಪು ಧಾರಣ ಮಾಡಿ ಭೂಲೋ ಕಕ್ಕೆ ಬಂದರು. ಇಲ್ಲಿಗೆ ಬಂದ ಬಳಿಕ ಅವರು ಮೊದಲು ದಾಸಿಮಯ್ಯನ ಮನೆಗೆ ಬಂದರು. ಆಗ ಅವನ ಮನೆಯಲ್ಲಿ ಉಭಯ ದಂಪತಿಗಳು ತಮ್ಮ ಸಂಸಾರದ ನಿತ್ಯದ ಕಾರ್ಯಗಳಲ್ಲಿ ತೊಡಗಿದ್ದರು. ಹೀಗೆ ತೊಡಗಿದ್ದರೂ, ಅವರ ಮನೆಯಲ್ಲಿ ಶಿವಾನುಭವದ ದಿವ್ಯ ತೇಜಸ್ಸು ಸ್ಫುರಿಸುತ್ತಿತ್ತು. ಆಗ ದುಗ್ಗಳೆಯು ಧಾನ್ಯವನ್ನು ಕುಟ್ಟುವದರಲ್ಲಿ ತೊಡಗಿದ್ದಳು. ಆ ಕಾಲದಲ್ಲಿ ದೇವರ ದಾಸಿಮಯ್ಯನು ಅವಳನ್ನು ಕೆಲವೊಂದು ಕಾರ್ಯಕ್ಕೋಸ್ಕರ ಒಳಗೆ ಕರೆದನು. ಆಗ ಅವಳು ಎತ್ತಿದ ಒನಿಕೆಯು ಮೇಲೆ ಅರ್ಧ ದಾರಿಯಲ್ಲಿದ್ದರೂ ಪತಿಯ ಆಜ್ಞೆಯನ್ನು ಪಾಲಿಸುವವಳಾದ್ದರಿಂದ ಅವಳು ಆ ಒನಿಕೆಯನ್ನು ಕೆಳಗಿಳಿಸದೆ ಅದನ್ನು ಅಲ್ಲಿಗೆಯೇ ಬಿಟ್ಟು ಅವ

ನಿದ್ದೆಡೆಗೆ ಬಂದಳು. ಅವಳು ಪತಿವ್ರತೆಯಾದ್ದರಿಂದ ಒನಿಕೆಯನ್ನು ಎಲ್ಲಿ ಬಿಟ್ಟಿದ್ದಳೋ ಅಲ್ಲಿಯೇ ಅದನ್ನು ಬಿಡಲು ಅದು ಅಂತರದಲ್ಲಿಯೇ ನಿಂತು ಬಿಟ್ಟಿತು. ಇಷ್ಟು ಆಕೆಯ ಶಕ್ತಿಯು ಬೆಳೆದಿತ್ತು.

ನೆಯ್ಗೆಯ ಕೆಲಸದಲ್ಲಿ ಸ್ತ್ರೀಯರು ಉಂಕೀ ಹೂಡಿ ಮಗ್ಗಕ್ಕೆ ಬೇಕಾಗುವ ಎಳೆಗಳನ್ನು ಸಿದ್ಧ ಪಡಿಸಬೇಕಾಗುತ್ತದೆ. ಇದು ಸಾಮಾನ್ಯವಾಗಿ ಸ್ತ್ರೀಯರು ಮಾಡತಕ್ಕ ಕೆಲಸವು. ಆದರೆ ದೇವರ ದಾಸಿಮಯ್ಯನು ಈ ಕಾರ್ಯವನ್ನು ತನ್ನ ಹೆಂಡತಿಗೋಸ್ಕರ ತಾನೇ ಕೈಕೊಂಡಿದ್ದನು. ಒಂದು ದಿವಸ ಅದನ್ನು ಮಾಡುತ್ತಿರುವಾಗ ಅವನು ದುಗ್ಗಳೆಗೆ ಇಲ್ಲಿ ಎಳೆ ಹರಿದಿದೆ, ಅದು ಚನ್ನಾಗಿ ಕಾಣುವದಿಲ್ಲ, ನೀನು ದೀಪವನ್ನು ತೆಗೆದುಕೊಂಡು ಬಂದು ಎಳೆಯನ್ನು ಹತ್ತಿಸ್ರು ಎಂದು ಹೇಳಲು, ಅದು ಹಗಲು ಹೊತ್ತು, ಆಗ ಚನ್ನಾಗಿ ಕಾಣುತ್ತಿತ್ತು, ಹೀಗಿದ್ದರೂ ಅವಳು ಅವನಿಗೆ–ಈಗೇಕೆ ದೀಪ ಬೇಕು ಎಂದು ಅವಳು ತಿರುಗಿ ಅವನಿಗೆ ಪ್ರಶ್ನೆ ಮಾಡಲಿಲ್ಲ. ಅವಳು ದೀಪವನ್ನು ಹಚ್ಚಿಕೊಂಡು ಬೆಳಕಿನಲ್ಲಿ ಬಂದು ಹರಿದ ಎಳೆಗೆ ಕೆಚ್ಚು ಹಾಕಿ ಗಂಡನಿಗೆ ತೋರಿಸಿ ಒಳಗೆ ಹೋದಳು. ಇದರಿಂದ ದುಗ್ಗಳೆ ದಾಸಿಮಯ್ಯರಲ್ಲಿ ಎಷ್ಟು ಪರಸ್ಪರ ಸಹಕಾರ ಮತ್ತು ಪ್ರೇಮ ಭಾವವಿತ್ತೆಂಬುದು ಗೊತ್ತಾಗುತ್ತದೆ.

ಮುಂದೆ ಕೆಲವು ವೇಳೆಯಾದ ಮೇಲೆ ದೇವರ ದಾಸಿಮಯ್ಯನು–ದುಗ್ಗಳೇ, ಇಲ್ಲಿ ಬಾ ಕುಂಚಿಗೆಯನ್ನು ತಂದು ಕೊಡೆಂದು ಅವಳಿಗೆ ಹೇಳಿದನು. ಆಗ ಚಿಕ್ಕ ಮಕ್ಕಳಿಗೆ ಹೊದ್ದಿಸುವ ಕುಂಚಿಗೆಯ ಕೆಲಸವಿರಲಿಲ್ಲ. ಸರಾಳ ಮಾಡುವಾಗ ಉಪಯೋಗಿಸುವ ಕುಂಚಿಗೆ ಅವನಿಗೆ ಬೇಕಾಗಿತ್ತು. ಆದರೆ ತಾನು ಹೊತ್ತುಕೊಂಡಿದ್ದ ಕುಂಚಿಗೆಯನ್ನು ಗಂಡನು ಬೇಡುತ್ತಿರಬಹುದೆಂದು ತಿಳಿದು ಅವಳು ಅದನ್ನು ತೆಗೆದು ಗಂಡನಿಗೆ ಕೊಟ್ಟು ಹೋದಳು!

ಪುರಾತನ ಕಾಲದಲ್ಲಿ ಮುನಿಗಳೂ ಸ್ತ್ರೀಯರೂ ಒಂದು ತರಹದ ಕುಂಚಿಗೆಯನ್ನು ಹೊತ್ತುಕೊಳ್ಳುತ್ತಿದ್ದು ಅದನ್ನು ಗಂಡನು ಬೇಡುತ್ತಿರಬಹುದೆಂದು ದುಗ್ಗಳೆಯು ತಿಳಿದು ಅವಳು ತನ್ನ ತಲೆಯ ಮೇಲಿದ್ದ ಅಂಥ ಕುಂಚಿಗೆಯನ್ನು ತೆಗೆದುಕೊಂಡು ಬಂದು ಗಂಡನ ಕೈಯ್ಯಲ್ಲಿ ಕೊಟ್ಟು ಹೊದಳು.

ದೇವರದಾಸಿಮಯ್ಯ ದುಗ್ಗಳೆಯರು ಹೀಗೆ ತಮ್ಮ ಕಾಯಕವನ್ನು ಮತ್ತು ಸಂಸಾರ ಕಾರ್ಯಗಳನ್ನು ಮಾಡುವಲ್ಲಿ ಪರಸ್ಪರ ಸಹಾಯದಿಂದ

ಮತ್ತು ಪ್ರೇಮದಿಂದ ನಡಿಸುತ್ತಿರುವದನ್ನು ಆ ಉಭಯ ಮಹೇಶ್ವರರು ಕಂಡು ಸಂಸಾರವು ಇದ್ದರೆ ಹೀಗಿರಬೇಕು, ಹೀಗಿದ್ದರೆ ಇದು ವಿರಕ್ತಿಗಿಂತಲೂ ಸುಖಕರವಾದದ್ದು, ಇವೇ ಹೆಚ್ಚಿನದು, ಎಂದು ಅವರಿಗೆ ತೋರಿತು.

ಇದಾದ ಮೇಲೆ ದೇವರದಾಸಿಮಯ್ಯನು ಹೆಂಡತಿಯನ್ನು ಒಳಗೆ ಕರೆದು ಕೊಂಡು ಹೋಗಿ ಭೋಜನಕ್ಕೆ ಕುಳಿತನು. ಆದರೆ ಅವರು ಬಡವರು. ಊಟದಲ್ಲಿ ಪಕ್ವಾನ್ನಗಳಿರಲಿಲ್ಲ, ಬಿಸಿ ಬಿಸಿ ಪದಾರ್ಥಗಳಿರಲಿಲ್ಲ. ದುಗ್ಗಳೆಯು ತಣ್ಣಗಿನ ತಂಗುಳ ಅಂಬಲಿಯನ್ನು ಒಳಗಿನಿಂದ ತಂದು ಎಲ್ಲರಿಗೂ ನೀಡಿದಳು. ದೇವರದಾಸಿಮಯ್ಯನು ಅದನ್ನು ಲಿಂಗಾರ್ಪಣೆ ಮಾಡಿ ಅದನ್ನು ಸುರಿದುಕೊಳ್ಳಹತ್ತಿದನು. ಆಗ ಅವನು ತನ್ನ ಹೆಂಡತಿಗೆ ಈ ಅಂಬಲಿಯು ಬಹಳ ಬಿಸಿಯಾಗಿದೆ. ಅದನ್ನು ಬೀಸಿ ತಣ್ಣಗೆ ಮಾಡು ಎಂದು ಹೇಳಿದನು. ದುಗ್ಗಳವ್ವೆಯು ಅದನ್ನು ಕೇಳಿ ಗಂಡನಿಗೆ ಮಾರುತ್ತರ ಕೊಡದೆ ಅಂಬಲಿಯು ತಣ್ಣಗಿದ್ದರೂ ಒಂದು ಬೀಸಣಿಕೆಯನ್ನು ತಂದು ತಣ್ಣಗಿನ ಆ ಅಂಬಲಿಗೆ ಗಾಳಿಯನ್ನು ಹಾಕಹತ್ತಿದಳು !

ಆಗ ಆ ಉಭಯ ಗಣಾಧೀಶ್ವರರು ಸಂಸಾರವಿದ್ದರೆ ಹೀಗಿರಬೇಕು, ಹೀಗಿದ್ದರೆ, ವಿರಕ್ತಿಗಿಂತ ಸಂಸಾರವೇ ಅಧಿಕವು ಎಂದು ಅವರು ತಿಳಿದವರಾಗಿ ದುಗ್ಗಳೆ ದಾಸಿಮಯ್ಯರ ಅಪ್ಪಣೆಯನ್ನು ಅವರು ತೆಗೆದುಕೊಂಡು ಹೊರಗೆಹೊರಟರು.

ಅವರು ದಾಸಿಮಯ್ಯನ ಮನೆಯನ್ನು ಬಿಟ್ಟು ಗೊಗ್ಗೇಶ್ವರನೆಂಬ ಬೇರೊಬ್ಬ ಶಿವಶರಣನ ಮನೆಗೆ ಹೋದರು. ಅವನೂ ಕೂಡ ಒಬ್ಬ ಶ್ರೇಷ್ಠ ಶಿವಾನುಭವಿಯು, ಲಿಂಗಾಂಗ ಸಾಮರಸ್ಯ ವೃತ್ತಿಯುವನು, ಬಹು ಶಾಂತ ಸ್ವಭಾವದವನು. ಆದರೆ ಆ ಮಹೇಶ್ವರರು ಅವನ ಗೃಹವನ್ನು ಪ್ರವೇಶಿಸಿದ ಕೂಡಲೇ ಅವನ ಹೆಂಡತಿಯು ಅವರ ಮೇಲೆ ಬೈಗಳ ಸುರಿಮಳೆಯನ್ನು ಸುರಿಸಹತ್ತಿದಳು. ಅವಳ ಬಾಯಲ್ಲಿ ಭಕ್ತರ ನಿಂದೆ, ಜಂಗಮರ ನಿಂದೆ, ಬಂದ ಅತಿಥಿಗಳ ನಿಂದೆ, ಇವುಗಳೇ ತುಂಬಿದ್ದವು. ಆದರೆ ಗೊಗ್ಗೇಶ್ವರನು ಅವಳ ಮೇಲೆ ಎಷ್ಟು ಮಾತ್ರವೂ ಕೋಪಿಸಲಿಲ್ಲ. ಅವನು ಆ ಮಹೇಶ್ವರರನ್ನು ಯಥಾ ರೀತಿಯಾಗಿ ತಾನೇ ಸತ್ಕರಿಸಿ ಅವರನ್ನು ತನ್ನ ಮನೆಯಿಂದ ಬೀಳ್ಕೊಟ್ಟನು. ಆಗ ಆ ಮಹೇಶ್ವರರು– ಈ ಗೊಗ್ಗೇಶ್ವರನು ಮಹಾ ಶಿವಶರಣನು. ಅವನಿಗೆ ಸಿಟ್ಟು ಎಂಬುದಿಲ್ಲ. ಆದರೆ ಅವನ ಸಂಸಾರಕ್ಕೂ ದಾಸಿಮಯ್ಯನ ಸಂಸಾರಕ್ಕೂ ಎಷ್ಟು ಅಂತರವು! ದಾಸಿಮಯ್ಯನ ಸಂಸಾರವು ಕೈಲಾಸಕ್ಕಿಂತಲೂ ಮಿಗಿಲಾದದ್ದು.

ಅವನನ್ನು ನಾವು ಕೈಲಾಸಕ್ಕೆ ಕರೆದುಕೊಂಡು ಹೊಗುವದು ಬೇಡ. ಅವನು ಇಲ್ಲಿಯೇ ಇರಲಿ. ಆದರೆ ಗೊಗ್ಗೇಶ್ವರನಂಥ ಶಿವಶರಣನು ಇಂಥ ಸಂಸಾರ ದಲ್ಲಿ ಇರಬಾರದು. ಅವನನ್ನು ನಾವು ಕೈಲಾಸಕ್ಕೆ ಕರೆದುಕೊಂಡು ಹೋಗ ಬೇಕು ಎಂದು ನುಡಿದು ಅವನನ್ನು ಕೈಲಾಸಕ್ಕೆ ತಮ್ಮ ಕೂಡ ಕರೆದು ಕೊಂಡು ಹೋದರು !

ಇದರಿಂದ ಸರಿಯಾಗಿ ನಡಿಸಿದ ಕಾಯಕ ಮತ್ತು ಉತ್ತಮ ಗೃಹಿಣಿ ಇವುಗಳು ವಿರಕ್ತಿಗಿಂತಲೂ ಹೆಚ್ಚು ಶ್ರೇಷ್ಠವಾದವುಗಳೆಂದು ಶರಣರು ಭಾವಿಸುತ್ತಿದ್ದುದು ವ್ಯಕ್ತವಾಗುತ್ತದೆ.

ಕೆಲವು ದಿವಸಗಳಾದ ಮೇಲೆ ದಾಸಿಮಯ್ಯ ದುಗ್ಗಳೆಯರಿಗೆ ಒಬ್ಬ ಮಗನು ಹುಟ್ಟಿದನು. ಅವರು ಅವನಿಗೆ ರಾಮೇಶ್ವರನೆಂಬ ಹೆಸರನ್ನಿಟ್ಟರು.

ಮುಂದೆ ಉಭಯ ದಂಪತಿಗಳ ಕೀರ್ತಿಯು ನಾಡಿನಲ್ಲಿ ದಿನೇ ದಿನೇ ಹೆಚ್ಚುತ್ತಲೇ ಹೋಯಿತು ಇದು ಅವರು ಕೈಕೊಂಡ ಧರ್ಮೋದ್ಧಾರ ಕಾರ್ಯಗಳ ಪರಿಣಾಮವಾಗಿರುತ್ತದೆ. ಬಸವೇಶ್ವರನು ತನ್ನ ವಚನಗಳಲ್ಲಿ ಅವರಿಬ್ಬರನ್ನು ಅನೇಕ ಬಗೆಯಾಗಿ ಸ್ತುತಿಸಿದ್ದಾನೆ. ಅವರ ಅತುಲವಾದ ಭಕ್ತಿ, ಅವರ ಆಚರಣೆ ಅವರ ಶಿವಾನುಭವ ಇವುಗಳನ್ನು ಅವನು ಬಾಯ್ತುಂಬ ಹೊಗಳಿದ್ದಾನೆ. ಅವನ ಶಬ್ದಗಳಿಂದಲೇ ನಾವು ದಾಸಿಮಯ್ಯ ದುಗ್ಗಳೆಯರ ಯೋಗ್ಯತೆಯನ್ನು ಇಲ್ಲಿ ವಿವರಿಸುವೆವು.

ದೇವರ ದಾಸಿಮಯ್ಯನು ೧೦೦೮ ರಿಂದ ೧೦೪೨ ರ ವರೆಗೆ ಆಳಿದ ಜಯಸಿಂಹರಾಜನ ಕಾಲದಲ್ಲಿ ಅಂದರೆ ಬಸವೇಶ್ವರನಕಿಂತ ಮೊದಲು ೧೦೦-೧೫೦ ವರ್ಷಗಳ ಹಿಂದೆ ಪ್ರಸಿದ್ಧಿಗೆ ಬಂದಿದ್ದನೆಂಬುದನ್ನು ನಾವು ಇಲ್ಲಿ ಹೇಳುವದು ಅವಶ್ಯವಿದೆ. ಆದ್ದರಿಂದ ಬಸವೇಶ್ವರನು ಉಚ್ಚ ಮನಸ್ಕನಾಗಿ ದಾಸ ದುಗ್ಗಳೆಯರನ್ನು ತನ್ನ ವಚನಗಳಲ್ಲಿ ಬಹಳ ಹೊಗಳಿರುತ್ತಾನೆ.

ಬಸವೇಶ್ವರನು ಭಕ್ತಿ ಎಂದರೆ ಎಂತಹದೆಂದು ತನಗೆ ತಾನೇ ಕೇಳಿಕೊಂಡು ಅದು ದಾಸಯ್ಯ ಮಾಡಿದಂತಹದೆಂದು ತನ್ನ ವಚನದಲ್ಲಿ ಹೇಳಿದ್ದಾನೆ !

'ಭಕ್ತಿ ಎಂತಹುದಯ್ಯ?' ದಾಶಯ್ಯ ಮಾಡಿದಂತಹುದಯ್ಯ. ಭಕ್ತ ಎಂತಹುದಯ್ಯ? ಸಿರಿಯಾಳ ಮಾಡಿದಂತಹುದಯ್ಯ. ಭಕ್ತಿ ಎಂತಹುದಯ್ಯ? ಕೂಡಲ ಸಂಗಮ ದೇವ ನೀ ಬಾಣನ ಬಾಗಿಲ ಕಾಯ್ದಂತಹುದಯ್ಯ.

ಈ ಪ್ರಕಾರ ಬಸವೇಶ್ವರನು ದೇವರ ದಾಸಿಮಯ್ಯನನ್ನು ಹೊಗಳುತ್ತ ಅವನನ್ನು ಸಿರಿಯಾಳ, ಸಿಂಧು ಬಲ್ಲಾಳ, ಬಾಣಾಸುರ ಇಂಥ ಮಹಾನುಭಾವರ ಪಂಙ್ತಿಯಲ್ಲಿ ಸೇರಿಸಿದ್ದಾನೆ.

ಬಸವೇಶ್ವರನು ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನು. ಆದರೆ ದೇವರ ದಾಸಿಮಯ್ಯನು ನೇಯ್ಗೆ ಕೆಲಸ ಮಾಡುವವನು. ಆದರೂ ಅವನು ನಡೆಯಲ್ಲಿ ತನ್ನಕಿಂತ ಶ್ರೇಷ್ಟನಾದುದರಿಂದ ತಾನು ಜಾತಿಯಲ್ಲಿ ಬ್ರಾಹ್ಮಣನಾಗಿದ್ದರೂ ದಾಸಿಮಯ್ಯನು ತನ್ನ ಮನೆಯಲ್ಲಿ ಮಾಡಿದ ಶಿವದಾನ ಎಂದರೆ ಮಜ್ಜಿಗೆಯನ್ನು ಸಹ ನನಗೆ ಕೊಡುವದಿಲ್ಲೆಂದು ಒಂದು ವಚನದಲ್ಲಿ ಹೇಳಿದ್ದಾನೆ! ಆ ವಚನವು ಯಾವದೆಂದರೆ 'ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ ಕಷ್ಟತನದ ಹೊರೆಯ ಹೊರಿಸದಿರಯ್ಯಾ! ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ. ದಾಸಯ್ಯ ಶಿವದಾನವನೆರೆಯ ನೋಡಯ್ಯ. ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ. ಉನ್ನತ ಮಹಿಮ ಕೂಡಲ ಸಂಗಮದೇವ ಶಿವಧೋ.

ಬಸವೇಶ್ವರನು ದೇವರದಾಸಿಮಯ್ಯನ ಹೆಂಡತಿಯಾದ ದುಗ್ಗಳೆಗೋಸ್ಕರ ಸಹ ಪೂಜ್ಯಭಾವವನ್ನು ತಾಳಿದ್ದಾನೆ. ಅವನು ಕೆಳಗಿನ ವಚನದಲ್ಲಿ ಅವಳ ಭಕ್ತಿಯನ್ನು ಹೊಗಳಿದ್ದಾನೆ.

'ನೆರೆನಂಬೋ, ನೆರೆನಂಬೋ ದರ ದುರವಿಲ್ಲದೆ ಸಾಮವೇದಿಗಳಂತೆ. ನೆರೆ ನಂಬೋ, ನೆರೆನಂಬೋ ದಾಸದುಗ್ಗಳೆಯರಂತೆ. ನೆರೆನಂಬೋ, ನೆರೆನಂಬೋ ಸಿರಿಯಾಳ ಚಂಗಳೆಯರಂತೆ. ನೆರೆನಂಬೋ, ನೆರೆನಂಬೋ ಸಿಂಧು ಬಲ್ಲಾಳನಂತೆ ನಂಬಿದೆಯಾದರೆ ತನ್ನನೀವ ಕೂಡಲ ಸಂಗಮದೇವ.

ಇದರಿಂದ ದುಗ್ಗಳೆಯು ಭಕ್ತಿಗೋಸ್ಕರ ಹಿಂದಿನ ಕಾಲದಲ್ಲಿ ಬಹು ಪ್ರಸಿದ್ಧಳಾಗಿದ್ದಳೆಂಬುದು ಗೊತ್ತಾಗುತ್ತದೆ.

ದುಗ್ಗಳೆಯ ಪತಿಯಾದ ದೇವರ ದಾಸಿಮಯ್ಯನಿಗೆ ತವನಿಧಿಯು ಪ್ರಾಪ್ತವಾಗಿತ್ತೆಂದು ಪ್ರಸಿದ್ಧಿಯು ಇದೆ. ಇದನ್ನು ಬಸವೇಶ್ವರನು ತನ್ನ ಉಕ್ತಿಗಳಲ್ಲಿ ಅನೇಕ ಸಲ ಉಲ್ಲೇಖಿಸಿದ್ದಾನೆ. ಇಬ್ಬರು ಗಣಾಧೀಶ್ವರರು ದಾಸಿಮಯ್ಯನನ್ನು ಕಂಡು ಹೋಗುವಾಗ ಅವನಿಗೆ ತವನಿಧಿಯು ಪ್ರಾಪ್ತವಾಗಿತ್ತೆಂದು ಹೇಳಿ ಹೋದರೆಂದು ಅವನ ಚರಿತ್ರೆಯಲ್ಲಿ ಬಂದಿದೆ. ಈ ವಿಷಯವಾಗಿ ಇರುವ ಆಖ್ಯಾಯಿಕೆಯು ಏನಂದರೆ, ದಾಸದುಗ್ಗಳೆಯರು ನಡಿ

ಸುತ್ತಿದ್ದ ಪ್ರಪಂಚದ ರೀತಿಯನ್ನು ಪರಮಾತ್ಮನು ನೋಡಿ ಅವನು ಪ್ರೀತ ನಾಗಿ ಇವಳು ಹೀಗೆ ಬಡತನದಲ್ಲಿ ಇರಬಾರದು ಎಂದು ಅವನು ದುಗ್ಗ ಳೆಗೆ ಹೇಳಿದ್ದೇನೆಂದರೆ—ನೀನು ಮಹಾ ಪತಿವ್ರತೆಯು, ಪತಿಯ ಅಪ್ಪಣೆಯನ್ನು ಯಾವಾಗಲೂ ನಡಿಸುತ್ತಬಂದಿರುವಿ, ಇಕೋ ನಾನು ಕೋಡುವ ಈ ಹಿಡಿ ಧಾನ್ಯವನ್ನು, ಇದನ್ನು ನೀನು ನಿನ್ನ ಮನೆಯೊಳಗಿರವ ಧಾನ್ಯ ಸಂಗ್ರಹದಲ್ಲಿ ಶಿವಮಂತ್ರವನ್ನು ಉಚ್ಚರಿಸುತ್ತ ಕೂಡಿಸಿ ಬಿಡು, ಆಗ ನಿನ್ನ ಧಾನ್ಯವು ಅಕ್ಷಯುವಾಗುವದು. ನಾನು ಕೊಟ್ಟುದು ತವನಿಧಿಯು. ಹೀಗೆ ಹೇಳಿ ಯಾರು ತಮ್ಮ ಕಾಯಕವಮಾಡುತ್ತ ಅಷ್ಟಾವರಣ ನಿರತರಾಗಿರುವರೋ ಯಾರು ಸತ್ಯ ಸದಾಚಾರ ವುಳ್ಳವರಾಗಿ ಸಮಸ್ತ ಪ್ರಾಣಿಗಳಲ್ಲಿ ಸಮದೃಷ್ಟಿಯುಳ್ಳವರಾಗಿರುವರೋ ಯಾರು ಇಷ್ಟಲಿಂಗ ಪೂಜೆಯಲ್ಲಿ ಆಸಕ್ತರಾಗಿರುವರೋ ಯಾರು ಪಂಚಾಕ್ಷರೀ ಮಂತ್ರವನ್ನು ಅಹೋರಾತ್ರಿ ಸ್ಮರಿಸುವರೋ ಅವರಲ್ಲಿ ಈ ತವನಿಧಿಯು ಸ್ಥಿರವಾಗಿ ಉಳಿಯುವದು. ಆದರೆ ಯಾವಾಗ್ಗೆ ಅವರಲ್ಲಿ ಅಹಂಕಾರವು ತಲೆದೋರುವದೋ ಆ ಕ್ಷಣವೇ ಅದು ಮಾಯವಾಗುತ್ತದೆ. ಅವರಲ್ಲಿ ಧಾನ್ಯದ ಕೊರತೆಯುಂಟಾಗಿ ಅವರು ಕಷ್ಟಕ್ಕೆ ಈಡಾಗುತ್ತಾರೆ ಹೀಗೆ ದುಗ್ಗಳೆಗೆ ಹೇಳಿ ಶಂಕರನು ಅಲ್ಲಿಯೇ ಮಾಯವಾದನು.

ಈ ತತ್ವವು ಶಾಶ್ವತವಾದದ್ದು. ಇದು ವ್ಯವಹಾರದಲ್ಲಿ ಸತ್ಯವೆಂಬುದು ಯಾವಾಗಲೂ ತೋರಿಬರುತ್ತದೆ. ಒಂದು ದಿವಸ ಶಂಕರದಾಸಿಮಯ್ಯನೆಂಬ ಶಿವ ಶರಣನು ಅವನನ್ನು ಕಾಣಲಿಕ್ಕೆ ನವಿಲಿಯಿಂದ ಮುದುನೂರಿಗೆ ಬಂದಾಗ್ಗೆ ಅಲ್ಲಿಗೆ ದೂರದೂರದ ನಾಡುಗಳಿಂದ ಜನರು ದಾಸಿಮಯ್ಯನ ಗ್ರಾಮಕ್ಕೆ ಬಹು ಸಂಖ್ಯೆಯಿಂದ ಬಂದು ಅವನಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ಕೇಳಲಿಕ್ಕೆಂದು ಅವನಲ್ಲಿ ಕಿಕ್ಕಿರಿಯುತ್ತಿದ್ದರು. ದಾಸಿಮಯ್ಯನು ತವನಿಧಿಯನ್ನು ಪಡೆದವನಾದ್ದರಿಂದ ಅವರು ಅವನಲ್ಲಿ ವೈಭವದಿಂದ ಇರುತ್ತಿದ್ದರು. ಶಂಕರ ದಾಸಿಮಯ್ಯನು ಇದನ್ನು ಕಂಡು ಆನಂದಭರಿತನಾಗಿ ಅಲ್ಲಿ ನಡೆಯುತ್ತಿದಿದ್ದ ಶಿವಾನುಭವ ಸದ್ಗೋಷ್ಠಿಗಳಲ್ಲಿ ಕೆಲಕಾಲ ಕಳೆದನು. ಆಗ ಶಂಕರದಾಸಿ ಮಯ್ಯನೂ ಅವನ ಹೆಂಡತಿಯಾದ ಶಿವದಾಸಿಯೂ ತಮ್ಮ ಸೇವಕನಿಗೆ- ನೀನು ಧಾನ್ಯದ ಭಿಕ್ಷೆಗೋಸ್ಕರ ಗ್ರಾಮದಲ್ಲಿ ಹೋಗು ಎಂದು ಹೇಳಿದರು. ಅದನ್ನು ದೇವರದಾಸಿಮಯ್ಯನು ಕೇಳಿ- ನೀವು ನಮ್ಮಲ್ಲಿರುವ ವರೆಗೆ ಧಾನ್ಯವನ್ನು ಬೇಡಿ ತರುವ ಪ್ರಯಾಸ ಮಾಡಬೇಡಿರಿ. ನಾನು ಬಂಡಿ

ಯಲ್ಲಿ ನಿಮಗೆ ಬೇಕಾಗುವಷ್ಟು ಧಾನ್ಯವನ್ನು ಹೇರಿಸಿ ಕಳಿಸಿಕೊಡುವೆನು, ಎಂದು ನುಡಿದನು. ಶಂಕರದಾಸಿಮಯ್ಯನು ಅದನ್ನು ಕೇಳಿ ದಾಸಿಮಯ್ಯನಲ್ಲಿ ಅಹಂಕಾರಭಾವವು ಅಂಕುರಿಸಿದೆಯೆಂಬುದನ್ನು ಕೂಡಲೇ ತಿಳಿದವನಾಗಿ ನಗುಗೋಷದಿಂದ ಅಂದದ್ದೇನೆಂದರೆ– ಅಹುದು ನಾವು ಬಡವರು. ನಮಗೆ ಧಾನ್ಯವೆಲ್ಲಿಂದ ಬರಬೇಕು? ಶಿವನು ಭಿಕ್ಷಾಪಾತ್ರೆಯನ್ನು ಹಿಡಿದು ತಿರಿ ದಾಡುವನು. ಅಂಥವರ ಭಕ್ತರಾದ ನಮಗೆ ಸಿರಿ ಎಂಬುದೆಲ್ಲಿ? ಎಲೆ ದಾಸ, ನೀನಿದ್ದುಳ್ಳವ. ನೀನು ಕೊಡುವದಾದರೆ ನಾವು ಬೇಡೆನ್ನಬಹುದೇ? ಎಂದು ವ್ಯಂಗೋಕ್ತಿಯನ್ನು ಆಡಿದನು. ದೇವರ ದಾಸಿಮಯ್ಯನು ಅದನ್ನು ಕೇಳಿ ನಾಚಿಕೊಂಡು ಜರ್ರನೆ ಇಳಿದು ಮನೆಗೆ ಬರುವವನಾದನು.

ದುಗ್ಗಳೆಯು ತನ್ನ ಗಂಡನು ಮ್ಲಾನ ಮುಖದಿಂದ ಮನೆಗೆ ಬಂದದ್ದನ್ನು ನೋಡಿ ಹೀಗೇಕಾಯಿತೆಂದು ಕೇಳಲು ದೇವರದಾಸಿಮಯ್ಯನು ನಡೆದ ಸಂಗತಿ ಗಳನ್ನೆಲ್ಲ ಅವಳಿಗೆ ಹೇಳಿದನು. ಸಾಧ್ವಿಯಾದ ಅವಳು–ಚಂದ್ರನಿಗೆ ಶೈತ್ಯೋಪ ಚಾರ ಮಾಡುವನಂತೆ ನೀವು ಮೃಡ ಭಕ್ತರಿಗೆ ಧಾನ್ಯವನ್ನು ಕೊಡಹೊಗು ವದುಚಿತವೇ? ಶಿವಪೂಜಕರು ಎಂದಾದರೂ ಬೇಡಿ ಹೊಟ್ಟೆಹೊರೆದು ಕೊಳ್ಳುವರೇ ಎಂದು ದುಗ್ಗಳೆಯು ಪತಿಗೆ ಹೇಳುವ ಸಮಯದಲ್ಲಿ ತಮ್ಮ ಅನುಚರನಾದ ವಕ್ತ್ರಪಾದ ಮುನಿಯು ಅಲ್ಲಿಗೆ ಬಂದು ಧಾನ್ಯವನ್ನು ಬೇಡಿದನು. ಆಗ ಅವರು ಒಳಗೆ ಹೋಗಿನೋಡುತ್ತಾರೆಯೋ ತವನಿಧಿಯು ಬಯಲಾಗಿದ್ದ ದ್ದನ್ನು ಕಂಡರು. ಅವರು ಹಾಗಾದದ್ದನ್ನು ವಕ್ತ್ರಪಾದಮುನಿಗೆ ಹೇಳಲು ಅವನು ಮುಂಮುರನೆ ಮರುಗಿ, ಶಿವಶಿವಾ ಭಕ್ತಾಗ್ರಗಣ್ಯರಾದ ನೀವು ಶಿವಶರಣರಿಗೆ ಹಾಗೆ ನುಡಿಯಬಹುದೇ? ಅಹಂಕಾರದಿಂದ ಹಿಂದೆ ಯಾರ ಯಾರ ಗತಿಯು ಏನೇನಾಯಿತೆಂಬುದು ನಿಮಗೆ ಗೊತ್ತಿಲ್ಲವೇ ಎಂದು ನುಡಿದನು. ಆಗ ದಾಸಿ ಮಯ್ಯನು ಮನಸ್ಸು ನೊಂದವನಾಗಿ ನಾನು ಅರಿಯದೆ ಮೈಮರೆತು ಹಾಗೆ ಮಾತಾಡಿದೆನು. ನನ್ನಿಂದ ತಪ್ಪಾಯಿತು ಎಂದು ಅಂದು ಅವನೂ ಅವನ ಹೆಂಡತಿಯೂ ಶಂಕರ ದಾಸಿಮಯ್ಯನಿದ್ದಲ್ಲಿಗೆ ಹೋಗಿ ಅವನ ಮುಂದೆ ಅಡ್ಡ ಬಿದ್ದು ಕರುಣಾನಿಧಿಯೇ ನಿಮ್ಮ ಪಾದದ ಗುರುತನ್ನು ನಾವು ಅರಿಯದೆ ನುಡಿ ದೆವು. ನಮ್ಮನ್ನು ದಯಮಾಡಿ ಕ್ಷಮಿಸಬೇಕು ಎಂದು ಬೇಡಿಕೊಂಡರು. ಶಂಕರ ದಾಸಿಮಯ್ಯನು ಮನಕರಗಿ ಆ ದಂಪತಿಗಳ ಶಿರವನ್ನೆತ್ತಿ ವಂದಿಸಿ ಅವರನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿದನು. ಆಗ ದಾಸಿಮಯ್ಯನ ಮೇಲಿನ ಸಿಟ್ಟು ಅವ

ನಲ್ಲಿ ಕೂಡಲೆ ಇಳಿಯಿತು. ಅವನು ಆ ಉಭಯ ದಂಪತಿಗಳನ್ನು ಸತ್ಕರಿಸಿ ಮನೆಗೆ ಕಳುಹಿದನು ಅವರು ಮನೆಯೊಳಗೆ ಬಂದು ನೋಡುತ್ತಾರೆಯೇ ಮೊದಲು ಬಯಲಾಗಿದ್ದ ತವನಿಧಿಯು ಮೊದಲಿನಕ್ಕಿಂತ ನಾಲ್ಕುಮಡಿ ಹೆಚ್ಚಿಗೆ ಬೆಳೆದಿತ್ತು.

---

## ೫. ಸೂರಂಬೆ.

ವೀರಶೈವರಲ್ಲಿ ಶಿವಲೆಂಕಮಂಚಣ್ಣ, ಶ್ರೀಪತಿ ಪಂಡಿತಾರಾಧ್ಯ, ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯ,, ಇವರು ಪಂಡಿತತ್ರಯರೆಂದು ಪ್ರಸಿದ್ಧರಾಗಿದ್ದಾರೆ. ಸೂರಂಬೆಯು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯಳಾಗಿ ಪೊರಾಂಡಲವೆಂಬ ಪಟ್ಟಣದಲ್ಲಿ ವಾಸ ಮಾಡುತ್ತಿದ್ದಳು. ಈ ಪಟ್ಟಣವು ಬ್ರಾಹ್ಮಣರ ಮಹತ್ವದ ಅಗ್ರಹಾರವಾಗಿತ್ತು. ಸೂರಂಬೆಯು ಬ್ರಾಹ್ಮಣ ಕುಲದಲ್ಲಿ ಜನಿಸಿದರೂ ವೀರಶೈವ ಮಾರ್ಗವನ್ನು ಅನುಸರಿಸುತ್ತ ಶಿವಾನುಭವಕ್ಕೋಸ್ಕರ ಶ್ರದ್ಧೆಯನ್ನು ವಹಿಸಿದವಳಾಗಿದ್ದಳು. ಅವಳು ವಿಭೂತಿ ರುದ್ರಾಕ್ಷಧಾರಕಳಾಗಿ ಅತ್ಯಂತ ಶುಚಿರ್ಭೂತಳಾಗಿ ವರ್ತಿಸುತ್ತಿದ್ದಳು. ಭಕ್ತ ಜಂಗಮರು ಯಾವ ಜಾತಿಯವರಿದ್ದರೂ ಅವರು ತನ್ನ ಮನೆಗೆ ಬಂದಲ್ಲಿ ಅವರನ್ನು ಆದರಿಸಿ ಅವರೊಡನೆ ಪ್ರಸಾದವನ್ನು ಸೇವಿಸುವಳು. ಅಂತ್ಯಜರಿದ್ದರೂ ಕೂಡ ಅವಳು ಅವರನ್ನು ಮನೆಯೊಳಗೆ ಕರೆತಂದು ಸತ್ಕರಿಸಿ ಉಪಚರಿಸುವಳು. ಅವಳ ಈ ವರ್ತನೆಯು ಪಟ್ಟಣದಲ್ಲಿಯ ಬ್ರಾಹ್ಮಣರನ್ನು ಬಹಳ ಕೆರಳಿಸಿತು. ಆಗ ಅವರು ಪಟ್ಟಣದ ಅರಸನಲ್ಲಿಗೆ ಬಂದು ಸೂರಂಬೆಯು ಯಾವ ಜಂಗಮನಿದ್ದರೂ ಕೂಡ ಅವನ ಪಾದೋದಕ ಪ್ರಸಾದವನ್ನು ಅವಳು ಸ್ವೀಕರಿಸುತ್ತಾಳೆ. ಅಂತ್ಯಜನಿದ್ದರೂ ಅವನನ್ನು ಸತ್ಕರಿಸಿ ಅವನ ಒಕ್ಕು ಮಿಕ್ಕ ಪ್ರಸಾದವನ್ನು ಸೇವಿಸುತ್ತಾಳೆ. ಇದರಿಂದ ನಮ್ಮ ಅಗ್ರಹಾರವು ಹೊಲೆಗಲಿಸಿತು. ಅವಳಿಗೆ ತಾವು ಬುದ್ಧೀ ಹೇಳಬೇಕೆಂದು ಅರಸನಿಗೆ ಬಿನ್ನವಿಸಿಕೊಂಡರು. ಆಗ ರಾಜನು ಅವರಿಗೆ- ಸೂರಂಬೆಯು ಮನೆಯಲ್ಲಿ ಅಂತ್ಯಜನನ್ನು ಕರೆದು ಸತ್ಕರಿಸುತ್ತಿದ್ದುದನ್ನು ನನಗೆ ಪ್ರತ್ಯಕ್ಷ ತೋರಿಸಿರಿ. ಆಗ ನಾನು ಅವಳಿಗೆ ಬುದ್ಧೀಹೇಳುತ್ತೇನೆಂದನು. ಆದ್ದರಿಂದ ಬ್ರಾಹ್ಮಣರು ಸೂರಂಬೆಗೆ ತಿಳಿಯದಂತೆ ಅವಳ ಮನೆಯಮೇಲೆ ಕಾವಲಿಟ್ಟು ಅವಳನ್ನು ಕಾಯುತ್ತ ಬಂದರು.

ಸೂರಂಬೆಗೆ ಉಂಟಾದ ಈ ಪರಿಸ್ಥಿತಿಯನ್ನು ಪರಮಾತ್ಮನು ತಿಳಿದವ ನಾಗಿ ತಾನೇ ಅಂತ್ಯಜನ ವೇಷವನ್ನು ಧಾರಣಮಾಡಿಕೊಂಡು ಸೂರಂ ಬೆಯ ಮನೆಯಮುಂದೆ ಬಂದು ನಿಂತುಕೊಂಡನು. ಆಗ ಅವನು ಅಂಗದ ಮೇಲೆ ಲಿಂಗವು, ಕೊರಳಲ್ಲಿರುದ್ರಾಕ್ಷಿಗಳು, ವಿಭೂತಿ ಧಾರಣವು ಇದ್ದು ದನ್ನು ಕಂಡು ಅವಳು ಅವನನ್ನು ಭಕ್ತಿಯಿಂದ ಮನೆಯೊಳಗೆ ಬರಮಾಡಿ ಕೊಂಡು ಸತ್ಕರಿಸಹತ್ತಿದಳು. ಇದನ್ನೇ ಕಾಯುತ್ತ ಕುಳಿತಿದ್ದ ಬ್ರಾಹ್ಮ ಣರು ಕೂಡಲೆ ಅರಸನಲ್ಲಿಗೆ ಹೋಗಿ ಅವನಿಗೆ ಇದನ್ನು ತಿಳಿಯಪಡಿ ಸಿದರು. ಅರಸನು ಅವರೊಡನೆ ಸೂರಂಬೆಯ ಮನೆಗೆ ಬಂದು, ಬ್ರಾಹ್ಮಣ ರೆಲ್ಲರು ಮನೆಯನ್ನು ಮುತ್ತಿಕೊಂಡಿರಲು, ಬಾಗಿಲನ್ನು ತೆರೆಯಿಸಿದನು. ಅವನು ಒಳಗೆ ಬಂದು ಅವಳಿಗೆ ನಿನ್ನಮನೆಯಲ್ಲಿ ಅಂತ್ಯಜನು ಇದ್ದಾನೆಯೇ ಎಂದು ಪ್ರಶ್ನೆಮಾಡಲು, ಅದಕ್ಕೆ ಅವಳು ನನ್ನಮನೆಗೆ ಬರುವವರೆಲ್ಲರೂ ಮಾಹೇಶ್ವರರು. ನಾನೊಬ್ಬ ಭಕ್ತೆ. ನನ್ನಮನೆಯಲ್ಲಿ ಯಾವ ಅಂತ್ಯಜ ರನ್ನೂ ನಾನು ಬರಮಾಡಿಕೊಳ್ಳುವದಿಲ್ಲ. ಅಂತ್ಯಜರು ಈ ಗೃಹದ ಹೊರಗೆ ಸುತ್ತಲೂ ಇದ್ದಾರೆ. ಅವರನ್ನು ದೂರೀಕರಿಸುತ್ತೇನೆ. ಹೀಗೆಂದು ಮನೆ ಯನ್ನು ಮುತ್ತಿಕೊಂಡಿದ್ದ ಬ್ರಾಹ್ಮಣರನ್ನು ಕುರಿತು ನುಡಿದಳು. ಆಗ ಅರಸನು ಮನೆಯ ಒಳಗೆಲ್ಲ ಹುಡಿಕಿ ನೋಡಲು ಅಲ್ಲಿ ಯಾವ ಅಂತ್ಯಜನೂ ಇರಲಿಲ್ಲ. ಅಂತ್ಯಜನು ಮಾಯವಾಗಿದ್ದನು. ಆದರೆ ಅಂತ್ಯಜನು ಒಳಗೆ ಬಂದದನ್ನು ಕಣ್ಣಾರೆ ಕಂಡುಮುತ್ತಿಗೆ ಹಾಕಿದ್ದ ಬ್ರಾಹ್ಮಣರು ಮನೆಯಲ್ಲಿ ಯಾರೂ ಇಲ್ಲದ್ದನ್ನು ಕಂಡು ಆಶ್ಚರ್ಯಚಕಿತರಾಗಿ ಒಳಗೆ ಬಂದ ಅಂತ್ಯ ಜನು ಅಂತ್ಯಜನಲ್ಲ. ಪ್ರತ್ಯಕ್ಷ ಪರಮಾತ್ಮನಿರಬೇಕೆಂದು ತಿಳಿದು, ಸೂರಂಬೆ ಯದೇ ನಿಜವಾದ ಭಕ್ತಿಯು, ಅವಳು ಶಿವಾನುಭವಿಯು. ನಾವೇ ತಪ್ಪು ಗಾರರು ಎಂದು ತಿಳಿದವರಾಗಿ ಸೂರಂಬೆಯನ್ನು ಹೊಗಳುತ್ತ ಹೊರಟು ಹೋದರು.

ಸೂರಂಬೆಗೆ ಸೂರಸಾನಮ್ಮ, ಸೂರಮ್ಮ, ಸೂರವ್ವೆ, ಎಂಬ ಬೇರೆ ಹೆಸರುಗಳೂ ಇವೆ. ಈಕೆಯ ವಿಷಯವಾಗಿ ಹೇಳಿರುವದು ಏನಂದರೆ:-

ಮಾರಾರಿಯು ಶ್ವಪಚಾಕಾರದಿಂ ಬರಲಾಗ ಧೀರೆ ತಾ ಕಂಡು ಶಿವನೆಂದು ನಂಬಿರ್ದ ಸೂರಸಾನಮ್ಮ ಶರಣಾಗು.

ಸೂರವ್ವೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಬಸವೇಶ್ವರನ ಕಾಲದಲ್ಲಿ ಇದ್ದಳು. ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಂದ ಅನುಗ್ರಹಿಸಲ್ಪಟ್ಟವಳಾದ್ದರಿಂದ ಅವಳು ಶಿವಶರಣೆಯರಲ್ಲಿ ಬಹಳ ಮಹತ್ವದ ಸ್ಥಾನವನ್ನು ಹೊಂದಿದ್ದಾಳೆ.

---

## ೬. ಗೌರವ್ವೆ.

ಗೌರವ್ವೆಯು ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತಿದ್ದು ಅವಳು ಬೆತ್ತವನ್ನು ಹಿಡಿದುಕೊಂಡು ಶಿವಭಕ್ತರ ಕೂಟಗಳು ಮತ್ತು ಮೆರವಣಿಗೆಗಳು ನಡೆದ ಕಾಲದಲ್ಲಿ ದಾರಿ ಬಿಡಿಸುವ ಕಾಯಕವನ್ನು ಕೈಕೊಂಡಿದ್ದಳು. ಭಕ್ತರ ಮನೆಗಳಲ್ಲಿ ಪ್ರಸ್ತಗಳು ನಡೆದ ಕಾಲದಲ್ಲಿ ಅಲ್ಲಿಗೆ ಬಂದ ಸ್ತ್ರೀ ಪುರುಷರುಗಳಿಗೆ ದಾರಿಯನ್ನು ತೋರಿಸುತ್ತ ಅವರವರ ಸ್ಥಾನದಲ್ಲಿ ಕುಳ್ಳಿರಿಸುವಳು. ಇದರಿಂದ ತನಗೆ ಬಂದ ಹಣದಿಂದ ತನ್ನ ನಿರ್ವಾಹ ಸಾಗಿಸುತ್ತ ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವಳು. ಆದ್ದರಿಂದ ಕಲ್ಯಾಣದಲ್ಲಿ ಇವಳಿಗೆ ಸೇವಿಕೆ- ಗೌರವ್ವೆ ಎಂಬ ಹೆಸರು ಪ್ರಾಪ್ತವಾಯಿತು. ಈ ಕಾಯಕದಿಂದಲೇ ಅವಳು ಮೋಕ್ಷವನ್ನು ಹೊಂದಿದಳು.

---

## ೭. ವೀರದೇವಮ್ಮ

ವೀರ ದೇವಮ್ಮನು ಶಿವಾನುಭವ ಶಾಸ್ತ್ರದಲ್ಲಿ ಪಾರಂಗತಳಾಗಿದ್ದಳು. ಅವಳು ಶಿವಶರಣರ ವಚನಾನುಭವದಲ್ಲಿ ಇದ್ದುಕೊಂಡು ಅದಕ್ಕನುಸರಿಸಿ ಭಕ್ತಿಯಿಂದ ಆಚರಿಸುವವಳಾಗಿದ್ದಳು. ಅವಳು ವಚನಗಳನ್ನು ದಿನಾಲು ಮೂರು ಹೊತ್ತು ಓದುವ ಪಂಪಾಠವನ್ನಿಟ್ಟುಕೊಂಡು ಅವುಗಳನ್ನು ಅವಳು ಲಕ್ಷ್ಯ ಪೂರ್ವಕವಾಗಿ ಓದಿ ಇತರ ಸ್ತ್ರೀಯರಿಗೂ ತಿಳಿಸಿ ಹೇಳುವಳು. ಇದೇ ಕಾಯಕವನ್ನು ಅವಳು ಕೈಕೊಂಡು ಅದರಿಂದ ಬಂದಿದ್ದರ ಮೇಲೆ ಉಪ ಜೀವಿಸುತ್ತಿದ್ದಳು. ಅಲ್ಲದೆ ಅವಳು ಈ ವಚನಗಳನ್ನು ರಾಜನ ಮುಂದೆಯೂ ದೇವಾಲಯುಗಳಲ್ಲಿಯೂ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಹೀಗೆ ಮೂರು ವೇಳೆಗಳಲ್ಲಿಯೂ ಎಲ್ಲರೂ ಕೇಳುವಂತೆ ನಿಚ್ಚಳವಾಗಿ ಉಗ್ಗಡಿಸು ವಳು. ಅದ್ದರಿಂದ ಅವಳಿಗೆ 'ಉಗ್ಗಡಿಸುವ ಕನ್ನೆ ವೀರಾದೇವಿ' ಎಂಬ ಹೆಸರೂ ಉಂಟಾಗಿತ್ತು. ಈ ಪ್ರಕಾರ ರಾಘವಾಂಕ ಕಾವ್ಯದಲ್ಲಿ ಆಕೆಯ ಉಲ್ಲೇಖವಿರುತ್ತದೆ. ಈ ರೀತಿ ವೀರ ದೇವಮ್ಮನು ಆಚರಿಸುತ್ತ ನಿತ್ಯ ಪದವನ್ನು ಹೊಂದಿದಳು.

ಪುರಾತನ ದೇವಿಯರ ತ್ರಿವಿದಿಯಲ್ಲಿ ಆಕೆಯ ವಿಷಯುವಾಗಿ ಹೇಳಿರುವ ದೇನಂದರೆ—

> ಶ್ರೀರಮಣ ವಂದಿತಗೆ ಚಾರು ಗದ್ಯಂಗಳನು ।
> ಮೂರು ವೇಳೆಯೊಳು ಓದಿ ನಿತ್ಯವ ಪಡೆದ ।
> ವೀರ ದೇವಮ್ಮ ಶರಣಾಗು ॥

ವಚನಗಳನ್ನು 'ಚಾರುಗದ್ಯ'ಗಳೆಂದು ಕರೆದಿದ್ದಾಳೆಂಬದನ್ನು ಲಕ್ಷಿ ಸಬೇಕು.

———

## ೮. ಸಿದ್ಧದೇವಮ್ಮ

ಸಿದ್ಧದೇವಮ್ಮ ನಾಟ್ಯಕಲೆಯಲ್ಲಿ ಬಹಳ ಪ್ರವೀಣಳಾಗಿದ್ದಳು. ಅವಳು ವೀಣೆ ಮೊದಲಾದ ವಾದ್ಯಗಳನ್ನು ತಾಳಕ್ಕೆ ಸರಿಯಾಗಿ ನುಡಿಸುವಲ್ಲಿ ಬಹು ಪ್ರವೀಣಳಾಗಿದ್ದಳು. ತನ್ನ ಲಿಂಗಪೂಜೆಯಲ್ಲಿ ಇವುಗಳನ್ನು ಅವಳು ಸಮಗೊಳಿಸಿ ನುಡಿಸುವಳು. ಇದೇ ಆಕೆಗೆ ಕಾಯಕವಾಗಿ ಪರಿಣಮಿಸಿತ್ತು. ಇದರಲ್ಲಿ ಅವಳು ಆತ್ಮಾನುಭವವನ್ನು ಹೊಂದಿ ಆನಂದಿಸುತ್ತಿದ್ದಳು. ಹೀಗೆ ಪರಮಾತ್ಮನಲ್ಲಿ ತನ್ನ ಭಕ್ತಿಯನ್ನು ತೋರಿಸಿ ಅವಳು ಲಿಂಗಾಂಗ ಸಾಮರಸ್ಯವನ್ನು ಹೊಂದಿದಳು.

ಪುರಾತನ ದೇವಿಯರ ತ್ರಿವಿಧಿಯಲ್ಲಿ ಇವಳ ವಿಷಯವಾಗಿ ಹೇಳಿರುವದೇನಂದರೆ.—

ಅರ್ಧನಾರೀಶನಿಗೆ ಶಬವನು ತಾಳದೊಳು ಕೊಸವಳಿ ಪೊರ್ದುಗೆಯನರಿದು ನುಡಿಸುತಲಿ ಒಲಪೆತ್ತ ಸಿದ್ಧದೇವಮ್ಮ ಶರಣಾಗು.

---

## ೯. ತೊಂಗಿನ ಮಹಾದೇವಿ.

ತೊಂಗಿನ ಮಹಾದೇವಿ ಎಂಬುವಳು ಕಲ್ಯಾಣ ಪಟ್ಟಣದಲ್ಲಿ ವಾಸಮಾಡುತ್ತಿದ್ದಳು. ಅವಳು ದಿನಾಲು ಬೆಳಿಗ್ಗೆ ಲಿಂಗವಂತರ ಮನೆಯ ಬಾಗಿಲಿಗೆ ಹೋಗಿ ಮನೆಯವರಿಗೆ ನಮಸ್ಕಾರ ಮಾಡುತ್ತ ಅವರನ್ನು ಎಚ್ಚರಿಸುವ ಕಾಯಕವನ್ನು ಕೈಕೊಂಡಿದ್ದಳು. ಅವಳು ಈ ಪ್ರಕಾರ ಅವರನ್ನು ಎಬ್ಬಿಸಿ ಅತ್ಯಂತ ಭಕ್ತಿಯಿಂದಲೂ ವಿನಯದಿಂದಲೂ ಅವರ ಮನೆಯ ಮುಂದೆ ನಿಂತುಬಿಡುವಳು. ಮನೆಯವರು ತಮ್ಮ ಗೃಹಕೃತ್ಯದ ಕಾರ್ಯಗಳಲ್ಲಿ ತೊಡಗಿದ ಕೂಡಲೆ ಬೇರೊಂದು ಮನೆಗೆ ಇದೇ ಕಾಯಕವನ್ನು ಮಾಡಲು ಹೋಗಿಬಿಡುವಳು.

'ತೊಂಗು' ಈ ಶಬ್ದಕ್ಕೆ 'ಬಾಗು' ಎಂಬ ಅರ್ಥವಿದ್ದು ಅವಳು ಯಾವಾಗಲೂ ವಿನೀತಳಾಗಿ ಬಾಗಿಕೊಂಡು ನಡೆಯುವವಳಾದ್ದರಿಂದ 'ತೊಂಗಿನ

ಮಹಾದೇವಿ' ಎಂಬ ಹೆಸರು ಅವಳಿಗೆ ಪ್ರಾಪ್ತವಾಗಿತ್ತು. ಅವಳು ಈ ತನ್ನ ಕಾಯಕದಲ್ಲಿ ದೊರೆತದ್ದರ ಮೇಲೆ ಉಪಜೀವಿಸುತ್ತ ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಸಲ್ಲಿಸುವಳು.

ಕೆಲವು ಗ್ರಂಥಗಳಲ್ಲಿ ಈಕೆಗೆ 'ಟೊಂಗಿನ ಮಹಾದೇವಿ' ಎಂದು ಕರೆದದ್ದು ತೋರಿಬರುತ್ತದೆ.

---

## ೧೦. ವಿಮಳಾದೇವಿ

ವಿಮಳಾದೇವಿ ಎಂಬ ಶಿವಶರಣೆಯು ಕಲ್ಯಾಣ ಪಟ್ಟಣದಲ್ಲಿರುತ್ತಿದ್ದಳು. ಅವಳು ಶಿವಾನುಭವದಲ್ಲಿ ಹೆಚ್ಚಿನ ಜ್ಞಾನವನ್ನು ಸಂಪಾದಿಸಿದವಳಾಗಿದ್ದಳು. ಅವಳು ತನಗೆ ಉಂಟಾದ ಶಿವಾನುಭವವನ್ನು ಉಳಿದ ಸ್ತ್ರೀಯರಿಗೂ ತಿಳಿಸಿಹೇಳುವಳು. ಈ ಕಾಯಕವನ್ನು ಅವಳು ನಿತ್ಯ ಆಚರಿಸುವಳು. ಅವಳ ಬೋಧೆಗೆ ಜನರು ಮೆಚ್ಚಿ ಅವಳಿಂದ ಸುಜ್ಞಾನ ದೀಕ್ಷೆಯನ್ನು ಪಡೆಯುವವರಾದರು.

ವೀರಶೈವ ದರ್ಮದ ಪ್ರಕಾರ ಸ್ತ್ರೀ ಪುರುಷರು ಸಮಾನಾಧಿಕಾರವುಳ್ಳವರು. ಆದ್ದರಿಂದ ಜ್ಞಾನಿಯಾದ ವಿಮಳಾದೇವಿಯಿಂದ ಅನೇಕರು ಲಿಂಗ ಧಾರಣವನ್ನು ಹೊಂದಿ ಪುನೀತರಾದರು.

"ಶಿವಭಕ್ತೆಯರಿಗೆ ಬೋಧಿಸಿ ಸುಜ್ಞಾನ ದೀಕ್ಷೆಯನ್ನು ಕೊಡುವ ವಿಮಳಾದೇವಿ" ಎಂದು ಆಕೆಯ ವಿಷಯವಾಗಿ ಉಲ್ಲೇಖವು ರಾಘವಾಂಕ ಕಾವ್ಯದಲ್ಲಿ ಇರುತ್ತದೆ.

ಪುರಾತನ ದೇವಿಯರ ತ್ರಿವಿದಿಯಲ್ಲಿ ಆಕೆಯ ವಿಷಯವಾಗಿ ಹೇಳಿರುವದೇನಂದರೆ —

> ಅಮಳ ಶಿವಭಕ್ತೆಯರ್ಗೆ ವಿಮಳ ಬೋಧೆಯ ತುಂಬಿ ।
> ವಿಮಳ ಜಂಗಮಕೆ ನೀಡಿ ಮುಕ್ತಿಯಪಡೆದ ।
> ವಿಮಳಾದೇವಿ ಶರಣಾಗು ॥

ದೀಕ್ಷೆಯಲ್ಲಿ ಕ್ರಿಯಾದೀಕ್ಷೆ ಮಂತ್ರದೀಕ್ಷೆ ಮತ್ತು ವೇಧಾದೀಕ್ಷೆ, ಎಂಬ ಮೂರು ದೀಕ್ಷೆಗಳಿವೆ. ವೇಧಾದೀಕ್ಷೆಗೆ ಸುಜ್ಞಾನದೀಕ್ಷೆ ಎಂಬ ಹೆಸರೂ ಇದೆ.

ಈ ದೀಕ್ಷೆಯಲ್ಲಿ ಲಿಂಗದ ನೆಲೆ ಕಲೆಗಳ ಜ್ಞಾನ ಮಾಡಿಕೊಡುವದೇ ಮುಖ್ಯ ವಾದದ್ದು. ಇದರಲ್ಲಿ ಮಂತ್ರದೀಕ್ಷೆ ಮತ್ತು ಕ್ರಿಯಾದೀಕ್ಷೆ ಇವೂ ಸಹ ಸಮಾವೇಶವಾಗುತ್ತವೆ. ಪ್ರಬುದ್ಧರಾದವರಿಗೆ ಲಿಂಗಧಾರಣೆಯಿಲ್ಲದಿದ್ದರೆ ಅವರಿಗೆ ಇದರ ಮರ್ಮವನ್ನರುಹಿ ಅವರನ್ನು ಲಿಂಗಧಾರಕರನ್ನಾಗಿ ಮಾಡುವ ಕಾರ್ಯವನ್ನು ವಿಮಲಾದೇವಿಯು ಮಾಡುತ್ತಿದ್ದಳು. ಈ ಪ್ರಕಾರ ಅವಳು ಮಠಾಧಿಕಾರಿಗಳು ಮಾಡತಕ್ಕ ಕಾರ್ಯಗಳನ್ನು ಭಕ್ತಾದಿಗಳಿಗೆ ಮಾಡುತ್ತಿದ್ದುದರಿಂದ ಅವಳ ಯೋಗ್ಯತೆಯು ಎಷ್ಟಿತ್ತೆಂಬದು ಗೊತ್ತಾಗುತ್ತದೆ.

---

## ೧೧. ಶಿವಪ್ರಿಯನಾಚಿ

ಚೋಳದೇಶದಲ್ಲಿ ಚಂದವೂರೆಂಬ ಪಟ್ಟಣವಿದ್ದು ಅಲ್ಲಿ ಅಣ್ಣಮಲ್ಲಯ್ಯನೆಂಬ ವರ್ತಕನು ವ್ಯಾಪಾರ ಮಾಡಿಕೊಂಡಿರುತ್ತಿದ್ದನು. ಅವನು ಹಡಗುಗಳ ಮೂಲಕ ಪರನಾಡುಗಳಿಗೆ ಹೋಗಿ ವ್ಯಾಪಾರವನ್ನು ನಡಿಸುತ್ತಾ ಇದ್ದನು. ಅವನಿಗೆ ಅಣ್ಣನಾಚಯ್ಯ ಮತ್ತು ಅರುಣಾದ್ರಿ ಎಂಬ ಇಬ್ಬರು ಗಂಡು ಮಕ್ಕಳೂ ಶಿವಪ್ರಿಯನಾಚಿ ಎಂಬ ಒಬ್ಬ ಹೆಣ್ಣು ಮಗಳೂ ಇದ್ದರು. ಅವನು ಘನತರವಾದ ವ್ಯಾಪಾರಮಾಡಿಕೊಂಡು ಬಹಳ ಶ್ರೀಮಂತನಾಗಿದ್ದನು. ಅಣ್ಣಮಲ್ಲಯ್ಯನು ಮುಂದೆ ತೀರಿಕೊಂಡನು. ಆಗ ಅವನ ಇಬ್ಬರು ಮಕ್ಕಳು ಅವನ ಆಸ್ತಿಯಲ್ಲಿ ಭಾಗಮಾಡಿಕೊಳ್ಳುವ ಕಾಲಕ್ಕೆ ಅವರು ತಮ್ಮ ತಂಗಿಯಾದ ಶಿವಪ್ರಿಯನಾಚಿಗೆ ತಮಗೆ ಸಮಾನವಾಗಿ ಅಂದರೆ ಒಂದು ಮೂರಾಂಶ ಭಾಗವನ್ನು ಬೇರೆ ಪಾಲುಮಾಡಿ ಅವಳ ವಶಕ್ಕೆ ಕೊಟ್ಟರು. ಶಿವಪ್ರಿಯನಾಚಿಯು ತನ್ನ ಪಾಲಿಗೆ ಬಂದ ಹಣವನ್ನು ತೆಗೆದುಕೊಂಡು ಶಿವಾನುಭವಿಯಾಗಿ ದಾಸೋಹ ಕಾರ್ಯಗಳಿಗೆ ಅದನ್ನು ಉಪಯೋಗಿಸುತ್ತ ಬಂದಳು. ಅವಳು ಶಿವ ಶರಣರಿಗೋಸ್ಕರ ಭಕ್ತಿಯನ್ನು ತಾಳಿ ಅವರ ಆಚರಣೆಯನ್ನು ಪಾಲಿಸುವವಳಾಗಿದ್ದಳು.

ಹೀಗಿರುವಲ್ಲಿ ಅಣ್ಣನಾಚಯ್ಯನು ವ್ಯಾಪಾರಕ್ಕೋಸ್ಕರ ದ್ವೀಪಾಂತರಕ್ಕ ಹೋದನು. ಆದರೆ ಮಧ್ಯದಲ್ಲಿ ಅವನಿದ್ದ ಹಡಗವು ಒಡೆದು ಹೋದದ್ದ

ರಿಂದ ಅವನು ಮರಣ ಹೊಂದಿದನು. ಆದುದರಿಂದ ಅವನು ಬಹು ದಿವಸ ಮರಳಿ ಬಾರದ್ದರಿಂದ ಅವನು ಸಮುದ್ರದಲ್ಲಿ ಮುಳುಗಿ ಸತ್ತನೆಂದು ಜನರೆಲ್ಲರೂ ತಿಳಿದರು.

ಅರುಣಾದ್ರಿಯಾದರೂ ತನ್ನ ಅಣ್ಣನು ತೀರಿಹೋದನೆಂದು ಭಾವಿಸಿದನು. ಆಗ ಅವನು ಮನೆತನದ ಎಲ್ಲ ಆಸ್ತಿಯನ್ನು ತಾನೇ ಆಕ್ರಮಿಸಬೇಕೆಂಬ ದುರಾಶೆಯುಳ್ಳವನಾಗಿ ಅವನು ತನ್ನ ತಂಗಿಗೆ ಸ್ತ್ರೀಯರಿಗೆ ಎಲ್ಲಾದರೂ ಪಾಲು ಕೊಡುವದುಂಟೇ ? ನಿನಗೆ ಕೊಟ್ಟ ಪಾಲನ್ನು ನನಗೆ ತಿರುಗಿಕೊಡು, ಎಂದು ಆವಳೊಡನೆ ವಾದಿಸಹತ್ತಿದನು. ಮತ್ತು ಅವಳನ್ನು ಬಹಳ ಬಾಧಿಸಿ ಆಕೆಯ ದ್ರವ್ಯವನ್ನೆಲ್ಲ ಬಲಾತ್ಕಾರದಿಂದ ಕಸೆದುಕೊಂಡುಬಿಟ್ಟನು.

ಆದರೆ ಶಿವಪ್ರಿಯನಾಚಿಯು ಕೇವಲ ಲಿಂಗ ಭಕ್ತಳು. ಅವಳು ಇದರಿಂದ ತನ್ನ ದಾಸೋಹ ಕಾರ್ಯಗಳು ಮುಂದೆ ನಿಂತು ಹೋದವಲ್ಲಾ ಎಂದು ಅತ್ಯಂತ ದುಃಖಿತಳಾದಳು. ಆಗ ಅವಳು ಪರಮಾತ್ಮನಿಗೆ— ಎಲೋ ಶಿವನೇ, ನಿನ್ನ ಸೇವೆ ಮಾಡಲೆಂದು ಅಣ್ಣನು ನನಗೆ ಪಾಲು ಕೊಟ್ಟು, ಹೋದನು. ಈಗ ಅರುಣಾದ್ರಿಯು ನನ್ನನ್ನು ಬಹಳ ಹಿಂಸೆ ಪಡಿಸಿ ಅದನ್ನು ಕಸೆದುಕೊಂಡು ಬಿಟ್ಟನು. ನಾನು ನಿನಗೆ ಮಾಡುವ ಸೇವೆಯು ನಿಂತಿತು. ಏನು ಮಾಡಲಿ?— ಎಂದು ಅವನಲ್ಲಿ ಮೊರೆ ಇಟ್ಟಳು.

ಶಿವನಿಗೆ ಭಕ್ತೆಯಾದ ಆಕೆಯ ಮೊರೆಯು ಕೇಳಿಸಿತು. ಆಗ ಅವನು ಅಣ್ಣನಾಚಯ್ಯನ ರೂಪಾಗಿ ಪಟ್ಟಣಕ್ಕೆಬಂದು ತನ್ನ ಮನೆಯಲ್ಲಿಯೇ ಬಂದಿರಹತ್ತಿದನು- ಆಗ ಅರುಣಾದ್ರಿಯೂ ಪಟ್ಟಣಿಗರೂ ಅಣ್ಣ ನಾಚಯ್ಯನು ಸತ್ತಿಲ್ಲ. ಅವನು ಇನ್ನೂ ಬದುಕಿದ್ದಾನೆ ಎಂದು ತಿಳಿದರು. ಅಣ್ಣ ನಾಚಯ್ಯನು ತಮ್ಮನಿಗೆ–ನಾವು ಪಾಲುಮಾಡಿಕೊಳ್ಳುವ ಕಾಲದಲ್ಲಿ ತಂಗಿಗೆ ಪಾಲು ಮಾಡಿ ಕೊಟ್ಟಿದ್ದಾಗಿದೆ. ಆಕೆಯ ದ್ರವ್ಯವನ್ನು ಆಕೆಗೆ ತಿರುಗಿ ಕೊಡು ಎಂದು ಹೇಳಿ ಅವಳ ದ್ರವ್ಯವನ್ನೆಲ್ಲ ಅವಳಿಗೆ ತಿರುಗಿ ಕೊಡಿಸಿದನು.

ಮುಂದೆ ಕೆಲವು ದಿವಸಗಳಾದಮೇಲೆ ಶಿವನು ತನ್ನ ಭಕ್ತೆಯಾದ ಶಿವಪ್ರಿಯನಾಚಿಗೋಸ್ಕರ ತಾನು ಮಾಡತಕ್ಕ ಕಾರ್ಯವು ಮುಗಿಯಿತೆಂದು ತಿಳಿದು ಬಯಲಾಗಿ ಹೋದನು.

ಅಣ್ಣ ನಾಚಯ್ಯನು ಮುಂದೆ ಮನೆಯಲ್ಲಿ ಕಾಣಬರಲಿಲ್ಲ. ಅವನನ್ನು ಎಲ್ಲಿ ಹುಡಿಕಿದರೂ ಸಿಕ್ಕಲಿಲ್ಲ. ಜನರು ಚಕಿತರಾದರು. ಆಗ ಅವರು ಶಿವ

ಪ್ರಿಯನಾಚಿಯು ನಿಜವಾದ ಭಕ್ತೆಯು. ಅವಳಿಗೆ ಶಿವನು ಪ್ರೀತನಾಗಿ ಅಣ್ಣಾ ನಾಚಯ್ಯನಾಗಿ ಬಂದು ಆಕೆಯ ಪಾಲು ಅವಳಿಗೆ ಕೊಡಿಸಿಹೋದನು ಎಂದು ತಿಳಿದರು.

ಅಂದಿನಿಂದ ಶಿವ ಪ್ರಿಯನಾಚಿಗೆ ಅರುಣಾದ್ರಿಯಾಗಲಿ ಅಥವಾ ಬೇರೆ ಯಾರಾಗಲಿ ತೊಂದರೆ ಪಡಿಸಲಿಲ್ಲ. ಅವಳು ಲಿಂಗ ಭಕ್ತಿಯುಳ್ಳವಳಾಗಿ ಆಚರಿಸುತ್ತ, 'ಪಿರಿಯೊಡೆಯರು' ಎಂಬ ತನ್ನ ಲಿಂಗದಲ್ಲಿ ಬೆರೆದು ಬಯಲಾಗಿಹೋದಳು.

ಸ್ತ್ರೀಯರೂ ಪುರುಷರೂ ಸಮಾನಾಧಿಕಾರಿಗಳೆಂದು ಬಸವಾದಿ ಪ್ರಮಥರ ತತ್ವವಿದೆ. ಈ ಮಹತ್ವದ ತತ್ವವನ್ನು ಶಿವಪ್ರಿಯನಾಚಿಯೂ ಅಣ್ಣಾ ನಾಚಯ್ಯನೂ ದೃಢಪಡಿಸಿದ್ದಾರೆ. ಪರಮಾತ್ಮನೂ ಕೂಡ ಅವರಿಗೆ ಬೆಂಬಲ ಕೊಟ್ಟನು.

---

## ಶರಣೆಯರಿಂದ ವೀರಶೈವ ಧರ್ಮ ಪ್ರಸಾರ

ಈ ಚರಿತ್ರೆ ಗ್ರಂಥದಲ್ಲಿ ಅನೇಕ ಚಿಕ್ಕ ಕಥೆಗಳು ಬಂದಿರುವದು ವಾಚಕರ ಲಕ್ಷ್ಯಕ್ಕೆ ಬಂದಿರ ಬಹುದು. ಇವು ನಿರುಪಯೋಗವಾದ ಕಥೆಗಳಿರದೆ ಅರ್ಥ ಬೋಧಕವಾಗಿರುತ್ತವೆ. ಇವುಗಳ ಆಧಾರದಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಧರ್ಮವು ಹೇಗೆ ಬೆಳೆದಿರುತ್ತದೆಂಬುದು ತಿಳಿದು ಬರುತ್ತದೆ.

ಬಸವೇಶ್ವರನಲ್ಲಿ ಒಂದು ಅಲೌಕಿಕ ಸಾಮರ್ಥ್ಯವಿದ್ದು ಅದರಿಂದ ಅವನು ವೀರಶೈವ ಸಮಾಜವನ್ನು ವಿಸ್ತಾರ ಪಡಿಸಿದನೆಂದು ಬಹು ಜನರ ತಿಳುವಳಿಕೆ ಇದೆ. ಆದರೆ ಮೇಲಿನ ಕಥೆಗಳಿಂದ ಹೀಗೆ ತಿಳಿಯುವದು ಸತ್ಯ ಸಂಗತಿಯಲ್ಲವೆಂದು ವಾಚಕರಿಗೆ ಕಂಡು ಬರದೆ ಇರಲಾರದು.

ಶಿವಾನುಭವದ ಉಚ್ಚ ತತ್ವಗಳು ವಚನ ಗ್ರಂಥಗಳಿಂದ ಜನರಲ್ಲಿ ಮೊದಲು ಬೇರೂರಿದವು. ಇದರಿಂದ ಅವರ ಮನಸ್ಸಿನಲ್ಲಿ ಈ ತತ್ವಗಳು ಧೃಡವಾಗಿ ನೆಲೆಗೊಂಡ ಬಳಿಕ ಅವುಗಳನ್ನು ಅವರು ಕ್ರಮೇಣ ಸುತ್ತಲೂ ಪಸರಿಸ ಹತ್ತಿದರು. ಅವು ಪಸರಿಸಿದ ಹಾಗೆ ಜನರು ಲಿಂಗಧಾರಿಗಳಾಗಹತ್ತಿದರು. ಈ ರೀತಿ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಧರ್ಮ ಕಾರ್ಯಗಳು ನಡೆದು ಬಂದಹಾಗೆ ಕಂಡು ಬರುತ್ತದೆ.

ಸೂರಂಬೆ ಎಂಬ ಶಿವಶರಣೆಯು ಮಲ್ಲಿಕಾರ್ಜುನ ಪಂಡಿತಾರಾಧ್ಯನ ಪರಮ ಶಿಷ್ಯಳಾಗಿದ್ದಳು. ಅವಳು ಶಿವಾನುಭವದ ತತ್ವಗಳನ್ನು ಸ್ಪೃಶ್ಯಾಸ್ಪೃಶ್ಯತೆಯನ್ನು ನೋಡದೆ ಎಲ್ಲ ವರ್ಗದ ಜನರನ್ನು ತನ್ನ ಮನೆಗೆ ಬರಮಾಡಿಕೊಂಡು ಅವರಿಗೆ ತಿಳಿಸಿ ಹೇಳುವಳು. ಬ್ರಾಹ್ಮಣರು ಮೊದಲು ಅವಳನ್ನು ಈ ಕಾರ್ಯದಲ್ಲಿ ವಿರೋಧಿಸಿದರು. ಅವರು ಅವಳನ್ನು ನಿರ್ಬಂಧಿಸಬೇಕೆಂದು ಮೊದಲು ಆಲೋಚನೆ ಮಾಡಿ ಅರಸನ ಬೆಂಬಲವನ್ನು ಇದರಲ್ಲಿ ಪಡೆದರು. ಅರಸನು ಶರಣರ ತತ್ವಗಳಿಗೆ ಅನುಕೂಲನಾಗಿರಲಿಲ್ಲ. ಆದರೆ ಸೂರಂಬೆಯು ಅವನನ್ನು ಗಣಿಸಲಿಲ್ಲ. ಅರಸನು ಅವಳ ಮನೆಗೆ ಹೋಗಿ ಹೊಲೆಯರು ನಿನ್ನ ಮನೆಯಲ್ಲಿ ಇದ್ದಾರೆಯೋ ಎಂದು ಕೇಳಲು ಅವಳುಹೊಲೆಯರು ನನ್ನ ಮನೆಯಲ್ಲಿ ಇಲ್ಲ. ಬರೀ ಮಾಹೇಶ್ವರರು ಮಾತ್ರ ಇಲ್ಲಿ ಬರುತ್ತಾರೆ ಎಂದು ಹೇಳಿ ಅರಸನನ್ನು ಮನೆಯಿಂದ ತಿರುಗಿಸಿದಳು. ಅವಳ ವರ್ತನೆಯಿಂದ ವೀರಶೈವ ಧರ್ಮವು ಪ್ರಸಾರ ಹೊಂದಲಿಕ್ಕೆ ಬಹಳ ಅನುಕೂಲವಾಯಿತು.

ಗೌರವ್ವೆ ಎಂಬ ಇನ್ನೊಬ್ಬ ಶರಣೆಯು ತಾನು ಜನರಿಗೆ ಉಪಯುಕ್ತ ಕಾರ್ಯಗಳನ್ನು ಮಾಡುತ್ತ ಅವರನ್ನು ಒಲಿಸುವಳು, ಸಿದ್ಧದೇವಮ್ಮ ಎಂಬ ಇನ್ನೊಬ್ಬ ಶರಣೆಗೆ ಗಾಯನ ಕಲೆಯು ಚೆನ್ನಾಗಿ ಅವಗತವಾಗಿತ್ತು. ಅವಳು ತನ್ನ ಗಾಯನದ ಮೂಲಕ ಜನರಿಗೆ ಶಿವಾನುಭವದ ತತ್ವಗಳನ್ನು ತಿಳಿಸಿ ಹೇಳುವಳು.

ಬೆಳಗಿನಲ್ಲಿ ಬೇಗನೆ ಎದ್ದು ಶಿವಾಭವದ ಬೋಧೆ ಮಾಡುವ ಪರಿಪಾಠವನ್ನು ಬೇರೊಬ್ಬ ಶರಣೆಯು ಪಾಲಿಸುವವಳಾಗಿದ್ದಳು. ಅವಳು ಮುಂಜಾವಿನಲ್ಲಿ ಗ್ರಾಮದಲ್ಲಿ ಬೇಗನೆ ಎದ್ದು ಧ್ವನಿಮಾಡುತ್ತ ಜನರನ್ನು ಎಬ್ಬಿಸುವಳು. ಮತ್ತು ಅವರ ಮನೆಯ ಮುಂದೆ ಗಾಯನ ಮಾಡುತ್ತ ಧರ್ಮತತ್ವಗಳನ್ನು ಹಾಡುವಳು. ಮನೆಯಲ್ಲಿಯ ಜನರು ಎಚ್ಚರಾದ ಬಳಿಕ ಮತ್ತೊಂದು ಕಡೆಗೆ ಹೋಗುವಳು.

ವಿಮಲಾದೇವಿಎಂಬ ಇನ್ನೊಬ್ಬ ಶಿವಶರಣೆಯು ವೀರಶೈವ ಮತದ ನೆಲೆ ಕಲೆಗಳನ್ನು ಚೆನ್ನಾಗಿ ಬಲ್ಲವಳಾಗಿದ್ದಳು. ಅವಳು ಜ್ಞಾನಿಯು. ಅವಳು ಗ್ರಾಮದಲ್ಲಿಯ ಜನರಿಗೆ ಅವುಗಳನ್ನು ತಿಳಿಸಿಹೇಳಿ ವೀರಶೈವ ದೀಕ್ಷೆಯನ್ನು ಅವರಿಗೆ ಕೊಡುವಳು.

ಶಿವಪ್ರಿಯನಾಚಿ ಎಂಬ ಇನ್ನೊಬ್ಬ ಶಿವಶರಣೆಯು ಇದ್ದು ಅವಳಿಗೆ ಮೂವರು ಬಂಧುಗಳು ಇದ್ದರು. ಅವರು ತಮ್ಮ ಆಸ್ತಿಯಲ್ಲಿ ಕೆಲವೊಂದು ಭಾಗವನ್ನು ಅವಳಿಗೆ ಕೊಟ್ಟರು. ಅವಳು ಅದರ ಉಪಯೋಗವನ್ನು ತನ್ನ ಧರ್ಮಕಾರ್ಯಕ್ಕೋಸ್ಕರ ಮಾಡುವಳು. ಆದರೆ ಅವರಲ್ಲಿ ಒಬ್ಬ ಬಂಧುವು ಅವಳಿಗೆ ಕೊಟ್ಟ ಆಸ್ತಿಯನ್ನು ಕೊಡದೆ ಅದನ್ನು ಬಲಾತ್ಕಾರದಿಂದ ಕಸೆದುಕೊಂಡು ಬಿಟ್ಟನು. ಆದರೆ ಉಳಿದ ಸಹೋದರರಿಬ್ಬರು ಆ ಹಿಸೆಯನ್ನು ಅವಳಿಗೆ ತಿರುಗಿಕೊಡಿಸಿದರು.

ಈ ಮೇರೆಗೆ ಕಾರ್ಯಗಳಾಗಿದ್ದು ಇವು ಜನರ ಮನಸ್ಸನ್ನು ಬಹಳ ಆಕರ್ಷಿಸಿದವು. ಇಂಥ ಉದಾಹರಣೆಗಳು ಬಸವಣ್ಣನ ಕಾಲದಲ್ಲಿ ಎಲ್ಲ ಕಡೆಗೂ ಉಂಟಾಗುತ್ತಿದ್ದವು. ಇದರಿಂದ ನಾಡಿನಲ್ಲಿ ಸುತ್ತಲೂ ವೀರಶೈವ ಧರ್ಮವು ಬಹಳ ಬೆಳೆಯಿತು. ಈ ಪ್ರಯತ್ನಗಳು ಧರ್ಮಜಾಗ್ರತೆಗೆ ನಿಜವಾಗಿ ಕಾರಣವಾಗಿರುತ್ತವೆ. ಇದರಿಂದ ವೀರಶೈವ ಧರ್ಮವು ಎಲ್ಲ ಸಮಾಜಗಳಲ್ಲಿ ಪಸರಿಸಿತೆಂದು ತಿಳಿದುಬರುತ್ತದೆ. ಹೀಗೆ ಮಾಡಿದ ಕಾರ್ಯಗಳು ದೃಢಪಡುತ್ತಲೇ ಹೋದವು. ಆದರೆ ಪ್ರವಾಹದಿಂದ ಆದ ಕಾರ್ಯಗಳು ತೀವ್ರ ಮರೆತುಹೋಗುತ್ತವೆ. ಹೀಗೆ ವೀರಶೈವ ಧರ್ಮವು ದೃಢವಾದ ತಳಹದಿಯ ಮೇಲೆ ನಿಂತಿರುತ್ತದೆ. ಇದರಲ್ಲಿ ಸ್ತ್ರೀಯರ ಕಾರ್ಯಗಳು ಚಿರಸ್ಥಾಯಿಯಾಗಿ ಉಳಿದಿರುವವು.

———

## ೧೨. ಸೋಹಳಿಯ ಸೋಮವ್ವೆ.

ಸೋಹಳಿ ಎಂಬ ಗ್ರಾಮದಲ್ಲಿ ಪಾರಿಸನಾಥನೆಂಬ ಒಬ್ಬ ಜೈನನು ಇದ್ದು ಅವನು ತನ್ನ ಸೋದರಮಾವನ ಮಗಳಾದ ಸೋಮವ್ವೆಯನ್ನು ಲಗ್ನವಾಗಿದ್ದನು. ಸೋಮವ್ವೆಯ ತವರುಮನೆಯವರು ಜೈನರಾಗಿದ್ದರು. ಅವರಿದ್ದ ಕಾಲದಲ್ಲಿ ಶಿವಾನುಭವದ ತತ್ವಗಳು ನಾಡಿನಲ್ಲಿ ಪ್ರಚಾರವಾಗುತ್ತಲಿದ್ದುದರಿಂದ ಅವುಗಳನ್ನು ಸೋಮವ್ವೆಯು ಅರಿತವಳಾಗಿ, ಲಿಂಗಪೂಜೆಯಲ್ಲಿ ಆಸಕ್ತಿಯುಳ್ಳವಳಾಗಿದ್ದಳು. ಆದರೆ ಜೈನ ಧರ್ಮವನ್ನು ಪಾಲಿಸುತ್ತಿದ್ದ ತನ್ನ ಪತಿಯ ಗೃಹದಲ್ಲಿ ಅದರಂತೆ ಬಹಿರಂಗವಾಗಿ ಆಚರಿಸುವದು ಆಕೆಗೆ ಶಕ್ಯವಾಗಿರಲಿಲ್ಲ. ಹಾಗೆ ಮಾಡಿದ್ದಾದರೆ ತನ್ನ ಅತ್ತೆ, ಮಾವ, ಭಾವಮೈದುನ, ಪತಿ ಇವರೆಲ್ಲರು ಅವಳನ್ನು ಹಿಂಸಿಸದೆ ಬಿಡುತ್ತಿದ್ದಿಲ್ಲ. ಆದ್ದರಿಂದ ಅವಳು ಅವರಿಗಂಜಿ ಸಮೀಪದಲ್ಲಿದ್ದ ಒಂದು ಶಿವಾಲಯಕ್ಕೆ ಹೋಗಿ ಯಾರೂ ಕಾಣದಂತೆ ಲಿಂಗಪೂಜೆಯನ್ನು ಮಾಡಿ ಬರುವಳು. ಅವಳು ರಾತ್ರಿಯಲ್ಲಿ ಅಲ್ಲಿಗೆ ಹೋಗಿ ಅಲ್ಲಿ ಲಿಂಗವನ್ನು ಹುಡಿಕಿಕೊಂಡು, ಗಂಡನು ತನಗಿತ್ತ ಗಂಧ, ಕಸ್ತುರಿ ಪರಿಮಳದಿಂದ ಲಿಂಗದಂಗಕ್ಕೆ ಲೇಪನವ ಮಾಡಿ, ತನ್ನ ಮುಡಿಗಿತ್ತ ಮೊಲ್ಲೆ, ಮಲ್ಲಿಗೆ ಮಾಲೆಗಳನ್ನು ಲಿಂಗಕ್ಕೆ ಸುತ್ತಿ ತನಗೆ ಕೊಟ್ಟ ಫಲ ಮೊದಲಾದವುಗಳಿಂದ ನೈವೇದ್ಯ ಮಾಡಿ ಕರ್ಪೂರ ವೀಳೆಯನರ್ಪಿಸಿ, ಕೈಮುಗಿದು, ಪರಮಾತ್ಮನ ರಕ್ಷಣೆಯನ್ನು ಬೇಡಿಕೊಂಡು ಮನೆಗೆ ಹಿಂದಿರುಗಿ ಬಂದು ಊಟ ಮಾಡುವಳು. ಲಿಂಗಪೂಜೆ ಇಲ್ಲದೆ ಊಟಮಾಡೆನೆಂಬ ವ್ರತವನ್ನು ಇಟ್ಟುಕೊಂಡವಳಾಗಿ, ಒಂದುವೇಳೆ ಯಾವುದಾದರೂ ಒಂದುದಿನ ಲಿಂಗಪೂಜೆ ತಪ್ಪಿದಲ್ಲಿ ಉಪವಾಸ ಮಲಗುವಳು.

ಹೀಗೆ ಕೆಲವು ಕಾಲ ನಡಿಯುತ್ತಿರುವಲ್ಲಿ ಒಂದುದಿನ ಶಿವಾಲಯದಿಂದ ಮನೆಗೆ ತಿರುಗಿಬರಲು ಆಕೆಗೆ ತಡವಾಯಿತು. ಹೀಗೆಯೇ ಕೆಲದಿನ ತಡವಾಗಲು, ಅದನ್ನು ಪಾರಿಸನಾಥನು ಕಂಡು, ಅವನಿಗೆ ಸಂಶಯಬಂದು ಅವಳು ಮನೆಯನ್ನು ಬಿಟ್ಟ ಕೂಡಲೆ ಅವಳನ್ನು ಪರೀಕ್ಷಿಸಬೇಕೆಂದು ಅವಳಿಗೆ ತಿಳಿಯದಂತೆ ಅವಳ ಬೆನ್ನ ಹಿಂದಿಂದೆ ಹೋಗಿ ನೋಡಲಾಗಿ ಅವಳು ಶಿವಾಲಯವನ್ನು ಪ್ರವೇಶಿಸುವದನ್ನೂ ಅಲ್ಲಿ ಲಿಂಗ ಪೂಜೆಯನ್ನು ಮಾಡುವದನ್ನೂ ಕಂಡನು. ಅವನು ಹಾಗೆಯೇ ಹಿಂದಿರುಗಿ ಬಂದು ತನ್ನ ತಾಯಿಗೆ ‘ನಿನ್ನ ಸೊಸೆಯು ನೀನು ತಲೆಗೆ ಕೊಟ್ಟ ಎಣ್ಣೆಯನ್ನೂ ಭೋಜನಕ್ಕೆ

ಕೊಟ್ಟ ತುಪ್ಪವನ್ನೂ ತಾನುಣ್ಣದೆ ಲಿಂಗಕ್ಕೆ ನೈವೇದ್ಯ ಮಾಡಬರುತ್ತಾಳೆ. ಇನ್ನು ಮುಂದೆ ಅವಳಿಗೆ ಅವುಗಳನ್ನು ಕೊಡಬೇಡ' ಎಂದು ಹೇಳಲು, ಅತ್ತೆಯು ಅವುಗಳನ್ನು ಸೊಸೆಗೆ ಕೊಡುವದನ್ನು ನಿಲ್ಲಿಸಿಬಿಟ್ಟಳು. ಮತ್ತು ಊಟಕ್ಕೆ ಬರೀ ಅನ್ನವನ್ನು ಮಾತ್ರ ಕೊಡುವದನ್ನು ಪ್ರಾರಂಭಿಸಿದಳು. ಗಂಡನಾದರೂ ತಾನು ದಿನಾಲು ತಂದು ಕೊಡುತ್ತಿದ್ದ ಹೂವು, ಕಸ್ತೂರಿ ತಂಬೂಲಗಳನ್ನು ಕೊಡುವದನ್ನು ಬಿಟ್ಟುಕೊಟ್ಟನು. ಆಗ ಸೋಮವ್ವೆಯು ತಾನು ಕೈಕೊಂಡಿದ್ದ ವ್ರತವನ್ನು ಬಿಡಲಾರದೆ, ತನಗಿಕ್ಕಿದ ಬರಿಯ ಅನ್ನವನ್ನು ಮಾತ್ರ ತೆಗೆದುಕೊಂಡು, ಶಿವಾಲಯಕ್ಕೆ ಯಾರೂ ಕಾಣದಂತೆ ಹೋಗಿ, ಅದನ್ನು ಕತ್ತಲಲ್ಲಿ ಶಿವನ ಮುಂದಿಟ್ಟು ದುಃಖಿಸುತ್ತ,—'ಎಲೋ ಪರಮಾತ್ಮನೇ, ಧೂಪ, ದೀಪ ಅಗ್ಗವಣಿ ಹುಪ್ಪ, ತಾಂಬೂಲಗಳು ನನ್ನಲ್ಲಿಲ್ಲ. ನನ್ನ ಭಕ್ತಿಯು ಕಣ್ಣಿದ್ದ ಕುರುಡನಂತಾಯಿತೇ? ಇಷ್ಟುದಿನ ದೀಪದ ಬೆಳಕಿನಲ್ಲಿ ನಿನ್ನನ್ನು ಪೂಜಿಸಿದೆ. ಇಂದು ಮಾತ್ರ ನಿನ್ನನ್ನು ಕತ್ತಲೆಯಲ್ಲಿ ಪೂಜಿಸಬೇಕಾಯಿತಲ್ಲಾ! ಹೀಗೆ ನಿನ್ನನ್ನು ಪೂಜಿಸಿ ನಾನುಂಡರೆ ಅದು ನನ್ನ ಹೊಟ್ಟೆಯು ಪಾಡಿಗಲ್ಲ. ನನ್ನನ್ನು ಕ್ಷಮಿಸು, ಕ್ಷಮಿಸು ಎಂದು ದುಃಖಿಸಹತ್ತಲು ಆಗ ಲಿಂಗದೊಳಗಿಂದ ಒಂದು ಧ್ವನಿಯು ಹೊರ ಹೊರಟು, ಎಲೌ ತಾಯೇ, ನನ್ನ ಮಜ್ಜನಕ್ಕೆರೆದು ಕೆಳಗೆ ಬಿದ್ದ ನೀರನ್ನೇ ಪ್ರಣತಿಯಲ್ಲಿ ಹಾಕಿ ದೀಪವನ್ನು ಹತ್ತಿಸು, ಆ ನೀರನ್ನೇ ನನ್ನ ಮೇಲೆ ಪ್ರಕ್ಷಾಲಿಸು, ಕೆಳಗೆಬಿದ್ದ ಹೂವುಗಳನ್ನೇ ನನ್ನ ಮೇಲೇರಿಸು, ನಾನು ಸ್ವೀಕರಿಸುತ್ತೇನೆ' ಎಂಬ ಧ್ವನಿಯು ಹೊರ ಹೊರಡಲು, ಸೋಮವ್ವೆಯು ಆ ನೀರನ್ನು ಪ್ರಣತಿಯಲ್ಲಿ ಹಾಕಿ ಹತ್ತಿಸಲು ಅದು ಉರಿಯ ಹತ್ತಿತು! ಅಲ್ಲಿಯೇ ಬಿದ್ದ ಪುಷ್ಪಾದಿಗಳಿಂದ, ಲಿಂಗವನ್ನು ಭಕ್ತಿಯಿಂದ ಪೂಜಿಸಿ ಮನೆಗೆ ಬಂದಳು. ಹೀಗೆ ಅವಳ ಪೂಜೆಯು ಕೆಲವು ದಿನ ಸಾಗಿತು.

ಆದರೆ ಗ್ರಾಮದಲ್ಲಿಯ ಜೈನರು ಸೋಮವ್ವೆಯು ಶಿವಾಲಯಕ್ಕೆ ಹೋಗುವದನ್ನು ತಿಳಿದವರಾಗಿ ಅವಳನ್ನು ಅವರು ಪರೀಕ್ಷಿಸಲು, ಅವಳ ಪೂಜಾಕ್ರಮದಲ್ಲಿ ನಡೆಯುತ್ತಿದ್ದ ಅಗಾಧವಾದ ಸಂಗತಿಗಳನ್ನೆಲ್ಲ ಪ್ರತ್ಯಕ್ಷ ಕಂಡು, ಅವರು 'ಇಂಥ ಕುಟಿಲ ಸ್ತ್ರೀಯಳು ನಮ್ಮಲ್ಲಿದ್ದರೆ' ಅವಳುನಮ್ಮ ಜೈನ ಕುಲವನ್ನೆಲ್ಲ ನಾಶಮಾಡದೆ ಬಿಡುವಳೇ?', ಎಂದು ಭಾವಿಸಿ ತಾವು ಕಂಡದ್ದನ್ನೆಲ್ಲ ಆಕೆಯ ಗಂಡನಿಗೆ ಅವರು ತಿಳಿಸಿದರು. ಪಟ್ಟಣದಲ್ಲೆಲ್ಲ ಸೋಮವ್ವೆಯ ಸುದ್ದಿಯೇ ಸುದ್ದಿಯಾಯಿತು. ಜೈನರು ಕೇಳಸಗೊಂಡರು.

ಇಲ್ಲಿಯ ಶಿವಭಕ್ತರು ಇಂಥ ಮಹಾತ್ಮಳು ಗ್ರಾಮದಲ್ಲಿ ಉದಯವಾದಳೇ ? ಶಿವಭಕ್ತಿಯ ಮಹಿಮೆಯು ಹೆಚ್ಚಿನದಾಯಿತು. ಎಂದು ಭಾವಿಸಿ ಬಹಳ ಹಿಗ್ಗಿದರು. ಗ್ರಾಮದಲ್ಲಿ ಈ ಸ್ಥಿತಿಯುಂಟಾಗಲು ಪಾರಿಸನಾಥನು ಆಕೆಯನ್ನು ಕೊಂದುಹಾಕಿ ಬಿಡಬೇಕೆಂದು ನಿಶ್ಚಯಿಸಿದನು. ಆಗ ಅವನು ತನ್ನಹೆಂಡತಿಗೆ ಶಯ್ಯಾಮಂದಿರಕ್ಕೆ ಹೋಗಿ ಇರಲು ಅಜ್ಞಾಪಿಸಿದನು. ಸೋಮವ್ವೆಯು ತನ್ನ ಪತಿಯ ಆಜ್ಞೆಯನ್ನು ಮೀರದೆ, ಅದಿನ ಶಿವಾಲಯಕ್ಕೆ ಹೋಗದೆ ತಾನು ಮಲಗುವ ಕೋಣೆಯಲ್ಲಿಯೇ ಉಳಿದಳು. ಆದರೆ ತನ್ನಮೇಲೆ ಏನೋ ಒಂದು ಘೋರ ಪ್ರಸಂಗವು ಬರಬಹುದೆಂಬ ಸಂಶಯವು ಆಕೆಗೆ ಬಂದಿತು. ಆಗ ಅವಳು ಲಿಂಗಪೂಜೆ ಮಾಡುತ್ತ ಪರಮಾತ್ಮನ ಧ್ಯಾನದಲ್ಲಿರಬೇಕೆಂದು ಬಯಸಿ, ಅಲ್ಲಿದ್ದ ಒಂದು ಮಡಿಕೆಯನ್ನು ತೆಗೆದುಕೊಂಡು, ಅದರಮೇಲೆ ದೀಪವನ್ನಿಟ್ಟುಕೊಂಡು, ಆ ದೀಪದ ಕುಡಿಯೇ ಲಿಂಗವೆಂದು ಭಾವಿಸಿ ಪ್ರಾರ್ಥಿಸುತ್ತ ಅದರಮುಂದೆ ತನಗೆ ತನ್ನ ಅತ್ತೆಯು ಕೊಟ್ಟಿದ್ದ ಬೋನವನ್ನಿಟ್ಟು ಸಮರ್ಪಿಸಿ, ಪರಮಾತ್ಮನೇ, ಇದೇ ನನ್ನ ಲಿಂಗಪೂಜೆ ಎಂದು ಭಾವಿಸುತ್ತ ಪರಮಾತ್ಮನನ್ನು ನೆನೆಯುತ್ತ ಕುಳಿತಳು. ಆಗ ಪಾರಿಸನಾಥನು ಒಳಗೆಬಂದು ತನ್ನ ಸತಿಯು ನಡಿಸಿದ ಕಾರ್ಯಗಳನ್ನು ಕಂಡು ಮತ್ತಿಷ್ಟು ಕೋಪಾವಿಷ್ಟನಾಗಿ ಒಂದು ಖಡ್ಗವನ್ನು ಹಿಡಿದುಕೊಂಡು ಒಳಗೆನಿಂತು ಸೋಮವ್ವೆಯ ಮೇಲೇರಿ ಹೋದನು. ಆಗ ಆ ಅಬಲೆಯು ಭಯಭೀತಳಾದಳು. ಅವಳು 'ಆಹಾ, ಜ್ಯೋತಿರ್ಮಯನಾದ ಶಿವನೇ ಪರಮಾತ್ಮನೇ, ನೀನೇ ನನಗೆ ಗತಿಯು. ನನ್ನನ್ನುಕಾಯು' ಎಂದು ಆ ದೀಪದ ಕುಡಿಯನ್ನು ಅಪ್ಪಿಕೊಂಡಳು. 'ಭಾವದಂತೆ ಲಿಂಗವು' ಎಂಬ ಶಿವಶರಣರ ನುಡಿಯಂತೆ ಆ ಕುಡಿಯು ಭಗ್ಗನೇ ಜ್ಯೋತಿರ್ಮಯ ಲಿಂಗವಾಯಿತು ! ಆ ಲಿಂಗದೊಳಗಿಂದ 'ಸತಿಯೆ ಭಯಪಡಬೇಡ' ಎಂಬ ಧ್ವನಿಯು ಹೊರಬಿದ್ದಿತು. ಮತ್ತು ಅದರಲ್ಲಿಯೇ ಆ ಶಿವಶರಣೆಯಾದ ಸೋಮವ್ವೆಯು ಅಡಗಿಹೋದಳು. ಅಡಗುವ ಸಮಯದಲ್ಲಿ ಸೋಮವ್ವೆಯು 'ಎಲೋ ಪರಮಾತ್ಮನೇ' ಇನ್ನುಮೇಲೆ ನಿನ್ನಭಕ್ತಿಯ ಬೆಳಕು ಮೂರು ಲೋಕಗಳನ್ನು ಬೆಳಗಲಿ ಎಂಬ ವರವನ್ನುಕೊಡು' ಎಂದು ಬೇಡಿಕೊಳ್ಳಲು ಆ ಜ್ಯೋತಿರ್ಮಯ ಲಿಂಗದಲ್ಲಿ "ಹಾಗೆಯೇ ಆಗಲಿ' ಎಂಬ ಶಬ್ದವು ಹೊರಟಿತು. ಮತ್ತು ಆ ಸೋಮವ್ವೆಯು ಆ ಪ್ರಕಾಶಮಯವಾದ ಲಿಂಗದಲ್ಲಿಯೇ ಅಡಗಿಹೋದಳು.

ಭಾವಿಕರು ಸೋಮವ್ವೆಯ ಈ ವೃತ್ತಾಂತದಲ್ಲಿ ವಿಶ್ವಾಸವುಳ್ಳವರಾಗಿ ಪೂರ್ಣವಾಗಿ ಅದನ್ನು ನಂಬಲಿ ಅಥವಾ ನವ್ಯ ಆಧುನಿಕ ಲೌಕಿಕರು ಆಕೆಯು ತನ್ನ ಆಚರಣೆಯನ್ನು ನಡೆಸುವಲ್ಲಿ ತನ್ನ ಗಂಡನ ಕೈಯಿಂದ ಖಡ್ಗದಿಂದ ಹತಳಾದಳೆಂದು ತಿಳಿಯಲಿ, ಹೇಗೆ ತಿಳಿದರೂ ಶಿವಾನುಭವದ ತತ್ವವನ್ನು ಪರಿಪಾಲಿಸುವಲ್ಲಿ ಬಸವೇಶ್ವರರ ಕಾಲದಲ್ಲಿ ಸ್ತ್ರೀಯರು ಸಹ ತಮ್ಮ ಪ್ರಾಣವನ್ನು ಕೊಡಲು ಹೇಗೆ ಸಿದ್ಧರಾಗಿದ್ದರೆಂಬುದಕ್ಕೆ ಸೋಹಳಿಯ ಸೋಮವ್ವೆಯ ಈ ಚರಿತ್ರೆಯು ಅತ್ಯಂತ ಹೃದಯದ್ರಾವಕವಾದ ಉದಾಹರಣೆಯಾಗಿದೆ.

ಈ ಗ್ರಾಮವು ಎಲ್ಲಿ ಇದೆ ಎಂಬುದು ನಮಗೆ ತಿಳಿದಿಲ್ಲ. ಇದನ್ನು ಸಂಶೋಧಿಸತಕ್ಕದ್ದಾಗಿದೆ.

---

## ೧೪. ರೆಮ್ಮವ್ವೆ

ರೆಮ್ಮವ್ವೆಯು ಒಬ್ಬ ಸ್ತ್ರೀವಚನಕಾರಳಿದ್ದಾಳೆ. ಆಕೆಯ ಮುದ್ರಿಕೆಯು 'ಏಲೇಶ್ವರ ಲಿಂಗ' ಎಂದಿರುತ್ತದೆ. ಆಕೆಯು ಏಲೇಶ ಕೇತಯ್ಯನ ಗ್ರಾಮವಾದ ಏಲೇರಿಯಲ್ಲಿ ವಾಸಮಾಡುತ್ತಿದ್ದಳು. ಏಲೇರಿಯಲ್ಲಿ ಏಲೇಶ್ವರ ದೇವಾಲಯವಿದ್ದು, ಈ ದೇವತೆಯ ಹೆಸರಿನಿಂದಲೇ ಅವಳು ತನ್ನ ವಚನಗಳನ್ನು ರಚಿಸಿದ್ದಾಳೆ. ಏಲೇಶ ಕೇತಯ್ಯನಂತೆಯೇ ಮಹೇಶ್ವರ ಸ್ಥಲದ ಕಟ್ಟಾಚರಣೆಯನ್ನು ಪ್ರತಿಪಾದಿಸುವವಳಾಗಿ ಅವಳ ವಚನಗಳು ಅವನ ವಚನಗಳನ್ನೇ ಹೋಲುತ್ತವೆ. ಅವಳ ೨೩ ವಚನಗಳು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದು ಅವುಗಳಲ್ಲಿಯ ೬ನೇ ಮತ್ತು ೧೯ನೇ ವಚನಗಳ ಮೇಲಿಂದ ಅವಳು ಒಕ್ಕಲುತನದ ಕಾಯಕವನ್ನು ಮಾಡುತ್ತಿದ್ದಳೆಂದು ತಿಳಿಯುತ್ತದೆ. ಜಂಗಮರೂ ಸ್ತ್ರೀಯರೂ ಪುರುಷರೂ ಕೆಲವೊಂದು ವ್ರತವನ್ನು ಸ್ವೀಕರಿಸಿದ ಬಳಿಕ ಸದಾಚಾರಿಗಳಾಗಿಯೇ ನಡೆಯಬೇಕೆಂದು ಅವಳು ಅವುಗಳ ಮೂಲಕ ಬೋಧಿಸುತ್ತಾಳೆ. ಪ್ರಸಾದ ತೆಗೆದುಕೊಳ್ಳುವಲ್ಲಿ ಅದನ್ನು ಸಿಕ್ಕವರಲ್ಲಿ ತೆಗೆದುಕೊಳ್ಳದೆ ಸಮಶೀಲವಂತರಲ್ಲಿಯೇ ತೆಗೆದು ಕೊಳ್ಳಬೇಕೆಂದು ಹೇಳುತ್ತಾಳೆ. (ವಚನ ೧೩) ಅವಳ ವಚನಗಳಲ್ಲಿ ಶಿವಾನುಭವದ ಉಚ್ಚ ತತ್ವಗಳು ಅಡಕವಾಗಿರುತ್ತವೆ.

ಬಸವಾದಿ ಪ್ರಮಥರ ತತ್ವಗಳು ಶುದ್ಧವೂ ಸಾತ್ವಿಕವೂ ಆಗಿದ್ದು ಅವು ಗಳ ಮೂಲಕ ಅವರ ಕಾಲದಲ್ಲಿ ಸ್ತ್ರೀಯರು ಪಾರಮಾರ್ಥದಲ್ಲಿದ್ದುಕೊಂಡು ತಮ್ಮ ಕಾಯಕಗಳನ್ನು ನಡಿಸುವಲ್ಲಿ ಹೇಗೆ ತತ್ಪರರಾಗಿದ್ದರೆಂಬುದು ರೆಮ್ಮವ್ವೆಯ ವಚನಗಳಿಂದ ಚನ್ನಾಗಿ ತಿಳಿದು ಬರುತ್ತಿದೆ.

## ವಚನಗಳು

(೧) ತಾ ಸೇಮವ ಮಾಡಿಕೊಂಡು ಕೃಷಿಬೆವಸಾಯವಿಲ್ಲದೆ ಒಡೆಯರು ಕಟ್ಟಪ್ಪಣೆಯ ಮಾಡುವದೆಂತು ? ಹೀಂಗಲ್ಲದೆ ಎನ್ನ ಒಡಲ ಹೊರೆದೆನೆಂದು ಹೋದ ಠಾವಿನಲ್ಲಿ ಓಗರವನಿಕ್ಕುವ ಲಾಗಿನ ಶೀಲವಂತರ ಮನದ ಭೇದವ ನೀವೆ ಬಲ್ಲಿರಿ ಎಲೇಶ್ವರ ಲಿಂಗವೇ.

(೨) ಜಲ ನೆಲ ತಿಲೆ ತಾ ಮಾಡುವ ಹೊಲ ಮುಂತಾಗಿ ಸರ್ವವೆಲ್ಲವು ಲಿಂಗಾಯತ ಸಂಬಂಧವಾಗಿ, ಭವಿ ಸಂಗ, ಭವಿ ನಿರೀಕ್ಷಣೆ, ಭವಿ ಅಪೇಕ್ಷೆ, ಭವಿ ದೃಷ್ಟ್ಯಂಗಳನೊಲ್ಲದೆ, ಶಿವನರಿತಲ್ಲಿ, ಶಿವನ ಪೂಜೆಯ ಮಾಡುವಲ್ಲಿ, ಶಿವಮೂರ್ತಿ ಧ್ಯಾನದಿಂದ ಶಿವಲಿಂಗಾರ್ಚನೆಯ ಮಾಡುವಲ್ಲಿ ಶಿವ ಪ್ರಸಾದವ ತಂದು ಒಡೆಯರಿಗಿತ್ತು ಆ ಪ್ರಸಾದವ ಎಲೇಶ್ವರ ಲಿಂಗಕ್ಕೆ ಕೊಟ್ಟ ವ್ರತಭಾವಿಗೆ ನಮೋ ನಮೋ ಎನುತಿರ್ದೆ.

———

# ೧೪. ಶಿವಮಾಯಿದೇವಿ

ಶಿವಮಾಯಿ ದೇವಿಯು ಕಲ್ಯಾಣ ಪಟ್ಟಣದಲ್ಲಿ ಪುರಾಣ ಹೇಳುವ ಕಾಯಕವನ್ನು ಮಾಡುತ್ತ ಇದ್ದಳು. ಅವಳು ಶಿವಶರಣರ ಚರಿತ್ರೆಗಳನ್ನು ಓದಿಕೊಂಡು, ಅವುಗಳನ್ನು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಅವರಿಗೆ ತಿಳಿಸಿ ಹೇಳುವಳು. ಹೀಗೆ ಹೇಳುವದೇ ಅವಳಿಗೆ ಕಾಯಕವಾಗಿತ್ತು. ಈ ಪ್ರಕಾರ ಅವಳು ತನ್ನ ಜೀವಾವಧಿಯ ವರೆಗೂ ಶಿವ ಶರಣರ ಸೇವೆ ಮಾಡುತ್ತ ತನ್ನ ಜನ್ಮವನ್ನು ಕಳೆದಳು. ಪುರಾತನ ದೇವಿಯರ ತ್ರಿವಿದಿಯಲ್ಲಿ ಈಕೆಯ ಉಲ್ಲೇಖವು ಇರುವದು. ಅದು ಹೇಗೆಂದರೆ—

ಶಿವ ಪುರಾಣವ ನಿತ್ಯ ಶಿವ ಶರಣೆಯರಿಗರುಪಿ ।
ಅವರಿತ್ತ ಕಾಯಕವ ಜಂಗಮರಿಗೀವ ।
ಶಿವಮಾಯಿದೇವಿ ಶರಣಾಗು ॥

ಹೀಗೆ ಪುರಾಣ ಹೇಳುವದನ್ನೇ ತನ್ನ ಕಾಯಕವನ್ನಾಗಿ ಮಾಡಿಕೊಂಡು ತನಗೆ ದೊರಕಿದ ಹಣದಿಂದ ಶಿವಮಾಯಿದೇವಿಯು ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತ ಕಲ್ಯಾಣ ಪಟ್ಟಣದಲ್ಲಿ ಇರುವವಳಾಗಿದ್ದಳು. ಸ್ತ್ರೀಯರಿಗೆ ಅನುರೂಪವಾದ ಕಾಯಕವು ಇದಲ್ಲವೇ ?

———

# ೧೫ ಕದಿರೆ ರೆಮ್ಮವ್ವೆ.

ಕದಿರೆ ರೆಮ್ಮವ್ವೆಯು ಕಲ್ಯಾಣಪಟ್ಟಣದಲ್ಲಿದ್ದು ರಾಟೆಯಿಂದ ನೂಲನ್ನು ತೆಗೆಯುವ ಕಾಯಕವನ್ನು ಮಾಡಿಕೊಂಡಿದ್ದಳು. ಹೀಗೆ ಬಂದ ನೂಲನ್ನು ಮಾರಿ, ಬಂದ ಹಣದಿಂದ ತನ್ನ ನಿರ್ವಾಹವನ್ನು ಸಾಗಿಸುತ್ತಿದ್ದಳು. ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವಳು. ಇವಳು ವಚನಕಾರಳಿದ್ದಾಳೆ. ಈಕೆಯ ೩ ವಚನಗಳು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳಲ್ಲಿ ಎರಡನ್ನು ಮಾತ್ರ ಕೆಳಗೆ ಉದಹರಿಸಿದ್ದೇವೆ. ಅವುಗಳಿಗೆ ಪುರಾತನ ಟೀಕೆಯುಂಟು.

## ವಚನಗಳು.

(೧) ಎಲ್ಲರ ಗಂಡಂದಿರು ಪರದಳ ವಿಭಾಡರು. ಎನ್ನ ಗಂಡ ಮನೆದಳ ವಿಭಾಡ. ಎಲ್ಲರ ಗಂಡಂದಿರು ಗಜಬೇಟೆಕಾರರು. ಎನ್ನ ಗಂಡ ಮನೆಯ ಬೇಟೆಕಾರ. ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು ಎನ್ನ ಗಂಡಂಗೆ ಒಂದೇ. ಅದೊಂದು ಸಂದೇಹ ಕದಿರೆರೆಮ್ಮಿಯೊಡೆಯ ಗುಮ್ಮೇಶ್ವರಾ.

ಟೀಕು:— ಮಾಯಾ ಶಕ್ತಿಯ ವಲ್ಲಭರಾದ ಖಂಡಿತ ಜ್ಞಾನಿಗಳೆಲ್ಲರು ಬಹಿರಂಗದ ಪ್ರಪಂಚು, ತನು ದಂಡಣೆಗಳಿಂ ನಿವೃತ್ತಿ ಮಾಡಬೇಕೆನುತ್ತಿಹರೆಂಬುದೀಗ, ಎಲ್ಲರ ಗಂಡಂದಿರು ಪರದಳವಿಭಾಡರು ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪವಾದ ಶರಣ ಸತಿಗೆ ಮಹಾಘನ ಲಿಂಗವೇ ಪತಿಯಾದ ಕಾರಣ ಆ ಮಹಾ ಘನಲಿಂಗವು ಶರಣನ ಸರ್ವಾಂಗವನವಗ್ರಹಿಸಿ ಮನಸ್ಸಿನಿಂ ತೋರುವ ಸಂಕಲ್ಪ ವಿಕಲ್ಪ ಮೊದಲಾದ ಸಕಲ ಪ್ರಪಂಚ ನಿವೃತ್ತಿಮಾಡಿ ಶಿವಜ್ಞಾನವ ಪ್ರಭಾವಿಸಿ, ಕೊಡುತ್ತಿಹುದೆಂಬುದೀಗ, ಎನ್ನ ಗಂಡ ಮನೆದಳವಿಭಾಡನೆಂಬ ಶಬ್ದಕ್ಕರ್ಥ. ಮಾಯಾ ಶಕ್ತಿ ವಲ್ಲಭರಾದ ಬಿನ್ನಜ್ಞಾನಿಗಳೆಲ್ಲರು ಬಹಿರಂಗದಷ್ಟ ಮದಂಗಳ ನಷ್ಟವ ಮಾಡಬೇಕೆನ್ನುತ್ತಿಹರು. ಚಿದ್ರೂಪನಾದ ಶರಣನ ಬಾಹ್ಯಾಭ್ಯಂತರಂಗಳನೊಳಕೊಂಡು, ಪರಿಪೂರ್ಣವಾಗಿರ್ಪ ಪರಶಿವತತ್ವವು ಅಂತರಂಗದಷ್ಟಮದಂಗಳ ನಷ್ಟವ ಮಾಡಿ, ಚಿದಹಂಕಾರ ಸ್ವರೂಪನೆಯ್ದುಸುತ್ತಿಹನೆಂದುದೀಗ, ಎಲ್ಲರೆ ಗಂಡಂದಿರು ಗಜಬೇಟೆಕಾರರು. ಎನ್ನ ಗಂಡ ಮನೆಯ ಬೇಟೆಗಾರನೆಂಬ ಶಬ್ದಕ್ಕರ್ಥ. ತಮ್ಮ ನಿಜವೇ ಪರಬ್ರಹ್ಮವೆಂದರಿಯದೆ, ದ್ವೈತಭಾವದಿಂದೆ ಲಿಂಗಕ್ಕೆ

ಸರ್ವ ಕ್ರಿಯೋಪಚಾರಂಗಳ ಮಾಡಿ ಭಿನ್ನ ಫಲ ಪದಂಗಳ ಪಡೆದು ಭೋಗಿಸಿದವರು ಭವಹೇತುವಪ್ಪ ಜನ್ಮಾಂತರಕ್ಕೆ ಬಂದು ಮಾಯಾಸಂಬಂಧವಾದ ಸಕಲ ವಿಷಯಪದಾರ್ಥಂಗಳ ಜೀವ ಭಾವದಿಂ ಭುಂಜಿಸುತ್ತಿಹರು. ಸುಜ್ಞಾನ ಸನ್ನಿಹಿತವಾದ ಶರಣ ಸತಿಗೆ ಪತಿಯಾಗಿರ್ಪ ಮಹಾ ಘನಲಿಂಗವು ಫಲ ಪದಂಗಳ ಕೊಟ್ಟು ಭವಕ್ಕೆ ತಾರದೆ, ಅಂಗ ಮನ ಪ್ರಾಣ ಸರ್ವೇಂದ್ರಿಯಂಗಳಲ್ಲಿ ಸಂಬಂಧವಾದ ಸಕಲ ಪದಾರ್ಥಂಗಳ ಭಕ್ತಿಯಿಂದರ್ಪಿಸಿಕೊಂಡು, ಪ್ರಸಾದವ ಕರುಣಿಸಿ ನಿತ್ಯವಾದ ಮುಕ್ತಿಯ ಕೊಡುತ್ತಿಹುದು ಶರಣಂಗೆಂಬುದೀಗ ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು, ಎನ್ನ ಗಂಡ ತಾರದೆ ಇಕ್ಕಿಸಿಕೊಂಬನೆಂಬ ಶಬ್ದಕ್ಕರ್ಥ. ಮಾಯಾಶಕ್ತಿಯ ವಲ್ಲಭರಾದ ಭಿನ್ನ ಜ್ಞಾನಿಗಳೆಲ್ಲರು ತ್ರಿಪುಟಿ ಜ್ಞಾನ ಸಂಬಂಧಿಗಳಾಗಿಹರು. ಚಿತ್ಪ್ರಭಾಂಗ ಸ್ವರೂಪವಾದ ಶರಣ ಸತಿಗೆ ಪ್ರಾಣ ವಲ್ಲಭನಾದ ಪರಬ್ರಹ್ಮಲಿಂಗಕ್ಕೆ ಅಖಂಡ ಜ್ಞಾನ ಪ್ರಕಾಶ ಒಂದೇ ಶರಣನ ಸರ್ವಾಂಗವನವಗ್ರಹಿಸಿ ನಿಪ್ಪತ್ತಿಯಾಯಿತ್ತೆಂಬುದೀಗ, ಎಲ್ಲರ ಗಂಡಂದಿರಿಗೆ ಮೂರು, ಎನ್ನ ಗಂಡಂಗೆ ಒಂದೇ, ಅದೊಂದು ಸಂದೇಹ, ಕದರೆಡೆಮ್ಮಯೊಡೆಯ ಗುಮ್ಮೇಶ್ವರಾ ಎಂಬ ಶಬ್ದಕ್ಕರ್ಥ.

(೨) ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ! ಅಡಿಯಣ ಹಲಗೆ ಬ್ರಹ್ಮ, ತೋರಣ ವಿಷ್ಣು, ಸಿಂಡ ಬೊಂಬೆ ಮಹಾರುದ್ರ, ರುದ್ರನ ಬೆಂಬಳಿಯವೆರಡು ಸೂತ್ರದ ಕರ್ಣ, ಅರಿವೆಂಬ ಕದಿರು, ಭಕ್ತಿಯೆಂಬ ಕೈಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು, ಕದುರು ತುಂಬಿತ್ತು, ರಾಟೆಯ ತಿರುಹಲಾರೆ. ಎನ್ನ ಗಂಡ ಕುಟ್ಟಿಹ. ಇನ್ನೇವೆ ಕದಿರ ರೆಮ್ಮಯೊಡೆಯ ಗುಮ್ಮೇಶ್ವರಾ?

ಟೀಕು:— ಶಿವಜ್ಞಾನೋದಯವಾಗಿ, ಶ್ರೀಗುರು ಕಾರುಣ್ಯದಿಂ ಸರ್ವಾಂಗಲಿಂಗ ಸಂಬಂಧವಾಗಿರ್ಪ ಶರಣನ ಸರ್ವಾಚಾರ ಸಂಪತ್ತಿನ ಆಚರಣೆ ಎಂತೆಂದೊಡೆ ಇಷ್ಟಲಿಂಗ ಸಂಬಂಧವಾದ ಆಚಾರವೆಂಬುದೀಗ ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ, ಅಡಿಯಣ ಹಲಗೆ ಬ್ರಹ್ಮವೆಂಬ ಶಬ್ದಕ್ಕರ್ಥ. ತನ್ನ ಹೃದಯ ಕಮಲಕರ್ಣಿಕಾ ಮಧ್ಯದಲ್ಲಿ ಚಿತ್ ಪ್ರಕಾಶವಾಗಿ ತೊಳಗಿ ಬೆಳಗುವ ಪ್ರಾಣಲಿಂಗದಲ್ಲಿ ಆಚರಿಸುವ ನೈಷ್ಠಿಕಾ ಭಾವಂಗಳೆರಡು ತೋರಣವಾಗಿಹುವೆಂಬುದೀಗ, ತೋರಣ

ವಿಷ್ಣುವೆಂಬ ಶಬ್ದಕ್ಕರ್ಥ. ಅನ್ಯೈಶ್ವಿಕಾ ಭಾವಂಗಳನೊಳಕೊಂಡು, ಪರಿಪೂರ್ಣ ಜ್ಞಾನ ತೋರುತ್ತಿಹುದೆಂಬುದೀಗ, ನಿಂದ ಬೊಂಬೆ ಮಹಾರುದ್ರನೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾಜ್ಞಾನದ ಬೆಂಬಳಿಯಲ್ಲಿ ತೋರುವ ಜ್ಞಾನಕ್ರಿಯಂಗಳೆರಡು ಭಿನ್ನವಿಲ್ಲದಿರ್ಪುವೆಂಬುದೀಗ, ರುದ್ರನ ಬೆಂಬಳಿಯ ವೆರಡು ಸೂತ್ರದ ಕರ್ಣವೆಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರಿಯೆಗಳನೊಳಕೊಂಡು, ಸದ್ವಿವೇಕ ಜ್ಞಾನ ಸಂಬಂಧವಾದ ಶಿವಾದ್ವೈತ ಭಕ್ತಿಯಿಂದಾಚರಿಸುತ್ತಿಹನೆಂಬುದೀಗ, ಅರಿವೆಂಬ ಕದುರು ಭಕ್ತಿ ಎಂಬ ಕಯ್ಯಲ್ಲಿ ತಿರುಹಲಾಗಿ ಎಂಬ ಶಬ್ದಕ್ಕರ್ಥ. ಅಂತು ಸದ್ಭಕ್ತಿಯಿಂದಾಚರಿಸುತ್ತಿರ್ದ ಶರಣನ ಸ್ವಾನುಭಾವ ಸೂತ್ರವು ಸದ್ವಿವೇಕ ಜ್ಞಾನದಲ್ಲಿ ಪರಿಪೂರ್ಣವಾಯಿತ್ತೆಂಬುದೀಗ, ಸುತ್ತಿತ್ತು ನೂಲು, ಕದುರು ತುಂಬಿತ್ತು, ಎಂಬ ಶಬ್ದಕ್ಕರ್ಥ. ಅಂತು ಭಿನ್ನ ಕ್ರಿಯಾಚಾರವಿಡಿದಾಚರಿಸುತ್ತಿರ್ದ ಶರಣನು ಭಿನ್ನ ಕ್ರಿಯಾಚಾರವಿಡಿದಾಚರಿಸಿದೊಡೆ, ಆ ಮಹಾ ಘನಲಿಂಗವೆಂಬ ಪತಿ ಆಜ್ಞೆಯ ಮಾಡಿಹನೆಂದರಿದು ಭಿನ್ನ ಕ್ರಿಯಾಚಾರವ ವಿಸರ್ಜಿಸಿ ಸಾವಧಾನ ಸಂಪನ್ನನಾಗಿ ಉಪಾವಸ್ಥೆಯ ಮಾಡುತ್ತಿಹನೆಂಬುದೀಗ, ರಾಟೆಯ ತಿರುಹಲಾರೆ ಎನ್ನ ಗಂಡ ಕುಟ್ಟಿಹ. ಇನ್ನೇವೆ ಕದಿರೆ ರೆಮ್ಮಿಯೊಡೆಯ ಗುಮ್ಮೇಶ್ವರನೆಂಬ ಶಬ್ದಕ್ಕರ್ಥ.

———

## ೧೬. ಲಕ್ಕಮ್ಮ

ಲಕ್ಕಮ್ಮನು ಆಯದಕ್ಕಿ ಮಾರಯ್ಯನ ಹೆಂಡತಿಯು. ಅವಳ ಚಾರಿತ್ರೆಯು ಆತನ ಚರಿತ್ರೆಯಲ್ಲಿಯೇ ಸಮಾವೇಶವಾಗುತ್ತದೆ. ಆಯದಕ್ಕಿ ಮಾರಯ್ಯನಂತೆಯೇ ಲಕ್ಕಮ್ಮನೂ ವಚನಕಾರಳಿದ್ದಾಳೆ. 'ಮಾರಯ್ಯಪ್ರಿಯ ಅಮರೇಶ್ವರಲಿಂಗ' ಎಂಬುದು ಅವಳ ಮುದ್ರಿಕೆಯಾಗಿದೆ. ಅವಳ ೧೫ ವಚನಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವೆಲ್ಲವೂ ಉದಾತ್ತವಿಚಾರವುಳ್ಳವುಗಳಾಗಿವೆ. ಆಯದಕ್ಕಿ ಮಾರಯ್ಯನ ಕಾಯಕದಲ್ಲಿ ಅವನಿಗೆ ತಾನೂ ಸಹಾಯಕಳಾಗಿ ಅವಳು ವರ್ತಿಸಿದ್ದಾಳೆ. ಶಿವಶರಣರು ಶಿವಾನುಭವದ ತತ್ವಗಳಂತೆ ಕಾಯಕಗಳನ್ನು ಮಾಡುತ್ತ ಅವುಗಳಲ್ಲಿ ತಮಗೆ ತೋರಿದ ಅನುಭವಗಳನ್ನು ತಮ್ಮ ವಚನಗಳ ಮೂಲಕ ನುಡಿದಿದ್ದಾರೆ. ಆದ್ದರಿಂದ ಇವುಗಳಲ್ಲಿ ತಮ್ಮ ಜೀವಿತದಲ್ಲಿ ತಮಗೊದಗಿದ ಪ್ರಸಂಗಗಳ ಉಲ್ಲೇಖ

ಗಳು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ಅಲ್ಲಲ್ಲಿ ಬರುವದುಂಟು. ಲಕ್ಕಮ್ಮನ ಕೆಳಗೆ ಕಾಣಿಸಿದ ವಚನಗಳು ಅವಳ ಮತ್ತು ಆಯ್ದಕ್ಕಿ ಮಾರಯ್ಯನ ಚರಿತ್ರೆಗಳ ಮೇಲೆ ಕೆಲಮಟ್ಟಿಗೆ ಪ್ರಕಾಶ ಕೆಡಹುವಂಥವಿರುತ್ತವೆ.

ಆಯ್ದಕ್ಕಿ ಮಾರಯ್ಯನು ಅಕ್ಕಿಯನ್ನು ಆಯುವ ಕಾಯಕವನ್ನು ಮಾಡುತ್ತಿದ್ದದರ ಮಹತ್ವವನ್ನು ಲಕ್ಕಮ್ಮನು ಕೆಳಗಿನ ವಚನದಲ್ಲಿ ಹೇಳಿದ್ದಾಳೆ:—

"ಆಯಿದು ಇಲ್ಲವಾದಂದಿಗಲ್ಲದೆ ಜಗದೊಳಗೆ ಆರೂ ಬಡತನವಿಲ್ಲ. ಆಯಿದುವುಳ್ಳನ್ನಕ್ಕ ಸಕಲ ಜೀವಕ್ಕೆ ಚೇತನ. ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗವುಳ್ಳನ್ನಕ್ಕರ ಧನವುನ ಸಂಪನ್ನರು.

ಆಯುವದರಲ್ಲಿ ಆಶೆ ಇರಬಾರದೆಂದು ಅವಳು ಕೆಳಗೆ ಹೇಳಿದ್ದಾಳೆ.

"ಆಸೆ ಎಂಬುದು ಅರಸಿಂಗಲ್ಲದೆ ಶಿವಶರಣರಿಗುಂಟೇ? ರೋಷವೆಂಬುದು ಯಮದೂತರಿಗಲ್ಲದೆ ಅಜಾತಂಗುಂಟೇ? ಈ ಸಕ್ಕಿಯ ಆಶೆ ನಿಮಗೇಕೆ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗಕ್ಕೆ ಸಲ್ಲದ ನೇಮವು.

ಕಾಯಕದಲ್ಲಿ ಹೆಚ್ಚಿಗೆ ಬಯಸಬಾರದೆಂತಲೂ ಪೂರ್ವ ಕರ್ಮದಂತೆ ಎಲ್ಲರಿಗೂ ಸುಖ ದುಃಖಗಳಾಗುತ್ತವೆಂತಲೂ, ಅವಳು ಕೆಳಗೆ ಹೇಳುತ್ತಾಳೆ.

"ಬಾಹಾಗ ಕೊಂಡು ಬಂದ ಪ್ರಾಪ್ತಿಯಲ್ಲದೆ, ಬೇರೊಂದು ಗಳಿಸಲಿಲ್ಲ. ಬೇರೊಂದು ಕೆಡಿಸಲಿಲ್ಲ. ಬಂದುದು ನಿಂದುದು ಮಾರಯ್ಯ ಪ್ರಿಯ ಅಮಳೇಶ್ವರಲಿಂಗ ಕೊಟ್ಟಲ್ಲದಿಲ್ಲ.

ಮಾರಯ್ಯನು ಬಡವನೆಂದು ಬಸವನು ಒಂದು ದಿವಸ ಹೆಚ್ಚಿಗೆ ಅಕ್ಕಿಯನ್ನು ದಾರಿಯಲ್ಲಿ ಚಲ್ಲಿಸಲಾಗಿ ಅದಕ್ಕೆ ಲಕ್ಕಮ್ಮನು ಸಿಟ್ಟಾಗಿ ನುಡಿದ ವಚನವು ಕೆಳಗಿನದಾಗಿರುತ್ತದೆ.

"ಭಕ್ತಂಗೆ ಬಡತನ ಉಂಟೇ? ಸತ್ಯರಿಗೆ ಮರಣ ಉಂಟೇ? ಭಕ್ತರು ಬಡವರೆಂದು ಮತ್ತೊಂದು ಕೊಟ್ಟಹೆನೆಂದರೆ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ"

"ಕಾಯಕದಲ್ಲಿ ತಮಗೆ ಸಾಕಾಗುವಷ್ಟನ್ನೇ ಗಳಿಸಬೇಕಲ್ಲದೆ ಅನಾವಶ್ಯಕವಾಗಿ ಹೆಚ್ಚಿಗೆ ಸಂಗ್ರಹಿಸಕೂಡದೆಂಬ ಶಿವಶರಣರ ತತ್ತ್ವವಿದೆ. ಇದನ್ನೇ ಲಕ್ಕಮ್ಮನು ಕೆಳಗೆ ಹೇಳಿದ್ದಾಳೆ.

"ಭಕ್ತರು ಕಾಯಕವೆಂದು ಆಯಗಾರಿಕೆಯಲ್ಲಿದ್ದು ದಾಸೋಹವ ಮಾಡಬಹುದೆ? ಒಮ್ಮನವ ತಂದು ಒಮ್ಮನದಲ್ಲಿಯೇ ಮಾಡಿ ಇಮ್ಮನವಾಗದ ಮುನ್ನವೇ ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗಕ್ಕೆ ಸಲ್ಲಬೇಕು.

ಲಕ್ಕಮ್ಮನು ಶುದ್ಧಮನಸ್ಸಿನಿಂದ ಸಂಪಾದಿಸಿದರೆ ಲಕ್ಷ್ಮಿಯು ತಾನಾಗಿಯೇ ನಡೆದು ಬರುವಳೆಂದು ಕೆಳಗೆ ಹೇಳಿದ್ದಾಳೆ-

"ಮನ ಶುದ್ಧವಿಲ್ಲದವಂಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ ಅಮಳೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ.

ಈ ಪ್ರಕಾರ ಲಕ್ಕಮ್ಮನು ತನ್ನ ಪತಿಯ ಕಾಯಕದಲ್ಲಿ ಅವನಿಗೆ ಸಹಾಯಕಳಾಗಿ ವರ್ತಿಸಿದ್ದಾಳೆ. ಅವನ ನಿತ್ಯದ ಹೋರೆಯಲ್ಲಿ ಅವನಿಗೆ ಯೋಗ್ಯ ದಾರಿಯನ್ನು ತೋರಿಸುತ್ತ ತನ್ನ ಜೀವನವನ್ನು ನಡಿಸಿದ್ದಾಳೆ. ಗಂಡನು ತಪ್ಪಿದಲ್ಲಿ ಅವನಿಗೆ ಎಚ್ಚರು ಹೇಳುತ್ತ ಬಂದಿದ್ದಾಳೆ. 'ಪತಿಯೇ ದೈವ' ವೆಂದು ಭಾವಿಸಿ ನಡೆಯುವದು ಸತಿಯ ಕರ್ತವ್ಯವೆಂದು ಸಾಮಾನ್ಯವಾಗಿ ಜನರ ತಿಳುವಳಿಕೆಯುಂಟು. ಆದರೆ ಶಿವಾನುಭವದ ಪ್ರಕಾರ ವೀರಶೈವ ಸ್ತ್ರೀಯರುಗಳಿಗೆ ಲಿಂಗವೇ ಪತಿಯಾಗಿದೆ. ಆದ್ದರಿಂದ ಸ್ತ್ರೀಯರ ಮೋಕ್ಷಪದವು ಪತಿಯ ಮೇಲೆ ಅವಲಂಬಿಸಿರದೆ ಅದನ್ನು ಅವರು ಸ್ವತಂತ್ರ ರೀತಿಯಿಂದ ಹೊಂದಲು ಅರ್ಹರಾಗಿದ್ದಾರೆ. ಈ ತತ್ವವು ಬಸವೇಶ್ವರನ ಕಾಲದಲ್ಲಿ ಪ್ರಚಾರದಲ್ಲಿ ಬಂದದ್ದರಿಂದ ಆಗ ಅಸಂಖ್ಯ ಸ್ತ್ರೀಯರು ಸಮಾಜೋದ್ಧಾರ ಕಾರ್ಯ ಮಾಡಲು ಶಕ್ತರಾದರು. ಅವರಲ್ಲನೇಕರು ಅವಿವಾಹಿತರಾಗಿ ಉಳಿದು ಅನೇಕ ತರದ ಕಾಯಕಗಳನ್ನು ಮಾಡುತ್ತ ಆತ್ಮೋದ್ಧಾರವನ್ನು ಮಾಡಿಕೊಂಡಿದ್ದಾರೆ. ಇಷ್ಟೇ ಅಲ್ಲ, ಅವರು ಪುರುಷರೊಡನೆ ಮನೆತನದ ಆಸ್ತಿಯಲ್ಲಿಯೂ ಧಾರ್ಮಿಕ ಕೃತ್ಯಗಳಲ್ಲಿಯೂ ಸಮಾನ ಹಕ್ಕುಗಳನ್ನು ಸಹ ಪಡೆದುಕೊಂಡಿದ್ದಾರೆ. ಆದ್ದರಿಂದ ಶಿವಶರಣೆಯರಲ್ಲನೇಕರು ತಮ್ಮ ಪತಿಗಳು ತಪ್ಪು ಮಾಡಿದಾಗ ಅವರಿಗೆ ಅವುಗಳನ್ನು ತಿಳಿಸಿಕೊಟ್ಟು ಅವರನ್ನು ಯೋಗ್ಯದಾರಿಗೆ ಹಚ್ಚಿ

ದ್ದಾರೆ. ಈ ರೀತಿಯಾಗಿ ಲಕ್ಕಮ್ಮನು ಆಚರಿಸಿದ್ದು ಅವಳ ಚರಿತ್ರೆಯಿಂದ ತಿಳಿದುಬರುತ್ತದೆ.

ಲಕ್ಕಮ್ಮನು ಅತ್ಯಂತ ಧೈರ್ಯಸ್ಥಳೂ, ಕಟ್ಟಾಭಿಮಾನಿಯೂ, ಸ್ವತಂತ್ರ ಜೀವಿಯೂ, ಉದಾತ್ತ ವಿಚಾರವುಳ್ಳವಳೂ, ಆಗಿದ್ದಳೆಂದು ಅವಳ ವಚನ ಗಳ ಮೇಲಿಂದಲೂ ಆಯುದಕ್ಕಿ ಮಾರಯ್ಯನ ಚರಿತ್ರೆಯಿಂದಲೂ ಕಂಡು ಬರುತ್ತದೆ.

---

## ೧೭. ಕೊಟ್ಟಣದ ಸೋಮವ್ವೆ.

ನಿರ್ಲಜ್ಜ ಶಾಂತಯ್ಯನ ನಿರಾಶಾವೃತ್ತಿಯು ಬಸವೇಶ್ವರನ ಕಾಲದಲ್ಲಿ ಬಹು ಜನರ ಮನಸ್ಸನ್ನು ಸೆಳೆದಿರುತ್ತದೆ. ಅವನು ಮಠಾಧಿಕಾರಿಯಾಗಿ ಅವನು ವೈಭವವನ್ನು ಅಪೇಕ್ಷಿಸದೆ ದಿಗಂಬರಿಯಾಗಿ ಶಿವಾನುಭವ ಮಂಟ ಪದಲ್ಲಿ ಶಿವಶರಣರಿಂದ ಮನ್ನಣೆಯನ್ನು ಹೊಂದಿ ವಚನ ಶಾಸ್ತ್ರವನ್ನು ಪ್ರಚಾರ ಮಾಡಿದನು. ಅದರಿಂದ ಅವನಿಗೆ ಬಹು ಜನರು ಶಿಷ್ಯರಾದರು. ಇಂಥವರಲ್ಲಿ ಕೊಟ್ಟಣದ ಸೋಮವ್ವೆಯು ಒಬ್ಬಳಾಗಿದ್ದಾಳೆ.

ಸೋಮವ್ವೆಯು ಕಲ್ಯಾಣಪಟ್ಟಣದಲ್ಲಿ ಕೊಟ್ಟಣದ ಕಾಯಕವನ್ನು ಮಾಡುತ್ತ ಇದ್ದಳು. ಅವಳು ಬತ್ತವನ್ನು ಕುಟ್ಟಿ ಅಕ್ಕೀ ಮಾಡಿ ಕೂಲಿ ಯನ್ನು ಸಂಪಾದಿಸಿ ಅದರಮೇಲೆ ಉಪಜೀವಿಸುತ್ತ ದಾಸೋಹ ಕಾರ್ಯ ಗಳಲ್ಲಿ ನಿರತಳಾಗಿದ್ದಳು. ಅವಳು ವಚನಕಾರಳಿದ್ದಾಳೆ. ಅವಳು ನಿರ್ಲಜ್ಜ ಶಾಂತಯ್ಯನ ಮೇಲೆ ಭಕ್ತಿಯುಳ್ಳವಳಾದ್ದರಿಂದ "ನಿರ್ಲಜ್ಜೇಶ್ವರಾ"ಎಂಬ ನುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾಳೆ. ಅವಳ ಒಂದೇ ವಚನವು ನಮಗೆ ದೊರೆತಿದೆ. ಅದರಲ್ಲಿ ಅವಳು ತನ್ನ ಕಾಯಕದರೀತಿ ಯನ್ನು ಹೇಳಿಕೊಂಡಿದ್ದಾಳೆ.

### ವಚನ.

(೧) ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿ ಎಲ್ಲಿ? ವ್ರತ ಹೀನನ ನೆರೆಯೆ ನರಕವಲ್ಲದೆ ಮುಕ್ತಿ ಇಲ್ಲ. ಅರಿಯದಾದರೂ ಹೋಗಲಿ. ಅರಿದು ಬೆರೆದೆನಾದರೆ ಕನ್ನಗತ್ತಿಯಲ್ಲಿ ಕಿವಿಯ ಕೊಯ್ವರಯ್ಯಾ. ಬಲ್ಲೆನಾಗಿ ಒಲ್ಲೆ ನಿಮ್ಮಾಣೆ ನಿರ್ಲಜ್ಜೇಶ್ವರಾ.

ಈ ಪ್ರಕಾರ ಅವಳು ಕೊಟ್ಟಣದ ಕಾಯಕವನ್ನು ಮಾಡುತ್ತ ಮೋಕ್ಷ ವನ್ನು ಹೊಂದಿದಳು.

# ೧೮- ಕೋಲಂಬೆ.

ಜಾತಿನೊಳಪುರವೆಂಬ ಪಟ್ಟಣವು ನಿಜಾಮ ಇಲಾಖೆಯಲ್ಲಿ ನಾಂದೇಡ ಜಿಲ್ಲೆಯಲ್ಲಿದ್ದು ಅಲ್ಲಿ ಒಬ್ಬ ಶಿವಭಕ್ತನು ವಾಸಮಾಡುತ್ತಿದ್ದನು. ಅವನಿಗೆ ಕೋಲಂಬೆ ಎಂಬ ಹೆಸರಿನ ಮಗಳಿದ್ದಳು. ಆಕೆಯ ತಂದೆ ತಾಯಿಗಳು ಕೇವಲ ಶಿವಭಕ್ತಿಯುಳ್ಳವರಾಗಿ ಅವರು ದಿನಾಲು ಶಿವಾಲಯಕ್ಕೆ ಹೋಗಿ ತಪ್ಪದೆ ಶಿವಾರ್ಚನೆ ಮಾಡಿ ಬರುತ್ತಿದ್ದರು. ಅವರ ಮಗಳಾದರೂ ಅವರೊಡನೆ ಶಿವಾಲಯಕ್ಕೆ ಹೋಗಿ ತಪ್ಪದೆ ದೇವದರ್ಶನವನ್ನು ಮಾಡಿಬರುವಳು.

ಕೆಲವು ದಿವಸಗಳಾದ ಮೇಲೆ ಕೋಲಂಬೆಯು ತನ್ನದೆ ಆದ ಒಂದು ಶಿವಾಲಯವನ್ನು ಮಾಡಿ ದೇವಪೂಜೆ ಮಾಡಲೆಣಿಸಿ ಅವಳು ಒಂದು ಹುಲ್ಲು ಗುಡಿಸಲನ್ನು ಕಟ್ಟಿ ಅಲ್ಲಿ ದೇವರೆಂದು ಒಂದು ಶಿಲೆಯನ್ನು ಪ್ರತಿಷ್ಠಿಸಿ ಮನೆಯಿಂದ ತೈಲ ತುಪ್ಪವನ್ನು ತೆಗೆದುಕೊಂಡು ಹೋಗಿ ನೈವೇದ್ಯವನರ್ಪಿಸಿ ಬರಹತ್ತಿದಳು. ಆಗ ಅವಳೊಡನಾಡುವ ಚಿಕ್ಕ ಮಕ್ಕಳೂ ಕೂಡ ಅದನ್ನು ನೋಡಿ ತಮ್ಮ ಮನೆಗಳಿಂದ ಅಕ್ಕಿ ಬೇಳೆ ತುಪ್ಪ ತೈಲವನ್ನು ತಂದು ಎಲ್ಲರೂ ನೆರೆದು ಆಟ್ಟಿಗೂಳನಾಡುವೆವೆಂದು ಅಡಿಗೆಯಮಾಡಿ ನೈವೇದ್ಯವನ್ನರ್ಪಿಸಿ ದೇವರ ಮುಂದೆ ದೀವಿಗೆಯನ್ನಿಟ್ಟು ಬರಹತ್ತಿದರು. ಹೀಗೆ ಕೋಲಂಬೆಯೂ ಉಳಿದ ಚಿಕ್ಕ ಮಕ್ಕಳೂ ಬಾಲಲೀಲೆಯಿಂದ ಆ ಗುಡಿಸಲಲ್ಲಿ ಆಟವಾಡ ಹತ್ತಿದರು.

ಆದರೆ ಒಂದು ದಿವಸ ಆ ಮಕ್ಕಳ ತಾಯಿ ತಂದೆಗಳು ನೀವು ಮನೆಯಲ್ಲಿಯ ತೈಲ ತುಪ್ಪ ಅಕ್ಕಿ ಬೇಳೆ ಹಾಳು ಮಾಡುತ್ತಾ ಇದ್ದೀರಿ. ಇಂಥ ಆಟವು ನಿಮಗೇಕೆ, ಗುಡಿಸಲಿಗೆ ಹೋಗಬೇಡಿರಿ, ಎಂದು ನಿರ್ಬಂಧಿಸಿದರು ಆಗ ಕೋಲಂಬೆಯೊಬ್ಬಳೇ ಎಂದಿನಂತೆ ಗುಡಿಸಲಕ್ಕೆ ಹೋಗಿ ದೀಪವನ್ನು ಹತ್ತಿಸಿ ತಾಯಿ ತಂದೆಗಳು ಕೊಟ್ಟ ಹಣ್ಣು ಕಾಯಿಗಳನ್ನು ನೈವೇದ್ಯ ಮಾಡಿ ತನ್ನ ಮನೆಗೆ ಬಂದಳು. ಆಗ ಗ್ರಾಮದಲ್ಲಿ ಒಂದು ಚಮತ್ಕಾರವು ಸಂಭವಿಸಿತು. ಆ ದಿನ ಗ್ರಾಮದಲ್ಲಿರುವ ಯಾವ ಆಕಳೂ ಹಾಲು ಕರೆಯಲಿಲ್ಲ. ಮನೆಯ ಜನರು ಎಷ್ಟು ಪ್ರಯತ್ನಿಸಿದರೂ ಅವುಗಳಲ್ಲಿ ಒಂದೂ ಕೂಡ ಹಾಲನ್ನು ಕೊಡಲಿಲ್ಲ. ಆಗ ಜನರೆಲ್ಲ ವಿಸ್ಮಯಬಟ್ಟು ವಿಘ್ನೇಶ್ವರನ ದೇವಾಲಯದಲ್ಲಿ ನೆರೆದು ಹೀಗೆಕಾಯಿತೆಂದು ಪ್ರಶ್ನೆ

ಮಾಡಲು ಒಬ್ಬ ಭಕ್ತರ ಮಯ್ಯಲ್ಲಿ ದೇವರು ಬಂದು, ನೀವು ಕೋಲಂಬೆಯ ಕೂಡ ಆಡುವ ಮಕ್ಕಳಿಗೆ ತುಪ್ಪ ಎಣ್ಣೆ ನೈವೇದ್ಯವನ್ನು ಕೊಡದೆ ಅವರು ಗುಡಿಗೆ ಹೋಗುವದನ್ನು ನಿಲ್ಲಿಸಿದ್ದೀರಿ. ಆದರೆ ಅವರಿಗೆ ಅವುಗಳನ್ನು ಕೊಟ್ಟು ಹೋಗಗೊಟ್ಟರೆ, ಗೋವುಗಳು ಹಾಲು ಕರೆಯುವವು ಎಂದು ಶಬ್ದವಾಯಿತು. ಆಗ ಅವರೆಲ್ಲರೂ ಕೋಲಂಬೆಯ ಮತ್ತು ಅವಳ ಗೆಳತಿಯರ ತಾಯಿ ತಂದೆಗಳ ಮನೆಗೆ ಬಂದು ಅವರಿಗೆ ಹೇಳಿ ಮಕ್ಕಳೆಲ್ಲರಿಗೂ ತೈಲ ತುಪ್ಪವನ್ನು ಕೊಟ್ಟು ಗುಡಿಸಲಿಗೆ ಕಳಿಸಿ ಅವರು ದೇವರಿಗೆ ಅರ್ಪಿಸುವಂತೆ ಮಾಡಲು ಗ್ರಾಮದಲ್ಲಿಯ ಪಶುಗಳೆಲ್ಲ ಹಾಲು ಕರೆದವು. ಗ್ರಾಮದ ಜನರು ಕೋಲಂಬೆಯ ಭಕ್ತಿ ಭಾವವು ಎಂಥ ಘನತರವಾದದ್ದೆಂಬದನ್ನು ಕಂಡು ಅವರು ಬಹಳ ಆಶ್ಚರ್ಯ ಹೊಂದಿದರು. ಅಂದಿನಿಂದ ಕೋಲಂಬೆಯು ತನ್ನ ಕೆಳದಿಯರೊಡನೆ ಕೂಡಿಕೊಂಡು ತಾನು ನಿರ್ಮಿಸಿದ ಗುಡಿಸಲಿಗೆ ದಿನಾಲು ಹೋಗಿ ದೇವರಪೂಜೆಯ ಆಟವನ್ನಾಡಿ ಬರುವಳು.

ಆದರೆ ಅವಳಿಗೆ ಈ ಆಟವು ಕೇವಲ ವಿನೋದವಾಗಿರಲಿಲ್ಲ. ಆ ಗುಡಿಸಲು, ಆ ಲಿಂಗದ ಕಲ್ಲು, ಆ ದೀಪ, ಆ ನೈವೇದ್ಯ, ಇವೆಲ್ಲವೂ ತನ್ನನ್ನು ನಿಶ್ಚಯವಾಗಿ ಪರಮಾತ್ಮನಲ್ಲಿಗೆ ಒಯ್ಯುವವೆಂಬ ದೃಢಭಾವವು ಅವಳಲ್ಲಿ ಬೇರೂರಿತು. ಹೀಗಿರುವಲ್ಲಿ ದೀಪಾವಳಿಯ ಪಾಡ್ಯದ ದಿವಸ ಕೋಲಂಬೆಯೂ ಅವಳ ಒಡನಾಡಿಗಳೂ ದೇವಪೂಜೆ ಮಾಡುತ್ತಿರುವಾಗ ಒಬ್ಬ ದುರ್ಜನನಾದ ಪೂಜಕನು ತನ್ನ ಗೋವುಗಳನ್ನು ಹೊಡೆದುಕೊಂಡು ಬರುವಾಗ ಆ ಹುಲ್ಲುಗುಡಿಸಲಿನ ಸಮೀಪದಲ್ಲಿಯೇ ಅವುಗಳನ್ನು ತರುಬಿದನು. ಅವನು ಅಲ್ಲಿ ಆಡುವ ಆ ಮಕ್ಕಳನ್ನು ನೋಡಿ, ಇಂಥ ಬಾಲಿಕೆಯರ ಕೈಯಿಂದ ಶಿವನು ಎಂದಾದರೂ ಪೂಜೆಗೊಂಬುವನೇ ? ಈ ಗುಡಿಸಲಿಗೆ ಬೆಂಕಿಹಚ್ಚಿದರೆ ಅದು ಸುಟ್ಟುಹೋಗದೇ ? ಇದನ್ನು ನೋಡುವೆನೆಂದು ಅವನು ಆ ಗುಡಿಸಲಿಗೆ ಕಿಚ್ಚನಿಕ್ಕಿದನು. ಕೂಡಲೆ ಆ ಹುಲ್ಲಿನ ಗುಡಿಸಲಿಗೆ ಭಗ್ಗನೆ ಬೆಂಕಿಹತ್ತಿ ಜ್ವಾಲೆಯು ಸುತ್ತಲೂ ಪಸರಿಸಹತ್ತಿತು. ನೆರೆದ ಮಕ್ಕಳು ಓಡಿ ಮನೆಗೆ ಹೋದವು. ಕಿಚ್ಚನಿಕ್ಕಿದವನ ಗೋವುಗಳು ಬೆದರಿ ಅಡವಿಗೆ ಹೋದವು. ಆದರೆ ಕೋಲಂಬೆಯು ಮಾತ್ರ ಗುಡಿಸಲಿನಿಂದ ಅಲುಗಾಡಲಿಲ್ಲ. ಅವಳು ಹೊರಬಿದ್ದು ಓಡಿಹೋಗಲಿಲ್ಲ. ಪರಮಾತ್ಮನೆದುರಿಗೆ ಕೈಮು

ಗಿದುಕೊಂಡು ನಿಂತುಬಿಟ್ಟಳು. ಆಗ ಆ ಕಿಚ್ಚು ಅವಳನ್ನು ಸಮೀಪಿಸ ಲಿಲ್ಲ. ಅಲ್ಲಿಯೇ ನಂದಿಹೋಯಿತು! ಆದರೆ ಅಷ್ಟರಲ್ಲಿ ಆ ದುರ್ಜನನ ಗೃಹಕ್ಕೆ ಕಿಚ್ಚುಬಿದ್ದು ಅದು ಪಟ್ಟಣದಲ್ಲಿ ಬೆಂದುಹೋಯಿತು. ಆಗ ಪರಮಾತ್ಮನು ಕೋಲಂಬೆಗೆ ಪ್ರತ್ಯಕ್ಷನಾಗಿ ನಿನಗೇನು ಬೇಕು ಬೇಡು ಎಂದು ಕೇಳಲು ಅವಳು ತನ್ನೊಡನಾಡುವ ಮಕ್ಕಳಿಗೆ ಜಯವಾಗಬೇಕು, ವೈಷ್ಣವನ ಗೋವುಗಳಿಗೆ ಮತ್ತು ಅವನ ಮನೆಗೆ ಕ್ಷೇಮವಾಗಬೇಕು, ಎಂದು ಹೇಳಲು ಹಾಗೆಯೇ ಆಗಲೆಂದು ಶಿವನು ಒಲಿದು ವರವನ್ನಿತ್ತನು. ಆ ಕ್ಷಣವೇ ಆ ಹುಲ್ಲು ಗುಡಿಸಲು ಕಲ್ಲುಗುಡಿಯಾಯಿತು. ಅವಳು ಪೂಜಿಸುತ್ತಿದ್ದ ಶಿಲೆ ಲಿಂಗಾಕೃತಿಯಾಯಿತು. ವೈಷ್ಣವನ ಮನೆಯು ಮೊದಲಿನಂತಾಯಿತು. ತನ್ನ ಸುತ್ತಲೂ ಸುಡುತ್ತಿದ್ದ ಆ ಜ್ವಾಲೆಯ ಬೆಳಗು ಶಿವನಿಗೆ ಆರತಿಯಾ ಯಿತು. ಕೋಲಂಬೆಯು ಶಿವನಿಗೆ ಆ ಆರತಿಯನ್ನು ಬೆಳಗುತ್ತ ಎಲ್ಲರಿಗೂ ಕ್ಷೇಮವನ್ನು ಬಯಸಿ, ಶಿವನನ್ನು ಹಾಡುತ್ತ ಅವನೊಡನೆ ಕೈಲಾಸಕ್ಕೆ ಹೋದಳು.

ಪುರಜನರು ಕೋಲಂಬೆಯ ನೆನಪಿಗಾಗಿ ವರ್ಷಕ್ಕೊಂದು ವೇಳೆ 'ಕೋಲಂಬೆಯ ಹಬ್ಬ' ವನ್ನು ಈಗಲೂ ಆಚರಿಸುತ್ತಾರೆ. ಅವಳಿದ್ದ ಜಾತಿ ಗೊಳಪುರಕ್ಕೆ 'ಕೋಲಂಬೆ' ಎಂಬ ಹೆಸರು ಪ್ರಾಪ್ತವಾಗಿ ಆ ಹೆಸರು ಅದಕ್ಕೆ ಈಗಲೂ ಇದೆ.

———

# ೧೯. ಬಾಲ ಲಿಂಗಣ್ಣ

ಕಲ್ಯಾಣ ಪಟ್ಟಣದಲ್ಲಿ ಚಿಕ್ಕಮಾದಣ್ಣನೆಂಬ ಭಕ್ತನು ತನ್ನ ಹೆಂಡತಿ ಮಹಾದೇವಿ ಮತ್ತು ಒಂದು ಚಿಕ್ಕ ಮಗು ಬಾಲಲಿಂಗಣ್ಣ ಇವರೊಡನೆ ವಾಸ ಮಾಡುತ್ತಿದ್ದನು. ಅವರಿಗೆ ಶಿವಶರಣರಲ್ಲಿ ಶ್ರೇಷ್ಠನಾದ ಸಕಳೇಶ ಮಾದರ ಸನೇ ಗುರುವಾಗಿದ್ದನು. ಚಿಕ್ಕ ಮಾದಣ್ಣನು ಲಿಂಗಾರ್ಚನೆಯನ್ನು ಮಾಡುವ ಭಕ್ತರಿಗೆ ದೂರ್ವಾಂಕುರ, ಪತ್ರಿ ಹೂವುಗಳನ್ನು ತಂದು ಕೊಡುವ ಕಾಯಕ ವನ್ನು ಮಾಡುತ್ತಿದ್ದು, ಅತ್ಯಂತ ಬಡತನ ಸ್ಥಿತಿಯಲ್ಲಿದ್ದನು. ಅವನು ಈ ಕಾಯಕದಿಂದ ಬಂದದ್ದನ್ನು ಶರಣರ ಸೇವೆಗೋಸ್ಕರ ಉಪಯೋಗಿಸುತ್ತ ಶಿವಾನುಭವಿಯಾಗಿ ಪಟ್ಟಣದಲ್ಲಿ ಎಲ್ಲರಿಗೂ ಪ್ರಿಯನಾಗಿದ್ದನು. ಅವನು ತನ್ನ ಕ್ರಿಯೆಯಲ್ಲಿ ಹೆಚ್ಚಾಗಿ ಹಣ ಬಂದರೆ ಹಿಗ್ಗದೆ ಕಡಿಮೆ ಬಂದರೆ ತಗ್ಗದೆ, ಯಾವಾಗಲೂ ಸಮಾಧಾನಿಯಾಗಿರುತ್ತಿದ್ದನು. ಮುಂದೆ ತನಗೇನಾಗ ಬಹು ದೆಂಬುದರ ಸಂದೇಹವಿಲ್ಲದೆ ಶಿವಾರ್ಪಣ ಬುದ್ಧಿಯಿಂದ ಅವನು ತನ್ನ ಕ್ರಿಯೆ ಗಳನ್ನು ನಡಿಸುತ್ತ ಬರುತ್ತಿದ್ದನು. ಅವನ ಈ ಆಚರಣೆಯ ರೀತಿಯನ್ನು ಬಿಜ್ಜಳನ ಅರಮನೆಯಲ್ಲಿ ಶ್ರೇಷ್ಠ ಅಧಿಕಾರ ಸ್ಥಾನದಲ್ಲಿದ್ದ ಸೊಡ್ಡಳ ಬಾಚ ರಸನು ಕೇಳಿ ಒಂದುದಿನ ಅವನ ಮನೆಗೆ ಬಂದು ಅವನನ್ನು ಕಂಡು ಮನ್ನಣೆ ಇತ್ತು ಹೋದನು. ಆದರೆ ಹಲವರು ಮಾತ್ಸರ್ಯಬುದ್ಧಿಯಿಂದ 'ಹುಡಿ ಹುಲ್ಲ ತಂದು ಹೆಡಿಗೆ ಬತ್ತ ಪಡೆಯುವವನಾದ ಇವನನ್ನು ನೋಡಿರಿ' ಎಂದು ಅಪ ಹಾಸ್ಯ ಮಾಡುವರು. ಆದರೆ ಚಿಕ್ಕ ಕಮಾದಣ್ಣನು ಅವರ ಮೇಲೆ ಎಷ್ಟು ಮಾತ್ರವೂ ರೋಷವನ್ನು ತಾಳದೆ ತನ್ನ ನಿತ್ಯ ಕಾಯಕವನ್ನು ಅತ್ಯಂತ ಸಮಾಧಾನದಿಂದ ನಡಿಸುತ್ತ ಬಂದನು.

ಹೀಗಿರುವಲ್ಲಿ ಒಂದುದಿನ ಚಿಕ್ಕ ಮಾದಣ್ಣನು ದೂರ್ವಾಂಕುರಕ್ಕೆ ಹೋದ ಸಮಯದಲ್ಲಿ ಶಿವನು ಜಂಗಮ ವೇಷವನ್ನು ಧರಿಸಿಕೊಂಡು ಅವನನ್ನು ಕಂಡು ನಿನ್ನ ಭಕ್ತಿಯನ್ನು ನೋಡಿ ನಾನು ಪ್ರೀತನಾದೆನು. ನೀನು ನನ್ನೊಡನೆ ಕೈಲಾಸಕ್ಕೆ ನಡೆ ಎಂದು ಹೇಳಲು ಅದಕ್ಕೆ ಚಿಕ್ಕ ಮಾದಣ್ಣನು, ನನಗೆ ಕೈಲಾಸವು ಬೇಡ, ಕ್ರಿಯಾಜ್ಞಾನದಿಂದ ಆಚ ರಿಸುವವರಿಗೆ ಕ್ರಿಯಾ ಸಮಾಧಿಯೇ ಅಧಿಕವೆಂದೆನಲು, ಶಿವನು ಆ ಜಂಗಮ ರೂಪವನ್ನು ಬಿಟ್ಟು ತನ್ನ ನಿಜ ರೂಪುದೋರಿ, ಎಲೋ ಚಿಕ್ಕ ಮಾದ ಣ್ಣನೇ ಈಗ ನನ್ನಕೂಡ ನಡೆ, ನಿನಗೆ ಗಣ ಪದವಿಯನ್ನು ಕೊಡುತ್ತೇನೆ,

ಎಂದು ಹೇಳಲು, ಅದಕ್ಕೆ ಚಿಕ್ಕ ಮಾದಣ್ಣನು ಈ ಕಲಿಯುಗದಲ್ಲಿ ಶಿವಾರ್ಪಣದಿಂದ ಕ್ರಿಯೆಯನ್ನು ಮಾಡುವದೇ ಅಧಿಕವು. ಇಂಥವರಿಗೆ ಕ್ರಿಯಾ ಸಮಾಧಿಯೇ ಹೆಚ್ಚಿನದು. ನಿನ್ನ ಪ್ರಸನ್ನತ್ವವು ನನಗೆ ಹೆಚ್ಚಿನದಲ್ಲ, ಎಂದು ನುಡಿಯಲು ಶಿವನು ಹತಾಶನಾಗಿ ಕೈಲಾಸಕ್ಕೆ ಹೊರಟು ಹೋದನು.

ಶಿವಾನುಭವಿಗಳಲ್ಲಿ ನಿರ್ವಾಣ ಸಮಾಧಿ, ಸಚ್ಚಿದಾನಂದ ಸಮಾಧಿ, ನಿರವಯ ಸಮಾಧಿ, ನಿಜ ಶಿವ ಸಮಾಧಿ, ಬಯಲು ಸಮಾಧಿ, ಗೋಳಕ ಸಮಾಧಿ, ಗೋಮುಖ ಸಮಾಧಿ, ಕ್ರಿಯಾ ಸಮಾಧಿ ಎಂದು ಎಂಟು ವಿಧ ಸಮಾಧಿಗಳಿವೆ. ಅವುಗಳಲ್ಲಿ ಕ್ರಿಯಾ ಸಮಾಧಿಯ ವಿವರವು ಹೇಗೆಂದರೆ-

"ಅಷ್ಟಮ ದಲದಲ್ಲಿ ವರ್ತಿಸುವ ಮುಷಣಯ್ಯ ಚಿಕ್ಕಸಾದಯ್ಯಗಳು ಕದಿರೆ ರೇಮಯ್ಯನು, ರಾಘವಾಂಕ ಮೊದಲಾದ ಶರಣರ್ಗೆ ಸದ್ಭಕ್ತಿ ಸ್ಥಲಕ್ಕೆ ಕಾರಣವಾದ ಆಚಾರ ಲಿಂಗಾನುಭಾವವ ಬೋಧಿಸಿ, ಷಡ್ವಿಧ ಸಕೀಲು ಮೊದಲಾದ ಸಮಸ್ತ ಸಕೀಲವನರುಪಿ, ೪೮ ತೆರದರ್ಪಣ ೬೬ ತೆರದರ್ಪಣ ಮೊದಲಾಗಿ ಚತುರ್ವಿಧ ಉದ್ಧರಣೆಯ ಕರುಣಿಸಿ ಸಹಜ ಕ್ರಿಯಾ ಸಮಾಧಿಯ ಪಥವ ತೋರಿದರು ನೋಡಾ" (ಸಂಗನ ಬಸವೇಶ್ವರನ ವಚನ.)

ಈ ವ್ಯಾಖ್ಯೆಯಿಂದ ಯಾರು ಅರ್ಪಣದ ರೀತಿಗಳನ್ನು ತಿಳಿದುಕೊಂಡು ಸತ್ಕ್ರಿಯೆಯಿಂದ ತದ್ಮಾ ಕಾಯಕಗಳನ್ನು ನಡಿಸುತ್ತಾರೋ ಅವರಿಗೆ ಕ್ರಿಯಾ ಸಮಾಧಿಯು ಸಲ್ಲುತ್ತದೆಂದು ತಿಳಿದು ಬರುತ್ತಿದೆ. ಇಂಥವರು ಕಡೆಗೆ ಶೂನ್ಯ ಸ್ಥಿತಿಯನ್ನು ಹೊಂದುತ್ತಾರೆಂದು ಶಿವಾನುಭವದ ತತ್ವವಿದೆ.

ಈ ಪ್ರಕಾರ ಚಿಕ್ಕ ಮಾದಣ್ಣನು ಆಚರಿಸುತ್ತಿರಲು ಅವನಿಗೆ ಅವಸಾನವು ಪ್ರಾಪ್ತವಾಯಿತು. ಆಗ ರಾತ್ರಿಯಾಗಿತ್ತು. ಆದರೂ ಅತ್ಯಂತ ಸಾಧ್ವಿಯಾದ ಅವನ ಹೆಂಡತಿ ಮಹಾದೇವಿಯು ಪಾದೋದಕದಿಂದ ಅವನ ಮೃತ ಶರೀರವನ್ನು ತಾನೇ ತೊಳೆದು, ಅವಯವಗಳಿಗೆಲ್ಲ ವಿಭೂತಿಯನ್ನು ಹೂಸಿ ಮೃತದೇಹವನ್ನು ಒಂದು ಕಂಭಕ್ಕೆ ಒರಗಿಸಿ ಕುಳ್ಳಿರಿಸಿದಳು. ಅವಳು ಎಷ್ಟು ಮಾತ್ರವೂ ದುಃಖಿಸಲಿಲ್ಲ. ಮತ್ತು ನೆರೆಮನೆಯವರನ್ನು ಕರೆಯಲಿಲ್ಲ. ಅವಳು ಸಮಾಧಾನಿಯಾಗಿ ಗಂಡನಿಗೋಸ್ಕರ ಕ್ರಿಯಾ ಸಮಾಧಿಯನ್ನು ರಚಿಸಬೇಕೆಂದು ಒಂದು ಗುದ್ದಲಿಯನ್ನು ತೆಗೆದುಕೊಂಡು ತನ್ನ ಪತಿಯು ನಿತ್ಯ ಲಿಂಗಾರ್ಚನೆ ಮಾಡುತ್ತಿದ್ದ ಸ್ಥಳವನ್ನು ಅಗಿಯ ಹತ್ತಿದಳು. ಹೀಗೆ ಸಮಾಧಿಯನ್ನು ಅಗಿಯುತ್ತಿರಲು ಗುದ್ದಲಿಯು ಸಪ್ಪಳ

ನನ್ನು ಆಕೆಯ ಚಿಕ್ಕ ಮಗುವಾದ ಬಾಲಲಿಂಗಣ್ಣನು ಕೇಳಿ ಎಚ್ಚತ್ತು
ತನ್ನ ತಾಯಿಗೆ ಈ ರಾತ್ರಿಯಲ್ಲಿ ನೀನೇನು ಮಾಡುತ್ತೀ ಎನ್ನುವಷ್ಟರಲ್ಲಿ
ತನ್ನ ತಂದೆಯ ಮೃತದೇಹವನ್ನು ಇದಿರಿಗೆ ಕಂಡು, ಅಪ್ಪನು ಹೀಗೇಕೆ
ಕಂಬಕ್ಕೆ ಒರಗಿ ಕುಳಿತಿದ್ದಾನೆ? ಅವನ ಲಿಂಗಾರ್ಚನೆಯ ಸ್ಥಳದಲ್ಲಿ
ಹೀಗೇಕೆ ಕಂಬಕ್ಕೆ ಒರಗಿ ಕುಳಿತಿದ್ದಾನೆ. ಅವನ ಲಿಂಗಾರ್ಚನೆಯ ಸ್ಥಳ
ದಲ್ಲಿ ಹೀಗೇಕೆ ನೀನು ಅಗಿಯುತ್ತೀ? ಎಂದು ಮರಣವನ್ನು ಅರಿಯದ
ಆ ಚಿಕ್ಕ ಬಾಲಕನು ತನ್ನ ತಾಯಿಗೆ ಕೇಳಲು ಅದಕ್ಕೆ ಆ ಸಾಧ್ವಿಯು
ನಿನ್ನ ತಂದೆಯ ಲಿಂಗಾರ್ಚನೆಗೆ ನೀರು ಬೇಕು, ಅವನಿಗೋಸ್ಕರ ನಾನು
ಇಲ್ಲಿ ಒಗತೆ ತೆಗೆಯುತ್ತೇನೆ, ಎಂದು ಹೇಳಿದಳು. ಅದಕ್ಕೆ ಆ ಮಗು
ಅದಿರಲಿ, ಅಪ್ಪನು ಮುಖವನ್ನೆತ್ತಿ ನನ್ನ ಕೂಡ ಏಕೆ ಮಾತಾಡುವದಿಲ್ಲ?
ಅವ್ವಾ ನಿನ್ನೊಡನೆ ಅವನು ಮುನಿಸು ತಾಳಿರುವನೋ? ಅವನು ಏಕೋ
ಸಿಟ್ಟಾಗಿದ್ದಾನೆ. ಅವನು ಸಿಟ್ಟಾಗುವಂತೆ ನೀನು ಏನಾದರೂ ಮಾಡಿರುವಿಯೋ
ಹೇಗೆ? ನನ್ನಕೂಡ ಯಾವಾಗಲೂ ಮಾತಾಡುವವನು. ನನ್ನ ಕೂಡ ಸಹ
ಏಕೆ ಮಾತಾಡನು? ಅವನ ಸಿಟ್ಟನ್ನು ದೂರ ಮಾಡಲು ಅವನ ಕಾಲಮೇಲೆ
ಬೀಳುತ್ತೇನೆ. ಕಾಲ ಮೇಲೆ ಬಿದ್ದರೆ ಅವನು ಏಳೇಳು ಎಂದು ನನ್ನನ್ನು
ನಿಶ್ಚಯವಾಗಿ ಎಬ್ಬಿಸುವನು. ಎಂದು ಆ ಚಿಕ್ಕ ಬಾಲಕನು ಆ ಮೃತ ಶರೀರ
ದಡಿಯಲ್ಲಿ ಬಿದ್ದನು. ಕೂಡಲೆ ತಾಯಿಯು ತಗ್ಗಿನೊಳಗಿಂದ ತತ್‌ಕ್ಷಣವೇ
ಹೊರಗೆ ಬಂದು, ಅವನ ಅಂಗಿಯನ್ನು ಹಿಡಿದು ಮೇಲಕ್ಕೆ ಎಬ್ಬಿಸಿ ಮಗುವೇ
ಈ ಒಗತೆಯನ್ನು ಅಗಿಯದ ಹೊರ್ತು ನಿನ್ನ ತಂದೆಯ ಸಿಟ್ಟು ಹೋಗದು,
ನೀನು ಮಲಗು, ಎಂದು ಹೇಳಿ ಅವನನ್ನು ಹಾಸಿಕೆಯ ಮೇಲೆ ನಗುತ್ತ ಒರ
ಗಿಸಿ ತಾನು ಸಮಾಧಿಯನ್ನು ಅಗಿಯಲಿಕ್ಕೆ ಹತ್ತಿದಳು.

ಆದರೆ ಅದರಿಂದ ಆ ಬಾಲಕನಿಗೆ ಸಮಾಧಾನವಾಗಲಿಲ್ಲ. ಅವನು ಹಾಸಿ
ಕೆಯಿಂದ ಕೂಡಲೆ ಮೇಲಕ್ಕೆದ್ದು ಘರ್ರನೆ ಮನೆಯ ಬಾಗಿಲನ್ನು ತೆರೆದು
ಹೊರಬಿದ್ದು ಸಕ್ಕಳೇಶ ಮಾದರಸನ ಮಠಕ್ಕೆ ಓಡಿಹೋದನು. ಅಲ್ಲಿಗೆ
ಹೋಗಿ ಮಾದರಸನನ್ನು ಎಬ್ಬಿಸಿ ಅವನಿಗೆ ವಂದಿಸಿ, "ಅಯ್ಯೋ ತಂದೆಯೋ,
ನನ್ನ ಅಪ್ಪನು ಸಿಟ್ಟಾಗಿದ್ದಾನೆ. ಸುಮ್ಮನೆ ಕುಳಿತಿದ್ದಾನೆ. ಅವನು ಅವ್ವನ
ಕೂಡ ಸಹ ಮಾತನಾಡುವದಿಲ್ಲ. ಹಚ್ಚಡವನ್ನು ಮುಸುಕಿಟ್ಟುಕೊಂಡು ಸಿಟ್ಟಾಗಿ
ಕುಳಿತಿದ್ದಾನೆ. ನನ್ನ ತಂದೆಯು ನನ್ನನ್ನು ನೋಡಿದಕೂಡಲೆ ಮುಗುಳು
ನಗೆಯಿಂದ ಮಾತಾಡುವವನು, ನನ್ನನ್ನು ತಡವರಿಸಿ ಪ್ರೀತಿಮಾಡುವವನು

ಈಗ ಸುಮ್ಮನೇ ಸಿಟ್ಟಾಗಿ ಕುಳಿತು ಬಿಟ್ಟಿದ್ದಾನೆ. ತಾವು ಸ್ವಾಮಿಗಳು ತಡಮಾಡದೆ ಮನೆಗೆ ಬರಬೇಕು. ಅವನ ಮುನಿಸನ್ನು ತಿಳುಹಬೇಕು, ಎಂದು ಸಕಳೇಶ ಮಾದರಸನ ಪಾದಕ್ಕೆ ಬಿದ್ದು ಅಳಹತ್ತಲು ಮಾದರಸನು ನಸುನಗುತ, ಚಿಕ್ಕಮಕ್ಕಳೆಷ್ಟು ಸರಳ ಹೃದಯರು! ಈ ಮಗುವಿನ ಮಾತನ್ನು ನಾನು ಮೀರಲಾರೆನು ಎಂದು ಅಂದು ಆ ಮಧ್ಯರಾತ್ರಿಯಲ್ಲಿ ಅವನೊಡನೆ ಚಿಕ್ಕಮಾದಣ್ಣನ ಮನೆಗೆ ಬಂದನು. ಆಗ ಮಹಾದೇವಿಯು ಗುರುವನ್ನು ಕಂಡು ನಮಿಸಿದಳು. ಅವಳಿಂದ ನಿಜಸ್ಥಿತಿಯನ್ನು ಕೂಡಲೆ ತಿಳಿದವನಾಗಿ ಸಕಳೇಶ ಮಾದರಸನು ನಡುಮನೆಗೆ ಬಂದು ಅಲ್ಲಿದ್ದ ಮೃತದೇಹದ ಇದಿರಿಗೆ— 'ಚಿಕ್ಕಮಾದಣ್ಣನೇ ಏಳೇಳು, ನಿನ್ನ ಲಿಂಗಾರ್ಚನೆಗೆ ಏಳು. ಅದರ ಮುಂದೆ ಯಾವ ಸುಖವಿದೆ? ನೀನು ಸಿಟ್ಟಾಗಿದ್ದೀ ಎಂದು ನಿನ್ನ ಬಾಲಕನು ನನ್ನನ್ನು ಕರೆದುಕೊಂಡು ಇಲ್ಲಿಗೆ ಬಂದಿದ್ದಾನೆ. ಇವನನ್ನು ಸಮಾಧಾನಗೊಳಿಸು' ಎಂದು ನುಡಿಯಲು ಆ ಚಿಕ್ಕಮಾದರಸನ ಮೃತಶರೀರದಲ್ಲಿ ಜೀವಕಳೆ ತುಂಬಹತ್ತಿತು. ಆಗ ಅವನು ನಿದ್ದೆಯಿಂದ ಎದ್ದವನಂತೆ ಮೆಲ್ಲಗೆ ಕಣ್ದೆರೆದನು. ಶರೀರವು ಚಲನೆಹೊಂದಿತು. ಅಷ್ಟರಲ್ಲಿ ತನ್ನ ಇದಿರಿಗೆ ಸಕಳೇಶ ಮಾದರಸನನ್ನು ಕಂಡವನಾಗಿ ಎದ್ದು ವಂದಿಸಿದನು. ಆಗ ತಂದೆ, ತಾಯಿ, ಮಗು ಇವರೆಲ್ಲರೂ ಸಂತೋಷಭರಿತರಾಗಿ ಗುರುವಿಗೆ ನಮಸ್ಕರಿಸಿದರು. ಆಗ ಸಕಳೇಶಮಾದರಶನು 'ಜಗತ್ತಿಗೆ ಇದು ಹೊಸತು. ಪರಮಾತ್ಮನು ಮಗುವಿನ ಪಿತೃಭಕ್ತಿಯ ಮೂಲಕ ತಂದೆಗೆ ಪ್ರಾಣವನ್ನು ತಿರುಗಿಕೊಟ್ಟನು. ಮಗುವಿನ ಸೊಲ್ಲು ಪರಮಾತ್ಮನಿಗೆ ಕೇಳಿಸಿತು. ಚಿಕ್ಕಮಕ್ಕಳ ಮಮತೆ, ಅವರ ನಿಷ್ಕಪಟ ಸ್ವಭಾವ, ಇವುಗಳಂತೆಯೇ ಭಕ್ತಿಯ ರೀತಿಯು. ಚಿಕ್ಕಮಾದಣ್ಣನ ಅರ್ಪಣ ಭಾವಯುಕ್ತಕಾಯಕ ಮತ್ತು ಮಹಾದೇವಿಯ ಉಜ್ವಲ ನಿಷ್ಠೆ ಇವುಗಳಿಗೆ ಪರಮಾತ್ಮನು ಪ್ರೀತನಾದನು. ಮತ್ತು ಚಿಕ್ಕಮಾದಣ್ಣನಿಗೆ ಆಸುವನಿತ್ತನು. ಎಂದು ಹೊಗಳುತ್ತ ತನ್ನ ಮಠಕ್ಕೆ ತೆರಳಿದನು.'

ಇತ್ತ ಚಿಕ್ಕ ಮಾದಣ್ಣ, ಮಹಾದೇವಿ, ಮತ್ತು ಬಾಲಲಿಂಗಣ್ಣ ಇವರು ಮುಂದೆ ಶಿವ ಭಕ್ತಿಯನ್ನು ಮಾಡುತ್ತ 'ತಮ್ಮ ಆಚಾರವೆಂಬ ಕ್ರಿಯಾಲಿಂಗದೊಳಗೆ ಕ್ರಿಯಾ ಸಮಾಧಿಯನ್ನೈದಿದರು.

ಚಿಕ್ಕ ಮಾದಣ್ಣನ ಈ ಚರಿತ್ರೆಯಿಂದ ಬಸವಾದಿ ಪ್ರಮಥರ ಕಾಲದಲ್ಲಿ ಒಂದು ಮಾದರೀ ಕುಟುಂಬವು ಹೇಗಿತ್ತೆಂಬುದನ್ನು ನಾವು ತಿಳಿಯಬಹುದಾಗಿದೆ.

———

# ೨೦. ನಾವದಿಗೆಯ ಗುಡ್ಡಮ್ಮ

ಬಸವೇಶ್ವರನ ಕಾಲದಲ್ಲಿ ಶಿವಾನುಭವದ ತತ್ವಗಳು ಜನತೆಯಲ್ಲಿ ಪ್ರಸಾರ ಹೊಂದುತ್ತ ಹೋದ ಹಾಗೆ ಅಂತ್ಯಜ ಮೊದಲ್ಗೊಂಡು ಎಲ್ಲ ಪಂಗಡಗಳ ಜನರಲ್ಲಿ ಶಿವಭಕ್ತಿಯು ಹೆಚ್ಚುತ್ತ ಹೋಯಿತು. ಈ ಭಕ್ತಿಯು ಹೆಚ್ಚಿದ ಹಾಗೆ ಅವರಲ್ಲಿ ಉಚ್ಚ ನೀಚ ಭಾವಗಳು, ಅಸ್ಪೃಶ್ಯತ್ವವು, ಅಳಿದುಹೋಗಹತ್ತಿದವು. ಈ ಉದಾರ ವೃತ್ತಿಯು ಸ್ತ್ರೀಯರಲ್ಲಿ ತುಂಬಾ ಉಂಟಾಯಿತು. ಇದರಿಂದ ಆಗಿನ ಕಾಲದಲ್ಲಿ ಒಂದು ಮಹತ್ತರವಾದ ಸಮಾಜ ಕ್ರಾಂತಿಯು ತಲೆದೋರಿತು. ಈ ಸಂಗತಿಯು ಹೊಲೆಯಳಾದ ನಾವದಿಗೆಯ ಗುಡ್ಡಮ್ಮಯ ಚರಿತ್ರೆಯಿಂದ ತಿಳಿದು ಬರುತ್ತದೆ.

ವಿಜಾಪುರ ಜಿಲ್ಹೆಯ ಮುದ್ದೇಬಿಹಾಳ ತಾಲೂಕಿನಲ್ಲಿ ತಾಳೀಕೋಟಿಯಿಂದ ಈಶಾನ್ಯ ದಿಕ್ಕಿಗೆ ೭ ಮೈಲುಗಳ ಮೇಲೆ ಕಾರಗನೂರು, ಕೋಡಗನೂರು, ನಾವದಿಗೆ ಎಂಬ ಗ್ರಾಮಗಳಿವೆ. ಇಲ್ಲಿ ಪುರಾತನ ಕಾಲದ ಅವಶೇಷಗಳು ಇನ್ನೂ ಇರುತ್ತವೆ. ಇವುಗಳಲ್ಲಿ ನಾವದಿಗೆ ಎಂಬ ಗ್ರಾಮವು ಪುರಾತನ ಕಾಲದಲ್ಲಿ ಬ್ರಾಹ್ಮಣರ ಒಂದು ಮಹತ್ವದ ಅಗ್ರಹಾರವಾಗಿತ್ತು. ಅಂದರೆ ಅಲ್ಲಿ ಬ್ರಾಹ್ಮಣ ಪಂಡಿತರೂ ಜ್ಞಾನಿಗಳೂ ಬಹು ಸಂಖ್ಯಾಕರಾಗಿ ವಾಸಿಸುವ ಸ್ಥಳವಾಗಿತ್ತು. ಇಲ್ಲಿ ಗುಡ್ಡಮ್ಮ ಎಂಬ ಹೆಸರಿನ ಹೊಲೆಯಳು ವಾಸಿಸುತ್ತಿದ್ದಳು. ಅವಳು ಕೇವಲ ಶಿವಭಕ್ತೆಯು, ಸೌರಾಷ್ಟ್ರ ಸೋಮೇಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳವಳು. ಅವಳಲ್ಲಿದ್ದ ಭಕ್ತಿಯ ಮೂಲಕ ಗ್ರಾಮದಲ್ಲಿಯ ಜನರು ಅವಳನ್ನು ಬಹಳ ಆದರಿಸುತ್ತಿದ್ದರು. ಹೀಗಿರಲು ಅವಳಿಗೆ ತೊನ್ನು ಬೇನೆಯು ಬಂದು ಅದು ದಿನ ದಿನಕ್ಕೆ ಅವಳಲ್ಲಿ ಹೆಚ್ಚುತ್ತಲೇ ಹೋಯಿತು.

ಹೀಗಿರಲು ಅವಳು ಒಂದು ದಿನ ಬ್ರಾಹ್ಮಣ ಕೇರಿಯಲ್ಲಿ ಹೋಗುತ್ತಿರುವಾಗ ಅಲ್ಲಿಯ ಬ್ರಾಹ್ಮಣರು ಅವಳಿಗೆ– ನೀನು ಹೊಲತಿಯು, ಮೈ ಕೆಟ್ಟವಳು, ದ್ವಿಜರಿರುವ ಈ ಅಗ್ರಹಾರದಲ್ಲಿ ನಿನ್ನಂಥ ನೀಚ ಕುಲದವಳು ಬರಕೂಡದು, ಎಂದು ಅವಳನ್ನು ತಡೆದು ನಿಂದಿಸಿ ಕೇರಿಯಿಂದ ಹೊರಗೆ ಹಾಕಿಸಿದರು. ಆಗ ಅವಳು ಮನಸ್ಸಿನಲ್ಲಿ ಬಹಳ ನೊಂದುಕೊಂಡು ನಾನು ಇಲ್ಲಿಗೆ ಸೌರಾಷ್ಟ್ರ

ಸೋಮೇಶ್ವರನನ್ನು ಬರಮಾಡಿಕೊಂಡು ನಾನು ಬ್ರಾಹ್ಮಣರ ಈ ಗರ್ವವನ್ನು ಮುರಿಯುವೆನೆಂದು ಪ್ರತಿಜ್ಞೆಯನ್ನು ಮಾಡಿ, ಸೌರಾಷ್ಟ್ರ ಎಂದರೆ ಗುಜರಾಥ ದೇಶಕ್ಕೆ ಹೊರಟಳು. ಅವಳು ಸೋಮೇಶ್ವರನನ್ನು ಧ್ಯಾನಿಸುತ್ತ ದಾರಿ ನಡೆಯುತ್ತ ಹೋಗುವವಳಾದಳು. ಅವಳು ಮಾರ್ಗದಲ್ಲಿ ಅನೇಕ ಕಷ್ಟಗಳನ್ನು ಸಹಿಸಿದಳು. ಚಳಿಗಾಳಿ ಬಿಸಿಲೆನ್ನದೆ ಮಾರ್ಗಕ್ರಮಣ ಮಾಡ ಹತ್ತಿದಳು. ಆಗ ಸೌರಾಷ್ಟ್ರ ಸೋಮೇಶ್ವರನು ಅವಳ ಭಕ್ತಿಗೆ ಮೆಚ್ಚಿ ಅವಳು ಅತ್ಯಂತ ಆಯಾಸಪಟ್ಟು ಬಳಲಿ, ಭೂಮಿಯಲ್ಲಿ ಒರಗಿರಲು ಆಗ ಅವನು ಅವಳಿಗೆ ಪ್ರತ್ಯಕ್ಷನಾಗಿ— ಮಗಳೇ, ನೀನೇಕೆ ಹೀಗೆ ಬಳಲುತ್ತ ಬಂದೆ ? ನಾನೇ ನಿನ್ನಲ್ಲಿಗೆ ಬರುತ್ತಿದ್ದೆ. ನೀನು ಹಿಂದಿರುಗು. ನಾನೇ ನಿನ್ನ ಗ್ರಾಮಕ್ಕೆ ಬರುವೆನು ಎಂದು ನುಡಿದು, ಆಕೆಯ ಮೈದಡಹಿ ಅವಳ ಬಳಲಿಕೆಯನ್ನು ಹೋಗಲಾಡಿಸಿ ಅಂತರ್ಧಾನನಾದನು. ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ. ನಿಶ್ಚಲ ಭಕ್ತಿಯಿಂದ ನೆನೆದಲ್ಲಿಯೇ ಅವನು ತೋರುತ್ತಾನೆಂಬುದನ್ನು ಇಲ್ಲಿ ತಿಳಿಯಬಹುದು. ಆಗ ಗುಡ್ಡವ್ವೆಯು ಪರಮಾತ್ಮನ ಆಜ್ಞೆಯ ಪ್ರಕಾರ ಹಿಂದಿರುಗಿ ನಾವದಿಗಿಗೆ ಮರಳಿ ಬಂದಳು. ಅವಳು ಅಲ್ಲಿಗೆ ಬರುವಷ್ಟರಲ್ಲಿಯೇ ಶಿವನು ಆ ಗ್ರಾಮದಲ್ಲಿಯ ಶಿವಾಲಯದಲ್ಲಿ ಸೌರಾಷ್ಟ್ರ ಸೋಮೇಶ್ವರನ ರೂಪದಲ್ಲಿ ಸ್ಥಾಪ್ಯವಾಗಿರುವದನ್ನು ಕಂಡಳು. ಇಷ್ಟೇ ಅಲ್ಲ, ಅವಳ ತೊನ್ನು ಬೇನೆಯೂ ಕೂಡ ಹೊರಟು ಹೋಗಿ, ಅವಳು ದಿವ್ಯದೇಹಿಯಾಗಿದ್ದಳು. ಅವಳ ತೊನ್ನು ಗ್ರಾಮದಲ್ಲಿ ಅವಳನ್ನು ಮೊದಲು ನಿಂದಿಸಿ ಪೀಡಿಸಿದವರಿಗೆ ಉತ್ಪನ್ನವಾಗಿತ್ತು. ಅದರಿಂದ ಅವರು ಅತ್ಯಂತ ಸಂಕಟದಿಂದ ಬಳಲಹತ್ತಿದ್ದರು. ಆಗ ಅವರು ತಾವು ಒಬ್ಬ ಭಕ್ತೆಗೆ ನಿಂದಿಸಿದ್ದರ ಮೂಲಕ ಹೀಗಾಯಿತೆಂದು ತಿಳಿದು ಅವರು ಗುಡ್ಡವ್ವೆಗೆ ಶರಣು ಹೊಕ್ಕು ಸಾಷ್ಟಾಂಗವೆರಗಲು ಅವರ ಕುಷ್ಠರೋಗವು ಪರಿಹಾರವಾಯಿತು. ಇದರಿಂದ ಗುಡ್ಡವ್ವೆಯ ಶಿವಾನುಭವದ ಮಹತ್ವವನ್ನು ಈ ಗ್ರಾಮದಲ್ಲಿಯವರು ತಿಳಿದು ಅಂದಿನಿಂದ ಅವರು ಅವಳನ್ನು ಅತ್ಯಂತವಾಗಿ ಆದರಿಸುವವರಾದರು. ಅವಳು ಅದೇ ಗ್ರಾಮದಲ್ಲಿ ವಾಸಿಸುತ್ತ, ಅಲ್ಲಿಯ ಸೋಮೇಶ್ವರ ಲಿಂಗದಲ್ಲಿಯೇ ಬಯಲಾದಳು. ಬಸವೇಶ್ವರನ ಕಾಲದಲ್ಲಿ ಅಂತ್ಯಜ ಮೊದಲ್ಗೊಂಡು ಬ್ರಾಹ್ಮಣ ವರ್ಣದವರ ವರೆಗೂ ಎಲ್ಲರಲ್ಲಿ ಶಿವಾನುಭವದ ಉದಾತ್ತ ತತ್ವಗಳು ಹೀಗೆ ಪ್ರಸಾರವಾಗುತ್ತ ನಡೆದಿದ್ದವೆಂಬುದನ್ನು ಗುಡ್ಡವ್ವೆಯ ಈ ಚರಿತ್ರೆಯಿಂದ ತಿಳಿದು ಬರುತ್ತದೆ.

ಓಂ

ಸಂಚಿಕೆ ೧೧ ಸಂಪುಟ ೩೨

# ಶಿವಾನುಭವ

*

ಸಂಪಾದಕರು

ಡಾ. ರಾ. ಬ. ಫ. ಗು. ಹಳಕಟ್ಟಿ,

ಬಿ. ಎ. ಎಲ್; ಎಲ್. ಬಿ.

ವಿಜಾಪುರ.

ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

ನವ್ಹೆಂಬರ ೧೯೫೮.

# ವಿಷಯಾನುಕ್ರಮಣಿಕೆ.




# ವೀರಶೈವ ಮತಪ್ರಚಾರಕ ಸಂಘ.

(ಲೇಖಕಃ— ಶರಣಸೇವಕ.)

ವೀರಶೈವರೆನಿಸಿಕೊಳ್ಳುವವರಿಗೆ ತಮ್ಮ ಮತತತ್ವಗಳ ಅರಿವು ಚೆನ್ನಾಗಿರಬೇಕು. ವೀರಶೈವ ಮತತತ್ವಗಳಾವು? ಎಂದು ಯಾರಾದರೂ ನಮ್ಮನ್ನು ಕೇಳಿದರೆ ನಮಗೆ ಗೊತ್ತಿಲ್ಲವೆಂದು ಹೇಳುವದು ಲಾಂಛನಾಸ್ಪದವು. ಇಲ್ಲವೆ ಸ್ವಾಮಿಗಳನ್ನಾಗಲಿ, ಶಾಸ್ತ್ರಿಗಳನ್ನಾಗಲಿ, ಧಾರ್ಮಿಕ ಗ್ರಂಥಗಳನ್ನಾಗಲಿ ಬೊಟ್ಟುಮಾಡಿ ತೋರಿಸುವದು ನಗೆಗೇಡು ಪ್ರತಿಯೊಬ್ಬರೂ ತಮ್ಮ ಮತದ ತತ್ವಗಳನ್ನರಿತುಕೊಂಡು ಆಚರಿಸಿ ಅನ್ಯರಿಗೆ ಅವುಗಳನ್ನು ತಿಳಿಸಿ ಹೇಳಲು ಸಮರ್ಥರಾಗಿರಬೇಕು. ಅಂದರೆ ನಮ್ಮ ಸಂಸ್ಕೃತಿಯು ಚಿರಕಾಲ ಉಳಿಯುವದು. ಇಲ್ಲದಿದ್ದರೆ ಅದು ನಾಮಶೇಷವಾಗುವದು.

ನಾವು ಕೇವಲ ನಾಮಧಾರಿ ವೀರಶೈವರಾಗಿದ್ದೇವೆ. ಧಾರ್ಮಿಕ ತತ್ವಗಳ ಅಭ್ಯಾಸವಾಗಲಿ, ಅನುಸಂಧಾನವಾಗಲಿ, ಶ್ರವಣವಾಗಲಿ, ನಮಗೆ ಸಾಕಷ್ಟಿಲ್ಲ. ಸುಶಿಕ್ಷಿತರೆನಿಸಿಕೊಳ್ಳುವವರು ವಿಶ್ವವಿದ್ಯಾಲಯಗಳಲ್ಲಿ ಪದವೀ

ಧರರಾಗಿರಬಹುದು. ಆದರೆ ಪರರಿಗೆ ಧಾರ್ಮಿಕ ತತ್ವಗಳ ಸಂಸರ್ಗವೇ ಕಡಿಮೆ. ಸ್ವಾಮಿಗಳೂ ಶಾಸ್ತ್ರಿಗಳೂ ಕಾಶಿ, ಅಲ್ಹಾಬಾದ ಮೊದಲಾದ ವಿದ್ಯಾಪೀಠಗಳಲ್ಲಿ ಕಲಿತು ಘನವಿದ್ವಾಂಸರೆನಿಸಿಕೊಂಡಿರಬಹುದು. ಅಂಥವರಿಗೂ ಕೂಡ ವೀರಶೈವ ಮತತತ್ವಗಳ ಪರಿಚಯವು ತೀರ ಕಡಿಮೆ. ಉಳಿದ ಅಶಿಕ್ಷಿತ ವರ್ಗವಂತೂ ಧಾರ್ಮಿಕ ತತ್ವಗಳಿಂದ ದೂರೇ ಉಳಿದಿರುವದು ಸ್ವಾಭಾವಿಕವು. ನಮ್ಮಲ್ಲಿ ಕೆಲವರು ಕ್ರಿಯೆಯೇ ಪ್ರಾಮುಖ್ಯವೆಂದು ಪಕ್ಕಾ ಮಡಿ, ಮರ್ಮವನರಿಯದ ಲಿಂಗ ಪೂಜೆ ಇತ್ಯಾದಿಗಳಿಗೆ ಮಹತ್ವಕೊಡುತ್ತಿದ್ದಾರೆ. ಬೇರೆ ಕೆಲವರು ಜ್ಞಾನವೇ ಪ್ರಾಮುಖ್ಯವೆಂದು ಅದ್ವೈತ ವೇದಾಂತಿಗಳಾಗಿ ಲಿಂಗೋಪಾಸನೆಯನ್ನು ಧಿಕ್ಕರಿಸುತ್ತಿದ್ದಾರೆ. ಮತ್ತೆ ಕೆಲವರು ಭಕ್ತರನ್ನು ಮೋಸಗೊಳಿಸಲು ಡಂಭಾಚಾರದ ಲಿಂಗಪೂಜೆಯನ್ನೆಸಗುತ್ತಿದ್ದಾರೆ. ಉಳಿದವರನೇಕರು, ಇಂಚಗೇರಿ, ಸಾಯಿಬಾಬಾ, ಅರವಿಂದ, ಆರೂಢ, ವಾರಕರಿ, ಮುನಿಸಮಾಜ, ಮೊದಲಾದ ಪಂಥಗಳಲ್ಲಿ ಸೇರಿ ವೀರಶೈವ ತತ್ವವನ್ನೇ ಕಳೆದುಕೊಂಡುಬಿಟ್ಟಿರುವರು. ನಮ್ಮ ಹೊತ್ತಿಗೆ ಹೇಳುವವರು ಜನರ ಭಾವನೆಯನ್ನು ಲಿಂಗದತ್ತ ಹೊರಳಿಸದೆ ಯಲ್ಲವ್ವ, ಮಾರುತಿ, ಶನಿದೇವರು, ಬನ್ನಿಮಹಾಕಾಳಿ ಮುಂತಾದ ಮೂರ್ತಿಗಳ ಕಡೆಗೆ ಸೆಳೆಯುತ್ತಿದ್ದಾರೆ. ಹೀಗೆಯೇ ಕೈಬಿಟ್ಟರೆ ಇನ್ನು ಸ್ವಲ್ಪೇ ವರ್ಷಗಳಲ್ಲಿ ವೀರಶೈವ ಮತವೂ ಸಂಸ್ಕೃತಿಯೂ ಹೇಳಹೆಸರಿಲ್ಲದೆ ಹಾಳಾಗಿಹೋಗುವ ದುರ್ಧರ ಪ್ರಸಂಗ ಬರಬಹುದು.

ವೀರಶೈವ ಧರ್ಮವು ಕ್ರಮೇಣ ಹ್ರಾಸವಾಗುತ್ತ ನಡೆದಿರುವದನ್ನು ಕಂಡೂ ಕಂಡೂ ನಮ್ಮ ಧರ್ಮದ ಸ್ವಾಮಿಗಳು ಅದರ ಪುನರುಜ್ಜೀವನದ ಕಡೆಗೆ ಲಕ್ಷಗೊಡದಿರುವದು ವಿಷಾದಕರ. ಈಗ ಧರ್ಮ ಪ್ರಸಾರಾರ್ಥ ಎಷ್ಟೋ ಧರ್ಮಗ್ರಂಥಗಳು ಪ್ರಕಟವಾಗಿರಬಹುದು. ಆದರೆ ಅವುಗಳನ್ನು ಓದಿ ತಿಳಿದುಕೊಳ್ಳುವವರೆಷ್ಟು ಜನ? ಮತಪ್ರಸಾರಕ ವರ್ತಮಾನಪತ್ರ, ಮಾಸಿಕಗಳೂ ಹೊರಟಿರಬಹುದು. ಅವುಗಳ ಬಗ್ಗೆ ಆಸ್ಥೆಯುಳ್ಳವರಾರು? ಶಿವಾನುಭವ ಸಮ್ಮೇಲನಗಳೂ, ಪುರಾಣ, ಪ್ರವಚನ ಕೀರ್ತನಾದಿಗಳೂ ಅಲ್ಲಲ್ಲಿ ನಡೆಯುತ್ತಿರಬಹುದು. ಆದರೆ ವೀರಶೈವ ಮತದ ನಿಜತತ್ವಗಳನ್ನರಿತವರೆಷ್ಟು ಜನ? ಅರಿತು ಆಚರಿಸುವವರೆಷ್ಟು ಜನ? ವೀರಶೈವ ಮತಪ್ರಚಾರಕ ಸಂಘಗಳನ್ನು ಸ್ಥಾಪಿಸುವ ಬದಲು ಎಷ್ಟೋ ಸ್ವಾಮಿಗಳ ಲಕ್ಷವು ಹಾಯಸ್ಕೂಲು, ಆರ್ಟ್ಸ್ ಕಾಲೇಜ, ಸಾಯಿನ್ಸ ಕಾಲೇಜ, ಟೆಕನಿಕಲ್ ಕಾಲೇಜ

ಮೆಡಿಕಲ್ ಕಾಲೇಜ, ಸಂಸ್ಕೃತ ಕಾಲೇಜ ಮತ್ತು ಅವವುಗಳಿಗೆ ಅನು ಕೂಲವಾದ ಉಚಿತ ಪ್ರಸಾದನಿಲಯ ಇಂಥ ಸಂಸ್ಥೆಗಳನ್ನು ಸ್ಥಾಪಿಸುವ ದರಲ್ಲಿಯೇ ತಮ್ಮ ಧನ ಮತ್ತು ಉತ್ಸಾಹಗಳನ್ನು ವೆಚ್ಚ ಮಾಡುತ್ತಿದ್ದಾರೆ. ಇವಾದರೂ ಸಮಾಜಕ್ಕೆ ಉಪಯೋಗವಿಲ್ಲವೆಂತಲ್ಲ. ಅವನ್ನು ಸ್ಥಾಪಿಸಬಾರ ದೆಂದೂ ನಾವು ಹೇಳುವದಿಲ್ಲ. ಆದರೆ ವೀರಶೈವರ ಪ್ರಾಣಪ್ರದವಾದ ಧಾರ್ಮಿಕ ತತ್ವ ಪ್ರಚಾರ ಮಾಡಲು ಅಂಥ ಸಂಸ್ಥೆಯೊಂದನ್ನಾದರೂ ನಮ್ಮ ಸ್ವಾಮಿಗಳು ಸ್ಥಾಪಿಸದಿರುವದು ಶೋಚನೀಯ. ಇದು ಜಾತ್ಯತೀತ ಯುಗವೆಂದು ನಾವು ವೀರಶೈವ ಧರ್ಮವನ್ನು ತ್ಯಜಿಸಲೂ ಶಕ್ಯವಿಲ್ಲ. ಅದನ್ನು ಭದ್ರವಾಗಿ ಕಾಪಾಡಿಕೊಳ್ಳಲೂ ನಮಗೆ ಶಕ್ತಿಬಾರದಂತಾಗಿದೆ. ಇಂಥ ವಿಪರೀತ ಪರಿಸ್ಥಿತಿಯಲ್ಲಿ ನಾವು ಅಲೆದಾಡುತ್ತಿದ್ದೇವೆ.

ಈ ಸ್ಥಿತಿಯನ್ನು ಹೋಗಲಾಡಿಸಲು ಜಿಲ್ಹೆಗೊಂದರಂತೆ ವೀರಶೈವ ಮತ ಪ್ರಚಾರ ಸಂಘವನ್ನು ಅವಶ್ಯವಾಗಿ ಸ್ಥಾಪಿಸಬೇಕೆಂಬದು ನಮ್ಮ ಅಭಿಪ್ರಾಯ. ಅದರ ಗೊತ್ತುಗುರಿಗಳೇನು ? ಅದನ್ನು ಸಾಗಿಸಿಕೊಂಡು ಹೋಗುವ ಬಗೆ ಯಾವದು ? ಎಂಬ ಪ್ರಶ್ನೆಗಳುದ್ಭವಿಸುವವು. ಆ ಪ್ರಶ್ನೆಗಳಿಗೆ ಉತ್ತರರೂಪ ವಾಗಿ ಈ ಚಿಕ್ಕ ಲೇಖನದಲ್ಲಿ ಅಲ್ಪ ಪ್ರಯತ್ನವನ್ನು ಮಾಡಲಾಗಿದೆ. ವೀರ ಶೈವ ಮುಖಂಡರ ಲಕ್ಷ್ಯವನ್ನು ಇತ್ತಕಡೆಗೆ ಸೆಳೆಯಬೇಕೆಂಬ ಉದ್ದೇಶದಿಂದ ಈ ಲೇಖವನ್ನು ಬರೆಯಲಾಗಿದೆ.

ವೀರಶೈವ ಮತಪ್ರಚಾರಕ ಸಂಘವು ಜಿಲ್ಹೆಗೊಂದರಂತೆ ಸ್ಥಾಪಿಸ ಲ್ಪಡಬೇಕೆಂದು ಮೇಲೆಯೇ ಹೇಳಿದೆಯಷ್ಟೇ ಅದನ್ನು ಸ್ವಾಮಿಗಳು ಫಂಡು ಕೂಡಿಸಿ ನಡೆಯಿಸಿಕೊಂಡು ಹೋಗಬೇಕು. ಅಲ್ಲಿ ೨ ವರ್ಷಗಳ ಅವಧಿಯ ಅಭ್ಯಾಸ ಕ್ರಮವನ್ನಿಡಬೇಕು. ಮುಲಕೀಪರೀಕ್ಷೆ ಇಲ್ಲವೆ ಎಸ್. ಎಸ್. ಸಿ. ಪರೀಕ್ಷೆ ಪಾಸಾದ ವೀರಶೈವ ವಿದ್ಯಾರ್ಥಿಗಳಿಗೆ ಆ ಸಂಘದಲ್ಲಿ ಪ್ರವೇಶಕ್ಕೆ ಆಸ್ಪದವಿರಬೇಕು. ಮತ್ತು ವ್ಯಾಖ್ಯಾನ, ಕೀರ್ತನ, ಪುರಾಣ ಹೇಳುವ ಕಲೆಯುಳ್ಳ ಪ್ರೌಢ ವೀರಶೈವರಿಗೂ ಅದರಲ್ಲಿ ಪ್ರವೇಶವಿರಬೇಕು. ಈ ಸಂಸ್ಥೆಯಲ್ಲಿ ಕಲಿಸತಕ್ಕ ವಿಷಯಗಳೆಂದರೆ ಪ್ರವಚನ, ವ್ಯಾಖ್ಯಾನ, ಪುರಾಣ ಕೀರ್ತನ, ವೀರಶೈವ ಸಾಹಿತ್ಯ, ಸಂಸ್ಕೃತಿ, ಸಂಗೀತ, ( ಗಾಯನ ವಾದನ ) ಮ್ಯಾಜಿಕ್ ಲ್ಯಾಂಟರ್ನ ಧರ್ಮಬೋಧೆ ಪ್ರಹಸನ, ಧಾರ್ಮಿಕ ವಿಧಾನ ಗಳು ಪಂಚಾಂಗ, ವಿನೋದಪರ ಕಥೆಗಳು ಇತ್ಯಾದಿ.

ಈ ಸಂಸ್ಥೆಯಲ್ಲಿ ಪ್ರವೇಶ ಹೊಂದಿದ ಉಮೇದವಾರರಿಗೆ ಉಚಿತ ವಾಗಿ ಪ್ರಸಾದ, ವಸತಿ, ಶಿಕ್ಷಣಗಳನ್ನೊದಗಿಸಿ ಕೊಡಬೇಕು. ಸದರೀ ವಿಷಯಗಳನ್ನು ಕಲಿಸಲು ಯೋಗ್ಯವಾದ ಅಧ್ಯಾಪಕ ವರ್ಗವೂ ದಿರಬೇಕು. ಇಂಗ್ಲೀಷ, ಸಂಸ್ಕೃತ, ಹಿಂದಿ, ಕನ್ನಡ ಭಾಷೆಗಳಲ್ಲಿ ನಿಷ್ಣಾತನಾದ ಒಬ್ಬ ಪಂಡಿತನನ್ನು ಮುಖ್ಯೋಪಾಧ್ಯಾಯನನ್ನಾಗಿ ನೇಮಿಸಿ ಕೊಳ್ಳಬೇಕು. ಅವನ ಕೈ ಕೆಳಗೆ ಕೀರ್ತನ ಪುರಾಣ ಗಾಯನ ಕಲೆಗಳಲ್ಲಿ ನುರಿಪಡೆ ಹೊಂದಿದ ಶಾಸ್ತ್ರಿಗಳಿಬ್ಬರನ್ನು ನೇಮಿಸಿ ಕೊಳ್ಳಬೇಕು. ಒಬ್ಬ ತಬಲಾಜಿ, ಒಬ್ಬ ಪೇಟಿ ಬಾರಿಸುವವ, ಒಬ್ಬ ಕಾರಕೂನ, ಒಬ್ಬ ಶಿಪಾಯಿ, ಹೀಗೆ ಅವರವರ ವೇತನವನ್ನು ಗೊತ್ತು ಪಡಿಸಿ ಸಿಬ್ಬಂದಿಯನ್ನು ಸಜ್ಜುಗೊಳಿಸಬೇಕು.

ವೀರಶೈವ ಮತ ಪ್ರಚಾರಕ ಸಂಘದ ಒಂದು ಮ್ಯಾನೇಜಿಂಗ ಕಮೀಟಿ ಯಿದ್ದು ಅದಕ್ಕೆ ಒಬ್ಬ ಚೇರಮನ್, ಒಬ್ಬ ಸೆಕ್ರೇಟರಿ ೫ ಜನ ಸದಸ್ಯರಿರ ತಕ್ಕದ್ದು. ಫಂಡು ಕೂಡಿಸಿದ ಸ್ವಾಮಿಗಳು ಅದಕ್ಕೆ ಅಧ್ಯಕ್ಷರಾಗಿರಬೇಕು. ಕಮೀಟಿಯವರು ಸಂಘದ ನೇಮ ಉಪನಿಯಮಗಳನ್ನು ಮಾಡಿಕೊಂಡು ಆ ಪ್ರಕಾರ ಸಂಸ್ಥೆಯನ್ನು ಸಾಗಿಸಿಕೊಂಡು ಹೋಗಬೇಕು. ಪ್ರತಿವರ್ಷ ರಜಿಸ್ಟರ್ಡ ಅಡಿಟರರಿಂದ ಲೆಕ್ಕ ಪತ್ರಗಳ ತಪಾಸಣಿಯಾಗಬೇಕು. ವರು ವರುಷ ವ್ಯವಸ್ಥಾಪಕ ಕಮೀಟಿಯ ಸದಸ್ಯರ ಹೊಸ ಚುನಾವಣಿಯಾಗ ಬೇಕು. ಕಮೀಟಿಯ ಸದಸ್ಯರಲ್ಲಿ ಭಿನ್ನಾಭಿಪ್ರಾಯಗಳುಂಟಾದಲ್ಲಿ ಕೊನೆ ಯನಿರ್ಣಯವು ಅಧ್ಯಕ್ಷರದಾಗಿರಬೇಕು.

ಆಯಾಯ ಕಲಿಸುವ ವಿಷಯಗಳನ್ನು ಕುರಿತು ತಜ್ಞರಿಂದ ಪಠ್ಯ ಪುಸ್ತಕಗಳನ್ನು ಬರೆಯಿಸಬೇಕು. ಆ ಪುಸ್ತಕಗಳನ್ನು ಕನಿಷ್ಠ ೧೦ವರ್ಷ ಕ್ಕಿಂತ ಮುಂಚಿತವಾಗಿ ಬದಲಾಯಿಸ ಬಾರದು. ಎರಡೂ ವರ್ಷಗಳಿಗೂ ಕೂಡಿ ಪ್ರವಚನ ಗ್ರಂಥವು ೫೦೦ ಉತ್ತಮ ವಚನಗಳಿಂದ ಕ್ರೋಡೀಕೃತ ವಾಗಿರಬೇಕು. ವ್ಯಾಖ್ಯಾನ ಗ್ರಂಥವು ಸಾಂಸ್ಕೃತಿಕ ಧಾರ್ಮಿಕ ವಿಷಯ ಗಳನ್ನೊಳಕೊಂಡು ೨೫ ವ್ಯಾಖ್ಯಾನಗಳಿಂದ ಕೂಡಿಕೊಂಡಿರಬೇಕು. ಪುರಾ ಣಗಳಲ್ಲಿ ಯೋಗ್ಯವಾದವುಗಳನ್ನಾರಿಸಿ ಸಂಗ್ರಹಿಸಿ ಒಟ್ಟು ೧೦ ಪುರಾಣಗ ಳನ್ನು ಮುಗಿಸಬೇಕು. ಕೀರ್ತನ ಗ್ರಂಥದಲ್ಲಿ ಒಟ್ಟು ೧೦ ಉತ್ತಮ ಕೀರ್ತನೆಗಳನ್ನು ಸೇರ್ಪಡಿಸಬೇಕು. ವೀರಶೈವ ಸಾಹಿತ್ಯ ಸಂಸ್ಕೃತಿಯ ಬಗ್ಗೆ ಬೇರೆ ಬೇರೆ ೧೦ ಜನರ ಲೇಖನಗಳನ್ನು ಆರಿಸಿ ಅವುಗಳನ್ನು ಸೇರಿಸಿ

ಗ್ರಂಥರೂಪವಾಗಿ ಮುದ್ರಿಸಬೇಕು. ಧರ್ಮಬೋಧೆಯಲ್ಲಿ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳನ್ನೊಳಕೊಂಡ ಗ್ರಂಥವೊಂದನ್ನು ಅಚ್ಚುಹಾಕಿಸಬೇಕು. ಸುಮಾರು ೧೦ಜನ ಶಿವಶರಣರ ಜೀವನ ಚರಿತ್ರೆಯನ್ನು ಚಿತ್ರಿಸುವ ಸ್ಲಾಯಿಡುಗಳನ್ನು ತಯಾರಿಸಿ ಮ್ಯಾಜಿಕ್‌ಲ್ಯಾಂಟರ್ನ ವ್ಯಾಖ್ಯಾನಕ್ಕೆ ಅನುಕೂಲ ಮಾಡಿ ಕೊಡಬೇಕು. ಉತ್ತಮ ಕೀರ್ತನಕಾರರು ನಡು ನಡುವೆ ಹೇಳುತ್ತಿರುವ ೧೦೦ ಅಡ್ಡ ಕತೆಗಳನ್ನು ಸಂಗ್ರಹಿಸಿ ಒಂದು ಗ್ರಂಥವನ್ನು ಪ್ರಕಟಿಸಬೇಕು. ಅಲ್ಲದೆ ಬೇರೆ ಬೇರೆ ಭಾಷೆಗಳಲ್ಲಿ ಪ್ರಸಿದ್ಧಿ ಹೊಂದಿದ ೧೦೦ ಬೇರೆ ಕಥೆಗಳನ್ನು ಸಂಗ್ರಹಿಸಿ ಮತ್ತೊಂದು ಗ್ರಂಥವನ್ನು ಪ್ರಕಟಿಸಬೇಕು. ಈ ಕಥೆಗಳು ಕೀರ್ತನಕಾರರಿಗೂ, ಪುರಾಣಿಕರಿಗೂ, ಉಪನ್ಯಾಸಕರಿಗೂ ಬಹಳ ಉಪಯೋಗಬೀಳುತ್ತವೆ. ಧಾರ್ಮಿಕ ವಿಧಾನ (ಗ್ರಂಥವೆಂದರೆ ನಾಮಕರಣ, ಲಿಂಗಧಾರಣ, ವಿವಾಹ, ಅಂತ್ಯವಿಧಿ, ರುದ್ರಾಭಿಷೇಕ, ಲಿಂಗಪೂಜಾ ಇತ್ಯಾದಿ ವಿಧಾನಗಳನ್ನು ಕುರಿತು ಕನ್ನಡ ಭಾಷೆಯಲ್ಲಿ ಒಂದು ಗ್ರಂಥವನ್ನು ಸಿದ್ಧಪಡಿಸಬೇಕು. ಪಂಚಾಂಗ ಗ್ರಂಥವಲ್ಲಿ ವಾರ, ತಿಥಿ, ನಕ್ಷತ್ರ, ಯೋಗ, ಕರಣ ಮುಂತಾದವುಗಳ ಮಾಹಿತಿಯನ್ನೊಳಕೊಂಡ ಚಿಕ್ಕ ಗ್ರಂಥವನ್ನು ಮುದ್ರಿಸಿ ಪಂಚಾಂಗ ನೋಡಿ ಹೇಳಲು ಉಮೇದವಾರನು ಸಮರ್ಥನಾಗುವಂತೆ ಮಾಡಬೇಕು. ಒಂದು ಧಾರ್ಮಿಕ ವಾಚನಾಲಯವನ್ನೇರ್ಪಡಿಸಿ ಅಲ್ಲಿ ಅನೇಕ ಗ್ರಂಥಗಳನ್ನು ಸಂಗ್ರಹಿಸಿಟ್ಟು ಉಮೇದವಾರರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸಿ ಜ್ಞಾನಾಭಿವೃದ್ಧಿಗೆ ಅವಕಾಶ ಕಲ್ಪಿಸಿಕೊಡಬೇಕು.

ಈ ಪ್ರಕಾರ ಎರಡು ವರುಷದ ಅವಧಿಯುಲ್ಲಿ ಆಯಾಯ ವಿಷಯುಗಳಲ್ಲಿ ನುರಿಪಡೆಹೊಂದಿದ ಉಮೇದವಾರರನ್ನು ಚನ್ನಾಗಿ ಪರೀಕ್ಷಿಸಿ ಅವರಿಗೆ ಸರ್ಟಿಫಿಕೇಟ ಕೊಟ್ಟು ಮತ ಪ್ರಚಾರಕರನ್ನಾಗಿ ನೇಮಿಸಿ ಹಳ್ಳಿಹಳ್ಳಿಗೆ ಕಳಿಸಿಕೊಡಬೇಕು' ಅವರ ವೇತನವನ್ನು ಗೊತ್ತುಪಡಿಸಬೇಕು. ಹೀಗೆ ಮಾಡಿದರೆ ನಮ್ಮಲ್ಲಿ ಶೀಘ್ರವಾಗಿ ಧಾರ್ಮಿಕ ಜಾಗ್ರತಿಯಾಗುವದೆಂದು ನಮ್ಮ ನಂಬಿಗೆ.

———

# ಅಕ್ಕಂಗೆ ಕರೆ

ಬಾರವ್ವ ಶ್ರೀದೇವಿ ಬಾ ಎನ್ನ ಮಾತೋಶ್ರೀ ।
ಬಾರಕ್ಕ ಮಹದೇವಿ ನೀ ॥ಪ॥

ನಿನ್ನಯ ಬಳಗಗಳು ದೇವಿ ।
ದಿಕ್ಕು-ದಿಕ್ಕಿಗೆ ಹಬ್ಬಿಹವು ।
ಅಕ್ಕರದಿ ನೋಡಲ್ಕೆ ಅಕ್ಕ ಮಹಾದೇವಿ ।
ತ್ವರಿತದಿ ಬೇಗನೇ ಬಾ ॥೧॥

ಶಿಶುವಾದ ನಮಗೆ ನೀನು ದೇವಿ ।
ಶಿವಪಥದ ಮಾರ್ಗವರುಹು ।
ಅನುದಿನ ನಮ್ಮನ್ನು ಶಿವಪೂಜೆ ।
ಶಿವಧ್ಯಾನ ಶಿವಯೋಗಾನಂದದಲ್ಲಿರಿಸು ॥೨॥

ನಿನ್ನಯ ನಡತೆಗಳು ದೇವಿ ।
ನಮ್ಮಲ್ಲಿ ನೆಲೆಗೊಳ್ಳಲಿ ।
ನಿನ್ನಂತೆ ನಾವೆಲ್ಲ ನಿತ್ಯ ।
ನಿಜಸುಖಿಯಾಗಿ ನಿರುತದಿ ಬಾಳೆಂದು ಹರಿಸು ॥೩॥

ಶರಣ-ಶರಣೆಯರೆಲ್ಲರೂ ನಾವು ।
ಸೆರಗೊಡ್ಡಿ ಬೇಡುವೆವು ।
ಶರಣು-ಶರಣೆಂದು ಬರುವ ನಮಗೆ ನೀನು ನಿನ್ನಯ ತೋರು
ಶ್ರೀಚರಣವ ॥೪॥

— ಶ್ರೀಮತಿ ಲೀಲಾವತಿ ಹೋಳೀಶೆಟ್ಟಿ,
ಮು.- ವೈದರಗಿ, ಜಿ.-ಸೊಲ್ಲಾಪುರ.

# ಹೆಸರೆನು ಇಡೋಣ ಬಾ!

ಜೋ ಜೋ ಎಂದು ಹಾಡುತ ನಾವು ತೊಟ್ಟಿಲ ತೂಗೋಣ ಬಾ ।
ಮುತ್ತೈದೆಯರೆಲ್ಲರು ಹರುಷದಿ ನಾವು ಹೆಸರನು ಕರೆಯೋಣ ಬಾ ।
ಕನ್ನಡ ನಾಡಿಗೆ ಕರ್ನಾಟಕವೆಂದು ಹೆಸರನು ಇಡೋಣ ಬಾ ।
ನಾವೆಲ್ಲರು ಕೂಡಿ ಹೆಸರನು ಇಡೋಣ ಬಾ ॥೧॥

ಭಕ್ತ ಬಸವರಸನ ಭಕ್ತಿಯ ಕುರುಹದ ಹೆಸರನು ಇಡೋಣ ಬಾ ।
ಅಕ್ಕ ಮಹಾದೇವಿಯ ನಿಶ್ಚದ ಶೀಲದ ಹೆಸರನು ಇಡೋಣ ಬಾ ।
ಕನ್ನಡ ನಾಡಿಗೆ ಕರ್ನಾಟಕವೆಂದು ಹೆಸರನು ಇಡೋಣ ಬಾ ।
ನಾವೆಲ್ಲರು ಕೂಡಿ ಹೆಸರನು ಇಡೋಣ ಬಾ ॥೨॥

ವಿಜಯನಗರದಿಂದ ವಿಜಯವಪಡೆದಂತ ಹೆಸರನು ಕರೆಯೋಣ ಬಾ ।
ಕಿತ್ತೂರಿನಿಂದ ಕೀರ್ತಿಯ ಪಡೆದಂತ ಹೆಸರನು ಕರೆಯೋಣ ಬಾ ।
ಕನ್ನಡ ನಾಡಿಗೆ ಕರ್ನಾಟಕವೆಂದು ಹೆಸರನು ಇಡೋಣ ಬಾ ।
ನಾವೆಲ್ಲರು ಕೂಡಿ ಹೆಸರನು ಇಡೋಣ ಬಾ ॥೩॥

ಪಂಪ ರನ್ನರಿಂದ ಪಾಡಿಸಿಕೊಂಡಂತ ಹೆಸರನು ಇಡೋಣ ಬಾ ।
ಕುಮಾರ ವ್ಯಾಸರಿಂದ ಮೆರೆಯಿಸಿಕೊಂಡಂತ ಹೆಸರನು ಇಡೋಣ ಬಾ ।
ಕನ್ನಡನಾಡಿಗೆ ಕರ್ನಾಟಕವೆಂದು ಹೆಸರನು ಇಡೋಣ ಬಾ ।
ನಾವೆಲ್ಲರು ಕೂಡಿ ಹೆಸರನು ಇಡೋಣ ಬಾ ॥೪॥

ಕರಿನೆಲದಿಂದ ಮೆರೆದಂತ ನಾಡಿಗೆ ಹೆಸರನು ಇಡೋಣ ಬಾ ।
ಕನ್ನಡಿಗರೆಲ್ಲರು ಒಂದು ಎಂದರ್ಥದ ಹೆಸರನು ಇಡೋಣ ಬಾ ।
ಕನ್ನಡನಾಡಿಗೆ ಕರ್ನಾಟಕವೆಂದು ಹೆಸರನು ಇಡೋಣ ಬಾ ।
ನಾವೆಲ್ಲರು ಕೂಡಿ ಹೆಸರನು ಇಡೋಣ ಬಾ ॥೫॥

—ಕೆ. ಡಿ. ನಾಡಗೌಡ,
ಹುಣಶೀಕಟ್ಟಿ,
ಜಿ.- ಬೆಳಗವ.

# ಪೂಜೆ ಏತಕೆ?

ನನ್ನ ಭಕ್ತಿ ದೇವನ ಮೇಲಿದ್ದರೆ ಸಾಕು ।
ದೇವನ ಕರುಣೆ ಎನ್ನ ಮೇಲಿದ್ದರೆ ಸಾಕು ॥
ಮನಸ್ಸೊಂದು ಸ್ವಚ್ಛವಿದ್ದರೆ ಸಾಕು ।
ದೇವನಿಗೇತಕೆ ಪೂಜೆಽಽ ಬಿಡು ಮಾನವಾಽ ॥೧॥

ದೇವನಿಹನು ಎಲ್ಲ ಕಡೆಯಲಿ ।
ದೇವನಿಹನು ನೋಡಿದಲ್ಲಿಽ ॥
'ದೇವ' ಒಂದೇ ಅವತಾರದಲಿಲ್ಲ ।
ದೇವನಿಗೇತಕೆ ಪೂಜೆಽ ಬಿಡು ಮಾನವಾಽ ॥೨॥

ದೇವನೊಬ್ಬನೆ ಎಲ್ಲ ಕಡೆಯಲಿ ।
ಏತಕೆ ಬೇಕು ಪುಣ್ಯ ಕ್ಷೇತ್ರಽ ॥
ಅವನ ಪಾದದ ಮೇಲೆ ಬಿದ್ದ ಪಾಪಿ ।
ಅವನ ನೆನೆದರೆ ಪೂಜೆ ಏತಕೆಽ ಬಿಡು ಮಾನವಾಽ ॥೩॥

ಶಿವನ ನಾಮವು ಎನ್ನ ಬಾಯಲಿ ಇದ್ದರೆ ಸಾಕು ।
ಡಾಂಭಿಕ ಪೌಳಿನ್ನಾತಕೆ ಬೇಕುಽಽ ॥
ಪೂಜೆ-ಪುರಸ್ಕಾರಗಳಿನ್ನಾತಕೆಽ ಬೇಕು ।
ಶಿವನ ನೆನೆದರೆ ಪೂಜೆ ಏತಕೆಽ ಬಿಡು ಮಾನವಾಽ ॥೪॥

—ಬಸವಪ್ರಭು ರಾಮಗೌಡಾ ಪಾಟೀಲ.
ಯಲ್ಲಾಪೂರ. ( ಜಿ. ಬೆಳಗಾಂವಿ. )

ಒಂದು ಕಾಲದಲ್ಲಿ ಗುಜರಾಥ ದೇಶಕ್ಕೂ ಕರ್ನಾಟಕಕ್ಕೂ ನಿಕಟ ಸಂಬಂಧವಿತ್ತು. ಆದ್ದರಿಂದ ಅನೇಕ ಶಿವಶರಣರು ಸೋಮನಾಥನ ಭಕ್ತರಾಗಿ ಅಲ್ಲಿಗೆ ಅವರು ಆಗಿಂದಾಗ್ಗೆ ಪ್ರವಾಸಮಾಡಿ ಬರುತ್ತಿದ್ದುದು ಕಂಡು ಬರುತ್ತದೆ. ಇದು ಆದಯ್ಯ, ಸೊಡ್ಡಳ ಬಾಚರಸ, ಮುಂತಾದ ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಇದರಿಂದ ಕರ್ನಾಟಕದಲ್ಲಿ ಅನೇಕ ಕಡೆಗೆ ಸೌರಾಷ್ಟ್ರ ಸೋಮನಾಥನ ಹೆಸರಿನಿಂದ ಸೋಮನಾಥನ ದೇವಾಲಯಗಳು ಉಂಟಾಗಿವೆ.

---

## ೨೧. ವೀರಮ್ಮ

ವಚನಕಾರರಾದ ಶಿವಶರಣರ ಪತ್ನಿಯರಲ್ಲನೇಕರು ತಮ್ಮ ಗಂಡಂದಿರಂತೆ ಜ್ಞಾನಿಗಳಾಗಿ ವಚನಗಳನ್ನು ರಚಿಸಿದ್ದು ಕಂಡುಬರುತ್ತದೆ. ವೀರಶೈವರಲ್ಲಿ ಸ್ತ್ರೀಪುರುಷ ಭೇದವಿಲ್ಲ. ಸ್ತ್ರೀಯರು ಪುರುಷರಂತೆಯೇ ಶಿವಾನುಭವವನ್ನು ತಿಳಿದು ಲಿಂಗಾಂಗ ಸಾಮರಸ್ಯ ಜ್ಞಾನವನ್ನು ಹೊಂದಲು ಅಧಿಕೃತರಾಗಿದ್ದಾರೆ. ಶಿವಾನುಭವವನ್ನು ಬಲ್ಲ ವೀರಶೈವ ಸ್ತ್ರೀಯರಲ್ಲಿ ವೀರಮ್ಮನು ಒಬ್ಬಳಾಗಿದ್ದಾಳೆ. ಅವಳು ನಾವು ಹಿಂದೆ ವಿವರಿಸಿದ ದಸರಯ್ಯನ ಪತ್ನಿಯು. ಅವಳು ವಚನಕಾರಳು. ಅವಳ ವಚನಗಳಲ್ಲಿ ನಮಗೆ ಮೂರು ವಚನಗಳು ಮಾತ್ರ ದೊರೆತಿರುತ್ತವೆ. ಅವುಗಳಲ್ಲಿ ಅವಳು ಪಾದೋದಕ ಪ್ರಸಾದದ ವಿವರಗಳನ್ನು ಸವಿಸ್ತಾರವಾಗಿ ನಿರೂಪಿಸಿದ್ದಾಳೆ. ಅವುಗಳನ್ನು ನಾವು ಇಲ್ಲಿ ಸಮಗ್ರವಾಗಿ ಕೊಟ್ಟಿದ್ದೇವೆ.

### ವಚನಗಳು.

(೧) ಗುರುಮುಖದಿಂದ ಬಂದುದೇ ಗುರುಪ್ರಸಾದ. ಆ ಪ್ರಸಾದವನು ಲಿಂಗಕ್ಕೆ ಅರ್ಪಿಸಿದಲ್ಲಿ ಲಿಂಗಪ್ರಸಾದ. ಭೋಜ್ಯ ಕಟ್ಟಿ ಲಿಂಗಕ್ಕೆ ಕೊಟ್ಟು ಸಲಿಸುವುದೇ ಜಂಗಮ ಪ್ರಸಾದ. ತತ್ಪ್ರಸಾದಿಗಳಲ್ಲಿ ಯಾಚಿಸಿ ಅವರ ಪ್ರಸಾದವ ಕೊಂಬುದೇ ಪ್ರಸಾದಿಯ ಪ್ರಸಾದ. ಅಪೇಕ್ಷೆಯಿಂದ ಸಲಿಸುವುದೇ ಆಪ್ಯಾಯನ ಪ್ರಸಾದ. ಗುರು ಲಿಂಗ ಜಂಗಮವ ಕಂಡು ಆ ಸಮಯದಲ್ಲಿ ತೆಗೆದುಕೊಂಬುವುದೇ ಸಮಯ ಪ್ರಸಾದ. ಪಂಚೇಂದ್ರಿಯಂಗಳಲ್ಲಿ

ಪಂಚವಿಷಯ ಪದಾರ್ಥಂಗಳನು ಪಂಚವಿಧಲಿಂಗಕ್ಕೆ ಸಮರ್ಪಣ ಮಾಡು ವುದೇ ಪಂಚೇಂದ್ರಿಯ ವಿರಹಿತ ಪ್ರಸಾದ. ಮನವೇ ಲಿಂಗ. ಬುದ್ಧಿಯೇ ಶಿವಜ್ಞಾನ, ಚಿತ್ತವೇ ಶಿವದಾಸೋಹ, ಅಹಂಕಾರದಲ್ಲಿ ಶಿವಚಿಂತನೆಯುಳ್ಳ ವನಾಗಿ ಸಲಿಸಿದ್ದೇ ಅಂತಃಕರಣ ವಿರಹಿತ ಪ್ರಸಾದ. ತ್ರಿವಿಧಾಂಗದಲ್ಲಿ ತ್ರಿವಿಧ ಲಿಂಗವ ಸಂಬಂಧಿಸಿ ಆ ಚಿದ್ಘನಲಿಂಗ ತಾನೆಂದರಿದು ಆ ತ್ರಿವಿಧ ಲಿಂಗಕ್ಕೆ ಕೊಡುವುದೇ ಸದ್ಭಾವ ಪ್ರಸಾದ. ಬಹಿರಂಗದ ಪ್ರಪಂಚವ ನಷ್ಟ ಮಾಡಿ ಅರಿವುವಿಡಿದು ಸಲಿಸುವುದೇ ಸಮತಾಪ್ರಸಾದ. ಶ್ರೀಗುರುವಿನ ಪ್ರಸನ್ನ ತ್ವವೇ ಜ್ಞಾನಪ್ರಸಾದ. ಇಂತೀ ಏಕಾದಶ ಪ್ರಸಾದವನು ಒಳಹೊರಗೆ ಪರಿ ಪೂರ್ಣವಾಗಿ ತಿಳಿಯುವುದೇ ಶಿವತಂತ್ರ, ಗುರುಶಾಂತೇಶ್ವರಾ

(೨) ಪಾದದಲ್ಲಿ ಪಾದೋದಕ. ಆ ಪಾದ ತೀರ್ಥವನು ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬ ಇಚ್ಛೆ ಹುಟ್ಟಿದಲ್ಲಿ ಲಿಂಗೋದಕ. ಮಜ್ಜನಕ್ಕೆರೆ ದಲ್ಲಿ ಮಜ್ಜನೋದಕ. ಜಿಹ್ವೆಯಲ್ಲಿ ಪಂಚಾಂಗುಲದಿ ಸ್ವೀಕರಿಸಿದ್ದೇ ಸ್ಪರ್ಶ ನೋದಕ. ಎಚ್ಚರಿಕೆ ಸಾವಧಾನದಿಂದ ಸೇವಿಸಿದ್ದೇ ಅವಧಾನೋದಕ. ಸಲಿಸಿ ಸಂತೋಷವಾದರೆ ಆಪ್ಯಾಯನೋದಕ. ಹಸ್ತದೊಳಗಿರ್ದ ತೀರ್ಥವನು ಸಲಿ ಸಿದ್ದೇ ಹಸ್ತೋದಕ. ಆ ಬಟ್ಟಲಲ್ಲಿದ್ದ ತೀರ್ಥವನು ಮೂರುಸಲ ಸ್ವೀಕರಿ ಸಿದ್ದೇ ಪರಿಣಾಮೋದಕ. ಆ ಪಾದೋದಕವನು ಅಂತಿಂತೆಂದು ಹೆಸರಿಡಲಿ ಲ್ಲವಾಗಿ ನಿರ್ನಾಮೋದಕ. ಬ್ರಹ್ಮರಂಧ್ರದಲ್ಲಿರ್ದುದೇ ಚಿದಮೃತವೆಂದು ಭಾವಿ ಸುವುದೇ ಸತ್ಯೋದಕ. ಇಂತೀ ದಶವಿಧ ಪಾದೋದಕವನು ಎನ್ನಂತರಂಗ ದಲ್ಲಿ ತಿಳಿದು ನಾನು ಸದ್ಯೋನ್ಮುಕ್ತನಾದೆನಯ್ಯಾ ಗುರುಶಾಂತೇಶ್ವರಾ.

(೩) ಚರಣಾಯುಧವು ವೇಳೆಯ ನರಿವುದಯ್ಯಾ. ಭಕ್ತ ವ್ರತಹೀನ ನೆಂದರಿದು ನೆರೆಯನಯ್ಯಾ. ನೆರೆದರೆ ನರಕ ಗುರುಶಾಂತೇಶ್ವರಾ.

———

## ೨೨. ಸತ್ಯಕ್ಕ.

ಮೈಸೂರು ಪ್ರಾಂತದಲ್ಲಿರುವ ಶಿವಮೊಗ್ಗೆ ಜಿಲ್ಹೆಯಲ್ಲಿ ಶಿರಾಳ ಕೊಪ್ಪದಿಂದ ೪ ಮೈಲು ದೂರವಾಗಿ ಹಿರೇ ಜಂಬೂರು ಎಂಬ ಗ್ರಾಮವಿದೆ. ಇದು ಬಸವೇಶ್ವರನ ಕಾಲದಲ್ಲಿ ಶಿವಶರಣರ ಆವಾಸ ಸ್ಥಾನವಾಗಿತ್ತು. ಈ ಗ್ರಾಮದಲ್ಲಿ ಸತ್ಯಕ್ಕನೆಂಬ ಶಿವಶರಣೆಯು ವಾಸವಾಗಿದ್ದಳು. ಅವಳು ಕೇವಲ ಶಿವಭಕ್ತೆಯಾಗಿ ಶಿವಭಕ್ತರ ಅಂಗಳವನ್ನು ಉಡಿಗಿ ಅವರ ಮನೆಯ ಸಮ್ಮಾರ್ಜನೆಯನ್ನು ಮಾಡುತ್ತ ಅವರು ಕೊಟ್ಟುದರ ಮೇಲೆ ಉಪಜೀವಿಸುತ್ತಿದ್ದಳು. ಇದೇ ಅವಳ ಕಾಯಕವಾಗಿತ್ತು. ಅವಳು ಶಿವಾನುಭವ ಜ್ಞಾನವನ್ನು ಹೊಂದಿ ಭಸ್ಮ ರುದ್ರಾಕ್ಷಿ ಶಿವ ಮಂತ್ರ ಸ್ಮರಣೆಯಿಂದ ತನ್ನ ಕಾಯಕವನ್ನು ನಿಶ್ಚಲ ಬುದ್ಧಿಯಿಂದ ಮಾಡುತ್ತ ಬರುವಳು. ಅವಳು ಶಿವನೊಬ್ಬನೇ ದೇವರೆಂದು ಭಾವಿಸಿ ಅನ್ಯ ಶಬ್ದಗಳನ್ನು ಕೇಳುತ್ತಿದ್ದಿಲ್ಲ. ಅನ್ಯ ದೇವತಾ ಪೂಜೆಯನ್ನು ಎಂದೂ ಮಾಡಳು. ಹೀಗಿರಲು ಒಂದು ದಿನ ಶಿವನು ಅವಳ ಮನಸ್ಸನ್ನು ನೋಡಬೇಕೆಂದು ಅಪೇಕ್ಷಿಸಿ ಕಂಥೆ ಕಮಂಡಲು, ದಂಡಕೋಲು ಗುಂಡುಗಪ್ಪರವೆರಿಸಿ ಭಿಕ್ಷುಕ ವೃತ್ತಿಯಿಂದ ಬಂದು ಸತ್ಯಕ್ಕನ ಮನೆಯ ಮುಂದೆ ನಿಂದಿರಲು ಸತ್ಯಕ್ಕನು ಹುಟ್ಟಿನಿಂದ ಭಿಕ್ಷವನ್ನು ತಂದು ನೀಡಲಾಗಿ ಆ ಜಂಗಮನ ಜೋಳಿಗೆಯು ಹರಿದದ್ದರಿಂದ ಅದರೊಳಗಿಂದ ಕಾಳುಗಳು ನೆಲಕ್ಕೆ ಬೀಳಹತ್ತಿದವು. ಆಗ ಆ ಜಂಗಮನು— ಅದಕ್ಕೆ ಅಯ್ಯೋ, ಕಾಳು ಹರಿದ ಹರಿಯಿಂದ ನೆಲಕ್ಕೆ ಬಿದ್ದಿತು. ಜೋಳಿಗೆಯಾಚೆಲಿ ಹರಿ, ಹರಿಯಿಂದೆ ಭಿಕ್ಷೆ ಸೂಸಿತ್ತು, ಎಂದೆನಲು ಸತ್ಯಕ್ಕನು ಜಂಗಮನು ಬುದ್ಧಿ ಪೂರ್ವಕವಾಗಿ ಹೀಗೆ ಹರಿ ಶಬ್ದವನ್ನು ಮೇಲಿಂದ ಮೇಲೆ ಉಚ್ಚರಿಸುತ್ತ ತನ್ನನ್ನು ನಿಂದಿಸುವದಕ್ಕೋಸ್ಕರ ನುಡಿದನೆಂದು ತಿಳಿದುಕೊಂಡು ಅತ್ಯಂತ ಕುಪಿತಳಾಗಿ ತನ್ನ ಕೈಯ್ಯಲ್ಲಿದ್ದ ಹುಟ್ಟಿನಿಂದ ಅವನನ್ನು ಒಳಿತಾಗಿ ಹೊಯ್ದಳು. ಆಗ ಅವನ ಹಲ್ಲುಗಳು ಮುರಿದು ಬಿದ್ದವು. ಅದರ ವೇದನೆಯಿಂದ ಅವನು ಮೊರೆ ಇಡುತ್ತ ಬೀದಿಯಲ್ಲಿ ಬಂದು ನಿಲ್ಲಲು ಊರ ಜನರು ನೆರೆದು ನೋಡುತ್ತಿರಲು ಆ ಜಂಗಮನು ಅವರಿಗೆ ಸತ್ಯಕ್ಕನು ಸತ್ಯೆಯುಳ್ಳ ಭಕ್ತೆಯೆಂದು ನಾನು ಭಿಕ್ಷಕ್ಕೆ ಹೋದರೆ ಇವಳು ನನ್ನನ್ನು ಹೀಗೆ ಹಿಂಸೆ ಬಡಿಸಿದಳು ಎಂದು ಹೇಳಿದನು. ಅವರು ಸತ್ಯಕ್ಕನಿಗೆ— ಈ ರೀತಿ ಭಿಕ್ಷುಕನನ್ನು ನೀನು ಹೊಡೆಯಬೇಕೇ? ಎಂದು ನುಡಿಯಲು ಅವಳು

ಅನ್ಯಶಬ್ದವನ್ನು ಈ ಜಂಗಮನು ನುಡಿದದ್ದರಿಂದ ನಾನು ಹೀಗೆ ಹೊಡೆದೆ ನೆಂದು ಎನ್ನಲು, ಹಾಗೆ ನುಡಿದದ್ದೇನೆಂದು ಅವರು ಚರಮೂರ್ತಿಯನ್ನು ಕೇಳಲಾಗಿ ಅವನು ನನ್ನ ಜೋಳಿಗೆಯು ಹರಿದ ಹರಿಕಿನಲ್ಲಿ ಭಿಕ್ಷದ ಕಾಳು ಚೆಲ್ಲಿದವು, ಎಂದು ನುಡಿದನು. ಹೀಗೆ ಅವನು ಮೊದಲಿನಂತೆಯೇ ಹರಿ ಶಬ್ದವನ್ನು ಉಚ್ಚರಿಸಿದ್ದರಿಂದ ನೆರೆದ ಜನರು ನೋಡುವಂತೆಯೇ ಸತ್ಯ ಕ್ಕನು ಅವನನ್ನು ಬಿರಿಸಿನಿಂದ ಪುನಃ ಹೊಡೆದಳು. ಆಗ ಹರನು ಆಕೆಯ ಏಕದೇವ ನಿಷ್ಠೆಯ ಬಗ್ಗೆ ಇದ್ದ ಗಣಾಚಾರವನ್ನು ನೋಡಿ ಪ್ರೀತನಾಗಿ ತನ್ನ ರೂಪುದೋರಿ— ಸತ್ಯಕ್ಕನೇ ನಾನು ನಿನಗೆ ಮೆಚ್ಚಿದೆನು. ನಿನಗೆ ಬೇಕಾ ದುದನ್ನು ಬೇಡು ಎನಲು, ಸತ್ಯಕ್ಕನು— ಶಿವ ಶಿವಾ ನನ್ನ ಹುಟ್ಟಿನಲ್ಲಿ ನಿನ್ನನ್ನು ಹೊಡೆದೆನು. ನೀನು ನೊಂದೆ. ಆದ್ದರಿಂದ ನನ್ನನ್ನೇ ಭಿಕ್ಷೆಯನ್ನಾಗಿ ಮಾಡಿ ನಿನ್ನ ಕುಕ್ಷಿಯಲ್ಲಿಟ್ಟುಕೊಳ್ಳು ಎಂದು ಬೇಡಿಕೊಳ್ಳಲು ಪರಮಾತ್ಮನು ಹಾಗೆಯೇ ಆಗಲೆಂದು ಅವಳನ್ನು ತನ್ನ ಕುಕ್ಷಿಯಲ್ಲಿಟ್ಟುಕೊಂಡು ಅವಳಿಗೆ ನಿತ್ಯ ಪದವನ್ನು ಕೊಟ್ಟನು. ಸತ್ಯಕ್ಕನ ಚರಿತ್ರೆಯಿಂದ ದೇವರು ಒಬ್ಬನೇ ಇದ್ದಾನೆ, ಅವನೊಬ್ಬನನ್ನೇ ಭಜಿಸಬೇಕು, ಎಂಬ ಶಿವಾನುಭವದ ತತ್ವವು ಈ ಕಾಲದಲ್ಲಿ ಎಷ್ಟು ದೃಢಪಟ್ಟಿತ್ತೆಂಬುದು ಗೊತ್ತಾಗುತ್ತದೆ.

ಸತ್ಯಕ್ಕನು ವಚನಕಾರಳಿದ್ದಾಳೆ. ಅವಳ ವಚನಗಳನ್ನು ಅನೇಕ ಸಂಗ್ರಹಕಾರರು ತಮ್ಮ ಗ್ರಂಥಗಳಲ್ಲಿ ಉದಹರಿಸಿದ್ದಾರೆ. ಅವು ಅವು ಸುಂದರವೂ ಮೋಹಕಪೂ ಆಗಿರುತ್ತವೆ. ನಮಗೆ ದೊರೆದ ೨೦ ವಚನಗ ಳನ್ನು ನಾವು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಸಿದ್ಧಿಸಿದ್ದೇವೆ. ಅವಳ ಮುದ್ರಿಕೆಯು 'ಶಂಭು ಜಕ್ಕೇಶ್ವರಾ' ಎಂದಿದೆ.

ಅವಳು ತನ್ನ ವಿಚಾರಗಳನ್ನು ಸೊಗಸಾದ ಭಾಷೆಯಲ್ಲಿ ಸ್ವಾರಸ್ಯವಾಗಿ ನಿರೂಪಿಸಿದ್ದಾಳೆ. ಮಾದರಿಗಾಗಿ ಅವಳ ಕೆಲವು ವಚನಗಳನ್ನು ಇಲ್ಲಿ ಉದ ಹರಿಸಿರುತ್ತೇವೆ.

## ವಚನಗಳು.

(೧) ಆದಿಯಲ್ಲಿ ದೇವಾ ನಿಮ್ಮನಾರು ಬಲ್ಲರು? ವೇದಂಗಳು ಮುನ್ನತ್ತ ಲರಿಯವು. ವೇದ ವಾದಿಗಳು ಪರಬ್ರಹ್ಮವೆಂಬರು. ನಾದಬಿಂದು ಕಳಾತೀತ ನೆಂದೆಂಬರು. ಸಾಧು ಸಜ್ಜನ ಭಕ್ತರಿಚ್ಚೆಗೆ ಬಂದೆಯಾಗಿ ಈಗೀಗ ದೇವ ನಾದೆ ಶಂಭುಜಕ್ಕೇಶ್ವರಾ.

(೨) ಏಕೆನ್ನ ಬಾರದ ಭವಂಗಳಲ್ಲಿ ಬರಿಸಿದೆ? ಏಕೆನ್ನ ಘೋರ ಸಂಸಾರದಲ್ಲಿರಿಸಿದೆ? ಏಕೆನಗೆ ಕರುಣಿಸಲೊಲ್ಲದೆ ಕಾಡಿಹೆ ಹೇಳಾ, ಹೇಳಾ ಎಲೆ ಲಿಂಗವೇ? ಆನು ಮಾಡಿದ ತಪ್ಪೇನು? ಸಾಕಲಾದುದೆಂದು ಒತ್ತಿ ನುಡಿದಡೆ ಏಕೆ ನಾ ನಿಮ್ಮ ಬಿಡುವೆ ಶಂಭುಜಕ್ಕೇಶ್ವರಾ?

(೩) ದೇವನೊಳ್ಳಿದನೆಂದು ಮುಯ್ಯೊನಲು ಬೇಡ. ಕರಕಟ ಕಾಡುವನೊಳ್ಳಿದನೇ? ಅಳಿಸುವ ನಗಿಸುವನೊಳ್ಳಿದನೇ? ಬೆದರದೆ ಬೆಚ್ಚದೆ ತೊತ್ತುತನವ ಮಾಡಲು ತನ್ನನೀವ ಶಂಭುಜಕ್ಕೇಶ್ವರಾ.

ಶರಣನು ಪರಮಾತ್ಮನಿಗೆ ತನ್ನನ್ನು ಅರ್ಪಿಸಿ ಕಾರ್ಯ ಮಾಡಬೇಕೇ ಹೊರತು ವಿಧಿವಶನಾಗಿ ಕಾರ್ಯ ಮಾಡಕೂಡದೆಂದು ಶಿವಾನುಭವದ ತತ್ವವಿದೆ. ಇದರಿಂದ ಪೂರ್ವಾರ್ಜಿತವೂ ಭವಮಾಲೆಯೂ ತಪ್ಪುವವು. ಈ ವಿಚಾರಗಳನ್ನು ಕುರಿತು ಸತ್ಯಕ್ಕನು ಹೇಳಿದುದೇನೆಂದರೆ—

(೪) ಶಿವಶರಣೆಂದು ಪೂರ್ವಾರ್ಜಿತವನುಂಡರೆ ಭಂಗ. ಹೆರವಶವೆನಿಸಿ ವಿಧಿ ವಶವೆನಿಸಿದರೆ ಅದು ನಿಮ್ಮ ಭಂಗ ಕಾಣಾ, ಶಂಭುಜಕ್ಕೇಶ್ವರದೇವ.

ಸ್ತ್ರೀ ಪುರುಷರು ಸಮಾನರೆಂದು ಸತ್ಯಕ್ಕನು ಕೆಳಗಿನ ವಚನದಲ್ಲಿ ಹೇಳಿದ್ದಾಳೆ. ಸ್ತ್ರೀಯರಿಗೆ ಮೊಲೆ ಮುಡಿ ಇದ್ದ ಮಾತ್ರಕ್ಕೆ ಅವಳು ಕಡಿಮೆಯುವಳಲ್ಲ. ಗಂಡಸು ಕಾಸೆ, ಮೀಸೆ, ಕಠಾರಿ ಹಿಡಿದ ಮಾತ್ರಕ್ಕೆ ಹೆಚ್ಚಿನವನಾಗುವದಿಲ್ಲ. ಆದರೆ ಹೇಗೆ ಮಾಧುರ್ಯದಿಂದ ಹಣ್ಣು, ಸುವಾಸನೆಯಿಂದ ಹೂವು, ಜನರಿಗೆ ಪ್ರಿಯಕರವಾಗುತ್ತವೋ ಹಾಗೆ ಸ್ತ್ರೀ ಪುರುಷರಲ್ಲಿಯ ಸದ್ಗುಣಗಳ ಮೂಲಕ ಅವರ ಶ್ರೇಷ್ಠತೆಯು ಅವಲಂಬಿಸಿರುತ್ತದೆಂಬ ಭಾವವು ಕೆಳಗಿನ ವಚನದಲ್ಲಿ ಬಂದಿದೆ.

(೫) ಮೊಲೆ ಮುಡಿ ಇದ್ದುದೇ ಹೆಣ್ಣೆಂದು ಪ್ರಮಾಣಿಸಲಿಲ್ಲ. ಕಾಸೆ, ಮೀಸೆ, ಕಠಾರಿ ಇದ್ದುದೇ ಗಂಡೆಂದು ಪ್ರಮಾಣಿಸಲಿಲ್ಲ. ಅದು ಜಗದ ಹೋಹು. ಬಲ್ಲವರ ನೀತಿಯಲ್ಲ. ಏತರ ಹಣ್ಣಾದಡೂ, ಮಧುರವೇ ಕಾರಣ. ಚಂದವಿಲ್ಲದ ಕುಸುಮಕ್ಕೆಯೂ ವಾಸನೆಯೇ ಕಾರಣ. ಇದರಂದವ ನೀನೇ ಬಲ್ಲೆ ಶಂಭುಜಕ್ಕೇಶ್ವರ.

ಸತಿಪತಿ ಭಾವದ ಕೆಳಗಿನ ವಚನದಲ್ಲಿ ಸತ್ಯಕ್ಕನು ತನ್ನಲ್ಲಿರುವ ಭಕ್ತಿಭಾವವನ್ನು ವ್ಯಕ್ತಪಡಿಸಿದ್ದಾಳೆ.

(೬) ಭಾವನೇಕೆ ಬಾರನೆನ್ನ ಮನೆಗೆ? ಹರಿಯ ಮಗನನುರುಹಿದ ಗರ್ವದ ಭಾವನೇಕೆ ಬಾರನೆನ್ನ ಮನೆಗೆ? ಅಸುರರ ಪುರವ ಸುಟ್ಟ ವೀರ ಭಾವನೇಕೆ ಬಾರನೆನ್ನ ಮನೆಗೆ? ದಕ್ಷನ ಸಿರವನಂದು ಯಾಗವ ಕೆಡಿಸಿ ಕುರಿದಲೆಯ ಹತ್ತಿಸಿ ಬಿನ್ನಾಣದ ಬಲುಹ ಮೆರೆದ ಏಕೋಭಾವನೇಕೆ ಬಾರನೆನ್ನ ಮನೆಗೆ? ಹರಿಯ ನಯನದ ಪೂಜೆ ಚರಣದಲ್ಲೊಪ್ಪಿತ್ತೆಂಬ ದುರುಳತನವು ತನಗೆ ಬೇಡವ್ವಾ. ಪರವಧುವಿಂಗಳುಪಿದ ವಿಗಡತನದ ದುರುಳುತನ ಬೇಡವ್ವಾ. ಆತನ ಕರೆದು ತಾರವ್ವಾ. ಶಂಭುಜಕ್ಕೇಶ್ವರನ ನೆರೆದು ನೋಡುವೆನು.

"ದೇವಿಯರ ತ್ರಿವಿಧಿ" ಎಂಬ ಗ್ರಂಥದಲ್ಲಿ ಈಕೆಯ ಉಲ್ಲೇಖವಿದೆ. ಅದು ಹೇಗೆಂದರೆ?—

> ಹರನು ಚರ ರೂಪಿಂದೆ । ಹರಿ ಎಂಬ ನುಡಿವೇಳೆ ।
> ಕೆರದ ಹುಟ್ಟಿಂದೆ ತಿಪಿದೀಶನೊಲಿಸಿದ ಗುರುವೆ ಸತ್ಯಕ್ಕ ಶರಣಾಗು.

ಹಿರಿಯ ಜಂಬೂರು ಗ್ರಾಮದಲ್ಲಿ ಸತ್ಯಕ್ಕನ ಪ್ರತಿಮೆಯು ಈಗಲೂ ಇರುತ್ತದೆ. ಹೀಗೆ ಇರುವ ದೇವಾಲಯಕ್ಕೆ "ಸತ್ಯಕ್ಕನ ಗುಡಿ' ಎಂದು ಅಲ್ಲಿಯ ಜನರು ಕರೆಯುತ್ತಾರೆ. ಗಣ ಸಹಸ್ರದಲ್ಲಿ ಈಕೆಯ ಹೆಸರಿದೆ.

ಅವಳು ತನ್ನ ವಚನಗಳಲ್ಲಿ ದೇವರ ದಾಸಿಮಯ್ಯ, ಚನ್ನಯ್ಯ, ನಂಬಿಯಕ್ಕ, ಮುಕ್ತಾಯಕ್ಕ ಇವರನ್ನು ಸ್ಮರಿಸಿದ್ದಾಳೆ. ಇವರಲ್ಲಿ ಮೊದಲನೆಯ ಮೂವರು ಬಸವೇಶ್ವರನಕಿಂತಲೂ ಹಿಂದಿನವರು. ಅವರನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಅನೇಕ ಕಡೆಗೆ ಸ್ಮರಿಸಿದ್ದಾನೆ. ಮುಕ್ತಾಯಕ್ಕನು ಅಲ್ಲಮ ಪ್ರಭುವಿನ ಸಮಕಾಲೀನಳು. ಅವಳು ಬಸವೇಶ್ವರನಕಿಂತಲೂ ಸ್ವಲ್ಪ ಹಿರಿಯಳಾಗಬೇಕು. ಈ ಸಂಗತಿಗಳಿಂದಲೂ ಸತ್ಯಕ್ಕನು ಬಸವೇಶ್ವರನನ್ನು ತನ್ನ ವಚನಗಳಲ್ಲಿ ಸ್ಮರಿಸದೆ ಇರುವದರಿಂದಲೂ ಅವಳ ಚರಿತ್ರೆಯಲ್ಲಿ ಅವಳು ಕಲ್ಯಾಣಕ್ಕೆ ಹೋಗಿದ್ದರ ಉಲ್ಲೇಖವಿರದ್ದರಿಂದಲೂ ಅವಳು ಬಸವೇಶ್ವರನಕಿಂತಲೂ ಸ್ವಲ್ಪ ಹಿಂದಿನವಳಾಗಿರಬೇಕೆಂದು ತೋರುತ್ತದೆ.

———

# ೨೩. ವರದಾನಿ ಗುಡ್ಡಮ್ಮ.

ವಿಜಾಪುರ ಪಟ್ಟಣದಿಂದ ಪಶ್ಚಿಮಕ್ಕೆ ೩೦ ಮೈಲುಗಳ ಮೇಲೆ ಜತ್ತೀ ಸಂಸ್ಥಾನದಲ್ಲಿ ಉಮರಾಣಿ ಎಂಬ ಗ್ರಾಮವಿದೆ. ಅಲ್ಲಿ ಅನಂತ ರಾಯನೆಂಬ ಶೀಲವಂತ ಅಕ್ಕಸಾಲಿಗನು ವಾಸ ಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಶಿರಸಮ್ಮನು. ಅವರಿಗೆ ಮಕ್ಕಳಿಲ್ಲದ್ದರಿಂದ ಅವರು ತಮ್ಮ ಗ್ರಾಮದಲ್ಲಿದ್ದ ದೇವಾಲಯಕ್ಕೆ ಹೋಗಿ ಅಲ್ಲಿದ್ದ ವೀರಮಲ್ಲಯ್ಯ ನಿಗೆ ಬೇಡಿಕೊಂಡು ಒಬ್ಬ ಹೆಣ್ಣು ಮಗುವನ್ನು ಪಡೆದರು. ಆಕೆಗೆ ಅವರು ಲಿಂಗಮ್ಮನೆಂಬ ಹೆಸರನ್ನಿಟ್ಟರು. ಉಭಯ ದಂಪತಿಗಳು ಶಿವಜ್ಞಾನಿಗಳಾಗಿ ಶೀಲದಿಂದ ನಡೆದು ಶೀಲವಂತರೆಂದೆನಿಸಿಕೊಂಡರು. ಅವರು ತಮ್ಮ ಮಗ ಳಿಗೆ ಶಿವಾನುಭವವನ್ನು ಅರುಹುತ್ತ ಅವಳನ್ನು ಅತ್ಯಂತ ಪ್ರೀತಿಯಿಂದ ಸಲಹುವವರಾದರು.

ಈ ಕಾಲದಲ್ಲಿ ಬಹು ಜನ ಶಿವಶರಣರು ಈ ಭಾಗದಲ್ಲಿ ಉದಯವಾಗಿ ದ್ದರು. ರೇವಣ ಸಿದ್ದೇಶ್ವರನಿದ್ದ ಮಂಗಳವಾಡ, ಹಾವಿನಹಾಳು ಕಲ್ಲಯ್ಯನ ಹಾವಿನಾಳು, ಬಸವೇಶ್ವರನ ಬಾಗೇವಾಡಿ, ಶಾಂತಯ್ಯನಿದ್ದ ಇಂಡಿ, ಇವೇ ಮೊದಲಾದ ಗ್ರಾಮಗಳು ಈ ಕಡೆಗೆಯೇ ಇರುತ್ತವೆ. ಬಸವೇಶ್ವರನು ಬಾಗೇವಾಡಿಯಲ್ಲಿ ಜನಿಸಿ ಕಪ್ಪಡಿ ಸಂಗಮೇಶ್ವರನಲ್ಲಿ ಕೆಲ ಕಾಲ ನಿಂತು ಬಿಜ್ಜಳನಲ್ಲಿ ಒಬ್ಬ ಅಧಿಕಾರಿಯಾಗಿ ಮುಂದೆ ಅವನು ಮಂತ್ರಿ ಪದಾರೂಢ ನಾದನು. ಆಗ ಬಹು ಜನ ಶಿವಶರಣರು ಶರಣರ ಮಾರ್ಗವನ್ನು ಅರಿ ಯಲು ಅವನಲ್ಲಿ ನೆರೆಯುವವರಾದರು. ಲಿಂಗಮ್ಮನು ಇಷ್ಟರಲ್ಲಿ ಶಿವಯೋ ಗಾಚರಣೆಯಲ್ಲಿ ವಿಶೇಷ ಪ್ರಗತಿಯನ್ನು ಹೊಂದಿದವಳಾಗಿದ್ದರಿಂದ ಅವಳು ಬಸವೇಶ್ವರನ ಸನ್ನಿಧಿಯಲ್ಲಿ ಶಿವಾನುಭವವನ್ನು ಅರಿಯಬೇಕೆಂದು ಅಪೇ ಕ್ಷಿಸಿ ಕಲ್ಯಾಣಕ್ಕೆ ಹೊರಡಲು ಸಿದ್ಧಳಾದಳು. ಇದನ್ನು ತನ್ನ ಮಾತಾ ಪಿತೃಗಳಿಗೆ ತಿಳಿಸಿದರೆ ಅವರು ತನ್ನ ಮೇಲಿದ್ದ ಮೋಹಕ್ಕೋಸ್ಕರ ತನ್ನನ್ನು ಅಲ್ಲಿಗೆ ಹೋಗಗೊಡಲಿಕ್ಕಿಲ್ಲೆಂದು ಭಾವಿಸಿ ಅವಳು ಯಾರಿಗೂ ಈ ಬಗೆಗೆ ತಿಳಿಸದೆ ಉಮರಾಣಿಯಿಂದ ಹೊರಟು ಕಲ್ಯಾಣಕ್ಕೆ ಬಂದಳು. ಮಗಳು ಎಲ್ಲಿಗೆ ಹೋಗಿದ್ದಾಳೆಂಬುದು ಅವರಿಗೆ ತಿಳಿಯದ್ದರಿಂದ ಅವರು ಅತ್ಯಂತ ಚಿಂತೆಯಿಂದ ಕೆಲವು ದಿನ ಕಳೆದರು. ಲಿಂಗಮ್ಮನು ಅವರಿಗೆ ಆದ ದುಃಖ ವನ್ನು ತನ್ನ ಆತ್ಮನಲ್ಲಿ ತಿಳಿದು ಅವಳು ಅನಂತರಾಯನ ಸ್ವಪ್ನದಲ್ಲಿ ಬಂದು

ಅವನಿಗೆ- ನಾನು ಕಲ್ಯಾಣದಲ್ಲಿ ಶಿವಶರಣರ ಸನ್ನಿಧಿಯಲ್ಲಿದ್ದೇನೆ. ದುಃಖಿಸಬೇಡಿರಿ. ನಾನು ಒಂದು ವರ್ಷದ ಮೇಲೆ ನಿಮ್ಮಲ್ಲಿಗೆ ಬರುತ್ತೇನೆ. ಆ ವರೆಗೆ ನೀವು ವಚನಗಳನ್ನು ಹಾಡುತ್ತ ಆತ್ಮನಲ್ಲಿ ಸೇರಿ ಎಚ್ಚರಾಗಿರಿ, ಎಂದು ಹೇಳಿ ಬಯಲಾದಳು.

ಆಮೇಲೆ ಲಿಂಗಮ್ಮನು ಕಲ್ಯಾಣದಲ್ಲಿ ಮಹಾದೇವಿ ಎಂಬ ಹೆಸರಿನ ಒಬ್ಬ ಅತ್ಯಂತ ದರಿದ್ರಳಾದವಳ ಮನೆಯಲ್ಲಿರಹತ್ತಿದಳು. ಲಿಂಗಮ್ಮನು ಶಿವಯೋಗವನ್ನು ಆಚರಿಸುವವಳಾದಳು. ಅವಳು ಪ್ರಸಾದಿ ಪ್ರಾಣಲಿಂಗಿ ಸ್ಥಳದವಳಾಗಿದ್ದಳು. ಅವಳ ಕ್ರಿಯೆಗಳು ಅರ್ಪಣಭಾವದಿಂದ ಕೂಡಿಕೊಂಡಿದ್ದರಿಂದ ಅವಳು ಪ್ರಸಾದಮಯವಾಗಿ ಯಾವಾಗಲೂ ಆಚರಿಸುವಳು. ಅವಳು ದಿನಾಲು ಬಸವರಾಜನ ಉದ್ಯಾನ ವನಕ್ಕೆ ಹೋಗಿ ಅಲ್ಲಿ ಜಪಗಳನ್ನು ಮಾಡುತ್ತ ಶಿವಯೋಗದಲ್ಲಿರುವಳು. ಇದನ್ನು ಬಸವೇಶ್ವರನು ತಿಳಿದವನಾಗಿ ಅವನು ಒಂದುದಿನ ತನ್ನ ಹೆಂಡತಿ ನೀಲಲೋಚನೆಯೊಂದಿಗೆ ಅವಳಿದ್ದಲ್ಲಿಗೆ ಹೋಗಿ ಅವಳನ್ನು ಕಂಡನು- ಆಗ ಅವಳು ತನ್ನ ಪ್ರಸಾದ ಪಾದೋದಕದ ಮತ್ತು ಲಿಂಗಾನುಸಂಧಾನ ರೀತಿಗಳನ್ನು ಅರುಹುತ್ತ ಜಂಗಮರನ್ನು ಹೇಗೆ ತೃಪ್ತಿಬಡಿಸುತ್ತೇನೆಂಬುದನ್ನು ತಿಳಿಸಿಹೇಳಿದಳು. ಅವಳ ಶಿವಯೋಗದ ಜ್ಞಾನಕ್ಕೆ ಬಸವೇಶ್ವರನು ಸೋಜಿಗಗೊಂಡು ತನ್ನ ಅಂತರಾತ್ಮನಲ್ಲಿ ಅವಳನ್ನು ನೋಡಲಾಗಿ ಅವಳು ಮಹಾ ಶಿವಶರಣೆಯು, ಅವಳು ತನ್ನ ಝೇಂಕಾರ ಮಂತ್ರದ ನೆನಹಿನಿಂದ ಜನಿಸಿದ ತಾಯಿಯು, ಇವಳು ತನ್ನ ಶಿವಯೋಗದ ಮಹಿಮೆಯ ಬಲದಿಂದ ಭಕ್ತಾದಿಗಳನ್ನು ತೃಪ್ತಿಬಡಿಸುತ್ತಾಳೆ. ಎಂಬುದನ್ನು ತಿಳಿದು ಅವಳಿಗೆ— ನೀನು ಇನ್ನುಮೇಲೆ 'ದಾನಮ್ಮ ಶರಣೆ' ಎಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಸಿದ್ಧಳಾಗು, ಎಂದು ನುಡಿದನು. ಆಮೇಲೆ ಅವನು ಅವಳನ್ನು ತನ್ನ ಅನುಭವ ಮಂಟಪಕ್ಕೆ ಕರೆದೊಯ್ದು ಎಲ್ಲರ ಇದಿರಿಗೆ ಸನ್ಮಾನಿಸಿದನು. ಅಂದಿನಿಂದ ಲಿಂಗಮ್ಮನು 'ದಾನಮ್ಮ' ಎಂಬ ಹೆಸರಿನಿಂದ ಜನರಲ್ಲಿ ಪ್ರಸಿದ್ಧಳಾದಳು. ದಾನಮ್ಮನ ಹತ್ತರ ಎರಡನೆಯವರಿಗೆ ಕೊಡಲು ಏನೂ ಧನವಿರಲಿಲ್ಲ, ಆದರೆ ಅರ್ಪಿತವನ್ನರಿತು ಆಚರಿಸುವವಳಾದ್ದರಿಂದ ಅವಳಿಗೆ 'ದಾನಮ್ಮ' ಎಂಬ ಹೆಸರು ಪ್ರಾಪ್ತವಾಗಿರುತ್ತದೆ.

ಆಮೇಲೆ ದಾನಮ್ಮನು ಕಲ್ಯಾಣದಲ್ಲಿ ತನ್ನನ್ನು ಕಂಡ ಜನರ ಕಷ್ಟಗಳನ್ನು ನಿವಾರಣೆ ಮಾಡುತ್ತ ಕಾಲ ಕಳೆಯಹತ್ತಿದಳು. ಅಂಥ ಸಮಯ

ದಲ್ಲಿ ಅವಳು ಅವರ ಸೇವೆ ಮಾಡುವಳು, ಚಿಂತಾತುರರಿಗೆ ಸಮಾಧಾನ ಹೇಳುವಳು. ಅವಳು ಒಂದುದಿನ ಗೌರಮ್ಮ ಎಂಬ ಬಾಲೆಯು ಹುಚ್ಚಳಂತೆ ಪಟ್ಟಣದ ಬೀದಿಗಳಲ್ಲಿ ಚಿಂತಾಕ್ರಾಂತಳಾಗಿ ತಿರುಗುತ್ತಿದ್ದದ್ದನ್ನು ಕಂಡಳು. ಅವಳು ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ಅವಳ ಸಮಾಚಾರವನ್ನು ಕೇಳಲಾಗಿ ಅವಳು— ನನ್ನ ಗಂಡನು ನನಗೆ ಹೇಳದೆ ಹೋಗಿ ಇಂದಿಗೆ ಮೂರು ವರ್ಷಗಳಾದವು. ಅವನಿಗೋಸ್ಕರ ನಾನು ಚಿಂತೆಯನ್ನು ಮಾಡುತ್ತಿದ್ದೇನೆ ಎಂದು ಹೇಳಿದಳು. ಆಗ ದಾನಮ್ಮನು ಅಂತರ್ಮುಖವಾಗಿ ನೋಡಿ ಅವಳಿಗೆ— ನಿನ್ನ ಚಿಂತೆಯು ಶೀಘ್ರವೇ ದೂರಾಗುವದು. ನಿನ್ನ ಗಂಡನು ಬರುತ್ತಿರುವದನ್ನು ನಾನು ಈಗ ನೋಡುತ್ತಾ ಇದ್ದೇನೆ, ಕಳವಳ ಪಡಬೇಡ, ಎಂದು ಸಮಾಧಾನ ಹೇಳಿದ ಬಳಿಕ ಒಂದ ಗಳಿಗೆಯೊಳಗಾಗಿ ಅವನು ದಾನಮ್ಮನನ್ನು ಕೇಳುತ್ತ ಅವಳಿದ್ದಲ್ಲಿಗೆ ಬಂದನು. ಆಗ ಆ ಬಾಲೆಯು ಹರ್ಷಿತಳಾಗಿ ತನ್ನ ಪತಿಯ ಕೂಡ ತನ್ನ ಗ್ರಾಮಕ್ಕೆ ಹೋದಳು. ದಾನಮ್ಮನು ವಾಸ ಮಾಡುತ್ತಿದ್ದ ಮನೆಯ ಯಜಮಾನಿಯು ಅತ್ಯಂತ ಬಡವೆಯು. ಆದರೆ ದಾನಮ್ಮನ ಸನ್ನಿಧಿಯಿಂದ ಅವಳು ಸ್ವಲ್ಪ ದಿವಸಗಳಲ್ಲಿಯೇ ಧನವಂತಳಾದಳು. ಇದು ದಾನಮ್ಮನ ಸಾನ್ನಿಧ್ಯದ ಫಲವೆಂದು ತಿಳಿದು ಅವಳ ಪಾದವನ್ನು ಹಿಡಿಯಲು ದಾನಮ್ಮನು ಅವಳಿಗೆ- ನೀನು ದಿನಾಲು ಲಿಂಗಪೂಜೆಯನ್ನು ಮಾಡು, ಲಿಂಗಪ್ರಸಾದದಲ್ಲಿರು, ಎಂದು ಬೋಧಿಸಿದಳು. ಹೀಗೆ ದಾನಮ್ಮನು ಕಲ್ಯಾಣ ಪಟ್ಟಣದಲ್ಲಿ ಶಿವಾನುಭವದಲ್ಲಿದ್ದುಕೊಂಡು ಒಂದು ವರ್ಷ ಕಾಲಕಳೆದಳು.

ಆ ಮೇಲೆ ಕಲ್ಯಾಣ ಪಟ್ಟಣದಲ್ಲಿ ಅನಾಹುತಗಳು ಒಂದೇ ಸವನೆ ಸಂಭವಿಸಹತ್ತಿದವು. ಮಧುವರಸನೆಂಬ ಬ್ರಾಹ್ಮಣನು ಬಿಜ್ಜಳನಲ್ಲಿ ಶ್ರೀಷ್ಠಾಧಿಕಾರವನ್ನು ವಹಿಸಿದವನಾಗಿದ್ದು ಅವನು ತನ್ನ ಮಗಳನ್ನು ಸಮಗಾರನಾದ ಹರಳಯ್ಯನ ಮಗನಿಗೆ ಕೊಟ್ಟು ಲಗ್ನಮಾಡಿದನು. ಉಭಯತರು ಹೀಗೆ ಆಚರಿಸಿದ್ದಕ್ಕೋಸ್ಕರ ಬಿಜ್ಜಳ ನೃಪನು ಅವರನ್ನು ಹಿಂಸಿಸಿ ಕೊಲ್ಲಿಸಿದನು. ಶಿವಾನುಭವವು ಜಾತಿ ಭೇದವನ್ನು ಎಣಿಸುವದಿಲ್ಲ. ಹೀಗಿದ್ದರೂ ಇವರನ್ನು ಕೊಲೆ ಮಾಡಿದ್ದಕ್ಕೋಸ್ಕರ ಪಟ್ಟಣದಲ್ಲಿ ದಂಗೆಗಳೆದ್ದವು. ಶಿವಶರಣರೆಲ್ಲರು ಇಂಥ ಪಟ್ಟಣದಲ್ಲಿರಬಾರದೆಂದು ತೊಲಗಿ ಹೋಗಹತ್ತಿದರು. ಬಸವೇಶ್ವರನು ಇಂಥ ಹಿಂಸಾಪೂರಿತವಾದ ಪಟ್ಟಣದಲ್ಲಿರಬಾರದೆಂದು ತನ್ನ ಅಧಿಕಾರವನ್ನು ಚನ್ನಬಸವೇಶ್ವರನಿಗೆ ಒಪ್ಪಿಸಿ ತನ್ನ ಹೆಂಡತಿ ನೀಲಾಂಬಿಕೆ

ಯೊಡನೆ ಕಪ್ಪಡಿ ಸಂಗಮನಾಥನಲ್ಲಿಗೆ ಹೋಗಿ ಅಲ್ಲಿಯೇ ಐಕ್ಯವಾದನು. ನೀಲಾಂಬಿಕೆಯು ಸಂಗಮಕ್ಕೆ ಸಮೀಪವಿರುವ ತಂಗಡಿಗೆ ಗ್ರಾಮದಲ್ಲಿ ತನ್ನ ಲಿಂಗದಲ್ಲಿ ಬಯಲಾದಳು. ಈ ಸ್ಥಿತಿಯುಂಟಾಗಲು ದಾನಮ್ಮನು ತನ್ನ ತಂದೆ ತಾಯಿಗಳಿಗೆ ವಚನ ಕೊಟ್ಟಂತೆ ಅವಳು ಪಟ್ಟಣವನ್ನು ಬಿಟ್ಟು ತನ್ನ ಗ್ರಾಮವಾದ ಉಮರಾಣಿಗೆ ತಿರುಗಿ ಬಂದು ತನ್ನ ಮಾತಾಪಿತೃಗಳನ್ನು ಕಂಡಳು. ಅವರು ತಮ್ಮ ಪ್ರೀತಿಯ ಮಗಳು ತಿರುಗಿ ಬಂದಳೆಂದು ಅವಳನ್ನು ಅತ್ಯಂತ ಆದರಿಸುವವರಾದರು. ಆ ಮೇಲೆ ಅವಳು ಅಲ್ಲಿಯೇ ತನ್ನ ಶಿವಯೋಗಾಚರಣೆಯಲ್ಲಿ ಇರಹತ್ತಿದಳು.

ಶಿವಾನುಭವದ ಪ್ರಕಾರ ಭಕ್ತರು ಸ್ತ್ರೀಯರಿರಲಿ ಅಥವಾ ಪುರುಷರಿರಲಿ ಅವರು ಲಗ್ನವಾಗುವದು ಅಥವಾ ಬಿಡುವದು ಅವರ ಇಚ್ಛೆಯ ಮೇಲೆ ಇರುತ್ತದೆ. ಲಗ್ನವಾದರೆ ಕಡಿಮೆಯಲ್ಲ. ಲಗ್ನವಾಗದೆ ಇದ್ದರೆ ಹೆಚ್ಚಲ್ಲ. ಲಗ್ನವಾದ ಬಸವೇಶ್ವರ, ರೇವಣ ಸಿದ್ಧೇಶ್ವರರ ಯೋಗ್ಯತೆಯು ಕಡಿಮೆಯಾಗಿಲ್ಲ.

ಮಹಾದೇವಿಯಕ್ಕ, ಬೊಂತಾದೇವಿಯರ ಮಹತ್ವವು ಅವರು ಲಗ್ನವಾಗದೆ ಉಳಿದದ್ದಕ್ಕಲ್ಲ. ಅವರು ತಮ್ಮಲ್ಲಿದ್ದ ಶಿವಾನುಭವದ ಮೂಲಕ ಉಚ್ಚಸ್ಥಾನವನ್ನು ಹೊಂದಿದರು. ಲಗ್ನವಾದ ದುಗ್ಗಳೆ, ನೀಲಾಂಬಿಕೆಯರು ಶಿವಶರಣೆರಲ್ಲಿ ಉಚ್ಚಸ್ಥಾನವನ್ನು ಹೊಂದಿದ್ದಾರೆ. ಆದ್ದರಿಂದ ದಾನಮ್ಮನು ಸ್ವಗ್ರಾಮಕ್ಕೆ ತಿರುಗಿ ಬಂದ ಬಳಿಕ ಅವಳು ಲಗ್ನವಾಗಬೇಕೆಂದು ಬಯಸಿ ತನ್ನ ಗ್ರಾಮದಿಂದ ಉತ್ತರಕ್ಕೆ ೧೨ ಮೈಲು ದೂರವಿರುವ ಸಂಕ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದ ಸಂಗಮನಾಥನೆಂಬ ಶಿವಶರಣನೊಡನೆ ಲಗ್ನವಾದಳು

ಉಭಯ ದಂಪತಿಗಳು ಕೇವಲ ಶಿವಾನುಭವಿಗಳು. ಅವರಲ್ಲಿ ದಾನಮ್ಮನು ಪ್ರಾಣಲಿಂಗಾನು ಸಂಧಾನದಲ್ಲಿರುವವಳಾಗಿದ್ದಳು. ಆದ್ಧರಿಂದ ಅವಳ ಆಚರಣೆಗೆ ಅನುಕೂಲವಾಗಬೇಕೆಂದು ಸಂಕ ಗ್ರಾಮದ ಪಶ್ಚಿಮಕ್ಕೆ ೮ ಮೈಲುಗಳ ಮೇಲಿರುವ ಗುಡ್ಡಾಪುರ ಎಂಬ ಗ್ರಾಮಕ್ಕೆ ಬಂದು ಉಭಯತರು ವಾಸಮಾಡಹತ್ತಿದರು. ಈ ಗ್ರಾಮವಿದ್ದ ಪ್ರದೇಶವು ಗುಡ್ಡಗಾಡು ಒಂದು ಗುಡ್ಡದ ಸಾಲಿನಲ್ಲಿಯ ಒಂದು ದಿನ್ನೆಯ ಮೇಲೆ ಊರಿಗೆ ಸಮೀಪವಾಗಿ ಸೋಮೇಶ್ವರನ ಪ್ರಸಿದ್ಧ ದೇವಾಲಯವಿದ್ದು ಇದರ ನೆರೆಯಲ್ಲಿ ದಾನಮ್ಮನು ತನ್ನ ಲಿಂಗಾನುಸಂಧಾನದ ಕಾರ್ಯಗಳಲ್ಲಿ ತೊಡಗುವವಳಾದಳು.

ಇತ್ತ ಕಲ್ಯಾಣದಲ್ಲಿ ಅನಾಹುತಗಳು ಹೆಚ್ಚುತ್ತಲೇ ನಡೆದವು. ಬಿಜ್ಜಳನು ನಿಷ್ಕಾರಣವಾಗಿ ಈರ್ವರು ಶಿವಶರಣರನ್ನು ಕೊಲ್ಲಿಸಿದ್ದರಿಂದ ಅವನೂ ಕೊಲೆಗೀಡಾದನು. ದೇಶದಲ್ಲೆಲ್ಲ ಹೋರಾಟಗಳು ಸಂಭವಿಸಹತ್ತಿದವು. ಶಿವಶರಣರು ರಾಜನ ಸೈನ್ಯವನ್ನಿದಿರಿಸಿ ಕಾದಾಡುತ್ತ ಉಳಿವೆಯ ಮಹಾಮನೆಯನ್ನು ಪ್ರವೇಶಿಸಿ ಅಲ್ಲಿಯೇ ಐಕ್ಯವಾದನು. ಆ ಮೇಲೆ ಪರವಾದಿಗಳು ಮತ್ತಿಷ್ಟು ಉಗ್ರ ರೀತಿಯಿಂದ ಶಿವಶರಣರ ಮೇಲೇರಿ ಹೋಗಿ ಅವರನ್ನು ಹಿಂಸಿಸಹತ್ತಿದರು. ಶಿವಾಲಯಗಳನ್ನು ಭ್ರಷ್ಟಗೊಳಿಸಹತ್ತಿದರು. ಆದರೆ ಅವರ ಇಂಥ ಬಲಾತ್ಕಾರ ವರ್ತನೆಯು ಶಿವಶರಣರು ದೇಶದಲ್ಲಿ ಹೆಚ್ಚುಹೆಚ್ಚಾಗಿ ಉದ್ಭವಿಸುವಂತೆ ಮಾಡಿತು. ಅವರು ವಚನಶಾಸ್ತ್ರದ ಮೂಲಕ ಧರ್ಮಪ್ರಸಾರ ಕಾರ್ಯಗಳನ್ನು ಭರದಿಂದಸಾಗಿಸಹತ್ತಿದರು. ಆಗ ಅವರು ಅನೇಕ ಹಿಂಸೆಗಳಿಗೆ ಒಳಗಾಗಬೇಕಾಯಿತು. ಅವರಲ್ಲಿ ಕೆಲವರು ಶಸ್ತ್ರವನ್ನೆತ್ತಿ ತಮ್ಮನ್ನು ರಕ್ಷಿಸಿಕೊಳ್ಳಬೇಕಾಯಿತು. ಯುದ್ಧಗಳು ಸಹ ಸಂಭವಿಸಿದವು. ಇಂಥ ಸಾಹಸದ ಕೃತ್ಯಗಳನ್ನು ಮಾಡಿದವರಲ್ಲಿ ದಾನಮ್ಮನು ಒಬ್ಬಳಾಗಿದ್ದಾಳೆ.

ದೇಶದಲ್ಲಿ ಈ ಸ್ಥಿತಿಯಾಗಲು ದಾನಮ್ಮನೂ ಆಕೆಯ ಪತಿಯಾದ ಸಂಗಮನಾಥನೂ ಗುಡ್ಡಾಪುರವನ್ನು ಬಿಟ್ಟು ಅತ್ಯಂತ ಧೈರ್ಯದಿಂದ ಶಿವಾನುಭವದ ತತ್ವಗಳನ್ನು ದೇಶದಲ್ಲಿ ಪ್ರಸಾರ ಮಾಡುವ ಕಾರ್ಯವನ್ನು ಕೈಕೊಂಡರು. ಅವರು ಮೊದಲು ಶ್ರೀಶೈಲಾಭಿಮುಖವಾಗಿ ಹೊರಟರು. ಇತ್ತ ಕಡೆಗೆ ಮಹಾದೇವಿಯಕ್ಕ, ಅಲ್ಲಮಪ್ರಭು, ರುದ್ರಮುನಿ ಮೊದಲಾದವರು ಇಷ್ಟರಲ್ಲಿಯೇ ಗಮಿಸಿದ್ದರು. ಅಲ್ಲಿ ಶಿವಾನುಭವದ ವಿರೋಧಿಗಳ ಕೂಡ ಹೋರಾಟಗಳು ನಡೆದಿದ್ದವು. ಆದ್ದರಿಂದ ಅತ್ತಕಡೆಗೆ ಅವರು ಹೊರಟು ಮೊದಲು ಆದವಾನಿ ಗ್ರಾಮಕ್ಕೆ ಬಂದರು.

ಅವರು ಆದವಾನಿಗೆ ಬಂದ ಬಳಿಕ ಅಲ್ಲಿಯ ಜನರು ದಾನಮ್ಮನ ಮಹತ್ವವನ್ನು ಈ ಮೊದಲಿಗ ತಿಳಿದವರಾಗಿದ್ದರಿಂದ ಅವಳೊಡನೆ ಅತ್ಯಂತ ಭಕ್ತಿಯಿಂದ ಅವರು ಆಚರಿಸ ಹತ್ತಿದರು. ಅವರಲ್ಲಿ ನೇಯ್ಗೆಯ ಕಾಯಕವನ್ನು ಮಾಡುತ್ತಿದ್ದ ಸಾವಿರಾರು ಜನ ನೆಯ್ಗೆಯವರೂ, ಒಕ್ಕಲಿಗರೂ ಇವರು ಅವಳಲ್ಲಿ ಅತ್ಯಂತ ಭಕ್ತಿ ವಿಶ್ವಾಸವನ್ನು ತಾಳಿದವರಾದರು. ಅವರು ಕೆಲವೊಂದು ಹಬ್ಬದ ದಿನ ತಮ್ಮಲ್ಲಿ ಮುತ್ತೈದಿತನಕ್ಕೆ ಬರಬೇಕೆಂದು ಸತಿ ಪತಿಗಳೀರ್ವ

ರಿಗೆ ಬಿನ್ನಹ ಮಾಡಿ ಕೊಂಡರು. ಅದಕ್ಕೆ ಅವರು ಒಪ್ಪಿಕೊಂಡರು. ಆ ದಿವಸ ಅವರಲ್ಲೊಬ್ಬನು ಅವರನ್ನು ಕಂಡು ಸಾಷ್ಟಾಂಗವೆರಗಿ ತನ್ನ ಗೃಹಕ್ಕೆ ಕರೆದುಕೊಂಡು ಹೋಗಿ ತನ್ನ ಕಾರ್ಯವನ್ನು ನೆರವೇರಿಸಿ ಕೊಂಡನು. ಆ ಮೇಲೆ ಅವನು ನೆರೆಮನೆಯವನಲ್ಲಿಗೆ ಹೋಗಿ ಈ ಉಭಯ ಮಹಾನುಭಾವರು ತನ್ನ ಮನೆಗೆ ಬಂದಿದ್ದನ್ನು ತಿಳಿಸಲು ಅವನು ಅದೇ ಕಾಲಕ್ಕೆ ಅವರೇ ತನ್ನ ಮನೆಗೆ ಬಂದಿದ್ದನ್ನು ಹೇಳಿದನು. ಆಗ ಅವರು ಆಶ್ಚರ್ಯಪಟ್ಟು ಉಳಿದವರ ಮನೆಗಳಿಗೆ ಹೋಗಿ ಕೇಳಲು ದಾನಮ್ಮನು ತನ್ನ ಪತಿಯೊಡನೆ ಅದೇ ಕಾಲಕ್ಕೆ ತಮ್ಮ ಮನೆಗಳಿಗೂ ಬಂದದ್ದನ್ನು ಹೇಳಿದರು. ಆಗ ಇದು ದಾನಮ್ಮನ ಮಹತ್ವವೆಂದು ಅವರಿಗೆ ತಿಳಿದು ಬಂದು ಭಕ್ತರು ನೆನಿಸಿದಾಗ ಶರಣರು ಅವರಿಗೆ ಸನ್ನಿಹಿತರಾಗುವರೆಂಬ ತತ್ವವನ್ನು ಅರಿತವರಾಗಿ ಅವರೆಲ್ಲರೂ ದಾನಮ್ಮನ ಕಡೆಯಿಂದ ವೀರಶೈವ ದೀಕ್ಷೆಯನ್ನು ಹೊಂದಿದವರಾದರು. ಅದರಂತೆಯೇ ಪಟ್ಟಣದಲ್ಲಿಯ ಬಹು ಜನರೂ ಅವಳಿಂದ ಲಿಂಗ ಧಾರಣವನ್ನು ಹೊಂದಿದರು.

ಶಿವಾನುಭವದ ಆಚರಣೆಗೆ ತಡೆಯುಂಟಾಗಲು ಅದನ್ನು ನಿವಾರಿಸುವದು ಶಿವಾನುಭವಿಯ ಮೊದಲನೆಯ ಕರ್ತವ್ಯವಾಗಿರುತ್ತದೆ. ಇದರಲ್ಲಿ ಯುದ್ಧ ಮಾಡುವ ಪ್ರಸಂಗಗಳು ಉಂಟಾದರೂ ಅದಕ್ಕೆ ಅವನು ಹಿಂಜರಿಯಬಾರದು. ಈ ಕಾಲದಲ್ಲಿ ವರದಾನಿಯಮ್ಮನು ಪರವಾದಿಗಳ ಕೂಡ ಹೋರಾಡುವ ಪ್ರಸಂಗವು ಬಂದೊದಗಿತು.

ಆದವಾನಿಯಿಂದ ಪೂರ್ವಕ್ಕೆ ೮೦ ಮೈಲುಗಳ ಮೇಲೆ ಅಲಂಪುರವೆಂಬ ಗ್ರಾಮವಿದೆ. ಅದು ಈಗ ರಾಯಚೂರ ಜಿಲ್ಹೆಯಲ್ಲಿ ತುಂಗಭದ್ರಾತೀರದಲ್ಲಿ ಒಂದು ತಾಲೂಕು ಸ್ಥಳವಾಗಿತ್ತು. ಅದು ಬಹು ಪವಿತ್ರವಾದ ಸ್ಥಳವೆಂದು ಬಹು ಪುರಾತನ ಕಾಲದಿಂದಲೂ ಪ್ರಸಿದ್ಧವಾಗಿರುತ್ತದೆ. ಬ್ರಹ್ಮದೇವನು ಸ್ಥಾಪಿಸಿದ ಬಾಲಬ್ರಹ್ಮೇಶನೆಂಬ ಲಿಂಗವು ಅಲ್ಲಿ ಈಗಲೂ ಇದೆ. ಈ ಪಟ್ಟಣವು ಶ್ರೀಶೈಲದ ನೆರೆಯಲ್ಲಿದ್ದು ಅದು ಅದರ ಪಶ್ಚಿಮ ದ್ವಾರವೆಂದು ತಿಳಿಯಲ್ಪಟ್ಟಿದೆ. ಹೀಗಿರಲು ಅಲ್ಲಿದ್ದ ಪರವಾದಿಗಳು ದೇವಾಲಯದಲ್ಲಿದ್ದ ಶಿವಲಿಂಗವನ್ನು ಕಿತ್ತಿತೆಗೆದು ಅದನ್ನು ಹೊಳೆಯಲ್ಲಿ ಒಗೆದು ಅದರ ಸ್ಥಳದಲ್ಲಿ ನಾರಾಯಣನ ಮೂರ್ತಿಯನ್ನು ಸ್ಥಾಪಿಸಿದರು. ಹೀಗಾಗಲು, ದೇವಾಲಯದ ಪೂಜಾರಿಯಾದ ವೀರಮಾಚಯ್ಯನ ಕನಸಿನಲ್ಲಿ ಬಾಲಬ್ರಹ್ಮೇಶನು ಬಂದು

ಅವನಿಗೆ— ನೀನು ಈಗ ಶಿವಶರಣೆಯಾದ ದಾನಮ್ಮನ ಕಡೆಗೆ ಹೋಗಿ ನಡೆದ ಸಂಗತಿಗಳನ್ನು ನಿವೇದಿಸಿದರೆ ಅವಳು ತನ್ನ ಪ್ರತೀಕಾರ ಮಾಡುವಳು ಎಂದು ಹೇಳಿದನು. ಈ ಕಾಲದಲ್ಲಿ ದಾನಮ್ಮನ ಕೀರ್ತಿಯು ಎಲ್ಲ ಕಡೆಗೆ ಗಾಢವಾಗಿ ಪಸರಿಸಿತ್ತು. ಆಗ ಪೂಜಾರಿಯು ಅವಳಿದ್ದ ಸ್ಥಳಕ್ಕೆ ಹೋಗಿ ನಡೆದ ಸಂಗತಿಗಳನ್ನು ಅವಳಿಗೆ ತಿಳಿಸಿಹೇಳಿದನು. ಅದನ್ನು ಕೇಳಿ ವರದಾನಿಯು ಅತ್ಯಂತ ಕುಪಿತಳಾಗಿ ಪುನಃ ಶಿವಲಿಂಗವನ್ನು ಸ್ಥಾಪಿಸುವದೇ ತನ್ನ ಶಿವಾನುಭವದ ನಡೆ ಎಂದು ಭಾವಿಸಿ ಆದವಾನಿಯಲ್ಲಿದ್ದ ಭಕ್ತ ಸಮೂಹಕ್ಕೆ— ನೀವೆಲ್ಲರೂ ಈ ಕ್ಷಣದಲ್ಲಿ ನನ್ನೊಡನೆ ಅಲಂಪುರಕ್ಕೆ ಬಂದು ಭವಿ ಜನರೊಡನೆ ಯುದ್ಧವನ್ನು ಹೂಡಿ ಬ್ರಹ್ಮೇಶಲಿಂಗವನ್ನು ಮರಳಿ ಸ್ಥಾಪಿಸಬೇಕೆಂದು ನಿವೇದಿಸಿದಳು. ಕೂಡಲೆ ಸಾವಿರಾರು ಭಕ್ತ ಜನರು ಒಪ್ಪಿ ಖಡ್ಗ, ತೋಮರ ಪರಶು, ಚಕ್ರ, ಧನು ಶರಗಳಿಂದ ಸುಸಜ್ಜಿತರಾಗಿ ಅಲಂಪುರದ ಮಾರ್ಗವನ್ನು ಹಿಡಿದರು. ಆಗ ವೀರ ಕಹಳೆಗಳೂ ಭೇರ ನಿಸ್ಸಾಳಗಳೂ ಮೊರೆಯಹತ್ತಿದವು. ವರದಾನಿಯಮ್ಮನು ರಥಾರೂಢಳಾಗಿ ತನ್ನ ಸೇನೆಯನ್ನು ನಡೆಸುತ್ತ ಅಲಂಪುರದ ಹೊರವಳಯದಲ್ಲಿ ಬಂದಿಳಿದಳು. ಪರವಾದಿಗಳೂ ಕೂಡ ಪ್ರಬಲ ಸೇನೆಯನ್ನೊಡಗೊಂಡು ಅವಳನ್ನು ಇದಿರಿಸಿದರು. ಆಗ ತುಮುಲ ಯುದ್ಧವೆಸಗಿತು. ಆದರೆ ಭಕ್ತ ಸಮೂಹದ ಹೊಡೆತಕ್ಕೆ ಪರವಾದಿಗಳು ಕಂಗೆಟ್ಟು ಓಡಿಹೋದರು. ಆಗ ವರದಾನಿಯಮ್ಮನು ಬಾಲಬ್ರಹ್ಮೇಶನನ್ನು ಚೆಲ್ಲಿಕೊಟ್ಟ ಸ್ಥಳಕ್ಕೆ ಹೋಗಿ ಅಲ್ಲಿದ್ದ ಮೂರ್ತಿಯನ್ನು ಎತ್ತಿ ತೆಗೆದುಕೊಂಡು ಅತ್ಯಂತ ವೈಭವದಿಂದ ಅದನ್ನು ದೇವಾಲಯಕ್ಕೆ ತಂದು ಆದರ ಗರ್ಭಗುಡಿಯನ್ನು ಪ್ರವೇಶ ಮಾಡಿದ ಕೂಡಲೆ ಅಲ್ಲಿದ್ದ ನಾರಾಯಣ ಮೂರ್ತಿಯು ತಾನಾಗಿಯೇ ಭಗ್ನವಾಗಿ ಕೆಳಕ್ಕೆ ಬಿದ್ದಿತು. ಆ ಮೇಲೆ ಅದರ ಸ್ಥಳದಲ್ಲಿ ವರದಾನಿಯಮ್ಮನು ಬಾಲಬ್ರಹ್ಮೇಶನನ್ನು ವಿಧಾನಪೂರ್ವಕವಾಗಿ ಸ್ಥಾಪಿಸಿದಳು. ಆಗ ದಿಕ್ಕುದಿಕ್ಕುಗಳಲ್ಲಿ ಜಯಘೋಷಗಳೂ ವಾದ್ಯಗಳೂ ಭೋರ್ಗರೆಯಹತ್ತಿದವು. ನೆರೆದ ಜನರು ವರದಾನಿಯಮ್ಮನ ಅತುಲವಾದ ಶೌರ್ಯ ಧೈರ್ಯಗಳನ್ನು ಹೊಗಳಿ ಇವಳು ಶ್ರೇಷ್ಠ ಶರಣೆ ಎಂದು ಕೊಂಡಾಡಹತ್ತಿದರು. ಪಟ್ಟಣದಲ್ಲಿ ಬಹು ಜನರು ಅವಳಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಹೀಗೆ ವರದಾನಿಯಮ್ಮನು ಈಗಿನ ಬಳ್ಳಾರಿ ಮತ್ತು ರಾಯಚೂರ ಜಿಲ್ಲೆಗಳ ಪೂರ್ವ ಭಾಗಗಳಿಂದ ಶ್ರೀಶೈಲ ಪರ್ವತದ ವರೆಗೂ ವೀರಶೈವ ಧರ್ಮದ ಉಜ್ವಲ ಕೀರ್ತಿಯನ್ನು ಬೆಳಗಿದಳು.

ಆದರೆ ವರದಾನಿಯಮ್ಮನು ಆಲಂಪುರದಲ್ಲಿ ಬಹಳ ದಿವಸಗಳಿರ ಲಿಲ್ಲ. ಅವಳು ಶಿವಾನುಭವ ಪ್ರಸಾರ ಕಾರ್ಯ ಮಾಡುತ್ತ ದಕ್ಷಿಣ ದೇಶ ಗಳಿಗೆ ಹೊರಟಳು. ಅವಳು ಮೊದಲು ಮೈಸೂರು ದೇಶದ ದಕ್ಷಿಣ ಭಾಗದಲ್ಲಿ ಬಂದು ನಿಂತಳು.

ಈ ಕಾಲದಲ್ಲಿ ಉತ್ತರ ಕರ್ನಾಟಕದ ಮಧ್ಯ ಪ್ರದೇಶದಲ್ಲಿರುವ ಬಾಗೇವಾಡಿ, ಹಿಪ್ಪರಗಿ, ಮುದನೂರ, ಸೊನ್ನಲಿಗೆ, ಮಂಗಳವಾಡ ಈ ಗ್ರಾಮಗಳಿರುವ ಭಾಗಗಳಲ್ಲಿ ಬಸವೇಶ್ವರ, ಸಿದ್ಧರಾಮೇಶ್ವರ, ಮಡಿವಾಳ ಮಾಚಿದೇವ, ದೇವರ ದಾಸಿಮಯ್ಯ, ರೇವಣಸಿದ್ಧೇಶ್ವರ ಮೊದಲಾದ ಮಹ ತ್ವಿಕರಾದ ಶಿವಶರಣರು ಬಹು ಮುಖವಾಗಿ ವೀರಶೈವ ಧರ್ಮವನ್ನು ವಿಸ್ತರಿಸಿದ್ದರು. ಪಶ್ಚಿಮ ಪ್ರಾಂತದಲ್ಲಿ ಬನವಸೆ, ಬಳ್ಳಿಗಾವಿಗಳಲ್ಲಿದ್ದ ಪ್ರದೇಶದಲ್ಲಿ ಅಲ್ಲಮಪ್ರಭು, ಗೊಗ್ಗವ್ವೆ, ಅನುಮಿಷ, ಸತ್ಯಕ್ಕ ಮಹಾದೇವಿ ಯಕ್ಕ ಮೊದಲಾದ ಶಿವಶರಣ ಶರಣೆಯರು ಉದಯವಾಗಿದ್ದರು. ಶ್ರೀ ಶೈಲ ಭಾಗದಲ್ಲಿ ಪಂಡಿತಾರಾಧ್ಯ, ಮುಕ್ತಿಮುನಿ, ಸಕಳೇಶ ಮಾದರಸ ಮೊದಲಾದವರೂ ಚೋಳಮಂಡಲದಲ್ಲಿ ಚನ್ನಯ್ಯ, ಮೆರೆಮಿಂಡದೇವ, ಶಿವ ಪ್ರಿಯನಾಚಿ ಮೊದಲಾದವರೂ ಪ್ರಸಿದ್ಧಿಗೆ ಬಂದಿದ್ದರು. ಆದರೆ ಮೈಸೂರು ದೇಶದ ದಕ್ಷಿಣದಲ್ಲಿ ರೇವಣಸಿದ್ಧೇಶ್ವರನ ತರುವಾಯ ಯಾರೂ ವೀರ ಶೈವ ಧರ್ಮ ಪ್ರಸಾರ ಕಾರ್ಯ ಮಾಡಿರಲಿಲ್ಲ. ಆದ್ದರಿಂದ ದಾನಮ್ಮನು ತನ್ನ ಪತಿಯೊಡನೆ ಇತ್ತ ಕಡೆಗೆ ಹೊರಟು ಕಪಿಲಾ ಕಾವೇರೀ ಸಂಗಮ ಸ್ಥಳ ದಲ್ಲಿ ಬಂದು ನಿಂತಳು.

ದಾನಮ್ಮನು ಅಲ್ಲಿಗೆ ಬರುವಷ್ಟರಲ್ಲಿ ಅವಳು ಆ ವರೆಗೆ ಮಾಡಿದ ಸಾಹಸದ ಕೃತ್ಯಗಳು ಜನರ ತಿಳುವಳಿಕೆಗೆ ಬಂದಿದ್ದರಿಂದ ಅವಳು ಅಲ್ಲಿಗೆ ಬಂದ ಸ್ವಲ್ಪ ದಿವಸಗಳಲ್ಲಿ ಅಸಂಖ್ಯ ಜನರು ಅವಳನ್ನು ಕಾಣಲಿಕ್ಕೆ ಬರ ಹತ್ತಿದರು. ಕುರುಡ, ಕುಂಟ, ಹೆಳವರು ಅವಳ ಸ್ಪರ್ಶನದಿಂದ ತಮ್ಮ ನ್ಯೂನತೆಗಳನ್ನು ಹೋಗಲಾಡಿಸಿ ಕೊಳ್ಳ ಹತ್ತಿದರು. ಇದು ಅವಳಲ್ಲಿ ನೆಲೆ ಗೊಂಡಿದ್ದ ಶಿವಾನುಭವದ ಪರಿಣಾಮವಾಗಿತ್ತು. ಒಂದು ದಿನ ಅಲ್ಲಿಯ ದೇವಾಲಯದ ಪೂಜಾರಿಗಳು ಅವಳಿಗೆ ಬಿನ್ನವಿಸಿಕೊಳ್ಳಲಾಗಿ ಅವಳು ಅಲ್ಲಿ ಒಂದು ಕೋಟಿ ಲಿಂಗಗಳನ್ನು ಸ್ಥಾಪಿಸಿದಳು. ಮುಂದೆ ಮಲೆಯಾಳ, ಕೋಚೀನ ಸೀಮೆಯಿಂದಲೂ ಬಹು ಜನರು ಅಲ್ಲಿಗೆ ಬಂದು ಅವಳಿಂದ ಪುನೀತರಾ ದರು. ಅಲ್ಲಿಯ ದೇವಾಲಯದ ಪೂಜಾರಿಗಳೂ ಸುತ್ತಲಿನ ಜನರೂ

ಅವಳ ಸಾನಿಧ್ಯದ ಫಲವಾಗಿ ಶಿವ ಧರ್ಮದಂತೆ ಆಚರಿಸ ಹತ್ತಿದರು. ಬಹು ಜನರು ವೀರಶೈವ ದೀಕ್ಷೆಯನ್ನು ಹೊಂದಿದರು. ಹೀಗೆ ಅವಳು ವೀರಶೈವ ಧರ್ಮ ಪ್ರಸಾರ ಕಾರ್ಯ ಮಾಡುತ್ತ ಅಲ್ಲಿ ಒಂದುವರೆ ವರುಷ ಕಾಲ ಕಳೆದಳು. ಈ ಕಾಲದಲ್ಲಿ ಬೇಡಿದವರಿಗೆ ದಾನವನ್ನು ಇಷ್ಟಾರ್ಥ ವನ್ನು ಕೊಡುತ್ತಿದ್ದುದರಿಂದ ಅವಳು "ವರದಾನಿಯಮ್ಮ' ಎಂಬ ಹೆಸರಿನಿಂದ ಪ್ರಸಿದ್ಧಳಾದಳು.

ಮುಂದೆ ವರದಾನಿಯಮ್ಮನು ತನ್ನ ಪತಿಯೊಡನೆ ರಾಮೇಶ್ವರ ಕ್ಷೇತ್ರಕ್ಕೆ ತೆರಳಿದುಳ. ಅಲ್ಲಿ ಅವಳು ಇರುವಾಗ ಶ್ರೀ ಬಸವೇಶ್ವರನ ದೇವಾಲಯವನ್ನು ಈ ಕ್ಷೇತ್ರಕ್ಕೆ ಸಮೀಪವಾಗಿ ಕಟ್ಟಿಸಿದಳು. ಅವಳು ಬಸವೇಶ್ವರನ ಕೇವಲ ಭಕ್ತಳು. ಅಸಂಖ್ಯ ಜನರು ಕ್ಷೇತ್ರಕ್ಕೆ ಬರುತ್ತಿದ್ದದರಿಂದ ಬಸವೇಶ್ವರನಾರೆಂಬುದು ಅವರಿಗೆ ತಿಳಿಯ ಬೇಕೆಂದು ಅವಳು ಈ ವ್ಯವಸ್ಥೆ ಮಾಡಿದಳೆಂಬುದು ಸ್ಪಷ್ಟವದೆ. ಈ ದೇವಾಲಯವನ್ನು ಕಟ್ಟುವ ಕಾರ್ಯ ಮುಗಿಯುವವರಗೆ ಅವಳು ಈ ಕ್ಷೇತ್ರದಲ್ಲಿದ್ದು ಮುಂದೆ ಅವಳು ಚೋಳ ರಾಜನ ರಾಜಧಾನಿಯಾದ ಕಾಂಚೀ ನಗರಕ್ಕೆ ಬಂದಳು.

ಈ ಕಾಲದಲ್ಲಿ ೧೧೬೩ರಿಂದ ೧೧೮೭ರ ವರೆಗೆ ಅರಸನಾಗಿದ್ದ ೨ನೇ ರಾಜಾಧಿರಾಜನೆಂಬ ಹೆಸರಿನ ಚೋಳ ರಾಜನು ಈ ಪಟ್ಟಣದಲ್ಲಿ ಆಳುತ್ತಿದ್ದನು. ಆದರೆ ಈ ಕಾಲದಲ್ಲಿ ಮೊದಲಿನಂತೆ ಶೈವ ಧರ್ಮದ ಪ್ರಾಬಲ್ಯವು ಇರಲಿಲ್ಲ. ವೈಷ್ಣವ ಮತದ ಪ್ರಸಾರದ ಮೂಲಕ ವಿಷ್ಣು ಧರ್ಮವು ಇಲ್ಲಿ ಪ್ರಬಲವಾಗಿತ್ತು. ವರದಾನಿಯಮ್ಮನು ಇಲ್ಲಿಗೆ ಬಂದ ಬಳಿಕ ಅವಳು ಅಲ್ಲಿಯ ಪ್ರಸಿದ್ಧವಾದ ವಿಷ್ಣು ದೇವಾಲಯವನ್ನು ಸಂದರ್ಶಿಸಲು ಹೋದಳು. ಆದರೆ ದ್ವಾರಪಾಲಕನು ಅವಳನ್ನು ದ್ವಾರದಲ್ಲಿ ತಡೆಯಲು ಅವಳು ಉಪಾಯದಿಂದ ಒಳಗೆ ಗರ್ಭಗುಡಿಯನ್ನು ಪ್ರವೇಶಿಸಲು, ಒಳಗಿದ್ದ ಮೂರ್ತಿಯು ತನ್ನ ಸ್ಥಾನದಿಂದ ಎದ್ದು ಅವಳಿಗೆ ನಮಸ್ಕರಿಸಲು ಆ ಮೂರ್ತಿಯ ತಲೆಯ ಮೇಲೆ ತನ್ನ ಕೈಗಳನ್ನು ಇಡಲು ಅಲ್ಲಿ ಒಂದು "ಪರಶಿವ ಲಿಂಗ ಮುದ್ರೆ" ಯು ಉತ್ಪನ್ನವಾಯಿತು. ಇದನ್ನು ಬ್ರಾಹ್ಮಣರು ಕಂಡು ಅವರು ದ್ವಾರಪಾಲಕರನ್ನು ತಾಡನ ಮಾಡಲು ಆ ಪೆಟ್ಟುಗಳೆಲ್ಲ ಆ ಬ್ರಾಹ್ಮಣರಿಗೆಯೇ ಹತ್ತಲು ಅವರು ಆಶ್ಚರ್ಯಬಟ್ಟು ಅರಸನಿಗೆ ದೂರು ಹೇಳಿದರು. ಆಗ ಅರಸನು ದೇವಾಲಯಕ್ಕೆ ಬಂದು ನಡೆದ ಸಂಗತಿಗಳನ್ನು ತಿಳಿದು

ಕೊಂಡು ವರದಾನಿಯು ಮಹತ್ವಿಕಳೆಂದು ತಿಳಿದು ಅವಳನ್ನೂ ಅವಳ ಪತಿಯನ್ನೂ ಅರಮನೆಗೆ ಕರೆತಂದು ಅವರನ್ನು ಬಹಳ ಸನ್ಮಾನಿಸಿದನು. ಆಗ ಅವನೂ ಅಲ್ಲಿದ್ದ ಬಹು ಜನ ಬ್ರಾಹ್ಮಣರೂ ತಮ್ಮ ಮೊದಲಿನ ವಿಷ್ಣು ಧರ್ಮವನ್ನು ಬಿಟ್ಟು ಶಿವಧರ್ಮವನ್ನು ಸ್ವೀಕರಿಸಿದರು. ವರದಾನಿ ಯಮ್ಮನು ಕೈಯಿಟ್ಟ ವಿಷ್ಣು ಮೂರ್ತಿಯ ತಲೆಯ ಮೇಲೆ ಈಗಲೂ ಶಿವಚಿನ್ಹವಿರುತ್ತದೆ. ಅವಳ ಮೂಲಕ ಹೀಗೆ ರಾಜಧಾನಿಯಲ್ಲಿ ನಡೆದ ಪವಾಡಗಳ ಪ್ರಸಿದ್ಧಿಯು ದೇಶದಲ್ಲಿ ಹೆಚ್ಚುತ್ತ ಹೋಗಲು ಬಹು ಜನ ಕುರುಡ ಕುಂಟರು ವರದಾನಿಯಮ್ಮನು ಕಂಡು ಅವಳಿಂದ ಪುನೀತರಾಗಿ ಆರೋಗ್ಯವನ್ನು ಹೊಂದಿ ಮರಳಹತ್ತಿದರು. ಈ ಮೇರೆಗೆ ವರದಾನಿಯು ಕಾಂಚೀ ಪಟ್ಟಣದಲ್ಲಿ ಕೆಲವು ದಿವಸ ವಾಸಮಾಡಿದಳು.

ಅಲ್ಲಿಂದ ಉಭಯತರು ದೇಶದಲ್ಲಿಯ ಕ್ಷೇತ್ರಗಳನ್ನು ನೋಡಬೇಕೆಂದು ಬಯಸಿ ಉತ್ತರಕ್ಕೆ ತೆರಳಿ ಕಾಶೀವಿಶ್ವೇಶ್ವರನ ದರ್ಶನವನ್ನು ಹೊಂದಿ ಅಲ್ಲಿಂದ ಪ್ರಯಾಗ, ಗಯಾ ಕ್ಷೇತ್ರಗಳನ್ನು ನೋಡಿ ಪುನಃ ದಕ್ಷಿಣಕ್ಕೆ ಹೊರಳಿ ಸೊನ್ನಲಿಗೆಗೆ ಬಂದರು. ಈ ಸ್ಥಳದಲ್ಲಿ ಸಿದ್ಧರಾಮೇಶ್ವರನು ಜಗದ್ಗುರುವಾಗಿ ಅನೇಕ ರಾಜರಿಂದಲೂ ಸಾಮಂತರಿಂದಲೂ ಪೂಜಿತನಾಗಿ ಬಹಳ ಸನ್ಮಾನವನ್ನು ಹೊಂದಿದ್ದನು. ಅವನು ಬಲ್ಲಿದನಾದ ಶಿವಯೋಗಿಯು. ಆದುದರಿಂದ ಉಭಯತರು ಶಿವಯೋಗದ ವಿಚಾರಗಳಲ್ಲಿ ಕೆಲಕಾಲ ಕಳೆದರು. ಆಗ ದಾನಮ್ಮನ ಮನಸ್ಸಿನಲ್ಲಿ ಬಸವಾದಿ ಪ್ರಮಥರ ಸ್ಥಾನಗಳನ್ನು ಸಂದರ್ಶಿಸಬೇಕೆಂಬ ಬಯಕೆಯುಂಟಾಗಲು ಮೊದಲು ಬಸವೇಶ್ವರನು ಐಕ್ಯ ಹೊಂದಿದ ಸ್ಥಳವಾದ ಕೂಡಲಸಂಗಮ ಕ್ಷೇತ್ರಕ್ಕೆ ಬಂದಳು. ಅಲ್ಲಿ ಕೆಲವು ದಿವಸವಿದ್ದು ಅಲ್ಲಿಂದ ಪಶ್ಚಿಮಕ್ಕೆ ೧೮ ಮೈಲುಗಳ ಮೇಲೆ ಇರುವ ಘಟಪ್ರಭಾ ನದಿಯು ಕೃಷ್ಣೆಗೆ ಕೂಡಿದ ಸಂಗಮಸ್ಥಾನಕ್ಕೆ ಬಂದಳು. ಇದಕ್ಕೆ ಸಮೀಪವಾಗಿ ಇಲಿಹಾಳ ಬೊಮ್ಮಯ್ಯ, ಚಂದಿಮರಸ ಮೊದಲಾದ ಶಿವ ಶರಣರ ಸ್ಥಳಗಳಿವೆ. ಅವುಗಳನ್ನು ಅವಳು ಸಂದರ್ಶಿಸಿ ಅಲ್ಲಿಂದ ೨೦ ಮೈಲುಗಳ ಮೇಲೆ ಇರುವ ಬಸವೇಶ್ವರನ ಜನನ ಸ್ಥಾನವಾದ ಬಾಗೇವಾಡಿಗೆ ಬಂದಳು. ಅವಳು ಬಸವೇಶ್ವರನ ಕೇವಲ ಭಕ್ತಳು. ಆದ್ದರಿಂದ ಅವಳನ್ನು ಕಾಣಲು ಬಹು ಜನರು ಅಲ್ಲಿಗೆ ಬಂದು ಅವಳಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಬಸವೇಶ್ವರನು ಬಾಗೇವಾಡಿಯಿಂದ ಹೊರಗೆಹಾಕಲ್ಪಟ್ಟ ಬಳಿಕ ಅವನು ಪುನಃ ಸ್ವಗ್ರಾಮಕ್ಕೆ ಹೋದದ್ದು ಎಲ್ಲಿಯೂ ಉಲ್ಲೇಖವಿಲ್ಲ.

ಆದರೆ ಅವನ ಭಕ್ತಳಾದ ವರದಾನಿಯಮ್ಮನು ಈ ಗ್ರಾಮಕ್ಕೆ ಬಂದಬಳಿಕ ಅಲ್ಲಿಯ ಬಹುಜನ ಬ್ರಾಹ್ಮಣರೂ ಕೂಡ ಅವಳನ್ನು ಆದರಿಸಿ ಶಿವಾನುಭವದ ಉಪದೇಶವನ್ನು ಹೊಂದಿದರೆಂದು ಗ್ರಂಥಗಳಲ್ಲಿ ಉಲ್ಲೇಖಗಳಿವೆ.

ಆಮೇಲೆ ವರದಾನಿಯಮ್ಮನು ತನ್ನ ಪತಿಯೊಡನೆ ಬಾಗೇವಾಡಿಯಿಂದ ಗುಡ್ಡಾಪುರಕ್ಕೆ ಹೋಗಲು ಉದ್ಯುಕ್ತಳಾದಳು ಉಭಯತರು ದಾರಿಯಲ್ಲಿ ೧೨ ಮೈಲುಗಳ ಮೇಲಿರುವ ಮಣ್ಣಗೂಳಿ ಎಂದರೆ ಈಗ ಕರೆಯಲ್ಪಡುವ ಮಸಗೋಳಿ ಎಂಬ ಗ್ರಾಮಕ್ಕೆ ಬಂದರು. ಅವರು ಅಲ್ಲಿಗೆ ಬಂದ ಕಾಲದಲ್ಲಿ ಅಲ್ಲಿಯ ಗೌಡಿತಿಯು ಗೌರಮ್ಮನೆಂಬುವಳಿದ್ದು ಅವಳಿಗೆ ಒಬ್ಬನೇ ಮಗನಿದ್ದು ಅವನು ಮರಣಹೊಂದಿದ್ದನು. ಆಗ ಆಕೆಯು ಅತ್ಯಂತ ದುಃಖಿತಳಾಗಿ ವರದಾನಿಯಮ್ಮನ ಮಹತ್ವವನ್ನು ಅರಿತವಳಾಗಿ ಅವಳಿಗೆ ಮೊರೆಹೊಗಲು ಅವಳು ಬಾಲಕನಿಗೆ ಆಯುಷ್ಯವು ಮುಗಿದಿಲ್ಲ ಎಂಬುದನ್ನು ತನ್ನ ಅಂತಜ್ಞಾನದಿಂದ ತಿಳಿದವಳಾಗಿ ಅವನ ಮೃತ ದೇಹದ ಮೇಲೆ ಕೈಯ್ಯನ್ನು ಆಡಿಸಲು ಅವನು ಎಚ್ಚರಾದವನಂತೆ ಎದ್ದು ಕುಳಿತನು. ಆಗ ಎಲ್ಲರೂ ಸೋಜಿಗಗೊಂಡು ಅವಳು ಮಹತ್ವಿಕಳೆಂದು ತಿಳಿದವರಾಗಿ ಅವಳಿಂದ ಆ ಊರೆಲ್ಲರೂ ವೀರಶೈವ ದೀಕ್ಷೆಯನ್ನು ಹೊಂದಿದರು.

ಆಮೇಲೆ ಉಭಯತರು ತಾವು ಮೊದಲು ಲಿಂಗಾನುಸಂಧಾನ ಮಾಡುತ್ತಿದ್ದ ಗುಡ್ಡಾಪುರಕ್ಕೆ ಬಂದರು. ಅಲ್ಲಿಗೆ ಬರುವಷ್ಟರಲ್ಲಿ ವರದಾನಿಯಮ್ಮನ ಮಾತೆಯಾದ ಶಿರಸಮ್ಮನು ಮತ್ತು ಪಿತನಾದ ಅನಂತರಾಯನು ಅದೇ ಸ್ಥಳದಲ್ಲಿ ಸಮಾಧಿಸ್ಥರಾಗಿದ್ದರು. ಅವರ ಗದ್ದುಗೆಗಳಿಗೆ ಅವರು ಶರಣೆಂದು ಸಾಷ್ಟಾಂಗವೆರಗಿದರು. ಅವರು ಗುಡ್ಡಾಪುರಕ್ಕೆ ಬರುವಷ್ಟರಲ್ಲಿ ಅವರು ಮಾಡಿದ ಮಹತ್ಕಾರ್ಯಗಳು ಎಲ್ಲರಿಗೂ ಅರಿಕೆಯಾಗಿದ್ದವು. ಅದ್ದರಿಂದ ಪುರಜನರು ಅವರನ್ನು ಅತ್ಯಂತ ಸಂಭ್ರಮದಿಂದ ಇದಿರ್ಗೊಂಡು ಸನ್ಮಾನಿಸಿದರು.

ಹೀಗೆ ಕೆಲವು ದಿವಸಗಳು ಗತಿಸಿದ ಮೇಲೆ ವರದಾನಿಯಮ್ಮನು ಇನ್ನು ಮೇಲೆ ಇಹಲೋಕ ಯಾತ್ರೆಯನ್ನು ಮುಗಿಸಿ ಪರಮಾತ್ಮನಲ್ಲಿ ಬೆರೆಯುವ ಸಮಯವು ತನಗೆ ಪ್ರಾಪ್ತವಾಯಿತೆಂದು ತಿಳಿದವಳಾಗಿ ಒಂದು ದಿವಸ ಸಂಭ್ರಮದಿಂದ ತನ್ನ ಪೂಜಾದಿ ಕಾರ್ಯಗಳನ್ನು ನೆರವೇರಿಸುತ್ತಿರುವಾಗ ಅವು ಮುಗಿದು ಪ್ರಸಾದವು ನೆರವೇರುವ ಕಾಲದಲ್ಲಿ ಜನ ಸಮು

ದಾಯವು ಸಾಷ್ಟಾಂಗವೆರಗಿದಾಗ ಅವಳು ತನ್ನ ಲಿಂಗದಲ್ಲಿ ಬೆರೆದಳು. ಆ ದರೆ ಅವಳ ದೇಹವು ನೋಡ ನೋಡುತ್ತಿರುವಾಗ ಭವ್ಯವಾದ ಶಿಲಾ ಮೂರ್ತಿಯಾಗಿ ಅವರೆದುರಿಗೆ ನಿಂತು ಬಿಟ್ಟಿತು. ಆಗ ನೆರೆದ ಭಕ್ತ ಜನರು ವರದಾನಿಯಮ್ಮನ ಮಹತ್ವವನ್ನು ಕಂಡು ತಾವು ಧನ್ಯರಾದೆವೆಂದು ಅವಳನ್ನು ಸ್ತುತಿಸಿದರು.

ವರದಾನಿಯಮ್ಮನು ಸಾಮಾನ್ಯ ಮನುಷ್ಯಳಲ್ಲ. ಅವಳು ರೇವಣ ಸಿದ್ಧೇಶ್ವರ, ಅಲ್ಲಮಪ್ರಭು, ತೋಂಟದಾರ್ಯ ಇವರ ಪಂಙ್ತಿಯಲ್ಲಿ ಬರು ತ್ತಾಳೆ. ಅವಳು ಮಾಡಿದ ಘನತರವಾದ ಕಾರ್ಯಗಳು ಈ ಮಹಾನು ಭಾವರ ಕಾರ್ಯಗಳನ್ನು ಹೋಲುತ್ತವೆ. ಅವರಂತೆಯೇ ಅವಳು ಧರ್ಮ ಪ್ರಸಾರ ಕಾರ್ಯಗಳನ್ನು ಮಾಡಿದ್ದಾಳೆ. ಅವಳು ಹೋದಲ್ಲೆಲ್ಲ ವೀರ ಶೈವ ಧರ್ಮವನ್ನು ಬೋಧಿಸಿ ಬಹು ಜನರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿದ್ದಾಳೆ. ಅವಳು ಅವರಂತೆಯೇ ಮಹಾತ್ಮಳು. ಅವಳು ಪ್ರಸಾದಿ ಪ್ರಾಣಲಿಂಗಿ ಸ್ಥಳಗಳನ್ನು ಒಳಕೊಂಡವಳು. ಬಸವೇಶ್ವರನ ತರುವಾಯ ದೇಶದಲ್ಲಿ ಅನೇಕ ಬಿಕ್ಕಟ್ಟುಗಳು ಉಂಟಾದಾಗ್ಗೆ ಅವಳು ಅಂಜಿ ಅರಣ್ಯ ಪ್ರದೇಶಗಳಿಗೆ ಓಡಿ ಹೋಗಲಿಲ್ಲ. ಶಸ್ತ್ರವನ್ನೆತ್ತಿ ತನ್ನ ಭಕ್ತರನ್ನು ಹುರಿ ದುಂಬಿಸಿ ವೈರಿಗಳೊಡನೆ ಧೈರ್ಯದಿಂದ ಯುದ್ಧ ಮಾಡಿದ್ದಾಳೆ. ಹೇಗೆ ಈ ಕಾಲದಲ್ಲಿ ಚನ್ನಬಸವೇಶ್ವರ, ಮಡಿವಾಳ ಮಾಚಿದೇವ, ಕಿನ್ನರೀ ಬ್ರಹ್ಮ ಯ್ಯಗಳು ಶತ್ರುಗಳ ಕೂಡ ಧರ್ಮಸ್ಥಾಪನೆಗಾಗಿ ಹೋರಾಡಿದರೋ ಹಾಗೆ ಇವಳೂ ಹೋರಾಡಿದ್ದಾಳೆ. ಮತ್ತು ಅದರಲ್ಲಿ ಅವಳು ಯಶಸ್ಸನ್ನೂ ಸಂಪಾ ದಿಸಿದ್ದಾಳೆ. ಅವಳು ಯಾವಲ್ಲಿ ವೀರಶೈವ ಧರ್ಮದ ಪ್ರಸಾರವಿರಲಿಲ್ಲವೋ ಅಂಥ ಸ್ಥಳಗಳಲ್ಲಿ ಅಂದರೆ ದಕ್ಷಿಣ ಮೈಸೂರು ಪ್ರಾಂತ, ಚೋಳ ಕೇರಳ ದೇಶಗಳಲ್ಲಿ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದ್ದಾಳೆ. ರಾಮೇಶ್ವರ ದವರೆಗೂ ಹೋಗಿ ಅಲ್ಲಿ ಬಸವೇಶ್ವರನ ದೇವಾಲಯವನ್ನು ಸ್ಥಾಪಿಸಿ ವೀರ ಶೈವರ ಒಂದು ಸ್ಥಿರವಾದ ಗುರುತನ್ನು ಅಲ್ಲಿ ನಿಲ್ಲಿಸಿದಳು. ಹೇಗೆ ರೇವ ಣಸಿದ್ಧೇಶ್ವರ ತೋಂಟದಾರ್ಯರು ಆಗಿನ ರಾಜರಲ್ಲಿ ತಮ್ಮ ಪ್ರಭಾವವನ್ನು ಬೀರಿದರೋ ಹಾಗೆಯೇ ವರದಾನಿಯಮ್ಮನು ಪರರಾಜರಲ್ಲಿ ತನ್ನ ಪ್ರಭಾ ವವನ್ನು ಕೆಡಹಿದ್ದಾಳೆ. ಹೀಗೆ ಈಕೆಯ ಉಜ್ವಲ ವರ್ತನೆ ಇದೆ. ಇದ ರಿಂದ ಅವಳ ಉಲ್ಲೇಖವನ್ನು ವೀರಶೈವ ಗ್ರಂಥಕಾರರೆಲ್ಲರೂ ತಮ್ಮ ಗ್ರಂಥ

ಗಳಲ್ಲಿ ಯಜ್ಞವಾಗಲೂ ಮಾಡುತ್ತ ಬಂದಿದ್ದಾರೆ. ಅವಳ ವರ್ಚಸ್ಸು ದೇಶ
ದಲ್ಲಿ ಎಷ್ಟು ಪ್ರಬಲವಾಗಿತ್ತೆಂಬುದು ಕೆಳಗೆ ಕಾಣಿಸಿದ ಶಿಲಾಶಾಸನದಿಂದ
ತಿಳಿದು ಬರುತ್ತದೆ.

ವರದಾನಿಯಮ್ಮನು ಇದ್ದ ಗುಡ್ಡಾಪುರವು ತರ್ದೆವಾಡಿ ನಾಡಿನಲ್ಲಿ
ಅಂದರೆ ಈಗಿನ ಉತ್ತರ ವಿಜಾಪುರ ಜಿಲ್ಹೆಯಲ್ಲಿದ್ದು ಈ ಭಾಗವು ೧೨೬೦ ರಿಂದ
೧೩೦೮ ರ ವರೆಗೆ ಆಳಿದ ದೇವಗಿರಿಯ ಯಾದವ ವಂಶದವನಾದ ಮಹಾದೇವ
ರಾಜನ ಅಧೀನದಲ್ಲಿ ಇತ್ತು. ಅವನ ಮಾಂಡಲಿಕನಾಗಿ ಸಾಯಿದೇವನು
ಈ ಭಾಗದಲ್ಲಿ ಅವನ ಪರವಾಗಿ ಇಲ್ಲಿ ರಾಜ್ಯವಾಳುತ್ತಿದ್ದನು. ಅವನು
ವರದಾನಿಯಮ್ಮನ ವಿಷಯವಾಗಿ ಭಕ್ತಿಯನ್ನು ತಾಳಿ ಅವನು ಭೀಮಾತೀರ
ದಲ್ಲಿರುವ ವಾತಾಖ್ಯಪುರವೆಂಬ ಪಟ್ಟಣವನ್ನು ಹೊಸದಾಗಿ ಕಟ್ಟಿಸಿ ಅಲ್ಲಿ
ವರದಾನಿಯಮ್ಮನ ದೇವಾಲಯವನ್ನು ಸ್ಥಾಪಿಸಿದನು. ಈ ದೇವಾಲಯಕ್ಕೋ
ಸ್ಕರ ಅರಸನ ಸಮ್ಮತಿಯಿಂದ ಆದರ ಸುತ್ತಲಿನ ಅನೇಕ ಗ್ರಾಮಗಳಲ್ಲಿದ್ದ
ಭೂಮಿಯನ್ನು ಅವನು ಉಂಬಳಿಯಾಗಿ ಹಾಕಿಕೊಟ್ಟನು. ಈ ಸಂಗತಿಯು
ಶಕೆ ವರುಷ ೧೨೦೦ ಅಂದರೆ ಕ್ರಿಸ್ತ ಶಕೆ ೧೨೭೮ನೆಯ ವೈಶಾಖ ಶುದ್ಧ ೧೫
ಆದಿತ್ಯವಾರ ಜರಿಗಿತೆಂದು ಅಲ್ಲಿಯ ಶಿಲಾಶಾಸನದಿಂದ ತಿಳಿದುಬರುತ್ತದೆ.
ಇದರಲ್ಲಿ ಉಲ್ಲೇಖವಾದ ಕೆಲವು ವಿಷಯಗಳು ವಿಶೇಷವಾಗಿ ಲಕ್ಷಿಸತಕ್ಕಂಥ
ವಿರುತ್ತವೆ. ಈ ದೇವಾಲಯಕ್ಕೋಸ್ಕರ ಗ್ರಾಮದಲ್ಲಿ ಬಂದ ವ್ಯಾಪಾರದ ಸರಕು
ಗಳ ಮೇಲಿನ ಸುಂಕದ ಭಾಗಗಳು ದಾನವಾಗಿ ಕೊಡಲ್ಪಟ್ಟಿವೆ. ಅವು ಬತ್ತ,
ವೀಳ್ಯದ ಎಲೆಗಳು, ಗಾಣದ ಎಣ್ಣೆ, ಉಪ್ಪು ಇವುಗಳು ಇರುತ್ತವೆ. ಆದರೆ
ನೆಯ್ದ ಬಟ್ಟೆಗೆ ಸುಂಕವಿಲ್ಲ ಅಲಂಪುರದಲ್ಲಿ ಶಿವಲಿಂಗವನ್ನು ಸ್ಥಾಪಿಸುವಲ್ಲಿ
ವರದಾನಿಯಮ್ಮನಿಗೆ ಮುಖ್ಯವಾಗಿ ಈ ನೇಗೆಯ ಕಾಯಕದವರು ಅವರು ಬಹಳ
ಸಹಾಯ ಮಾಡಿದ್ದರಿಂದ ಅವರಿಂದ ಯಾವ ಸುಂಕವೂ ಎತ್ತಲ್ಪಟ್ಟರಲಿಕ್ಕಿ
ಲ್ಲೆಂದು ತೋರುತ್ತದೆ. ಹಾಗೆಯೇ 'ಸರ್ವಮಾನ್ಯದೇವಿ'ಯರ ಸಮ್ಮತದ
ಭತ್ತ ಮತ್ತು ದೇವ ಧನ ಮಾರಿದರೆ ಬಂದ ಹಣದ ಮೇಲೆ ಸುಂಕವಿಲ್ಲ.
ಆದರೆ ಇದರಲ್ಲಿ ಹೇಳಿರುವದೇನಂದರೆ, ಪುರದೊಳಗೆ ಅನ್ಯಾಯವಾಗಬಾ
ರದು. ಸಿರುತ್ರಿಕತನವಿರಬಾರದು. ಪಟ್ಟಣದಲ್ಲಿ ಅನಾಹುತಗಳಾದರೆ 'ಅರಸರು
ಮನ್ನೆಯರು ಹಿರಿಯರು ಪಟ್ಟಣದ ಹಲವರು ಸರ್ವಬಾಧೆ ಪರಿಹಾರವಾಗಿ
ಪುರವನ್ನು ಪಾಲಿಸುವದು' ಎಂದು ಹೇಳಿದೆ. ಇದರಿಂದ ವರದಾನಿಯ

ಹೆಸರಿನಿಂದ ಸ್ಥಾಪಿತವಾದ ಈ ಪಟ್ಟಣದಲ್ಲಿ ಎಲ್ಲರೂ ಸನ್ಮಾರ್ಗಿಗಳೂ, ನ್ಯಾಯವಂತರೂ ಇರಬೇಕೆಂಬ ಅಭಿಪ್ರಾಯವು ಇದರಲ್ಲಿದೆ. ಇದರಿಂದ ವರದಾನಿಯು ಜೀವಂತವಿದ್ದಾಗ್ಗೆ ಅವಳು ಎಷ್ಟು ನ್ಯಾಯದಿಂದಲೂ ನೀತಿಯಿಂದಲೂ ವರ್ತಿಸುತ್ತಿದ್ದಳೆಂಬುದನ್ನು ನಾವು ಊಹಿಸಬಹುದು.

ಈ ಶಿಲಾಶಾಸನದಲ್ಲಿ ಉಕ್ತವಾದ ವಾತಾಖ್ಯ ಪುರವು ಈಗ ತದ್ದೇವಾಡಿಯಿಂದ ಪಶ್ಚಿಮಕ್ಕೆ ೧೪ ಮೈಲುಗಳ ಮೇಲೆ ಮತ್ತು ವಿಜಾಪುರ ಪಟ್ಟಣದಿಂದ ಉತ್ತರಕ್ಕೆ ೫೦ ಮೈಲುಗಳ ಮೇಲೆ ಭೀಮಾತೀರದಲ್ಲಿದೆ. ಇದು ಗುಡ್ಡಾಪುರದಿಂದ ೪೦ ಮೈಲು ಉತ್ತರಕ್ಕೆ ಇರುತ್ತದೆ. ಈ ಗ್ರಾಮಕ್ಕೆ ಈಗಿನ ಹೆಸರು 'ವಾಡಪುರಿ' ಎಂದಿದೆ.

ದಾನಮ್ಮನು ತನ್ನ ಜೀವಿತದ ಕಾಲದಲ್ಲಿ ಅತ್ಯಂತ ಪವಿತ್ರತೆಯಿಂದಲೂ ಶುಚಿಯಿಂದಲೂ ಇರುತ್ತಿದ್ದದರಿಂದ ಅವಳ ಸ್ಮಾರಕಕ್ಕಾಗಿ ಕಟ್ಟಿಸಿದ ಈ ಗ್ರಾಮದಲ್ಲಿಯ ಜನರೂ ಕೂಡ ಮೇಲೆ ಶಿಲಾಶಾಸನದಲ್ಲಿ ಹೇಳಿದಂತೆ ನೀತಿಯಿಂದಲೂ ಧರ್ಮದಿಂದಲೂ ವರ್ತಿಸಬೇಕೆಂದು ಅದರಲ್ಲಿ ಹೇಳಿರಬಹುದು. ಈಗಲೂ ಸಹ ದಾನಮ್ಮನು ಅತ್ಯಂತ ಪವಿತ್ರ ದೇವತೆಯೆಂದು ಬಹು ಪ್ರಸಿದ್ಧಳಾಗಿದ್ದಾಳೆ. ಯಾರ ಮನೆಯಲ್ಲಿ ಅವಳು ಇದ್ದಾಳೆಯೋ ಅವರು ಅವಳ ಪೂಜಾಕಾಲದಲ್ಲಿ ಅತ್ಯಂತ ಶುಚಿಯಿಂದಲೂ ಮಡಿ ಮೈಲಿಗೆಯಿಂದಲೂ ಆಚರಿಸುವ ಸಂಪ್ರದಾಯವಿದೆ. ದಾನಮ್ಮನಿಗೆ ನಡೆದುಕೊಳ್ಳುವ ಜನರು ಉತ್ತರ ಕರ್ನಾಟಕ, ಮಹಾರಾಷ್ಟ್ರದ ದಕ್ಷಿಣಭಾಗ, ಸೊಲ್ಲಾಪುರ ಜಿಲ್ಲೆ ಮತ್ತು ನಿಜಾಮ ಇಲಾಖೆಯಲ್ಲಿ ಅಸಂಖ್ಯಾತರಾಗಿದ್ದಾರೆ. ಆಕೆಯ ದೇವಸ್ಥಾನದಲ್ಲಿ ಯಾತ್ರಿಕರು ಈಗಲೂ ಪ್ರತಿದಿವಸ ಇರುತ್ತಾರೆ. ಗುಡ್ಡಾಪುರಕ್ಕೆ ಹೋಗಿಬರಲು ಸಮೀಪದ ರೇಲ್ವೆ ಮಾರ್ಗಗಳಿಲ್ಲ. ಸರಿಯಾದ ಲೈನಮಾರ್ಗಗಳೂ ಇಲ್ಲ. ಯಾತ್ರಿಕರು ಕಾಲು ದಾರಿಗಳಿಂದ ಹೋಗಬೇಕಾಗುತ್ತದೆ. ಈ ಕ್ಷೇತ್ರಕ್ಕೆ ಸಮೀಪವಾಗಿ ಒಂದು ವೃಕ್ಷವಾದರೂ ಇರದೆ ರಣಗುಟ್ಟುವ ಪ್ರದೇಶ, ಎಲ್ಲೆಲ್ಲಿಯೂ ತಗ್ಗು ತೆವರುಗಳಿಂದ ತುಂಬಿದ ಕೊರಕಲುಗಳುಳ್ಳ ಕಲ್ಲು ನಾಡು, ಮಳೆಗಾಲದಲ್ಲಿ ಸ್ವಲ್ಪ ಮಳೆಯಾದ ಕೂಡಲೆ ದೊಡ್ಡ ನದಿಗಳಂತೆ ಹರಿಯುವ ಹಳ್ಳಕೊಳ್ಳಗಳು, ಬಿಸಿಲುಗಾಲದಲ್ಲಿ ರೌದ್ರ ಮುದ್ರೆಯುಳ್ಳ ಭಯಾನಕ ಸೃಷ್ಟಿಯ ದೃಶ್ಯ, ಈ ತೆರದ ಪ್ರದೇಶದಲ್ಲಿ ವರದಾನಿಯಮ್ಮನು ಶಿವಯೋಗಸಾಧನೆಯನ್ನು ಮಾಡಿದ್ದಾಳೆ.

ಇಂಥ ಪ್ರದೇಶಗಳಲ್ಲಿಯೇ ಪರಮಾತ್ಮನು ತನ್ನ ಭಕ್ತರಿಗೆ ದೃಗ್ಗೋಚರ ನಾಗುವಂತೆ ತೋರುತ್ತದೆ. ಇಂಥಲ್ಲಿಯೇ ಶೂರರೂ ಸಾಹಸಿಗರೂ ಧರ್ಮ ಪುರುಷರೂ ಆಗಿಹೋಗಿದ್ದು ಕಂಡುಬರುತ್ತದೆ.

ಪ್ರಸಿದ್ಧ ಕವಿಯಾದ ಲಕ್ಕಣ್ಣದಂಡೇಶನು ವರದಾನಿಗುಡ್ಡಮ್ಮಯು ಗುಡ್ಡಾಪುರದಿಂದ ೩೦ ಗಾವುದಗಳ ಮೇಲೆ ಮಲಾಪಹಾರೀ ನದಿಯ ದಂಡೆಯ ಮೇಲೆ ಇರುವ ಅಲಂಪುರದಲ್ಲಿ ಬಾಲಬ್ರಹ್ಮೇಶನನ್ನು ಸ್ಥಾಪಿಸಿದಳೆಂದು ತನ್ನ ಕಾವ್ಯದಲ್ಲಿ ಬರೆದಿದ್ದಾನೆ. ಆದರೆ ಈ ಹೆಸರಿನ ಗ್ರಾಮವಾಗಲಿ ಇಲ್ಲವೆ ಬಾಲಬ್ರಹ್ಮೇಶನ ದೇವಾಲಯವಾಗಲಿ ಈ ನದಿಯ ದಂಡೆಯ ಮೇಲೆ ಎಲ್ಲಿಯೂ ಇಲ್ಲ. ಆದ್ದರಿಂದ ಇದು ತಪ್ಪು ವಿವರಣೆ ಎಂದು ನಮಗೆ ತೋರುತ್ತದೆ. ಅಲಂಪುರವು ರಾಯಚೂರ ಜಿಲ್ಹೆಯಲ್ಲಿ ಒಂದು ಅತ್ಯಂತ ಪವಿತ್ರವಾದ ಸ್ಥಳವೆಂದು ಪ್ರಸಿದ್ಧಿಯನ್ನು ಹೊಂದಿದೆ. ಅಲ್ಲಿ ಬಾಲಬ್ರಹ್ಮೇಶನ ವಿಸ್ತಾರವಾದ ದೇವಾಲಯವೂ ಇದೆ. ತುಂಗಭದ್ರಾತೀರದಲ್ಲಿಯೇ ಇದು ಇದೆ- ಆದುದರಿಂದ ವರದಾನಿಯು ಯುದ್ಧ ಮಾಡಿದ ಸ್ಥಳವು ಇದೇ ಆಗಿರಬಹುದೆಂದು ನಾವು ಊಹಿಸುತ್ತೇವೆ.

ಲಕ್ಕಣ್ಣದಂಡೇಶನು ತನ್ನ ಕಾವ್ಯದಲ್ಲಿ ಅಲಂಪುರ ಗ್ರಾಮವು ಆಕೆಯು ಇದ್ದ ಗ್ರಾಮದಿಂದ ೩೦ ಗಾವುದ ಅಂದರೆ ೯೦ ಮೈಲು ದೂರವಾಗಿ ಇತ್ತೆಂದು ಬರೆದಿದ್ದಾನೆ. ಆದರೆ ಗುಡ್ಡಾಪುರವು ಇಲ್ಲಿಂದ ಸರಳರೇಖೆಯಲ್ಲಿ ೨೩೦ ಮೈಲು ದೂರವಾಗುತ್ತದೆ. ಆದರೆ ವರದಾನಿಯು ಇದ್ದ ಆದವಾನಿಯು ಇಲ್ಲಿಂದ ೮೦ ಮೈಲು ಇದೆ. ಆದ್ದರಿಂದ ಅವಳು ಇಲ್ಲಿ ಇದ್ದಾಗ್ಗೆ ಅವಳು ಅಲಂಪುರದ ಮೇಲೆ ದಂಡೆತ್ತಿಹೋಗಿರಬಹುದೆಂದು ನಮಗೆ ತೋರುತ್ತದೆ. ಇಷ್ಟರಲ್ಲಿ ಅವಳ ಬಗ್ಗೆ ಅತ್ಯಂತ ಭಕ್ತಿಯುಳ್ಳವರಾದವರು ಬಹು ಜನರು ಈ ಭಾಗದಲ್ಲಿದ್ದು ಅವರು ದಾನಮ್ಮನ ಸೈನಿಕರಾಗಿ ಅವಳ ಕೈಕೆಳಗೆ ಯುದ್ಧ ಮಾಡಿರುವದು ಸಂಭವನೀಯವಿರುತ್ತದೆ.

ಉಮರಾಣಿಯು ಭೀಮಾತೀರದಲ್ಲಿ ವಿಜಾಪುರ ಜಿಲ್ಲೆಯಲ್ಲಿದೆ. ಇನ್ನೊಂದು ಉಮರಾಣಿಯು ಗುಡ್ಡಾಪುರದ ದಕ್ಷಿಣಕ್ಕೆ ೧೨ ಮೈಲುಗಳ ಮೇಲಿರುತ್ತದೆ. ಈ ಎರಡನೇ ಉಮರಾಣಿಯೇ ವರದಾನಿಯಮ್ಮನ ಜನ್ಮ ಸ್ಥಳವೆಂದು ನಮಗೆ ತೋರುತ್ತದೆ. ಯಾಕಂದರೆ ಈಗಲೂ ಸಹ ಈ ಉಮರಾಣಿಯಿಂದಲೇ ನೈವೇದ್ಯವು ಗುಡ್ಡಾಪುರಕ್ಕೆ ಹೋಗದಹೊರತು ದಾನಮ್ಮನ

ಪೂಜೆಯಾಗುವದಿಲ್ಲ. ಇದಕ್ಕೆ ಸಮೀಪವಾಗಿ ೧೪ ಮೈಲುಗಳ ಮೇಲೆ ಸಂಕ ಗ್ರಾಮವಿದ್ದು ಇದು ಆಕೆಯ ಗಂಡನ ಗ್ರಾಮವಿರಬೇಕು. ಆದರೆ ಭೀಮಾ ತೀರದಲ್ಲಿ ಬೇರೊಂದು ಸಂಕ ಗ್ರಾಮವು ಇದ್ದು ಅದು ಆಕೆಯ ಗಂಡನ ಊರು ಇದ್ದಹಾಗೆ ತೋರುವದಿಲ್ಲ.

ದಾನಮ್ಮನ ದೇವಾಲಯವು ವಿಸ್ತಾರವಾದ ಪ್ರಾಕಾರಗಳಿಂದಲೂ ಉನ್ನತವಾದ ಗೋಪುರಗಳಿಂದಲೂ ಕೂಡಿಕೊಂಡು ಭವ್ಯವಾಗಿದೆ. ಇದರ ಪ್ರಾಕಾರವು ೨೪೦ ಫೂಟು ಉದ್ದ ೧೬೫ ಫೂಟು ಅಗಲವಾಗಿರುತ್ತದೆ. ಆವಾರದ ಪಶ್ಚಿಮ ದಿಕ್ಕಿಗೆ ಸೋಮೇಶ್ವರ ಲಿಂಗದ ದೇವಾಲಯವಿದೆ. ಇದು ಪುರಾತನ ಕಾಲದ್ದು. ಅಲ್ಲಿ ಒಂದು ಶಿಲಾಶಾಸನವೂ ಇದೆ. ಈ ಸೋಮೇಶನ ನೆರೆಯಲ್ಲಿಯೇ ವರದಾನಿಯಮ್ಮನು ತನ್ನ ಶಿವಯೋಗವನ್ನು ಸಾಧಿಸಿದ್ದಾಳೆ. ಆತನೇ ಅವಳ ಇಷ್ಟದೇವತೆಯಾಗಿರಬಹುದು. ದೇವಾಲಯದ ಸಮೀಪವಾಗಿ ವೀರಭದ್ರನ ಮತ್ತು ಮಲ್ಲಿಕಾರ್ಜುನನ ಗುಡಿಗಳು ಇರುತ್ತವೆ. ಇವಲ್ಲದೆ ನಂದೀಕೋಲು ಮತ್ತು ಗುರುಪಾದುಕೆಯ ಸ್ಥಾನಗಳೂ ಇಲ್ಲಿ ಇವೆ.

ದಾನಮ್ಮನ ವಿಗ್ರಹವು ೪॥ಅಡಿ ಎತ್ತರವಾಗಿ ಮನುಷ್ಯಾಕೃತಿಯಾಗಿದ್ದು ಅದು ಶಿಲೆಯದಾಗಿದೆ. ಕಾಲು ಮಡಿಚಿಕೊಂಡು ಎಡಗೈಯ್ಯಲ್ಲಿ ಇಷ್ಟಲಿಂಗ ಬಲಗೈಯ್ಯಲ್ಲಿ ಜಪಮಾಲಿಕೆ ಇದೆ. ದಾನಮ್ಮನು ತಾನು ಶಿವಯೋಗದಲ್ಲಿ ಕುಳಿತ ರೀತಿಯು ಇದಾಗಿರಬಹುದು. ಅವಯವಗಳು ತುಂಬಿಕೊಂಡು ಸ್ವಲ್ಪ ಗಾತ್ರವುಳ್ಳವಾಗಿವೆ. ಎದ್ದುಕಾಣುವಂಥ ಗುಳ್ಳೆಗಣ್ಣುಗಳನ್ನು ತಲೆಗೆ ಬಿರಿಯಾಗಿ ಕಟ್ಟಿದ ಹೆಣೆದ ಕುಲಾಯಿಯನ್ನು ನೋಡಿದಲ್ಲಿ ಆಕೆಯ ಪಾರ್ಥಿವ ರೂಪಕ್ಕೆ ಇದು ಸಮೀಪವರ್ತಿಯಾಗಿರಬಹುದೆಂದು ತೋರುತ್ತದೆ.

ದಾನಮ್ಮನು ಲಿಂಗೈಕ್ಯಳಾದ ಬಳಿಕ ಅವಳ ಮಹತ್ವವು ಮತ್ತಿಷ್ಟು ಹೆಚ್ಚುತ್ತ ಹೋಗಿ ಅವಳು ಹಿಂದುಗಡೆ ಪಾರ್ವತಿಯ ಅವತಾರವೆಂದು ಭಾವಿಸಲ್ಪಟ್ಟಳು. ಲಕ್ಕಣ್ಣ ದಂಡೇಶನು ತನ್ನ ಕಾವ್ಯದಲ್ಲಿ ಆಕೆಯನ್ನು ಹೀಗೆಯೇ ವರ್ಣಿಸಿದ್ದಾನೆ.

ಈ ಭಾಗವು ಭಾರತದ ಕಡೆಗೆ ಇದೆ. ಇದು ಪೂರ್ಣ ಕನ್ನಡ ಪ್ರದೇಶವು. ಅದರೆ ದಕ್ಷಿಣ ಸಾತಾರೆಗೆ ಕೂಡಿಸಲ್ಪಟ್ಟಿದೆ. ಗುಡ್ಡಾಪುರವು ಜತ್ತ ಸಂಸ್ಥಾನಕ್ಕೆ ಮೊದಲು ಸೇರಿದ್ದಾಗಿತ್ತು. ಈ ದೇವಸ್ಥಾನದ ಎಲ್ಲ ವ್ಯವಸ್ಥೆಯು ಜತ್ತ

ಸರಕಾರದ ಸ್ವಾಧೀನದಲ್ಲಿತ್ತು. ಈಗ ಈ ಸಂಸ್ಥಾನವು ಖಾಲಸಾ ಆಗಿದೆ. ಗುಡಿಗೆ ಬರುವ ಆದಾಯವನ್ನು ಸರಕಾರದವರು ದೇವಾಲಯದ ಕಟ್ಟಡ, ಅದರ ಸೇವಾದಿಗಳ ವ್ಯವಸ್ಥೆ, ಯಾತ್ರಿಕರ ಸೌಕರ್ಯ, ಇವುಗಳಿಗಾಗಿ ಉಪಯೋಗಿಸುತ್ತಾರೆ.

ದಾನಮ್ಮನ ಮೊದಲಿನ ಹೆಸರು ಲಿಂಗಮ್ಮನೆಂದಾಗಿತ್ತು. ಆದರೆ ಕಲ್ಯಾಣಕ್ಕೆ ಬಂದ ಬಳಿಕ ಅವಳಿಗೆ ದಾನಮ್ಮನೆಂಬ ಹೆಸರು ಪ್ರಾಪ್ತವಾಯಿತು. ಅವಳು ಧನಿಕಳಾಗಿ ಇತರರಿಗೆ ದಾನ ಕೊಡುತ್ತಿದ್ದುದಕ್ಕಾಗಿ ಅವಳಿಗೆ ಈ ಹೆಸರು ಬಂದಿರುವದಿಲ್ಲ. ಅವಳು ಶ್ರೀಮಂತಳಿದ್ದಳೆಂದು ಅವಳ ಚರಿತ್ರೆಯಲ್ಲಿ ಉಲ್ಲೇಖವೆಲ್ಲಿಯೂ ಇಲ್ಲ. ಷಟ್ ಕರ್ಮಗಳಲ್ಲಿ ದಾನ ಪ್ರತಿಗ್ರಹಗಳು ಬರುತ್ತಿದ್ದು ಇವು ವೀರಶೈವರಿಗೆ ಅನ್ವಯಿಸುವದಿಲ್ಲ. ಅರ್ಪಿತದಿಂದ ಕ್ರಿಯೆಗಳನ್ನು ಮಾಡುವದು ಶಿವಾನುಭವದ ಮುಖ್ಯ ತತ್ವವಾಗಿದೆ. ಈ ರೀತಿ ದಾನಮ್ಮನು ಆಚರಿಸುತ್ತಿದ್ದುದರಿಂದ ಬಸವೇಶ್ವರನು ಅವಳಿಗೆ ಈ ಹೆಸರನ್ನು ಕೊಟ್ಟಂತೆ ತೋರುತ್ತದೆ. ಮುಂದೆ ದಾನಮ್ಮನು ವೀರಶೈವ ಧರ್ಮದ ಪ್ರಚಾರ ಕಾರ್ಯ ಮಾಡುತ್ತ ದೇಶವನ್ನು ಸಂಚರಿಸುವಾಗ ಅವಳು ಬಹು ಜನರಿಗೆ ಅವರ ಇಷ್ಟಾರ್ಥಗಳನ್ನು ಸಲ್ಲಿಸಿದ್ದಾಳೆ. ಆದ್ದರಿಂದ ಅವಳಿಗೆ ವರದಾನಿ, ಅಥವಾ ವರದಾನಿಯಮ್ಮ ಎಂಬ ಹೆಸರು ಪ್ರಾಪ್ತವಾಗಿರುತ್ತದೆ. ಅವಳು ಗುಡ್ಡಾಪುರದಲ್ಲಿದ್ದು ಅಲ್ಲಿ ಶಿವಯೋಗವನ್ನು ಸಾಧಿಸಿ ಕಡೆಗೆ ಅಲ್ಲಿಯೇ ಐಕ್ಯಳಾದ್ದರಿಂದ ಸಾಮಾನ್ಯವಾಗಿ ಜನರು ಅವಳನ್ನು ವರದಾನಿ ಗುಡ್ಡಮ್ಮ ಅಥವಾ ಗುಡ್ಡಾಪುರದ ದಾನಮ್ಮ ಅಥವಾ ಸಂಕ್ಷಿಪ್ತವಾಗಿ ಗುಡ್ಡಮ್ಮ ಎಂದು ಕರೆಯುತ್ತ ಬಂದಿದ್ದಾರೆ. ಆದರೆ ಆಕೆಯ ನಿಜವಾದ ಹೆಸರು ದಾನಮ್ಮ ಎಂದು ಇದ್ದು ಇದೇ ಹೆಸರನ್ನು ಅವಳಿದ್ದ ಭಾಗದ ಜನರು ತಮ್ಮ ಮಕ್ಕಳಿಗೆ ಇಡುವ ಸಾಂಪ್ರದಾಯವು ಈಗಲೂ ಇದೆ.

ದೇವಿಯರ ತ್ರಿವಿದಿಯಲ್ಲಿ ಅವಳ ಉಲ್ಲೇಖವಿದೆ. ಅದು ಹೇಗೆಂದರೆ–

> ವಾರಿಜಾಕ್ಷನ ಕಿತ್ತು ಮಾರ ವೈರಿಯ ನಿಲಿಸಿ
> ಧಾರಣಿಯ ಮೇಲೆ ಜಪವೆತ್ತೀಶನ ಬೆರೆದ
> ಧೀರೆ ಗುಡ್ಡವ್ವೆ ಶರಣಾಗು.

ವರದಾನಿ ಗುಡ್ಡಮ್ಮಯು ಶಿವಯೋಗವನ್ನು ಆಚರಿಸುತ್ತ ಪರಮಾತ್ಮನಲ್ಲಿ ಬೆರೆದಳೆಂದು ಇದರಲ್ಲಿ ಹೇಳಿದೆ. ಅವಳ ಹೆಸರು ಗಣಸಹಸ್ರದಲ್ಲಿದೆ. ಈಕೆಯು ಬಸವೇಶ್ವರನ ಸಮಕಾಲೀನಳಾಗಿದ್ದಾಳೆ.

———

# ೨೪. ತಿಲಕವ್ವೆ.

ವಿಜಾಪುರ ಜಿಲ್ಲೆಯಲ್ಲಿ ಮುದ್ದೇಬಿಹಾಳ ತಾಲೂಕಿನಲ್ಲಿ ಹೇರೂರೆಂಬ ಗ್ರಾಮವಿದೆ. ಇದು ತಾಳಿಕೋಟೆಯ ವಾಯುವ್ಯಕ್ಕೆ ಆರು ಮೈಲುಗಳ ಮೇಲಿದೆ. ಅಲ್ಲಿಯ ಒಂದು ಜೈನ ಕುಟುಂಬದಲ್ಲಿ ತಿಲಕವ್ವೆಯು ಜನಿಸಿದಳು. ಅವಳು ಚಿಕ್ಕಂದಿನಲ್ಲಿ ಜೈನಳಾಗಿಯೇ ಬೆಳೆದಳು. ಆದರೆ ಈ ನಾಡಿನಲ್ಲಿ ಆಗ ಬಾಹೂರು ಬ್ರಹ್ಮಯ್ಯ, ಮುದನೂರಿನ ದೇವರದಾಸಿಮಯ್ಯ, ಕೆಂಭಾವಿಯ ಭೋಗಣ್ಣ, ನಾವದಿಗೆಯ ಗುಡ್ಡವ್ವೆ, ಅಗ್ನಿಯಲ್ಲಿಯ ಅಗ್ಗವಣೆಯ ಹೊನ್ನಯ್ಯ ಹೀಗೆ ಅನೇಕ ಶಿವಶರಣರು ಜನಿಸಿ ಪ್ರಸಿದ್ಧಿಯನ್ನು ಹೊಂದಿದ್ದರಿಂದ ಶಿವಾನುಭವದ ತತ್ವಗಳು ಇಲ್ಲಿ ಎಲ್ಲಕಡೆಗೂ ಪ್ರಸಾರವಾಗಿದ್ದವು. ಆದ್ದರಿಂದ ತಿಲಕವ್ವೆಯು ತನ್ನ ಜೈನಧರ್ಮವನ್ನು ಬಿಟ್ಟುಕೊಟ್ಟು ಶಿವಧರ್ಮವನ್ನು ಪಾಲಿಸುವವಳಾದಳು. ಅವಳು ತನ್ನ ಗ್ರಾಮದಲ್ಲಿದ್ದ ಶಿವಾಲಯಕ್ಕೆ ದಿನಾಲು ಹೋಗಿ ಶಿವಾರ್ಚನೆಯನ್ನು ಮಾಡಲು ಪ್ರಾರಂಭಿಸುವಳು. ಆದರೆ ಇದು ಅವಳ ತಾಯಿತಂದೆಗಳಿಗೆ ರುಚಿಸಲಿಲ್ಲ. ಆದ್ದರಿಂದ ಅವರು ಅವಳು ಅಲ್ಲಿಗೆ ಹೋಗುವದನ್ನು ಪೂರ್ಣವಾಗಿ ನಿಲ್ಲಿಸಿಬಿಟ್ಟರು. ಆಗ ಅವಳು ಅತ್ಯಂತ ಖಿನ್ನಮನಸ್ಕಳಾಗಿ ಪರಮಾತ್ಮನಿಗೆ—ಎಲೋ ಶಿವನೇ ಹರನೇ, ನನ್ನ ತಾಯಿತಂದೆಗಳು ನಿನ್ನ ಪೂಜೆಯನ್ನು ಮಾಡಗೊಡುವದಿಲ್ಲ. ಇನ್ನು ಮೇಲೆ ನಿನ್ನನ್ನು ಧ್ಯಾನಿಸುವದೇ ನನ್ನ ಪೂಜೆಯಾಯಿತು. ಅದನ್ನು ಸ್ವೀಕರಿಸು ಎಂದು ಬೇಡಿಕೊಂಡು ಅವಳು ಗುಪ್ತಭಕ್ತಳಾಗಿ ಪರಮಾತ್ಮನ ಧ್ಯಾನ ಮಾಡುತ್ತ ಮನೆಯಲ್ಲಿಯೇ ಇರಹತ್ತಿದಳು.

ಹೀಗಿರುತ್ತಿರಲು ಅವಳಿಗೆ ಯೌವ್ವನವು ಪ್ರಾಪ್ತವಾಯಿತು. ಆಗ ಅವಳ ತಾಯಿ ತಂದೆಗಳು ತಮ್ಮ ಸೋದರಳಿಯನಾದ ಜಿನಸೇನಸೆಟ್ಟಿಗೆ ಅವಳನ್ನು ಕೊಟ್ಟು ಲಗ್ನ ಮಾಡಬೇಕೆಂದು ಬಯಸಿದರು. ಆದರೆ ತಿಲಕವ್ವೆಯು ಜೈನನನ್ನು ತಾನು ಲಗ್ನವಾಗುವದಿಲ್ಲೆಂದು ಎಷ್ಟು ಹೇಳಿದರೂ ಅವರು ಕೇಳಲಿಲ್ಲ. ಅವರು ಒಬ್ಬ ಜೈನನಿಗೆ ಬಲಾತ್ಕಾರದಿಂದ ಲಗ್ನ ಮಾಡಿದರು.

ಲಗ್ನವಾದ ಬಳಿಕ ಜಿನಸೇನಸೆಟ್ಟಿಯು ತಿಲಕವ್ವೆಯನ್ನು ಕರೆದುಕೊಂಡು ತನ್ನ ನಿಬ್ಬಣದವರೊಡನೆ ತನ್ನ ಗ್ರಾಮಕ್ಕೆ ಹೊರಟನು. ಆದರೆ ತಿಲಕವ್ವೆಗೆ ಆಗ ಎಷ್ಟು ಮಾತ್ರವೂ ಸಮಾಧಾನವಿರಲಿಲ್ಲ. ಮನಸ್ಸಿನಲ್ಲಿಯೇ ಬಹಳ

ನೊಂದುಕೊಂಡು ಹಲುಬುತ್ತಿದ್ದಳು. ಹೀಗಿರುವಲ್ಲಿ ನಿಬ್ಬಣಿಗರು ಊರಿಗೆ ಬರುತ್ತಿರುವಾಗ ತಿಲಕವ್ವೆಯು ಮಧ್ಯ ದಾರಿಯಲ್ಲಿ ಒಂದು ಶಿವಾಲಯವಿರು ವದನ್ನು ಕಂಡು ಯಾರಿಗೂ ತಿಳಿಯದಂತೆ ಅಲ್ಲಿಗೆ ಹೋಗಿ ಅಲ್ಲಿದ್ದ ಲಿಂಗ ವನ್ನು ಗಟ್ಟಿಯಾಗಿ ಅವುಚಿಕೊಂಡು— ಶಿವನೇ, ಹರನೇ, ಶಿವಭಕ್ತ ಕುಲ ದೀಪಕನೇ, ನನ್ನ ಈ ಹೆಣ್ಣು ಜನ್ಮವನ್ನು ಬಿಡಿಸು. ನನ್ನನ್ನು ರಕ್ಷಿಸು, ರಕ್ಷಿಸು, ಎಂದು ಮೊರೆ ಇಡಹತ್ತಿದಳು. ಆದರೆ ಅಷ್ಟರಲ್ಲಿ ನಿಬ್ಬಣಿಗರು ಅವಳು ತಮ್ಮ ಕೂಡ ಇಲ್ಲದ್ದನ್ನು ಕಂಡು ಅವರು ಅವಳನ್ನು ಹುಡುಕುತ್ತ ಬರಲು ಅವಳು ಶಿವಾಲಯಕ್ಕೆ ಹೋಗಿರುವಳೆಂಬುದು ಅವರಿಗೆ ತಿಳಿಯಿತು. ಇದು ಜಿನಸೇನನಿಗೆ ಗೊತ್ತಾಗಲು ಅವನು ಅತ್ಯಂತ ಕ್ರೋಧಾವಿಷ್ಟನಾಗಿ ಒಂದು ತೀಕ್ಷ್ಣವಾದ ಅಲಗನ್ನು ತೆಗೆದುಕೊಂಡು ದೇವಾಲಯವನ್ನು ಪ್ರವೇಶಿಸಿ ದನು. ಆಗ ಆ ದೀನ ಅಬಲೆಯು ಅವನ ಆ ಭೀಕರ ಸ್ವರೂಪವನ್ನು ಕಂಡು ಅವನು ತನ್ನನ್ನು ಕೊಂದುಹಾಕಲು ಬಂದಿರುವನೆಂಬುದನ್ನು ತಿಳಿದವಳಾಗಿ ಭಯಭೀತಳಾಗಿ ಲಿಂಗವನ್ನು ಮತ್ತಿಷ್ಟು ಗಟ್ಟಿಯಾಗಿ ಅಪ್ಪಿಕೊಂಡು ಆಕ್ರೋಶ ಮಾಡಹತ್ತಿದಳು. ಅವಳ ಆಕ್ರೋಶವು ಪರಮಾತ್ಮನಿಗೆ ಅರಿಕೆಯಾಯಿತೆಂದು ತೋರುತ್ತದೆ. ಆಗ ಒಂದು ಅದ್ಭುತವಾಯಿತು. ಅವಳು ಬೇಡಿಕೊಳ್ಳು ತ್ತಿದ್ದಂತೆ ಅವಳಿಗೆ ಹೆಣ್ಣು ರೂಪು ಹೋಗಿ ಗಂಡು ರೂಪಾಯಿತು. ಆ ರೂಪ ವನ್ನು ಕಂಡಾಕ್ಷಣವೇ ಅವಳ ಗಂಡನು ಹಿಂಜರಿದನು. ಸಮೀಪಕ್ಕೆ ಬಂದಿದ್ದ ನಿಬ್ಬಣಿಗರೆಲ್ಲರೂ ಚಕಿತರಾದರು. ಅವರು ತಿಲಕವ್ವೆಯು ಮಹಾ ಶಿವಶರ ಣೆಯು, ಅವಳು ನಿಜವಾದ ಭಕ್ತೆಯು, ಎಂದು ತಿಳಿದವರಾಗಿ ಅವರು ಶಿವಲಿಂಗದೆದುರಿನಲ್ಲಿ ಪೊಡಮಟ್ಟರು ಮತ್ತು ಶಿವನನ್ನು ಭಜಿಸಹತ್ತಿದರು. ಜಿನಸೇನನಿಗೆ ಪಶ್ಚಾತ್ತಾಪವಾಯಿತು. ಅವನು ಕೇವಲ ಶಿವಭಕ್ತಿಯುಳ್ಳ ವನಾದನು. ಆಗ ಅವನು ತನ್ನ ಪತ್ನಿಯಿಂದಲೇ ಸಂಸ್ಕಾರ ಪೂರ್ವಕ ವಾಗಿ ಮಂತ್ರೋಪದೇಶವನ್ನು ಹೊಂದಿ ವೀರಶೈವ ಧರ್ಮವನ್ನು ಪಾಲಿ ಸುವವನಾದನು. ಮುಂದೆ ಸತಿಪತಿಗಳೀರ್ವರು ಶಿವಾನುಭವಿಗಳಾಗಿ ಕಾಲಾಂತ ರದಲ್ಲಿ ತಮ್ಮ ಲಿಂಗದಲ್ಲಿ ಬೆರೆದರು.

ತಿಲಕವ್ವೆಯು ಬಹಳ ಹಿಂದಿನವಳು. ಅವಳ ಹೆಸರು ಗಣಸಹಸ್ರ ದಲ್ಲಿ ಬಂದಿದೆ. ಅವಳು ಹೇರೂರು ಹೆಣ್ಣೆಂದು ಬಹು ಪ್ರಸಿದ್ಧಳಾಗಿದ್ದಾಳೆ. ದೇವಿಯರ ತ್ರಿವಿಧಿಯಲ್ಲಿ ಅವಳ ಉಲ್ಲೇಖವಿರುತ್ತದೆ. ಅದು ಹೇಗೆಂದರೆ:–

ಪುರುಷ ಭವಿಯಾಗಿರಲು | ಅವನ ಧಿಕ್ಕರಿಸಿ
ಹರನೆಂಬ ಪುರುಷನೊಡಗೂಡಿ ಪೋಗಿರ್ದ
ವಿರತೆ ತಿಲಕವ್ವೆ ಶರಣಾಗು ‖

ಹೀಗೆ ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣಿಯರು ಉದ್ಭವಿಸಿ ಶಿವಾನುಭವದ ಮಹತ್ವವನ್ನು ಎಲ್ಲ ಕಡೆಗೂ ಬೀರಿದ್ದಾರೆ.

———

## ೨೫ ಅಮ್ಮವ್ವೆ ಅಥವಾ ಬಿಜ್ಜಮಹಾದೇವಿ.

ಮೈಸೂರು ಸೀಮೆಯಲ್ಲಿ, ಬಿಜ್ಜಾವರವೆಂಬ ಗ್ರಾಮವಿದೆ. ಅದು ತುಮಕೂರಿನಿಂದ ಈಶಾನ್ಯಕ್ಕೆ ೨೮ ಮೈಲುಗಳ ಮೇಲೆ ಇದೆ. ಅಲ್ಲಿ ಶಂಕರನೆಂಬ ಶಿವಬ್ರಾಹ್ಮಣನು ವಾಸಿಸುತ್ತಿದ್ದನು. ಅವನ ಹೆಂಡತಿಯ ಹೆಸರು ಭಾಗೀರಥಿಯು. ಅವರಿಗೆ ಅಮ್ಮವ್ವೆ ಎಂಬ ಮಗಳು ಹುಟ್ಟಿದಳು. ಅವಳು ಮನೆಯಲ್ಲಿ ಯಾವಾಗಲೂ ನಡೆಯುತ್ತಿದ್ದ ಶಿವಗೋಷ್ಠಿಗಳನ್ನೂ ಹರನ ಕಥನಗಳನ್ನೂ ಲಕ್ಷ್ಯಪೂರ್ವಕವಾಗಿ ಕೇಳುವಳು. ಶಿವಾಲಯಕ್ಕೆ ತಪ್ಪದೆ ಹೋಗುವಳು. ಇದರಿಂದ ಅವಳಲ್ಲಿ ಶಿವಭಕ್ತಿಯು ದಿನೇ ದಿನೇ ಹೆಚ್ಚುತ್ತಹೋಯಿತು.

ಅಮ್ಮವ್ವೆಯು ಯೌವ್ವನಸ್ಥಳಾದ ಬಳಿಕ, ಅವಳ ಸೋದರತ್ತೆಯು ತನ್ನ ಮಗನಿಗೆ ಅವಳನ್ನು ಕೊಟ್ಟು ಲಗ್ನ ಮಾಡಬೇಕೆಂದು ತಂದೆಗೆ ಕೇಳಲು ಅವನು:— ನನ್ನ ಮಗಳು ಲಿಂಗಪೂಜೆಯನ್ನಲ್ಲದೆ ಮತ್ತೊಂದನ್ನರಿಯಳು. ನಿನ್ನ ಮಗನು ಅನ್ಯದೈವ ಪೂಜಕನು ಅದುಕಾರಣ ನಿನ್ನ ಮಗನಿಗೆ ಅವಳನ್ನು ಕೊಡಲಾರೆನೆನಲು, ಸೋದರತ್ತೆಯು— ನಾವು ಕುಲಹೀನರೆಂದು ನೀನು ಕೊಡಲೊಲ್ಲೆಯೋ ಏನು? ಹೀಗಾದರೆ ನಾನು ಇಲ್ಲಿಯೇ ಪ್ರಾಣ ಬಿಡುವೆನು ಎಂದೆನ್ನಲು, ತಂದೆಯು ಮಗಳ ಪುಣ್ಯವಿದ್ದಂತೆ ಆಗಲಿ, ಎಂದು ಅವಳನ್ನು ಅವಳ ಮಗನಿಗೆ ಕೊಟ್ಟು ಲಗ್ನ ಮಾಡಿದನು.

ಆದರೆ ಲಗ್ನವಾದ ಬಳಿಕ ಒಂದು ತಿಂಗಳಲ್ಲಿಯೇ ಅಮ್ಮವ್ವೆಯ ಗಂಡನು ಮೃತಪಟ್ಟನು. ಆಮೇಲೆ ಸ್ವಲ್ಪ ದಿವಸಗಳಲ್ಲಿ ಅವಳ ತಾಯಿತಂದೆಗಳೂ ಕೂಡ ಸತ್ತುಹೋದರು. ಹೀಗೆ ಅಮ್ಮವ್ವೆಯು ಅನಾಥಳಾದಳು. ಆಗ

ಅವಳು ವೀರಶೈವ ದೀಕ್ಷೆಯನ್ನು ಹೊಂದಿ. ಶಿವಾನುಭವದ ನಡೆಯಂತೆ ನಡೆಯುತ್ತ ನೂಲುವ ಕಾಯಕವನ್ನು ಕೈಕೊಂಡಳು. ಅವಳು ಹತ್ತಿಯನ್ನು ಹಿಂಜಿ ನೂತು ತನ್ನ ಉಪಜೀವನವನ್ನು ಸಾಗಿಸಹತ್ತಿದಳು. ಅದರಲ್ಲಿ ತನಗೆ ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ವಿನಿಯೋಗಿಸುವಳು.

ಹೀಗಿರಲು ಒಂದುದಿನ ಒಬ್ಬ ಚರಮೂರ್ತಿಯು ಆಕೆಯ ಮನೆಗೆ ಬರಲು ಅವಳು ಅವನನ್ನು ಸತ್ಕರಿಸಿ ನೀವಾರೆಂದು ಕೇಳಲು— ನಾವು ಶಿವನ ಭಕ್ತರು, ದೇಶಾಂತರಿಗಳು, ಎಂದು ಹೇಳಿದನು. ಅದಕ್ಕೆ ಅಮ್ಮವ್ವೆಯು ಶಿವನೆಂತಿರುವನೆಂದು ಕೇಳಲು. ಆ ಚರಮೂರ್ತಿಯು— ಶಿವನು ಅಗ್ನಿನೇತ್ರವುಳ್ಳವನು, ಅವನು ಜಟಾಧಾರಿಯು, ಅವನ ಜಟೆಯಲ್ಲಿ ಗಂಗೆ ಇದ್ದಾಳೆ. ಸರ್ವಾಂಗದಲ್ಲಿ ಭಸ್ಮ, ಉಡುಪು ಹುಲಿದೊಗಲು, ಅವನು ಹೊದೆಯುವದು ಗಜ ಚರ್ಮ, ಸ್ಮಶಾನವಾಸಿಯು, ಸರ್ಪಾಭರಣನು, ಉರದಲ್ಲಿ ಶಿರೋಮಾಲೆ, ಅವನಿಗೆ ತಂದೆತಾಯಿಗಳಿಲ್ಲ. ಆದರೆ ಜಗತ್ತಿಗೆ ತಾನೇ ತಂದೆ ತಾಯಿಯಾಗಿದ್ದಾನೆ. ಅವನಿಗೆ ಬಂಧು ಬಳಗವಿಲ್ಲ. ಆದರೆ ಜಗತ್ತಿಗೆ ತಾನೇ ಬಂಧುವು, ಎಂದು ಶಿವನ ಸ್ವರೂಪವನ್ನು ವಿಸ್ತಾರವಾಗಿ ಬಣ್ಣಿಸಿ ಹೇಳಿದನು. ಆದರೆ ಅವನು ಹೇಳಿದ್ದರಲ್ಲಿ ಶಿವನಿಗೆ ತಂದೆತಾಯಿಗಳಿಲ್ಲ, ಅವನಿಗೆ ಬಂಧುಬಳಗವಿಲ್ಲ ಎಂದು ಹೇಳಿದ್ದು ಮಾತ್ರ ಅವಳ ಮರ್ಮಕ್ಕೆ ತಾಕಿತು. ಅವಳು—ಶಿವನಿಗೆ ತಾಯಿ ಇಲ್ಲವೇ ಎಂದು ಕೇಳಲು, ಆ ಚರಮೂರ್ತಿಯು— ಅವನಿಗೆ ತಾಯಿ ಇಲ್ಲ. ಇದು ಅವನಿಗೆ ಸಹಜವಾದುದು, ಎಂದೆನ್ನಲು, ಅಮ್ಮವ್ವೆಯು ಆಗ ಸುಮ್ಮನಾಗಿ ಚರಮೂರ್ತಿಯನ್ನು ಚನ್ನಾಗಿ ಉಪಚರಿಸಿ ಅವನನ್ನು ಕಳಿಸಿಕೊಟ್ಟಳು.

ಅವನು ಹೋದಬಳಿಕ ಅಮ್ಮವ್ವೆಯು ಚಿಂತಾಕ್ರಾಂತಳಾಗಿ ತನ್ನಲ್ಲಿಯೇ— ಶಿವನಿಗೆ ಯಾರೂ ಸಮೀಪದವರು ಇಲ್ಲವೇ? ಅವನಿಗೆ ತಾಯಿ ಇಲ್ಲವೇ? ತಾಯಿ ಇದ್ದರೆ ಅವನ ತಲೆ ಹೀಗೆ ಜಡೆಗಟ್ಟುವದೇ? ಅವನು ಚರ್ಮವನ್ನು ಹೊದೆಯಗೊಡುವಳೇ? ಸ್ಮಶಾನದಲ್ಲಿ ಇರಗೊಡುವಳೇ? ಅಕಟಕಟಾ, ಶಿವನಿಗಾರೂ ಇಲ್ಲವೇ? ಎಂದು ಚಿಂತೆ ಮಾಡುತ್ತ ನಿದ್ರೆ ಹೋದಳು.

ಅವಳು ನಿದ್ರೆಹೋದಾಗ ಅವಳ ಸ್ವಪ್ನದಲ್ಲಿ ಶಿವನು ಜಂಗಮ ರೂಪವಾಗಿ ಬಂದು—ಎಲೋ ಭಕ್ತೆಯೇ, ನೀನು ಚಿಂತೆ ಮಾಡಬೇಡ. ಈ ಊರ ಸಮೀ

ಪದಲ್ಲಿ ಒಂದು ಅರಣ್ಯವಿದೆ. ಅಲ್ಲಿ ನಾನು ತೊಟ್ಟಿಲಲ್ಲಿ ಶಿಶುವಾಗಿರುತ್ತೇನೆ. ಉದಯದಲ್ಲಿದ್ದು ನನ್ನನ್ನು ಅಲ್ಲಿ ಕಾಣು, ಎಂದು ಹೇಳಿ ಅಂತರ್ಧಾನನಾದನು. ಆಗ ಅವಳು ಮುಂಜಾವಿನಲ್ಲಿ ಎಚ್ಚತ್ತು ಶಿವನನ್ನು ಹುಡುಕುತ್ತ ಅರಣ್ಯಕ್ಕೆ ಹೊರಟಳು. ಅರಣ್ಯದಲ್ಲಿ ಅವಳು ಅಲೆದಾಡುವಾಗ ಅವಳಿಗೆ ಶಿವಧ್ಯಾನವೇ ಧ್ಯಾನವು. ಶಿವನನ್ನು ಶಿಶುವಾಗಿ ನಾನು ಯಾವಾಗ್ಗೆ ಕಂಡೇನು, ಅವನನ್ನು ನಾನು ಎಂದು ಸೇರೇನು, ಎಂದು ಆತುರಪಡುತ್ತ ಅವಳು ಶಿವನನ್ನು ಹುಡುಕುತ್ತ ಹೊರಟಳು. ಮಾರ್ಗದಲ್ಲಿ ಒಂದು ಎರಳೆಯು ಮರಿಯು ತಾಯ ಕೂಡ ಹೋಗುವದನ್ನು ಕಂಡು ಅವಳು– ಶಿವನೇ ನೀನೆನಗೆ ಮಕ್ಕಳನ್ನು ಕೊಡಲಿಲ್ಲ. ಈ ಎರಳೆಯ ಬಾಳುವೆಯಕಿಂತ ನನ್ನ ಬಾಳುವೆ ಕಡೆಯದಾಯಿತಲ್ಲಾ, ಎಂದು ನುಡಿಯುತ್ತ ಮುಂದೆ ಹೋಗಲು, ಅಲ್ಲಿ ಒಂದು ಮರದ ಮೇಲೆ ಒಂದು ಕಪಿಯು ತನ್ನ ಮರಿಯನ್ನು ಅವುಚಿಕೊಂಡು ಕುಳಿತದ್ದನ್ನು ಕಂಡು–ಪರಮಾತ್ಮನೇ, ಇವುಗಳಿಗೆಲ್ಲ ಮಕ್ಕಳನ್ನು ನೀನು ಕೊಟ್ಟೆ. ನೀನು ನನಗೆ ಕೊಡಲಿಲ್ಲ. ಈ ಕಪಿಯಕಿಂತಲೂ ನಾನು ಕನಿಷ್ಠಳಾದೆನಲ್ಲ, ಎಂದು ಹಲುಬುತ್ತ ಶಿವನನ್ನು ಹುಡುಕುತ್ತ ಅರಣ್ಯ ಮಧ್ಯದಲ್ಲಿ ಸಂಚರಿಸಹತ್ತಿದಳು. ಹೀಗೆ ಅವಳು ಸಂಚರಿಸುತ್ತಿರುವಾಗ ಶಿವನು ತೊಟ್ಟಿಲಲ್ಲಿ ಶಿಶುವಾಗಿ ಮಲಗಿದ್ದ ಸ್ಥಳಕ್ಕೆ ಬಂದಳು ಮತ್ತು ಅಲ್ಲಿ ಶಿವನನ್ನು ಕಂಡಳು. ಶಿಶುವನ್ನು ನೋಡಿದ ಕೂಡಲೇ ಅವಳಿಗೆ ಪ್ರೇಮವು ಉಕ್ಕೇರಿತು. ಶಿಶುವನ್ನು ಎತ್ತಿಕೊಂಡು ಮುದ್ದಾಡಿದಳು.

ಆ ಶಿಶುವು ಮಲಗಿದ್ದ ತೊಟ್ಟಿಲವು ಅಗಾಧವಾದ ದ್ದು. ಆ ಶಿಶುವಿಗೆ ನಿರಾಕಾರವಾದ ಬಯಲೇ ಅದರ ತೊಟ್ಟಿಲು, ಶಿವನ ಜಡೆಗಳು ಅದಕ್ಕೆ ಪಟ್ಟಾವಳಿಯು. ಶಿವಾಗಮಗಳೇ ತೊಟ್ಟಿಲು ಹಗ್ಗಗಳು, ಚಂದ್ರಮನು ಅರಳೆಲೆ, ಪಣೆಗಣ್ಣು ಕಸ್ತೂರಿಯ ತಿಲಕ, ಫಣಿಕುಂಡಲಗಳು ಮಾಗಾಯ್ಗಳು, ನಾಗಕಂಕಣವು ಕೈಕಡಗವು, ಪಾದನಲ್ಲಿದ್ದ ಫಣಿಗಳು ಅದಕ್ಕೆ ಕಾಲಗಡಗಗಳು, ಬ್ರಹ್ಮನ ತಲೆ ಮುದ್ರೆಯುಂಗುರ, ಗಜ ಚರ್ಮವು ಶಿಶುವಿಗೆ ಹಸರು ಹೊದಿಕೆ, ಆದಿ ಆಧಾರವು ಅದಕ್ಕೆ ಉಡಿದಾರ, ಹೀಗೆ ಶಿವನು ಶಿಶುವಿನ ವೇಷಧಾರಣ ಮಾಡಿಕೊಂಡು ತೊಟ್ಟಿಲಲ್ಲಿ ಕುಳಿತುಕೊಂಡು ಅರಣ್ಯ ಮಧ್ಯದಲ್ಲಿ ತನ್ನ ತಾನೇ ತೂಗಿಕೊಳ್ಳುತ್ತ ಕುಳಿತದ್ದನ್ನು ನೋಡಿದಳು. (೧) ಅಂಥ ಶಿಶುವನ್ನು ಅಮ್ಮವ್ವೆಯು ನೋಡಿದ ಕೂಡಲೆ ಅವಳಲ್ಲಿ

---

(೧) ಇದು ಹರಿಹರ ಮಹಾ ಕವಿಯ ವರ್ಣನೆ.

ಪ್ರೇಮವು ಉಕ್ಕೇರಿತು. ಅದನ್ನು ಅವಳು ಎತ್ತಿಕೊಂಡು ಮನೆಗೆ ಬಂದು ಮನೆಯ ತೊಲೆಗೆ ಒಂದು ತೊಟ್ಟಿಲನ್ನು ಕಟ್ಟಿ ಅದರಲ್ಲಿಟ್ಟು ಅದನ್ನು ಜೋಕೆ ಮಾಡಲು ಆರಂಭಿಸಿದಳು.

ಅವಳು ಆ ಕೂಸಿಗೆ ನಾಗೇಶನೆಂಬ ಹೆಸರನ್ನಿಟ್ಟಳು. ಮತ್ತು ಅದಕ್ಕೆ ಬಾಲ್ಯೋಪಚಾರಗಳನ್ನು ಮಾಡಹತ್ತಿದಳು. ಆ ಶಿಶುವು ತನ್ನ ಹೊಟ್ಟೆಯ ಕೂಸು ಎಂದು ತಿಳಿದು ಅದಕ್ಕೆ ಮೊಲೆಯೂಡಿಸುವಳು. ಆಡಿಸುವಳು, ಮುದ್ದಿಕ್ಕುವಳು, ಜೋಗುಳವಾಡುವಳು. ಜೋಗುಳವಾಡುವಲ್ಲಿ ಸುಕೃತಾತ್ಮನೇ ಜೋ ಜೋ, ಅನಾಥನಾಥನೇ ಜೋ ಜೋ, ಮೂದೇವರ ಪಿತನೇ ಜೋ ಜೋ ಎಂದು ಶಿವನನ್ನು ಕುರಿತು ಹಾಡುವಳು. ಹೀಗೆ ಆ ಶಿಶುವಿನ ಮೇಲೆ ಅವಳಿಗಾದ ಅಕ್ಕರತೆಗೆ ಎಣೆ ಇಲ್ಲ.

ಹೀಗಿರುವಲ್ಲಿ ಪರಮಾತ್ಮನು ಆಕೆಯ ಮನಸ್ಸನ್ನು ಪರೀಕ್ಷಿಸಬೇಕೆಂದು ಒಂದು ದಿವಸ ಮೊಲೆಯುಣ್ಣುವದನ್ನು ಬಿಟ್ಟನು. ಅವನ ಎದೆ ಹೊಟ್ಟೆಯುಬ್ಬಿಕೊಂಡು ಮುಖ ಬಿರಿತುಕೊಂಡು ಅತ್ಯಂತ ಕಸವಿಸಿಪಡಹತ್ತಿದನು. ಅಮ್ಮವ್ವೆಯು ಅದನ್ನು ನೋಡಿ ಹೌಹಾರಿದಳು. ಅನೇಕ ಉಪಚಾರಗಳನ್ನು ಮಾಡಿದಳು. ಆದರೆ ಯಾವುದರಿಂದಲೂ ಪ್ರಯೋಜನವಾಗಲಿಲ್ಲ. ಕೂಸಿನ ಬೇನೆಯು ಹೆಚ್ಚುತ್ತ ಹೋಯಿತು. ಆಗ ಅಮ್ಮವ್ವೆಯು ಕೂಸಿನ ಮರಣವನ್ನು ನೋಡಲಾರನೆಂದು ಅದಕ್ಕೂ ಮೊದಲು ತಾನು ಸಾಯಬೇಕೆಂದು ಬಯಸಿ ತನ್ನ ಕತ್ತನ್ನು ಕತ್ತರಿಸಿಕೊಳ್ಳುವಾಗ ಶಿವನು ಮೆಚ್ಚಿ ಪಂಚಮುಖ, ದಶಭುಜ, ನಾಗಕಂಕಣ, ಜಟಾಧಾರಿಯಾಗಿ ತೊಟ್ಟಿಲಲ್ಲಿಯೇ ಪ್ರತ್ಯಕ್ಷನಾಗಿ ಕಾಣಿಸಿಕೊಂಡನು. ಅವನನ್ನು ಅಮ್ಮವ್ವೆಯು ಕಂಡು ಅತ್ಯಂತ ಹರುಷಿತಳಾಗಿ ಅವನಿಗೆ ಪೊಡಮಡಲು ಪರಮಾತ್ಮನು ಅವಳಿಗೆ ನಿನಗೇನು ಬೇಕು ಬೇಡು ಎನಲು, ಅಮ್ಮವ್ವೆಯು— ನನಗೇನುಬೇಡ, ನೀನು ನಿರೋಗಿಯಾಗುವದು ನನಗೆ ಬೇಕು, ನೀನು ಶಾಶ್ವತ ತನುವಾಗಿರುವದು ಬೇಕು. ನಿನ್ನಿಂದ ಬೇಡುವದು ಇದೊಂದೇ ವರವು. ಇಷ್ಟೇ ನನಗೆ ಸಾಕು, ಎಂದು ನುಡಿದಳು. ಆಗ ಪರಮಾತ್ಮನು ನಕ್ಕು— ಎಲೌ ತಾಯೇ, ನಿನ್ನಂಥ ತಾಯಿಗಳು ನನಗೆ ಇರಲು ವ್ಯಾಧಿಗಳು ನನಗೇನು ಮಾಡುವವು ? ನಾನು ನಿಶ್ಚನಾಗಿದ್ದೇನೆ. ನಾನು ಕ್ಷೇಮವಾಗಿರುವೆನು. ಆದರೆ ಇನ್ನುಮೇಲೆ ನಿನಗೂ

ನಿತ್ಯತ್ವವು ಪ್ರಾಪ್ತವಾಗಲಿ ಎಂದು ನುಡಿದು, ಅಲ್ಲಿಯೇ ಅಂತರ್ಧಾನನಾದನು. ಆಮೇಲೆ ಅಮ್ಮವ್ವೆಯು ತನ್ನ ಲಿಂಗದಲ್ಲಿ ವಿನೋದಿಸುತ್ತ ಕೆಲಕಾಲದ ಮೇಲೆ ಬಿಜ್ಜಾವರದಲ್ಲಿಯೇ ಸಮಾಧಿಯನ್ನು ಹೊಂದಿದಳು.

ಅಮ್ಮವ್ವೆಗೆ ಬಿಜ್ಜಾಂಬೆ, ಬಿಜ್ಜಮಹಾದೇವಿ ಎಂಬ ಬೇರೆ ಹೆಸರುಗಳಿವೆ. ಬಿಜ್ಜಾಂಬೆ ಇದು ಆಕೆಯ ಹುಟ್ಟಿದಾಗಿನ ಹೆಸರು. ಅವಳು ಪ್ರಸಿದ್ಧಳಾದ ಬಳಿಕ 'ಅಮ್ಮವ್ವೆ' ಎಂದು ಜನರಲ್ಲಿ ಸಾರ್ಥಕ ನಾಮವನ್ನು ಪಡೆದಳೆಂದು ತೋರುತ್ತದೆ. ಅಮ್ಮವ್ವೆಯು ಅಥವಾ ಬಿಜ್ಜಮಹಾದೇವಿಯು ವೀರಶೈವ ಶಿವಶರಣ ಶರಣೆಯರಲ್ಲಿ ಬಹು ಪ್ರಖ್ಯಾತಳಾಗಿದ್ದಾಳೆ. ಗಣಸಹಸ್ರದಲ್ಲಿ ಅವಳ ಹೆಸರು ಬಂದಿದೆ. ದೇಪಿಯರ ತ್ರಿವಿಧಿಯಲ್ಲಿ ಅವಳ ವರ್ಣನೆ ಇರುವದು ಹೇಗೆಂದರೆ—

ಮಾಯಾ ವಿರಹಿತನಿಗೆ । ತಾಯಿ ತಾನಿಲ್ಲೆಂದು
ಒಯ್ಯಾರದಿಂದ ಮೊಲೆಯೂಡಿ ಸಲಹಿರ್ದ
ತಾಯಿ ಅಮ್ಮವ್ವೆ ಶರಣಾಗು ॥

ಬಿಜ್ಜಾಪುರ ಗ್ರಾಮದ ಹೆಸರಾದರೂ ಬಿಜ್ಜವ್ವೆ ಈ ಹೆಸರಿನಿಂದಲೇ ಬಂದಿರಬಹುದೆಂದು ತೋರುತ್ತದೆ.

# ೨೬ ಪಿಟ್ಟವ್ವೆ

ಕರಿಕಾಲ ಚೋಳನೆಂಬ ಚೋಳರಾಜನು ಕಾಂಚೀ ಪಟ್ಟಣದಲ್ಲಿ ರಾಜ್ಯವಾಳುತ್ತಿದ್ದನು. ಅವನು ಕ್ರಿ. ಶ. ೧೧೭೦ ರಿಂದ ೧೧೫೨ ರ ವರೆಗೆ ಬಹು ಘನತೆಯಿಂದ ರಾಜ್ಯವಾಳಿದನು ಅವನ ರಾಜ್ಯದಲ್ಲಿ ಮುದುಗೊಂಡೆ ಎಂಬ ಗ್ರಾಮವಿದ್ದು ಅಲ್ಲಿ ಪಿಟ್ಟವ್ವೆ ಎಂಬ ಹೆಸರಿನ ಶಿವಶರಣೆಯು ವಾಸ ಮಾಡುತ್ತಿದ್ದಳು. ಅವಳು ಲಿಂಗಾನುಭವಿಯು, ಶಿವಶರಣರ ನಡೆಯಂತೆ ನಡೆಯುವವಳು. ಅವಳು ಮುಪ್ಪಾಗುವ ವರೆಗೂ ಬಹು ಭಕ್ತಿಯಿಂದ ಆಚರಿಸುತ್ತ ಮುಪ್ಪಿನಕಾಲದಲ್ಲಿ ಅವಳ ಪರಿಪಾಲನೆ ಮಾಡುವಂಥವರು ಯಾರೂ ಉಳಿಯಲಿಲ್ಲ. ಆದ್ದರಿಂದ ಅವಳು ದಿನಾಲು ದೋಸೆಗಳನ್ನು ಮಾಡುವ ಕಾಯಕವನ್ನು ಕೈಕೊಂಡು ಅವುಗಳನ್ನು ಮಾರಿ ಅದರಿಂದ ಬಂದ ಹಣದಿಂದ ತಾನು ಉಪಜೀವಿಸುತ್ತ, ಉಳಿದದ್ದನ್ನು ಗುರುಲಿಂಗ ಜಂಗಮ ದಾಸೋಹಕ್ಕೆ ಅರ್ಪಿಸುತ್ತ ಬಂದಳು.

ಕರಿಕಾಲ ಚೋಳನು ತನ್ನ ರಾಜ್ಯದಲ್ಲಿ ತನ್ನ ತಾಯಿಯ ಸ್ಮರಣಾರ್ಥವಾಗಿ ನದಿಗೆ ಒಂದು ಬಹು ಬಲವಾದ ಮತ್ತು ವಿಸ್ತಾರವಾದ ಕಟ್ಟೆಯನ್ನು ಕಟ್ಟಿ ನದಿಯ ನೀರು ಹೊಲಗಳಲ್ಲಿ ಹಾಯ್ದು ಬರುವಂತೆ ಮಾಡಿದ್ದನು. ಆದರೆ ಒಂದು ದಿವಸ ವಿಪರೀತ ಮಳೆಯಾಗಲು ಕೆರೆಯ ಕಟ್ಟೆಯು ಒಡೆದು ಹೋಯಿತು. ಆಗ ಚೋಳರಾಜನು ತನ್ನ ರಾಜ್ಯದಲ್ಲಿ ಬಹುಜನರನ್ನು ಬಿಟ್ಟಿಯಾಗಿ ಹಿಡಿದು ಅವರಿಂದ ಮಣ್ಣು ಅಗಿಸಿ ಕಟ್ಟೆಗೆ ಅದನ್ನು ಹಾಕಿಸಲು ಪ್ರಾರಂಭಿಸಿದನು. ಅವನ ರಾಜ್ಯದಲ್ಲಿ ಎಂದೆಂದು ಮಣ್ಣು ಅಗಿಯದಂಥ ಮಾಂಡಲಿಕ ರಾಜರೂ ನಿಯೋಗಿಗಳೂ ಇದ್ದರು. ಆದರೂ ಅವರನ್ನು ಸಹ ಬಿಡದೆ ಸರತಿಯ ಮೇಲೆ ಎಲ್ಲರಿಂದಲೂ ಮಣ್ಣನ್ನು ಅಗಿಸುತ್ತ ಬಿದ್ದು ಹೋದ ಕಟ್ಟೆಯ ಭಾಗವನ್ನು ತುಂಬಿಸುತ್ತ ಬಂದನು. ಅವನ ಅಜ್ಞೆಗೆ ವಿರುದ್ಧವಾಗಿ ಹೋಗಲು ಯಾರಿಗೂ ಧೈರ್ಯವಾಗಲಿಲ್ಲ. ಹೀಗಿರಲು ಮಣ್ಣನ್ನು ಹೊತ್ತುಹಾಕುವ ಸರತಿಯು ಪಿಟ್ಟವ್ವೆಗೆ ಬಂದಿತು. ಆಗ ರಾಜನ ಸೇವಕರು ಅವಳ ಮನೆಗೆ ಬಂದು ಕಟ್ಟೆಯ ಕೆಲಸಕ್ಕೆ ಬಿಟ್ಟಿ ಬಾರೆಂದು ಅವಳಿಗೆ ಹೇಳಿದರು. ಆಗ ಅವಳು— "ಶಿವಶಿವಾ, ನಾನು ಮುಪ್ಪಿನವಳು. ಇದು ನನಗಾಗದು ಎನ್ನಲು ಅವರು ಮಣ್ಣಹೊತ್ತಲ್ಲದೆ ಕಟ್ಟೆಯ ಕೆಲಸವಾಗದು, ನಡೆ ಎಂದು ಅವಳ ಮೇಲೆ ಬಲಾತ್ಕಾರ ಮಾಡಹತ್ತಿದರು.

ಆಗ ಅವಳು ಅಯ್ಯೋ, ಈ ಮಣ್ಣಿನ ಕೆಲಸ ನನ್ನಿಂದಾಗದು. ನಾನು ಬರುವದಿಲ್ಲೆಂದು ಅನ್ನಲು ಅವರು— "ಹಾಗಿದ್ದರೆ ನಿನ್ನ ಸಲುವಾಗಿ ಬೇರೊಬ್ಬನನ್ನು ನಿನ್ನ ಬದಲು ಕೊಡು" ಎಂದು ಹೇಳಿದರು. ಅದಕ್ಕೆ ಅವಳು— "ಮನೆಯಲ್ಲಿರುವವಳು ನಾನೊಬ್ಬಳೇ. ನನಗೆ ಬೇರೆ ಯಾರೂ ಇಲ್ಲ" ಎಂದೆನ್ನಲು ಅವರು— "ಹಾಗಾದರೆ ನಾವು ಬಿಡುವದಿಲ್ಲ, ನಡೆ" ಎಂದು ಅವಳನ್ನು ಬಲಾತ್ಕಾರದಿಂದ ಶಬ್ಬಿಕೊಂಡು ಹೋಗಹತ್ತಿದರು.

ಆಗ ಪರಮಾತ್ಮನು ಈ ಅನ್ಯಾಯುವನ್ನು ನೋಡಿ ಸಹಿಸಲಾರದೆ ಒಬ್ಬ ಒಕ್ಕಲಿಗನ ವೇಷವನ್ನು ಹಾಕಿಕೊಂಡು ಗುದ್ದಲಿಯನ್ನು ಕೈಯಲ್ಲಿ ಹಿಡಿದುಕೊಂಡು ಬಂದು ಪಿಟ್ಟವ್ವೆಗೆ ನಿನ್ನ ಬಿಟ್ಟಿಯನ್ನು ನಾನು ಮಾಡುತ್ತೇನೆ. ಅದಕ್ಕೆ ನೀನು ನಿನ್ನ ಕಾಯಕದ ಹರಕು ಮುರುಕು ದೋಸೆಯನ್ನು ಕೊಡುವೆಯಾ? ಎಂದು ಕೇಳಲು ಅವಳು— ಹಾಗೆಯೇ ಆಗಲಿ ಎಂದೆನ್ನಲು ಅವನು ಆ ರಾಜ ಸೇವಕರೊಡನೆ ಕೆರೆಗೆ ಬಂದು ಮಣ್ಣನ್ನು ಅಗಿಯುತ್ತ ಅದನ್ನು ಪಿಟ್ಟವ್ವೆಯ ಸಲುವಾಗಿ ಕಟ್ಟೆಗೆ ಹಾಕಹತ್ತಿದನು.

ಶಿವನು ಮಣ್ಣನ್ನು ಅಗಿಯುವಾಗ ಎಲ್ಲರಕ್ಕಿಂತಲೂ ಹೆಚ್ಚಾಗಿ ಕೆಲಸಮಾಡುತ್ತಾ ಬಂದನು. ಆದರೆ ಅವನು ಮಧ್ಯದಲ್ಲಿ ಕೆಲಸವನ್ನು ನಿಲ್ಲಿಸಿ ನಾನಾ ತರದ ಹಾಡುಗಾರಿಕೆಗಳನ್ನೂ ನೃತ್ಯಗಳನ್ನೂ ವಿಪರೀತವಾಗಿ ಮಾಡಹತ್ತಿವನು. ಅರಸನ ಆಳುಗಳು ಅವನು ಬಹಳ ಕೆಲಸ ಮಾಡಿದ್ದನ್ನು ಅಲಕ್ಷಿಸಿ ನೀನು ಇನ್ನಿಷ್ಟು ಕೆಲಸ ಮಾಡೆಂದು ಬಯ್ದು ಬೆತ್ತದಿಂದ ಅವನನ್ನು ಹೊಡೆಯ ಹತ್ತಿದರು. ಆದರ ಆಪೆಟ್ಟುಗಳು ಅವನಿಗೆ ಹತ್ತದೇ ಅವು ಅರಸನ ಆಳುಗಳಿಗೆಯೇ ಹತ್ತಲು ಅವರು ನೋವಿನಿಂದ ಬಳಲಹತ್ತಿದರು. ಕಟ್ಟೆಯ ಮೇಲೆ ಕೆಲಸ ಮಾಡುವವರೆಲ್ಲ ಇದನ್ನು ನೋಡಿ ಇದು ಬಹಳ ಸೋಜಿಗವೆಂದು ಆ ಕೆಲಸಗಾರನ ಸುತ್ತಲೂ ಗುಂಪಾಗಿ ನೆರೆದು ಗದ್ದಲ ಮಾಡಹತ್ತಿದರು. ಅಷ್ಟರಲ್ಲಿ ಕಟ್ಟೆಯಮೇಲೆ ಏನೋ ಗಲಾಟೆ ನಡೆದಿವೆಂಬುದನ್ನು ಕರಿಕಾಲ ಚೋಳನಿಗೆ ತಿಳಿಯಲು ಅವನು ತನ್ನ ನಿಯೋಗಿಗಳೊಂದಿಗೆ ಕೂಡಲೇ ಅಲ್ಲಿಗೆ ಬಂದು ವಿಚಾರಿಸಲು ಒಬ್ಬ ಮಣ್ಣು ಹೊರುವವನನ್ನು ಹೊಡೆಯಲು ಹೀಗಾಯಿತೆಂದು ಅವನಿಗೆ ತಿಳಿದು ಬದಿತು. ಆಗ ರಾಜನು ಇದು ಇವನ ಕೂಟ ಅಥವಾ ಕೃತಕವಿರಬೇಕೆಂದು ತಿಳಿದು ಸೇವಕರಿಗೆ— ಅವನನ್ನು ಇನ್ನೊಮ್ಮೆ ಚನ್ನಾಗಿ ಹೊಡಿ

ಯಿರೆಂದು ಹೇಳಲು ಅವರು ಹಾಗೆಯೇ ಹೊಡೆಯಲು ಆ ಹೊಡೆತಗ
ಳೆಲ್ಲ ಈ ಸಾರೆ ಅರಸನ ನಿಯೋಗಿಗಳಿಗೆಯೇ ತಾಕಿದವು.

ಹೀಗಾಗಲು ಚೋಳ ರಾಜನು ಆಶ್ಚರ್ಯಬಟ್ಟು ಹೀಗೇಕಾಯಿ
ತೆಂದು ಕೇಳುತ್ತಿರುವಾಗ ಆ ಒಕ್ಕಲಿಗನು ಪಿಟ್ಟವ್ವೆಯ ಸಲುವಾಗಿ ಕೆಲಸ
ಮಾಡುತ್ತಿದ್ದಾನೆ. ಇಂಥ ಅದ್ಭುತವಾಗ ಬೇಕಾದರೆ ಅವಳ ಸಲುವಾಗಿ
ಪರಮಾತ್ಮನೇ ಇಲ್ಲಿಗೆ ಬಂದು ದುಡಿಯುತ್ತಿರಬೇಕು ಎಂದು ಅವನಿಗೆ
ತೋರಿತು. ಈಗ ಅವನು ಭಕ್ತಿಯಾದ ಒಬ್ಬ ಮುದುಕಿಯನ್ನು ಬಿಟ್ಟಿಗೆ
ಹಚ್ಚಿದ್ದಕ್ಕೋಸ್ಕರ ಹೀಗಾಯಿತು. ಹೀಗೆ ಬಿಟ್ಟೀ ಕೆಲಸ ಇಂಥವಳಿಂದ
ತೆಗೆದು ಕೊಳ್ಳುವದು ಬಹಳ ಅನ್ಯಾಯವಾದದ್ದು. ಇದರಲ್ಲಿ ನಾನೇ ತಪ್ಪು
ಗಾರನು ಎಂದು ತಿಳಿದು ಅವನು ಅವಳಿದ್ದಲ್ಲಿಗೆ ಹೋಗಿ ಅವಳ ಕ್ಷಮೆ
ಯನ್ನು ಬೇಡಿಕೊಂಡನು. ಒಕ್ಕಲಿಗನ ವೇಷದಲ್ಲಿ ನಿಂತಿದ್ದ ಶಿವನು ಪಿಟ್ಟ
ವ್ವೆಯ ಕಾಯಕದ ಮಹಿಮೆಯನ್ನು ಚೋಳ ರಾಜನಿಗೆ ಹೇಳಿ ಅಲ್ಲಿಯೇ
ಅಂತರ್ಧಾನನಾದನು.

ಕರಿಕಾಲ ಚೋಳನು ಚೋಳರಾಜರಲ್ಲಿ ಬಹು ಬಲಾಢ್ಯನು.. ಇಂ
ಥವನ ಬಿಟ್ಟಿಯನ್ನು ತಿರಸ್ಕರಿಸಿದ್ದಕ್ಕೋಸ್ಕರ ಮತ್ತು ಅವನನ್ನು ಕಡೆಗೆ
ತನಗೆ ಶರಣಾಗತನನ್ನಾಗಿ ಮಾಡಿದ್ದಕ್ಕೋಸ್ಕರ ಪಿಟ್ಟವ್ವೆಯು ಶಿವಶರಣರಲ್ಲಿ
ಬಹು ಪ್ರಸಿದ್ಧಳಾಗಿದ್ದಾಳೆ.

ಪಿಟ್ಟವ್ವೆಯ ಕಾಯಕವು ಕರ್ನಾಟಕದಲ್ಲಿ ಶಿವಶರಣರ ಕಾಯಕವೇ
ಇರುತ್ತದೆ. ಅವಳು ತಮಿಳು ನಾಡಿನಲ್ಲಿದ್ದರೂ ಅವಳು ಅಲ್ಲಿ ಪ್ರಸಿದ್ಧಳಾ
ಗಿಲ್ಲ. ಆದರೆ ಕರ್ನಾಟಕದ ಶಿವಶರಣರಲ್ಲಿ ಅವಳ ಸ್ಥಾನವು ಬಹಳ ಹೆಚ್ಚಿ
ನದಿರುತ್ತದೆ. ವೀರಶೈವ ಗ್ರಂಥಕಾರರು ಅವಳನ್ನು ಆಗಿಂದಾಗ್ಗೆ ಸ್ಮರಿಸು
ತ್ತಾರೆ. ಆದ್ದರಿಂದ ಅವಳು ಮೊದಲು ಕರ್ನಾಟಕಸ್ಥಳಿದ್ದು ಹಿಂದುಗಡೆ
ಅನೇಕ ಶಿವಶರಣರಂತೆ ತಮಿಳು ದೇಶಕ್ಕೆ ಹೋಗಿ ಚೋಳ ರಾಜ್ಯದಲ್ಲಿ
ವಾಸಿಸಿರಬಹುದೆಂದು ತೋರುತ್ತದೆ.

ಕರಿಕಾಲ ಚೋಳನು ಬಸವೇಶ್ವರನಕ್ಕಿಂತಲೂ ಸ್ವಲ್ಪ ಮೊದಲಿನವ
ನಿದ್ದಾನೆ. ಆದ್ದರಿಂದ ಪಿಟ್ಟವ್ವೆಯೂ ಕೂಡ ಅವನಕಿಂತ ಮೊದಲಿನವಳು

ಗುತ್ತಾಳೆ. ಈಕೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆಕೆಯನ್ನು ದೇವಿಯರ ತ್ರಿವಿಧಿಯಲ್ಲಿ ಸ್ತುತಿಸಿರುವದು ಹೇಗೆಂದರೆ—

ಕರಿಕಾಲ ಚೋಳನಾ। ಕೆರೆಗೆ ಮಣ್ಣಡಕಲ್ಕೆ
ಹರಗುಣಲಿಕ್ಕೆ ಬಿಟ್ಟೆಯವ್ವೆ ಮಾಡಿಸಿದ
ಶಿವಶರಣೆ ಬಿಟ್ಟವ್ವೆ ಶರಣಾಗು.

——

## ೨೭. ಕೋಳೂರು ಕೊಡಗೂಸು.

ಕಲಬುರ್ಗಿ ಜಿಲ್ಲೆಯಲ್ಲಿ ಯಾದಗಿರಿ ಗ್ರಾಮವಿದೆ. ಇಲ್ಲಿಂದ ಪಶ್ಚಿಮಕ್ಕೆ ೧೬ ಮೈಲು ಮತ್ತು ಸುರಪುರ ಗ್ರಾಮದಿಂದ ಈಶಾನ್ಯಕ್ಕೆ ೧೪ ಮೈಲು ದೂರದಲ್ಲಿ ಕೋಳೂರೆಂಬ ಗ್ರಾಮವಿದೆ. ಅದಕ್ಕೆ ಈಗ ಕನ್ನೆ ಕೋಳೂರೆಂದು ಜನರಲ್ಲಿ ವಾಡಿಕೆಯ ಹೆಸರಿದೆ. ಇಲ್ಲಿ ಶಿವದೇವನೆಂಬ ಶಿವಭಕ್ತನೂ ಅವನ ಹೆಂಡತಿಯೂ ವಾಸಮಾಡುತ್ತಿದ್ದರು. ಅವರು ಶಿವನಲ್ಲಿ ಅತ್ಯಂತ ಭಕ್ತಿಯುಳ್ಳವರಾಗಿ ತಮ್ಮ ಗ್ರಾಮದಲ್ಲಿದ್ದ ಕಲ್ಲೇಶ್ವರ ಲಿಂಗಕ್ಕೆ ದಿನಾಲು ಕಪಿಲ ವರ್ಣದ ಗೋವಿನ ಹಾಲನ್ನು ಒಂದು ಬಳ್ಳ ತುಂಬ ನೈವೇದ್ಯ ಕೊಡುವ ನೇಮವನ್ನು ಇಟ್ಟುಕೊಂಡಿದ್ದರು. ಅವರಿಗೆ ಚನ್ನಕ್ಕನೆಂಬ ೭ ವರುಷದ ಚಿಕ್ಕ ಮಗಳೊಬ್ಬಳಿದ್ದಳು. ತಾಯಿತಂದೆಗಳು ಅವಳ ಮೇಲೆ ಅತ್ಯಂತ ಪ್ರೀತಿಯುಳ್ಳವರಾಗಿದ್ದರು.

ಮುಂದೆ ಕೆಲವೊಂದು ದಿವಸ ತಾಯಿತಂದೆಗಳು ದೇವರ ದರ್ಶನದ ಸಲುವಾಗಿ ಪರಊರಿಗೆ ಹೋಗುವಾಗ ಅವರು— ಮಗಳೇ ನಾವು ಊರಿಗೆ ಹೋಗುತ್ತೇವೆ. ನೀನು ಹಾಲನ್ನು ಬಟ್ಟಲಲ್ಲಿ ಒಯ್ದು ಶಿವನಿಗೆ ದಿನಾಲು ಅರ್ಪಿಸುತ್ತಿರು ಎಂದು ಹೇಳಿಹೋದರು. ಆಗ ಚನ್ನಕ್ಕನು— ಇಂದು ನಾನು ದೇವರಿಗೆ ಹಾಲನೆರೆಯುವೆನೆಂದು ಬಲು ಹಿಗ್ಗಿ ಅವಳು ತನ್ನ ತಾಯಿ ತಂದೆಗಳು ಮಾಡುತ್ತಿದ್ದಂತೆ ಸ್ನಾನವನ್ನು ಮಾಡಿ ಮಡಿ ಬಟ್ಟೆಯನ್ನು ಉಟ್ಟುಕೊಂಡು ಭಸಿತವನ್ನು ಧರಿಸಿ, ಕಿವಿಯಲ್ಲಿ ಹೂವಿನೋಲೆಯನ್ನಿಟ್ಟು ಬಳ್ಳದ ತುಂಬ ಹಾಲನ್ನು ತೆಗೆದುಕೊಂಡು ಕಲ್ಲೇಶ್ವರನ ದೇವಾಲಯಕ್ಕೆ

ಹೋಗಿ ಅಲ್ಲಿ ಹಾಲನ್ನು ದೇವರ ಮುಂದಿರಿಸಿ, ಮುಗ್ಧ ಭಕ್ತಿಯಿಂದ ಲಿಂಗವೇ ಹಾಲನ್ನು ತಂದಿದ್ದೇನೆ- ಅದನ್ನು ಸವಿಸು, ಎಂದು ಬಿನ್ನವಿಸಿ ಕೊಂಡಳು. ಆದರೆ ಶಿವನು ಸುಮ್ಮನಿರಲು ಅವಳು ಅವನನ್ನು ರಮ್ಮಿಸಿ, ಬಣ್ಣಿಸಿ ಹಾಲನ್ನುಣ್ಣೆಂದು ಹೇಳಹತ್ತಿದಳು. ಆದರೆ ದೇವರು ಕುಡಿಯ ದಿರಲು ಅವಳು-- ಗುರು ಕಲ್ಲಿನಾಥಾ ಎಂದು ಬಿನ್ನೈಸುತ್ತ ನಾನು ದೂರ ಮರೆಗೆ ನಿಲ್ಲುವೆನು. ನೀನು ಉಣ್ಣು ಎಂದು ಹೇಳಿ ಹಿಂದೆ ಸರಿದು ಅಲ್ಲಿ ಕೆಲಹೊತ್ತು ನಿಂತು, ತಿರುಗಿ ಬಂದು ನೋಡುತ್ತಾ, ಹೀಗೆ ಅವಳು ಬಹಳ ವೇಳೆ ಅನೇಕ ರೀತಿಯಿಂದ ಹಾಲು ಕುಡಿ ಎಂದು ದೇವರಿಗೆ ಹೇಳಿಕೊ ಳ್ಳುತ್ತಾ ನಿಂತಳು. ಆದರೆ ಹಾಲು ಇದ್ದ ಹಾಗೆಯೇ ಇರಲು,— ತಂದೆಯೇ ನೀನಾರೋಗಿಸದೆ ಇರುವ ಕಾರಣವೇನು ? ಈ ಹಾಲು ನಿನಗೆ ಬೇಸರ ವಾಯಿತೇ ? ಅಥವಾ ನಾನು ಬಾಲೆ ಎಂದು ನೀನು ಉಣಲೊಲ್ಲೆಯೊ? ನೀನು ನನಗೆ ಬೇಕು, ಬೇಡ ಎಂಬುದನ್ನು ಏಕೆ ಉಸಿರಲೊಲ್ಲೆ? ಎಂದು ದುಃಖಿಸುತ್ತ ಎಷ್ಟು ಹೇಳಿಕೊಂಡರೂ ಶಿವನು ಉಣ್ಣದಿರಲು ಆ ಬಾಲೆಯು— ನೀನು ಈ ಹಾಲನ್ನು ಆರೋಗಿಸದ ಹೊರತು ನಾನು ನಿನ್ನನ್ನು ಬಿಡೆನು. ನಾನು ಹಿಂದಕ್ಕೆ ಮನೆಗೆ ಹೋಗುವವಳಲ್ಲ. ನೀನು ಕುಡಿಯದಿದ್ದರೆ ನಾನು ಇಲ್ಲಿಯೇ ಸತ್ತುಬೀಳುವೆನು. ಎಂದು ನುಡಿದು ಅವಳು ತನ್ನ ತಲೆಯನ್ನು ಅಲ್ಲಿದ್ದ ಕಲ್ಲಿಗೆ ತಾಟಿಸಿಕೊಳ್ಳಲು ಸಿದ್ಧಳಾದಳು. ಮುಂದೆ ಅವಳು ತನ್ನ ಪ್ರಾಣವನ್ನು ಕೊಡುತ್ತಿರುವಷ್ಟರಲ್ಲಿ ಪರಮಾತ್ಮನು ಪ್ರತ್ಯಕ್ಷನಾಗಿ ಅವಳ ಕೈಯ್ಯನ್ನು ಹಿಡಿದು ಮುಗುಳ್ನಗೆ ನಕ್ಕು ಬಾಲಿಕೆಯು ತಂದಂಥ ಬಟ್ಟಲ ಹಾಲನ್ನು ಕುಡಿದುಬಿಟ್ಟನು. ಅದನ್ನು ಆ ಬಾಲೆಯು ನೋಡಿ ಆನಂದ ಬಡುತ್ತ ಮನೆಗೆ ತಿರುಗಿ ಹೋದಳು.

ಹೀಗೆಯೇ ಅವಳು ಪ್ರತಿದಿನ ಹಾಲನ್ನು ಚನ್ನಾಗಿ ಕಾಯಿಸಿ ಗುಡಿಗೆ ಹೋಗಿ ಅದನ್ನು ದೇವರ ಮುಂದೆ ಇಡಲು ದೇವರು ತಪ್ಪದೆ ಅದನ್ನು ಕುಡಿಯುತ್ತಿದ್ದನು. ಅವನು ಕುಡಿದ ಬಳಿಕ ಚನ್ನಕ್ಕನು ಬರಿಯ ಬಟ್ಟ ಲನ್ನು ಮನೆಗೆ ತರುತ್ತಿದ್ದಳು.

ಈ ಪ್ರಕಾರ ಕೆಲವು ದಿನ ಗತಿಸಲು ಊರಿಗೆ ಹೋದ ತಂದೆತಾಯಿ ಗಳು ಮನೆಗೆ ತಿರುಗಿ ಬಂದರು. ಅವರು ಬರುವಾಗ ಇದಿರಿನಲ್ಲಿ ಮಗಳು ದೇವಾಲಯಕ್ಕೆ ಹೋಗಿ ತಿರುಗಿ ಬರುವದನ್ನು ಕಂಡು ಅವರು ಆ ಬಟ

ಲಲ್ಲ ಹಾಲಿಲ್ಲದ್ದನ್ನು ನೋಡಿ, ತಂದೆಯು ಅವಳಿಗೆ— ಈ ಬಟ್ಟಲಲ್ಲಿ ಹಾಲಿಲ್ಲ, ಅದನ್ನು ನೀನು ಚಲ್ಲಿದೆಯೋ ? ಅಥವಾ ನೀನೇ ಕುಡಿದಿಯೋ ? ಎಂದು ಅಬ್ಬರಿಸಿ ಕೇಳಲು, ಅವಳು— ಹಾಲನ್ನು ಲಿಂಗಕ್ಕೆ ನೀಡಿದೆನು ಲಿಂಗವು ಕುಡಿಯಿತು ಎಂದು ಹೇಳಿದಳು. ಅದಕ್ಕೆ ಅವನು— ಕಲ್ಲು ಲಿಂಗವು ಎಂದಾದರೂ ಕುಡಿಯುವದುಂಟೇ ? ನೀನು ಹೇಳುವದು ಸಟಿ, ಎಂದು ನುಡಿದು ಮರುದಿನ ಅವಳು ಅಂದದ್ದನ್ನು ಪರೀಕ್ಷಿಸಬೇಕೆಂದು ಯೋಚಿಸಿ ಆ ದಿನ ಸುಮ್ಮನಾದನು.

ಮರುದಿನ ಅವನು ತನ್ನ ಮಗಳಿಗೆ ಹಾಲನ್ನು ಅಳೆದು ಕೊಟ್ಟು ಗುಡಿಗೆ ಹೋಗೆಂದು ಅವಳನ್ನು ಮುಂದೆ ಕಳಿಸಿದನು. ಅವಳು ಮುಂದೆ ಹೋದಹಾಗೆ ತಾನೂ ಅವಳ ಹಿಂದೆ ಹಿಂದೆ ಹೋಗಿ ಗುಡಿಯಲ್ಲಿ ಮರೆಗೆ ನಿಂತು ನೋಡಹತ್ತಿದನು. ಆಗ ಕಲ್ಲಿನಾಥನು ಈ ಬಾಲಿಕೆಯ ಮುಗ್ಧ ಭಕ್ತಿಯನ್ನು ಜಗಕ್ಕೆ ತೋರಬೇಕೆಂದು ಬಯಸಿ ಅವಳು ಮುಂದಿಟ್ಟ ಹಾಲನ್ನು ಮುಟ್ಟಲಿಲ್ಲ.

ಆಗ ತಂದೆಯು ಮುಂದೆ ಬಂದು ಘುಡುಘುಡಿಸುತ್ತ ಮಗಳಿಗೆ— ನೀನು ನಿನ್ನೆ ಹೇಳಿದ್ದೆಲ್ಲವೂ ಸುಳ್ಳು. ಹಾಲನ್ನು ನೀನೇ ಕುಡಿದೆ. ನೀನು ಲಿಂಗದ್ರೋಹಿ. ನಿನ್ನನ್ನು ಕಡಿದುಹಾಕುವೆನು, ಎಂದು ಅಬ್ಬರಿಸುತ್ತ ಮುಂದೆ ಬರಲು ಆ ಕನ್ನೆಯು ಭೀತಿಗೊಂಡು— ಹಾ ಶಿವನೇ, ಹಾ ! ನೀನೇ ನನಗೆ ಗತಿಯು, ನನ್ನನ್ನು ಕಾಯು ಎಂದು ಒರಲುತ್ತ ಓಡಿಹೋಗುವದರಲ್ಲಿ ದ್ದಳು. ಅಷ್ಟರಲ್ಲಿ ಶಿವನು ರೂಪುಗೊಂಡು ತನ್ನ ಅಭಯ ಹಸ್ತವನ್ನು ಮುಂದೆ ನೀಡಿ ತನ್ನ ಮುಂದಿದ್ದ ಬಟ್ಟಲಲ್ಲಿಯ ಹಾಲನ್ನು ಕುಡಿದು ಓಡಿ ಹೋಗುತ್ತಿದ್ದ ಬಾಲಿಕೆಯ ಸೆರಗನ್ನು ಹಿಡಿದು ಆಕೆಯನ್ನು ತನ್ನಲ್ಲಿ ಅಡಗಿಸಿ ಕೊಳ್ಳಹತ್ತಿದನು. ತಂದೆಯು ಈ ಅದ್ಭುತವನ್ನು ಕಂಡು ಚಕಿತನಾಗಿ— ನನ್ನ ಮಗಳು ನಿಜವಾದ ಶರಣೆಯು. ಅವಳು ಹೇಳಿದ್ದು ನಿಜವು. ಆದರೆ ಅವಳು ನನ್ನನ್ನು ಬಿಟ್ಟು ಹೋಗಹತ್ತಿದ್ದಾಳೆ. ಅವಳನ್ನು ನಾನು ಬಿಡ ಲಾರೆನು ಎಂದು ಅವಳ ಕೂದಲುಗಳನ್ನು ಹಿಡಿಯಲು ಆ ಕೂದಲುಗಳು ಲಿಂಗದ ಹೊರಗೆಯೇ ಉಳಿದವು. ಮತ್ತು ಅವಳ ದೇಹವು ಲಿಂಗದ ಒಳಗೆ ಸೇರಲು ಅವಳು ಶಿವನಲ್ಲಿಯೇ ಅಡಗಿಬಿಟ್ಟಳು.

ಕಲ್ಲಿನಾಥನ ದೇವಾಲಯವು ಕೋಳೂರು ಗ್ರಾಮದಲ್ಲಿ ಈಗಲೂ ಇದೆ. ಅದರಲ್ಲಿರುವ ಲಿಂಗದ ಮೇಲೆ ಆಕೆಯ ತಲೆಗೂದಲುಗಳ ಗುರುತುಗಳು ಕಾಣುತ್ತಿವೆ. ಈ ಗ್ರಾಮವು ಪುಣ್ಯಕ್ಷೇತ್ರವೆಂದು ಈಗಲೂ ಭಾವಿಸಲ್ಪಟ್ಟಿದೆ.

ಕೋಳೂರು ಕೊಡಗೂಸೆಂದು ಆಕೆಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಬಹಳ ಹಿಂದಿನವಳು. ಅನೇಕ ಕವಿಗಳು ಅವಳ ಚರಿತ್ರೆಯನ್ನು ಬಹು ಸುಂದರವಾಗಿ ತಮ್ಮ ಕವನಗಳಲ್ಲಿ ವರ್ಣಿಸಿದ್ದಾರೆ.

ದೇವಿಯರ ತ್ರಿವಿಧಿಯಲ್ಲಿ ಆಕೆಯ ಉಲ್ಲೇಖವು ಇದ್ದುದು ಹೇಗೆಂದರೆ:—

ಬಾಲ ವಯದಲಿ ಸತತ ಪಾಲನೀಶಗೆ ಕುಡಿಸಿ ।
ಸಾಲೋಕ್ಯ ಪದವ ಮೀರಿ ನಿಜದೊಳು ನಿಂದ- ।
ಕೋಳೂರು ಹೆಣ್ಣೆ ಶರಣಾಗು ॥

———

## ೨೮. ಮಹಾದೇವಿಯಮ್ಮ.

ಮಹಾದೇವಿಯಮ್ಮನು ಮೋಳಿಗೆಯ ಮಾರಯ್ಯನ ಹೆಂಡತಿಯು. ಮೋಳಿಗೆಯ ಮಾರಯ್ಯನು ಕಾಶ್ಮೀರ ದೇಶದಲ್ಲಿ ಮಹಾದೇವರಾಜನೆಂಬ ಹೆಸರಿಂದ ಮಾಂಡವ್ಯಪುರದಲ್ಲಿ ರಾಜ್ಯವನ್ನಾಳುವಾಗ ಮಹಾದೇವಿಯಮ್ಮನು ಅವನೊಡನೆ ರಾಜವೈಭವವನ್ನು ಅನುಭವಿಸಿದಳು. ಅವಳ ಮೊದಲಿನ ಹೆಸರು ಗಂಗಾದೇವಿ ಎಂಬುದಾಗಿತ್ತು. ಆದರೆ ಮುಂದೆ ಅವಳೂ ಅವಳ ಪತಿಯಾದ ಮೋಳಿಗೆಯ ಮಾರಯ್ಯನೂ ಮಾರಯ್ಯನ ತಂಗಿಯಾದ ಬೊಂತಾದೇವಿಯೂ ಶಿವಾನುಭವಕ್ಕೆ ಪ್ರೀತಿಯನ್ನು ವಹಿಸಿದವರಾಗಿ ಕರ್ನಾಟಕಕ್ಕೆ ಬಂದರು. ಅವರಲ್ಲಿ ಬೊಂತಾದೇವಿಯು ಲಗ್ನವನ್ನು ತ್ಯಜಿಸಿ ಶಿವಶರಣರನ್ನು ಕಾಣಬೇಕೆಂದು ಕಲ್ಯಾಣಪಟ್ಟಣದಲ್ಲಿ ಇರಲು ಬಂದಳು. ಆಮೇಲೆ ಮೋಳಿಗೆಯ ಮಾರಯ್ಯನೂ ಅದೇ ರೀತಿಯಾಗಿ ಕಲ್ಯಾಣಕ್ಕೆ ಹೊರಡಲು ಗಂಗಾದೇವಿಯೂ ಕೂಡ ಅವನೊಡನೆ ಹೋಗಲು ಸಿದ್ಧಳಾದಳು. ಅವಳು ಕಲ್ಯಾಣಕ್ಕೆ ಹೋದಬಳಿಕ ಮಹಾದೇವಿಯಮ್ಮನೆಂದು ಹೆಸರನ್ನಿಟ್ಟುಕೊಂಡಳು. ಅಲ್ಲಿ ಉಭಯ ದಂಪತಿಗಳು ಶಿವಾನುಭವದಲ್ಲಿ ಕಾಲ ಕಳೆಯಹತ್ತಿದರು. ರಾಜವೈಭವವನ್ನು ಅನುಭವಿಸುವದಕ್ಕಿಂತಲೂ ದಿನಾಲು ಕಾಯಕವನ್ನು ಮಾಡಿ ಅದರಿಂದ ಬಂದುದರಲ್ಲಿ ತೃಪ್ತರಾಗಿರುವದೇ ಅವರಿಗೆ ಸುಖವೆನಿಸಿತು. ಬಸವೇಶ್ವರನ ಸನ್ನಿಧಿಯಲ್ಲಿ ಶಿವಶರಣರು ನಡಿಸುತ್ತಿದ್ದ ಶಿವಾನುಭವ ಗೋಷ್ಠಿಗಳಲ್ಲಿರುವರು. ಉಭಯತರೂ ವಚನಗಳನ್ನು ರಚಿಸಿದ್ದಾರೆ. ಮಹಾದೇವಿಯಮ್ಮನ ಮುದ್ರಿಕೆಯು 'ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ' ಎಂದಿದೆ. ಅವಳ ೪೧ ವಚನಗಳು ಮಾತ್ರ ನಮಗೆ ದೊರೆತಿರುತ್ತವೆ. ಅವುಗಳಲ್ಲಿ ಕ್ರಿಯಾಜ್ಞಾನಗಳ ಸಂಬಂಧ, ಇಷ್ಟಲಿಂಗ ಪ್ರಾಣಲಿಂಗಗಳಲ್ಲಿರುವ ಪರಸ್ಪರತ್ವ ಷಟ್‌ಸ್ಥಲಗಳ ಸ್ವರೂಪ, ಇವುಗಳನ್ನು ಕುರಿತು ಅವಳು ಬಹು ಮಾರ್ಮಿಕವಾಗಿ ವಿವೇಚಿಸಿದ್ದಾಳೆ. ಈಕೆಯ ವಚನಗಳಲ್ಲಿ ಕೆಲವುಗಳನ್ನು ಮಾತ್ರ ಮಾದರಿಗಾಗಿ ಇಲ್ಲಿ ಉದಹರಿಸಿದ್ದೇವೆ.

### ವಚನಗಳು.

(೧) ಮಣ್ಣನಿತ್ತು ನಿನ್ನ ಕಂಡಿಹೆನೆಂದರೆ ಜಗಭರಿತ ನೀನು. ಹೊನ್ನನಿತ್ತು ನಿನ್ನ ಕಂಡಿಹೆನೆಂದರೆ ಹಿರಣ್ಯಮೂರ್ತಿ ನೀನು. ಹೆಣ್ಣ ಕೊಟ್ಟು ನಿನ್ನ ಕಂಡಿಹೆನೆಂದರೆ ತ್ರಿವಿಧಶಕ್ತಿ ಮೂರ್ತಿ ನೀನು. ಮನವನಿತ್ತು

ಕಂಡಿತೆನೆಂದರೆ ಮನೋಮೂರ್ತಿ ನೀನು. ಎನಗೇನು ನಿನಗಿತ್ತ ಕಾಂಬ ಕಾಣಿಕೆ? ನೀನು ಸಿಕ್ಕುವುದಕ್ಕೆ ಕ್ರಿಯಲ್ಲಿ ನಿರತ, ಸದ್ಭಾವದಲ್ಲಿ ಶುದ್ಧ. ಹಿಡಿದುದ ಬಿಡವೆ ಬಿಟ್ಟುದ ಹಿಡಿಯದೆ, ನಿಶ್ಚಯವಹ ನಿಜಜ್ಞಾನಿಗಳಲ್ಲಿ ಬೆಚ್ಚಂತಿದ್ದರೆ ನೀನು ಅಲ್ಲಿ ತಪ್ಪದಿಪ್ಪೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ,

(೨) ಹೃತ್ಕಮಲ ಮಧ್ಯದಲ್ಲಿ ಲಿಂಗವ ಸರ್ವಾಂಗದಲ್ಲಿ ವೇಧಿಸಿ ಪರಿಪೂರ್ಣವಪ್ಪಲಿಂಗವ ಅಂತರ್ಮುಖದಿಂದ ಬಾಹ್ಯ ಮುಖಕ್ಕೆ ತಂದಲ್ಲಿ ಪಂಚಸ್ಥಾನದಲ್ಲಿಪ್ಪ ಲಿಂಗವ ಕರಸ್ಥಲದಲ್ಲಿ ಮೂರ್ತಿಗೊಳಿಸಲಿಕ್ಕಾಗಿ ಕಂಗಳತುಂಬಿ ಬಾಹ್ಯ ದೃಷ್ಟಿಯರಿತು ಲಿಂಗ ದೃಷ್ಟಿ ಪರಿಪೂರ್ಣವಾದಲ್ಲಿ ದೃಕ್ಲಿಂಗೆ ತೋರುವದೆಲ್ಲವೂ ಲಿಂಗಮಯವಾಗಿ ಏನ ಮುಟ್ಟೆ ಹಿಡಿದಲ್ಲಿಯೂ, ಪುಷ್ಪ ಮಯವಾಗಿ ಜಿಹ್ವೆಯಲ್ಲಿ ತೋರಿದ ಅಪ್ಪುರಸ ಮುಂತಾದುದೆಲ್ಲವೂ ಅರ್ಪಿತ ಮಯವಾಗಿ ಇಂತಪ್ಪ ವ್ಯವಧಾನ ಸರ್ವಾಂಗ ಲಿಂಗಿಯ ವಿವರ. ಇಷ್ಟ ಅರಿವೆಂದು ಉಭಯದ ದೃಷ್ಟ ಕೆಟ್ಟಲ್ಲಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುವದಕ್ಕೆ ಇದಿರೆಡೆಯಿಲ್ಲ.

(೩) ಮೂಲದ ಬೇರಿನ ಸುಗಂಧ ಎಲೆಬಳ್ಳಿಯ ನೇತಕ್ಕೆ ಸುವಾಸನೆ ತನ್ನಯ ತೊಟ್ಟು ಎಲೆ ಕೊನರು ಬೇರುವನೇಕೆ ವೇಧಿಸದು? ಇದು ಇಷ್ಟಪ್ರಾಣಯೋಗದ ಭೇದ. ಗಿಡು ಗಿಡುವಿಗೆ ಕುರುಹಲ್ಲದೆ ಗಂಧ ಗಂಧ ಕೂಡಿದಲ್ಲಿ ದ್ವಂದ್ವವಡಗಿ ಬೆರೆದಲ್ಲಿ ಕದಂಬ ಗಂಧವಲ್ಲದೆ ಒಂದರ ಗಂಧವೆಂದು ಸಂಧಿಸಿ ತೆಗೆಯಲಿಲ್ಲ. ಅವರು ನಿಂದ ಸ್ಥಲಕ್ಕೆ ಸಂಬಂಧವಾಗಿಪ್ಪರು. ಇದು ದೃಷ್ಟಾನುಭಾವ ಸಿದ್ಧ. ಸರ್ವಸ್ಥಲ ಭೇದ, ವಿಶ್ವತೋಮುಖ ರೂಪು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ತತ್ವ ಭಕ್ತಿ ಸ್ವರೂಪನು.

(೪) ನೀರು ನೆಲನಿಲ್ಲದೆ ಇರಬಹುದೇ? ಬೀಜ ನೆಲೆಯಿಲ್ಲದೆ ಹುಟ್ಟ ಬಹುವೇ? ಜ್ಞಾನ ಕ್ರಿ ಇಲ್ಲದೆ ಅರಿಯ ಬಹುದೇ? ಚಿತ್ತು ಚಿತ್ತ ವಿಲ್ಲದ ವಸ್ತು ಲಕ್ಷಿಸಿ ಗ್ರಹಿಸ ಬಹುದೇ? ಇಂತೀ ಕ್ರಿ ಜ್ಞಾನ ಸಂಬಂಧ ಸ್ಥಲಭಾವ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಉಭಯ ಸ್ಥಲಭೇದ.

———

# ೨೯ ಮೈದುನ ರಾಮಯ್ಯ

ಆಂಧ್ರದೇಶದಲ್ಲಿ ಭೀಮಾವತೀ ಎಂಬ ಗ್ರಾಮವಿದ್ದು ಅಲ್ಲಿ ಸೋಮನಾಥನೆಂಬ ಶೈವ ಬ್ರಾಹ್ಮಣನು ವಾಸ ಮಾಡುತ್ತಿದ್ದನು. ಅವನ ಹೆಂಡತಿಯ ಹೆಸರು ಮಹಾದೇವಿ. ಉಭಯ ದಂಪತಿಗಳು ಬಹಳ ಬಡವರು. ಆದ್ದರಿಂದ ಅವರು ಕಷ್ಟದಿಂದ ತಮ್ಮ ಜೀವನವನ್ನು ಸಾಗಿಸುತ್ತ ಬಂದರು. ಆದರೂ ಅವರು ಶಂಕರನ ಪ್ರೇಮಿಗಳು. ಶಂಕರನ ಭಜನೆಯಲ್ಲಿಯೇ ಅವರು ಸಂತೋಷದಿಂದ ಕಾಲ ಕಳೆಯುವರು. ಹೀಗಿರುವಲ್ಲಿ ಮುಂದೆ ಅವರಿಗೆ ಒಬ್ಬ ಮಗನು ಜನಿಸಿದನು. ಅವರು ಆತನಿಗೆ 'ರಾಮಯ್ಯ' ಎಂಬ ಹೆಸರನ್ನಿಟ್ಟರು. ಆದರೆ ಸೋಮನಾಥನು ಮುಂದೆ ಸ್ವಲ್ಪ ದಿವಸಗಳಲ್ಲಿ ಮರಣಹೊಂದಿದನು. ಇದರಿಂದ ಮಹಾದೇವಿಯ ಮೇಲೆ ತನ್ನ ಮಗನನ್ನು ಸಲಹುವ ಭಾರವು ಬೀಳಲು ಅವಳು ತನ್ನ ಬಡತನದಲ್ಲಿ ತನ್ನ ಸಂಸಾರವನ್ನು ಕಷ್ಟದಿಂದ ಸಾಗಿಸುತ್ತ ಬಂದಳು.

ಮಗನು ಸ್ವಲ್ಪ ದೊಡ್ಡವನಾದ ಬಳಿಕ ಮಹಾದೇವಿಯು ಅವನಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ಬಯಸಿ ಅವಳು ಅವನನ್ನು ಒಬ್ಬ ಶೈವ ಬ್ರಾಹ್ಮಣನ ಕಡೆಗೆ ಇಟ್ಟಳು. ಈ ಬ್ರಾಹ್ಮಣನು ಇತರ ಬಾಲಕರೊಡನೆ ಇವನಿಗೂ ಓದು ಕಲಿಸಹತ್ತಿದನು. ರಾಮಯ್ಯನು ಬಹು ಕುಶಾಗ್ರಬುದ್ಧಿಯವನು. ಅವನು ಗುರುವು ಹೇಳಿದ್ದನ್ನು ತಿಳಿದುಕೊಂಡು ತನ್ನ ಅಭ್ಯಾಸದಲ್ಲಿ ಎಲ್ಲರಿಗಿಂತಲೂ ಮಿಗಿಲಾದವನೆಂದು ಎಣಿಸಿಕೊಂಡನು.

ಹೀಗಿರುವಲ್ಲಿ ಓದುವ ಮಕ್ಕಳೆಲ್ಲರೂ ದೀಪಾವಳಿಯ ಹಬ್ಬದ ಪೂರ್ವದಲ್ಲಿ ಒಂದು ದಿನ ಒಂದು ಗಿಡದಡಿಯಲ್ಲಿ ನೆರೆದು ಅವರು ತಮ್ಮ ತಮ್ಮೊಳಗೆ ಮಾತನಾಡುತ್ತಿರುವಾಗ— ನಾವು ಹಬ್ಬಕ್ಕೆ ನಮ್ಮ ಅಕ್ಕ ಭಾವಂದಿರನ್ನು ಕರೆತರುವೆವು. ಅವರೊಡನೆ ನಾವು ನಮ್ಮ ಹಬ್ಬವನ್ನು ಮಾಡುವೆವು ಎಂದು ಹೇಳಿಕೊಳ್ಳಹತ್ತಿದರು. ಅದನ್ನು ರಾಮಯ್ಯನು ಕೇಳಿ— ನಾನೂ ನನ್ನಕ್ಕ ಭಾವರನ್ನು ಕರೆತರುವೆನು ಎಂದೆನ್ನಲು ಆ ಮಕ್ಕಳೆಲ್ಲರೂ ಅವನಿಗೆ— ನೀನೊಬ್ಬ ಮುಂಡೆಯ ಮಗ. ನಿನಗೆಲ್ಲಿ ಅಕ್ಕಭಾವಂದಿರಿದ್ದಾರೆ ? ಅವರನ್ನೆಲ್ಲಿಂದ ಕರೆತರುವೆ ? ನೀನು ದರಿದ್ರ. ನೀನೇನು ಹಬ್ಬ ಮಾಡುವಿ ? ಎಂದು ಅವನಿಗೆ ಚುಚ್ಚಿ ನುಡಿದು ಹಾಸ್ಯ ಮಾಡಿದರು.

ಈ ನುಡಿಗಳು ರಾಮಯ್ಯನ ಮನಸ್ಸಿಗೆ ಬಹಳ ತಾಕಿದವು. ಅವನು ಅಳುತ್ತ ತನ್ನ ತಾಯಿಯ ಬಳಿಗೆ ಬಂದು— ನನ್ನ ಅಕ್ಕ ಭಾವಂದಿರು ಎಲ್ಲಿ ಇದ್ದಾರೆ ಎಂದು ಕೇಳಿದನು. ಮಹಾದೇವಿಯಾದರೂ ಶಿವನಲ್ಲಿ ಅತ್ಯಂತ ನಿಷ್ಠೆಯುಳ್ಳವಳು. ಅವಳು ತನ್ನ ಮಗನ ಇಂಗಿತವನ್ನು ತಿಳಿದುಕೊಂಡು ನಿನಗೆ ಅಕ್ಕ ಭಾವಂದಿರು ಇದ್ದಾರೆ ಎಂದು ಹೇಳಿದಳು. 'ಅವರ ಹೆಸರು ಹೇಳು ಎಂದು ಬಾಲಕನು ಕೇಳಿ ಅಳುತ್ತಿರಲು, ತಾಯಿಯು ಅವನಿಗೆ- ನಿನ್ನ ಅಕ್ಕ ಗೌರಿ, ನಿನ್ನ ಭಾವ ಚನ್ನಮಲ್ಲಿಕಾರ್ಜುನ, ಅವರು ಇರುವ ಊರು ಶ್ರೀಶೈಲ, ಎಂದು ಹೇಳಲು ಬಾಲಕನು ಅವರನ್ನು ಹಬ್ಬಕ್ಕೆ ಕರೆ ತರುವೆನೆಂದು ಶ್ರೀಶೈಲಕ್ಕೆ ಹೊರಟನು. ಅವನು ಅಲ್ಲಿಗೆ ಹೋಗಿ ಗೌರಕ್ಕಾ, ಚನ್ನಮಲ್ಲಯ್ಯಾ, ಎಂದು ಕೂಗಿ ಕರೆಯುತ್ತ ಸುತ್ತಲೂ ತಿರುಗಾಡಹತ್ತಿದನು. ಆದರೆ ಯಾರೂ ಮಾತಾಡದಿರಲು ಬಾಲಕನು— ನಾನೆಂಥ ಪಾಪಿಯು ಎಂದು ಹಲಬುತ್ತ, ದುಃಖಿಸುತ್ತ ಅರಣ್ಯವನ್ನು ಸುತ್ತುತ್ತ ಸಂಚರಿಸಹತ್ತಿದನು. ಅವನು ಆಳಿಗಿಳಿಗಳನ್ನೂ ತರುಗಿರಿಗಳನ್ನೂ ಖಗ ಮೃಗಗಳನ್ನೂ ಕೇಳುತ್ತ ಸಾಗಿದನು. ಅವನು ಕಲ್ಲು ಮುಳ್ಳುಗಳನ್ನು ತುಳಿಯುತ್ತ ಹೋದನು. ಕಾಲುಗಳಿಂದ ನೆತ್ತರು ಬಸಿಯುತ್ತಿದ್ದರೂ ಲಕ್ಷಿಸಲಿಲ್ಲ. 'ಹಬ್ಬ ಹತ್ತಿರವಾಯಿತ್ತು. ನಮ್ಮಕ್ಕ ಭಾವನನ್ನು ಕಾಣಿರೇ' ಎಂದು ತಾನು ಕಂಡ ಪಕ್ಷಿಗಳನ್ನೂ ಮರಗಳನ್ನೂ, ಸಿಂಹ ಶಾರ್ದೂಲಗಳನ್ನೂ ಕೇಳುವನು. ಹಸಿವೆ ಬಳಲಿಕೆಗಳಿಂದ ಎಷ್ಟು ಕಷ್ಟಪಟ್ಟರೂ ತನ್ನ ಅಕ್ಕ ಭಾವಗಳ ಸ್ಮರಣೆಯೊಂದೇ ಅವನಿಗಾಯಿತು. ಹೀಗಿರುವಲ್ಲಿ ಅವನು ಬಸವಳಿದು ಒಂದು ಕೋಡುಗಲ್ಲಿನ ಕೆಳಗೆ ಬಂದು ಬಿದ್ದನು. ಆಗ ಅವನು ನಿಶ್ಚೇಷ್ಟಿತನಾಗಿರಲು ಶಿವನಲ್ಲಿ ಅವನಿಗೋಸ್ಕರ ಕರುಣೆಯುಂಟಾಗಿ ಅವನು ಗಿರಿಜೆ ಸಹಿತ ಪ್ರತ್ಯಕ್ಷನಾಗಿ ರಾಮಯ್ಯನ ಕೈಹಿಡಿದು, ಅವನನ್ನು ಸಂತವಿಸಿ, ಅವನಿಗೆ ಅಂದದ್ದು— ನಾವೇ ನಿನ್ನ ಅಕ್ಕ ಭಾವಂದಿರು. ನಮ್ಮನ್ನು ನೀನು ಕಂಡೆ. ಇನ್ನು ಮೇಲೆ ನೀನು ಮನೆಗೆ ತಿರುಗಿ ಹೋಗು ಎಂದು ಹೇಳಲು ಬಾಲಕನು ಅವರಿಗೆ— ನೀವು ನಮ್ಮ ಮನೆಗೆ ಬಂದಲ್ಲದೆ ಹಬ್ಬವನ್ನು ಮಾಡೆವು. ನೀವು ನನ್ನೊಡನೆ ಊರಿಗೆ ಬರಬೇಕು ಎಂದು ನುಡಿದನು. ಆಗ ಶಿವನೂ ಗಿರಿಜೆಯೂ ಬಾಲಕನ ಮುಗ್ಧ ಭಕ್ತಿಗೆ ಮೆಚ್ಚಿದವರಾಗಿ ಅವನೊಡನೆ ಭೀಮಾವತೀ ಗ್ರಾಮಕ್ಕೆ ಬಂದು ತಾಯಿ ಮಗ ಇವ

ರೊಡನೆ ಹಬ್ಬವನ್ನು ತೀರಿಸಿದರು. ಆಗ ಶಿವನು ತನಗೆ ಮೈದುನನಾಗಿ ಆಚರಿಸಿದ ರಾಮಯ್ಯನ ಭಕ್ತಿಗೆ ಮೆಚ್ಚಿ ಅವನಿಗೆ ವೀರಶೈವೋಪದೇಶವನ್ನು ಮಾಡಿ ಇಷ್ಟಲಿಂಗದ ಮೂಲಕ ನಾನು ನಿನ್ನಲ್ಲಿ ಸದಾ ವಾಸಿಸುತ್ತೇನೆಂದು ಅಭಯವನ್ನಿತ್ತು ಅಲ್ಲಿಯೇ ಅಂತರ್ಧಾನನಾದನು.

ಅಂದಿನಿಂದ ರಾಮಯ್ಯನು ಮೈದುನ ರಾಮಯ್ಯನೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧನಾದನು. ಅವನು ವೀರಶೈವೋಪದೇಶವನ್ನು ಹೊಂದಿ ಶಿವಾನುಭವದ ಆಚರಣೆಯಂತೆ ನಡಿಯುತ್ತ ಒಬ್ಬ ಶ್ರೇಷ್ಠ ಶಿವಶರಣನೆಂದೆನಿಸಿಕೊಂಡನು. ಮೈದುನ ರಾಮಯ್ಯನು ವಚನಕಾರನಿದ್ದಾನೆ. ಅವನ ನಾಲ್ಕು ವಚನಗಳು ಮಾತ್ರ ನಮಗೆ ಸಿಕ್ಕಿವೆ. 'ಮಹಾಲಿಂಗ ಚನ್ನರಾಮ' ಎಂಬುದೇ ಅವನ ಮುದ್ರಿಕೆಯು.

## ವಚನಗಳು.

(೧) ಮಳಲಲ್ಲರಸಲುಂಟೇ? ನೆಳಲಿಗೆ ತಡೆಯುಂಟೇ? ರಣದಲ್ಲಿ ತಪವುಂಟೇ? ನೇಹ ತಪ್ಪಿದಲ್ಲಿ ಮೋಹವನರಸಲುಂಟೇ? ಮಹಾಲಿಂಗ ಚನ್ನರಾಮನ ಮುನಮುಂದ ಬಳಿಕ ಕಂಗಳಿಗೆ ವಿಷವಯ್ಯ.

(೨) ಹೊಲೆಯರಲ್ಲುಂಡೆ. ನೀ ಕುಲವಂತನೇ? ತರುಳನ ಕೊಲಿಸಿದೆ. ನೀ ಕರುಣವಂತನೇ? ತಿರಿದುಂಬೆ. ನೀ ಸಿರಿವಂತನೇ? ಪಂಚವರ್ಣದ ಮುಖ. ನೀ ಚೆಲುವನೇ? ಕಂಚಿಲ್ಲದೆ ಹಂಚಿನಲ್ಲುಂಟೆ. ಮರುಳ್ಗಳನೊಡನಾಡಿ ನೀ ಸೊಕ್ಕಿದೆಯಾ ಮಹಾಲಿಂಗ ಚನ್ನರಾಮಾ?

(೩) ಗಣಂಗಳ ಬರವ ಕಂಡು ಕೈಮುಗಿದು ಅಂಜಲೇಬೇಕು. ಶರಣೆನ್ನಲೊಲ್ಲದೀ ಮನವು. ಅಳ್ದನೆಂದು ನಂಬಿ ನಂಬಲೊಲ್ಲದಾಗ ಮಹಾಲಿಂಗ ಚನ್ನರಾಮನೆನ್ನ ಕೆಡೆನೋಡಿ ನಗುತ್ತಲೈದಾನೆ.

(೪) ಎನಗೆ ನೀ ಕಟ್ಟುವರೆ ಎಂಬಲ್ಲಿ ಕೇಳು ಭಂಡಾರಿ ಬಸವಣ್ಣನೇ, ಎನಗೆ ನೀ ಕಟ್ಟುವರೆ ಕೇಳು ನಂಬಿಯಣ್ಣನೇ? ಎನಗೆ ನೀ ಕಟ್ಟುವರೆ ಎಂಬಲ್ಲಿ ಕೇಳು ಅಜಗಣ್ಣನೇ, ಆನೆ ಮುರಿದಲ್ಲಿ ಸುಂಡಾಲವೇ? ಆನಿಲ್ಲದಿರ್ದಡೆ ನೀನಿಲ್ಲ. ನೀನಿಲ್ಲದಿರ್ದೊಡೆ ಆನಿಲ್ಲ. ಆನು ನೀನೆಂಬುದಂತಿರಲಿ. ಹಿಡಿಯೋ, ಮುಡಿಯೋ, ನೀ ಮಾಡಿದಂತಿಪ್ಪೆನು. ಸಾತ್ವಿಕ ಸಜ್ಜನ ಸದ್ಗುರುವಿನಿಂದೆ ಬದುಕಿದೆನಾಗಿ ನಿಮಗಾನಂಜೆ ಮಹಾಲಿಂಗ ಚನ್ನರಾಮಾ.

ಈ ಕಡೆಯ ವಚನದಮೇಲಿಂದ ಮೈದುನ ರಾಮಯ್ಯನು ಬಸವೇಶ್ವರನ ತರುವಾಯ ಪ್ರಸಿದ್ಧಿಗೆ ಬಂದನೆಂಬುದು ಸ್ಪಷ್ಟವದೆ. ಇವನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಇವನು ಶಿವಶರಣರಲ್ಲಿ ಪುರಾತನ ಕಾಲದವನು. ಇವನ ಹೆಸರು ಶಿವಶರಣರ ಹೆಸರುಗಳ ಯಾವ ಮಾಲಿಕೆಯಲ್ಲಾದರೂ ಬರುವದುಂಟು. ಇಷ್ಟು ಈತನು ಪ್ರಸಿದ್ಧನಾಗಿದ್ದಾನೆ. ಆರಂಭದಲ್ಲಿ ಇವನು ಮುಗ್ಧ ಭಕ್ತಿಯುಳ್ಳವನಾಗಿ ಗಿರಿಜೆ ಮತ್ತು ಶಿವ ಇವರು ತನ್ನ ಅಕ್ಕಭಾವಂದಿರು ಎಂದು ತಿಳಿದು ಆ ಬಗೆಯ ಪ್ರೇಮದಿಂದ ವರ್ತಿಸಿ ಪರಮಾತ್ಮನನ್ನು ಒಲಿಸಿದ್ದಾನೆ. ಇದು ಅವನ ವೈಶಿಷ್ಟ್ಯವು. ಆರಂಭದಲ್ಲಿ ಚಿಕ್ಕ ಮಕ್ಕಳಂತೆ ಮುಗ್ಧಭಕ್ತಿಯುಳ್ಳವನಾದರೂ ಮುಂದೆ ಅವನು ಒಬ್ಬ ಶ್ರೇಷ್ಠ ಶಿವಾನುಭವಿಯಾಗಿ ಆಚರಿಸಿದನೆಂಬುದು ನಾವು ಮೇಲೆ ಉಲ್ಲೇಖಿಸಿದ ವಚನಗಳ ಮೇಲಿಂದ ಕಂಡು ಬರುತ್ತದೆ. ರಾಮಯ್ಯನು ಆಂಧ್ರ ದೇಶದವನು. ಅವನು ಬಹುಶಃ ಶ್ರೀಶೈಲಕ್ಕೆ ಸಮೀಪವರ್ತಿಯಾದ ಕೆಲವೊಂದು ಗ್ರಾಮದಲ್ಲಿದ್ದನೆಂದು ತೋರುತ್ತದೆ. ಬಸವೇಶ್ವರನ ಕಾಲದಲ್ಲಿ ಅನೇಕ ಆಂಧ್ರರು ವೀರಶೈವ ಧರ್ಮವನ್ನು ಸ್ವೀಕರಿಸಿ ಕನ್ನಡ ಭಾಷೆಯಲ್ಲಿ ವಚನಗಳನ್ನು ರಚಿಸಿದ್ದು ಕಂಡು ಬರುತ್ತದೆ. ಅಂಥವರಲ್ಲಿ ಮೈದುನ ರಾಮಯ್ಯನು ಒಬ್ಬನು ಇದ್ದಾನೆ.

---

# ೩೦ ಮಹಾದೇವಿಯಕ್ಕ.

ಮಹಾದೇವಿಯಕ್ಕನು ಶಿವಶರಣರ ಸಮೂಹವೆಂಬ ತಾರಾಗಣದಲ್ಲಿ ಅತಿ ಉಜ್ವಲವಾಗಿ ಶೋಭಾಯಮಾನಳಾಗಿ ಧ್ರುವತಾರೆಯಂತೆ ನಿಶ್ಚಲವಾಗಿ ಶಾಶ್ವತವಾಗಿ ಬೆಳಗುತ್ತ ಬಂದಿದ್ದಾಳೆ. ಬಸವೇಶ್ವರನ ಕಾಲದಲ್ಲಿ ಅವಳು ಎಲ್ಲರಿಂದ ಮನ್ನಣೆಯನ್ನು ಹೊಂದಿದವಳಾಗಿದ್ದಳು. ಅವನ ತರುವಾಯ ಅನೇಕ ಶತಮಾನಗಳು ಸಂದಿ ಹೋದರೂ ಅವಳ ಕೀರ್ತಿಯು ಯಥಾವತ್ತಾಗಿ ಪ್ರಕಾಶಿಸುತ್ತ ಬಂದಿದೆ. ಈಗಲೂ ಕೂಡ ಕರ್ನಾಟಕಸ್ಥರನ್ನೆಲ್ಲ ಆಕರ್ಷಿಸಿ ಅವರ ಮನ ಬುದ್ಧಿ ಚಿತ್ತಕ್ಕೆ ಆನಂದವನ್ನು ನೀಡುವವಳಾಗಿದ್ದಾಳೆ. ಎಲ್ಲ ಕಡೆಗೂ ಆಕೆಯ ಹೆಸರಿನಿಂದ ಅಕ್ಕನ ಬಳಗಗಳು ಉಂಟಾಗುತ್ತಲಿವೆ. ಕರ್ನಾಟಕದಲ್ಲಿ ಅನೇಕ ಸ್ತ್ರೀರತ್ನಗಳೂ ಥಳ ಥಳನೆ ಹೊಳೆಯುತ್ತವೆ. ಅವುಗಳಲ್ಲಿ ಮಹಾದೇವಿಯಕ್ಕನು ಸ್ವತಂತ್ರ ಪ್ರಕಾಶದಿಂದ ಬೆಳಗುತ್ತಲಿದ್ದಾಳೆ.

ಮಹಾದೇವಿಯಕ್ಕನ ಚರಿತ್ರೆಗಳು ಅನೇಕವಾಗಿವೆ. ಅವುಗಳಲ್ಲಿ ಅವಳು ಕೌಶಿಕರಾಜನನ್ನು ತೊರೆದು ಕಲ್ಯಾಣಕ್ಕೆ ಹೋದದ್ದರ ವರ್ಣನೆಗಳು ಇವೆ. ಕಲ್ಯಾಣಕ್ಕೆ ಹೋದ ಬಳಿಕ ಪೂರ್ಣ ಜ್ಞಾನಿ ಎಂದು ಹೆಸರುಗೊಂಡಳೆಂಬ ವಿವರಣೆಗಳಿವೆ. ಮುಂದೆ ಅವಳು ಶ್ರೀಶೈಲಕ್ಕೆ ಹೋಗಿ ಕದಳೀ ಬನದಲ್ಲಿ ಲಿಂಗದಲ್ಲಿ ಸಾಮರಸ್ಯವನ್ನು ಹೊಂದಿದಳೆಂಬ ವಿವರಣೆಯು ಇದ್ದು ಇಷ್ಟಕ್ಕೆ ಅವಳ ಚರಿತ್ರೆಯು ಮುಗಿಯುತ್ತದೆ. ಆದರೆ ನಮಗೆ ದೊರೆತ ಅವಳ ೧೪೪ ವಚನಗಳನ್ನು ನೋಡಿದರೆ ಅವಳ ಶಿವಾನುಭವ ಸ್ಥಾನವು ಎಷ್ಟು ಅಗಾಧವಾಗಿತ್ತೆಂಬುದು ಗೊತ್ತಾಗುತ್ತದೆ. ಹಿಂದೂ ಸಂಸ್ಕೃತಿಯ ಪ್ರಕಾರ ಸ್ವಂತದ ವೃತ್ತಾಂತವನ್ನು ಹೇಳುವದು ಆತ್ಮಶ್ಲಾಘನೆಯು. ಇದನ್ನು ಯಾರೂ ಮಾಡಕೂಡದೆಂಬ ನಿಯಮವಿದೆ. ಮಹಾದೇವಿಯಕ್ಕನಾದರೂ ಹಾಗೆಯೇ ವರ್ತಿಸಿದ್ದಾಳೆ. ಅವಳು ತನ್ನ ವೃತ್ತಾಂತವನ್ನು ವಿಸ್ತಾರವಾಗಿ ಎಲ್ಲಿಯೂ ಹೇಳಿಕೊಂಡಿಲ್ಲ. ಆದರೆ ಅವಳ ವಚನಗಳನ್ನು ಪರೀಕ್ಷಿಸಿದರೆ ಅವುಗಳಲ್ಲಿ ಅವಳ ಜೀವಿತದಲ್ಲಿ ಉಂಟಾದ ಘಟನೆಗಳು ಅಗಿಂದಾಗ್ಗೆ ಇಣಿಕಿ ಹಾಕುತ್ತ ಇವೆ, ಎಂಬುದನ್ನು ನಾವು ಕಾಣ ಬಹುದು. ನಾವು ಇಂಥವುಗಳನ್ನು ಸಂಗ್ರಹಿಸಿ ಅವಳ ಚರಿತ್ರೆಯನ್ನು ಬರೆಯ ಬೇಕಾಗಿ ಬಂದಿದೆ.

ಮಹಾದೇವಿಯಕ್ಕನು ಕಲ್ಯಾಣಕ್ಕೆ ಬಂದಾಗ್ಗೆ ಆಕೆಯು ವಯಸ್ಸು ಕೇವಲ ೧೬ ವರ್ಷಗಳಾಗಿದ್ದವು. ಅಲ್ಲಿ ಅವಳು ಮುಂದೆ ೬ ವರ್ಷ ಕಾಲ ಕಳೆದು ಶ್ರೀಶೈಲಕ್ಕೆ ಹೋಗುವವಳಾದಳು. ಆದ್ದರಿಂದ ಅವಳು ೧೧೬೮ ರಲ್ಲಿ ಸಮಾಧಿಸ್ಥಳಾದಾಗ ಆಕೆಗೆ ಬರೀ ೨೨ ವರ್ಷಗಳಾಗಿದ್ದವು. ಆದ್ದರಿಂದ ಅವಳ ಜನನವು ೧೧೪೬ರಲ್ಲಿ ಆಗಿರಬೇಕು. ಅಂದರೆ ಅವಳು ಬಸವೇಶ್ವರನ ಕಿಂತಲೂ ೧೪ ವರ್ಷ ಚಿಕ್ಕವಳು. ಅವಳು ಇಷ್ಟು ಅಲ್ಪಕಾಲದಲ್ಲಿಯೇ ಉಜ್ವಲ ಅನುಭಾವಿಯಾಗಿ ಶಿವಶರಣರಲ್ಲಿ ಅಮೋಘವಾದ ಸ್ಥಾನವನ್ನು ಪಡೆದಿದ್ದಾಳೆ.

ಈಗ ಮೈಸೂರ ಸಂಸ್ಥಾನ ಶಿವಮೊಗ್ಗಾ ಜಿಲ್ಹೆಯಲ್ಲಿರುವ ಉಡುತಡಿ ಎಂಬ ಗ್ರಾಮದಲ್ಲಿ ಅವಳು ಜನಿಸಿದಳು. ಈ ಜಿಲ್ಲೆಯಲ್ಲಿ ಈಗ ಉಡಗಣಿ ತಡಗಣಿ ಎಂಬ ಹೆಸರಿನ ಎರಡು ಗ್ರಾಮಗಳು ಸಮಿಸಮೀಪವಾಗಿ ಇವೆ. ಪೂರ್ವ ಕಾಲದಲ್ಲಿ ಈ ಎರಡೂ ಗ್ರಾಮಗಳು ಹೊಂದಿಕೊಂಡು ಉಡುತಡಿ ಎಂಬ ಒಂದೇ ಹೆಸರಿನ ಗ್ರಾಮವಾಗಿತ್ತೆಂದು ತೋರುತ್ತದೆ. ಇಲ್ಲಿ ವಿಮಲ ಮತ್ತು ಸುಮತಿ ಎಂಬ ದಂಪತಿಗಳು ವಾಸಮಾಡುತ್ತಿದ್ದರು. ಈ ಉಭಯತರು ವೀರಶೈವ ಧರ್ಮದಂತೆ ನಡೆಯುವವರಾಗಿದ್ದರು.

ಉಡುತಡಿಯು ಬನವಾಸಿ ನಾಡಿನಲ್ಲಿದ್ದು, ಈ ಗ್ರಾಮವು ಬನವಾಸಿ ಯಿಂದ ಸುಮಾರು ೪೦ ಮೈಲುಗಳ ಮೇಲೆ ಇರುತ್ತದೆ. ಬನವಾಸಿಯು ಚಾಲುಕ್ಯರ ರಾಜ್ಯದಲ್ಲಿ ಒಂದು ಮಹತ್ವದ ಪ್ರಾಂತವಾಗಿದ್ದು, ಇಲ್ಲಿ ಒಬ್ಬ ಮಂಡಲಾಧೀಶ್ವರನು ಚಾಲುಕ್ಯರಾಜನಿಗೆ ಅಂಕಿತನಾಗಿ ರಾಜ್ಯವಾಳುತ್ತಿದ್ದನು. ಬನವಾಸಿಯು ಬಹುಕಾಲದಿಂದಲೂ ಪುಣ್ಯಕ್ಷೇತ್ರವೆಂದು ಪರಿಗಣಿಸಲ್ಪಡು ತ್ತಿತ್ತು. ಪಶ್ಚಿಮ ಸಮುದ್ರದ ತೀರದಲ್ಲಿ ಈ ಕಾಲದಲ್ಲಿ ಕೆಲವು ಬಂದರ ಗಳಿದ್ದು ಅವುಗಳೊಳಗಿಂದ ಅರಬಸ್ತಾನ, ಇರಾಣಗಳಲ್ಲಿಗೆ ದೊಡ್ಡ ವ್ಯಾಪಾ ರವು ನಡೆಯುತ್ತಿತ್ತು. ಈ ವ್ಯಾಪಾರವು ಬನವಾಸಿಯ ಮಾರ್ಗವಾಗಿಯೇ ದೇಶದಲ್ಲೆಲ್ಲ ಪಸರಿಸಿತ್ತು. ಆದ್ದರಿಂದ ಈ ಪ್ರಾಂತದ ಜನರು ಧನಾಢ್ಯ ರಾಗಿದ್ದರು. ಈ ಕಾಲದಲ್ಲಿ ಉಡುತಡಿ ಈ ಗ್ರಾಮದಲ್ಲಿ ಕೌಶಿಕರಾಜನೆಂಬ ರಾಜನು ಆಳುತ್ತಿದ್ದನು. ಅವನು ಬನವಾಸಿ ಮಂಡಲೇಶ್ವರನಿಗೆ ಅಧೀನ ನಾಗಿ ತನ್ನ ಪ್ರದೇಶದಲ್ಲಿ ಆಳುತ್ತಿದ್ದನು.

ಬನವಾಸಿ ಪಟ್ಟಣವಿದ್ದ ಈ ಪ್ರದೇಶವು ನಾಗರಿಕತೆಯಲ್ಲಿ ಎಂದಿನಿಂ ದಲೂ ಬಹು ಪ್ರಸಿದ್ಧವಾಗಿತ್ತು. ಇಲ್ಲಿ ಅನೇಕ ಕವಿಗಳೂ ಕಲಾವಿದರೂ ವಾಸಿಸುತ್ತಿದ್ದರು. ೧೦ನೇ ಶತಮಾನದಲ್ಲಿ ಆಗಿಹೋದ ಕನ್ನಡ ಮಹಾಕವಿ ಯಾದ ಪಂಪನು ಬನವಾಸಿ ನಾಡಿನವನಾಗಿದ್ದಾನೆ. ಈ ಕಾಲದಲ್ಲಿ ಶಿವ ಶರಣರ ತತ್ವಗಳ ಪ್ರಭಾವವು ಎಲ್ಲ ಕಡೆಗೂ ಪಸರಿಸಹತ್ತಿತ್ತು. ಇದರ ಮೂಲಕ ದಲ್ಲಿ ಅನೇಕ ಶಿವಶರಣರು ಈ ಪ್ರಾಂತದಲ್ಲಿ ಉದ್ಭವಿಸಿದ್ದರು. ಇಲ್ಲಿ ರೇವಣಸಿದ್ಧ ಅನುಮಿಷ, ಅಲ್ಲಮಪ್ರಭು ಮೊದಲಾದವರು ಪ್ರಸಿದ್ಧಿಗೆ ಬಂದರು. ಈ ಭಾಗದಲ್ಲಿ ಶಿವಶರಣರಂತೆಯೇ ಬೌದ್ಧ. ಜೈನ, ಬ್ರಾಹ್ಮಣ ಮೊದಲಾದ ಮತಸ್ಥರೂ ಪ್ರಭಾವಿಗಳಾಗಿ ವಾಸಮಾಡುತ್ತಿದ್ದರು. ಹೀಗೆ ಈ ಪ್ರದೇಶ ದಲ್ಲಿ ಮೊದಲಿನಿಂದಲೂ ಒಂದು ಧಾರ್ಮಿಕ ವಾತಾವರಣವು ಇದ್ದಿತೆಂದು ಊಹಿಸಲು ಯಾವ ಪ್ರತ್ಯವಾಯವೂ ಇರಲಾರದು.

ಮಹಾದೇವಿಯಕ್ಕನ ತಾಯಿತಂದೆಗಳಾದ ವಿಮಲ, ಸುಮತಿ ಇವರು ವೀರಶೈವ ಧರ್ಮವನ್ನು ಪರಿಪಾಲಿಸುವವರಾಗಿದ್ದರಿಂದ ಮಹಾದೇವಿಯಕ್ಕ ನಿಗೆ ವೀರಶೈವ ಧರ್ಮಾಚಾರದಂತೆ ಪೂರ್ವ ವಯಸ್ಸಿನಲ್ಲಿಯೇ ಲಿಂಗಧಾರಣ ವಾಗಿರಬೇಕು. ಹೀಗೆ ತನಗೆ ಲಿಂಗಧಾರಣ ಮಾಡಿದ ಗುರುವಿನ ಹೆಸ ರನ್ನು ಮಹಾದೇವಿಯಕ್ಕನು ತನ್ನ ವಚನದಲ್ಲಿ ಎಲ್ಲಿಯೂ ಹೇಳಿರುವದಿಲ್ಲ. ಅವಳ ೨೮ನೇ ವಚನದಲ್ಲಿ ಮಾತ್ರ ಶ್ರೀಗುರುಲಿಂಗದೇವರು ತಮ್ಮ ಹಸ್ತವ ತಂದು ಎನ್ನ ಮಸ್ತಕದ ಮೇಲೆ ಇರಿಸಿದಾಗಲೆ ಎನ್ನ ಭವಂ ನಾಸ್ತಿಯಾ ಯಿತ್ತು ತನ್ನ ಕರಸ್ಥಲದಲ್ಲಿದ್ದ ಮಹಾಲಿಂಗವನೆನ್ನ ಮನಸ್ಥಲದಲ್ಲಿ ಮೂರ್ತಿಗೊಳಿಸಿದ, ಎಂದು ಮೊದಲಾಗಿ ಹೇಳಿದ್ದಾಳೆ. ಆದರೆ ಅವಳು ಅವನ ಹೆಸರನ್ನು ಹೇಳಿರುವದಿಲ್ಲ. ಆದರೆ ಅವಳು ತಾನು ಲಿಂಗಧಾರಣೆ ಯನ್ನು ಬಸವೇಶ್ವರನ ಕಡೆಯಿಂದ ಹೊಂದಿದ್ದರ ಬಗ್ಗೆ ಕೆಲವು ವಚನ ಗಳನ್ನು ಅವಳು ನುಡಿದಿದ್ದಾಳೆ. ಅವಳು ಕಲ್ಯಾಣಕ್ಕೆ ಹೋದಬಳಿಕ ಲಿಂಗ ಧಾರಣದ ವಿಷಯವಾಗಿ ಹೆಚ್ಚಿನ ಜ್ಞಾನವನ್ನು ಸಂಪಾದನೆ ಮಾಡಿಕೊಂಡು ಬಸವೇಶ್ವರನ ಕಡೆಯಿಂದ ಜ್ಞಾನ ದೀಕ್ಷೆಯನ್ನು ಹೊಂದಿರಬೇಕೆಂದು ತೋರು ತ್ತದೆ. ಇದರ ಬಗ್ಗೆ ನಾವು ಮುಂದೆ ಹೆಚ್ಚಿಗೆ ಪ್ರಸ್ತಾಪಿಸುವೆವು- ಆದರೆ ಆರಂಭ ದಲ್ಲಿ ಅವಳಿಗೆ ಲಿಂಗಧಾರಣೆ ಮಾಡಿದವರು ಯಾರೆಂಬುದು ಅವಳ ವಚನ ಗಳಿಂದ ಸ್ಪಷ್ಟವಾಗಿ ತಿಳಿದುಬರುವದಿಲ್ಲೆಂಬು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವಾಗಿದೆ.

ಮಹಾದೇವಿಯಕ್ಕನು ತನ್ನ ತಾಯಿ ತಂದೆಗಳ ಮನೆಯಲ್ಲಿ ಜನ್ಮ ಲಿಂಗ ಧಾರಣೆಯನ್ನು ಹೊಂದಿದ ಬಳಿಕ ಅವಳು ಅವರ ಮನೆಯಲ್ಲಿ ೧೬ವ ರ್ಷಕಾಲ ಕಳೆದಿದ್ದಾಳೆ. ಈ ಸಮಯದಲ್ಲಿ ಅವಳು ಅಜ್ಞಾನಿಯಾಗಿ ಬೆಳೆ ಯದೆ ಹೆಚ್ಚಿನ ಶಿಕ್ಷಣವನ್ನು ಹೊಂದಿದವಳಾಗಿದ್ದಳೆಂದು ತಿಳಿಯುತ್ತಿದೆ. ಇದು ಅವಳ ವಚನಗಳಿಂದ ಗೊತ್ತಾಗುತ್ತಿದೆ. ಅವಳು ಸಂಸ್ಕೃತ ಭಾಷೆ ಯನ್ನು ಸಹ ಚನ್ನಾಗಿ ಕಲಿತವಳಾಗಿದ್ದಳು. ಇದನ್ನು ನಾವು ಅವಳ ೧೧೪ನೇ ವಚನದಿಂದ ಊಹಿಸಲು ಅಡ್ಡೀಇಲ್ಲ. ಅದರಲ್ಲಿ ಅವಳು ಹೇಳು ವದೇನೆಂದರೆ, ಇಷ್ಟಲಿಂಗವಿದ್ದಂತೆ ಸ್ಥಾವರ ಲಿಂಗಕ್ಕೆ ಶರಣೆಂದಡೆ ತಡೆ ಯದೆ ಹುಟ್ಟಿಸುವ ಶ್ವಾನನ ಗರ್ಭದಲ್ಲಿ ಅಂದಿತೆಂದೊಡೆ, ಶಿವಧರ್ಮಪುರಾಣೆ!! ಎಂದು ಇದರಲ್ಲಿಯು ಸಂಸ್ಕೃತ ಆಧಾರವನ್ನು ಕೊಟ್ಟಿದ್ದಾಳೆ. ಶಿವಧರ್ಮ ಪುರಾಣವು ವೀರಶೈವರ ಒಂದು ಪುರಾತನ ಮಹತ್ವದ ಗ್ರಂಥವಿರುತ್ತದೆ. ಇದರಲ್ಲಿಯು ಅವತರಣಗಳನ್ನು ವೀರಶೈವ ಗ್ರಂಥಕಾರರು ತಮ್ಮ ಗ್ರಂಥಗ ಳಲ್ಲಿ ಆಗೀದಾಗ್ಗೆ ಕೊಡುತ್ತಾರೆ. ಆದರೆ ಈ ಗ್ರಂಥವು ಈ ವರೆಗೂ ನಮಗೆ ಉಪಲಬ್ಧವಾಗಿರುವದಿಲ್ಲ. ಮತ್ತು ಅದರ ಪ್ರಚಾರವೂ ಇಲ್ಲ. ಸಂಸ್ಕೃತ ಭಾಷೆಯನ್ನು ಅವಳು ಕಲ್ಯಾಣಕ್ಕೆ ಹೋದ ಬಳಿಕ ಕಲಿತಿರ ಬಹುದೆಂದು ನಮಗೆ ತೋರುವದಿಲ್ಲ. ಯಾಕಂದರೆ ಅಲ್ಲಿ ಯಾವಾಗಲೂ ಶಿವಶರಣರ ಕಾರ್ಯ ಕಲಾಪಗಳು ನಡೆಯುತ್ತಿದ್ದು ಆಗ ಅವಳು ಈ ಭಾಷೆಯ ಅಭ್ಯಾಸ ಮಾಡಲು ಸಂಧಿಯು ದೊರೆಯುವ ಸಂಭವವು ಇರಲಾರದು.

ಮಹಾದೇವಿಯಕ್ಕನು ತನ್ನ ತಂದೆಯ ಮನೆಯಲ್ಲಿ ಇದ್ದಾಗಲೇ ಅವಳು ಕನ್ನಡಸಾಹಿತ್ಯವನ್ನು ಚನ್ನಾಗಿ ಅಭ್ಯಾಸ ಮಾಡಿದ್ದಲ್ಲದೆ ಎಲ್ಲ ಕಲೆ ಗಳನ್ನು ಸಹ ಬಲ್ಲವಳಾಗಿದ್ದಳೆಂದು ಹರಿಹರನು ತನ್ನ ರಗಳೆಯಲ್ಲಿ ಬರೆದಿ ದ್ದಾನೆ. ಇದು ಸಂಭವನೀಯವಾಗಿದೆ. ಅವನು ಅನ್ನುವದೇನೆಂದರೆ "ಶಿವಭಕ್ತಿ ಭರಿತೆಯು, ಶಿವಜ್ಞಾನ ಸಂಪನ್ನೆಯು, ಸಾಹಿತ್ಯವಿದೆಯು, ಸಕಲ ಕಲಾಕೋ ವಿದೆಯುಪ್ಪುಡುತಡೆಯ ಮಹಾದೇವಿಯ ತನುವಿನ ಬಾಲ್ಯಂ ಸಡಿಲ್ದು"ಎಂದು ಹೇಳುತ್ತಾನೆ. ಇದರಲ್ಲಿ ಅತಿಶಯೋಕ್ತಿಯು ಇರುವದಿಲ್ಲೆಂದು ನಮಗೆ ತೋರುತ್ತದೆ. ಹಿಂದಿನ ಕಾಲದಲ್ಲಿ ಶೈವ, ವೀರಶೈವರಲ್ಲಿ ಬಾಲ ವಿವಾಹವು ಈ ಪ್ರಾಂತದಲ್ಲಿ ಪ್ರಚಲಿತವಿರಲಿಲ್ಲ. ಈ ಸಮಯದಲ್ಲಿ ಅವರಲ್ಲಿಯು ಹೆಣ್ಣು

ಮಕ್ಕಳು ಚನ್ನಾಗಿ ಶಿಕ್ಷಣವನ್ನು ಹೊಂದಿದವರಾಗುತ್ತಿದ್ದರೆಂದು ತೋರುತ್ತದೆ. ಇಂಥ ಅನೇಕ ಉದಾಹರಣೆಗಳನ್ನು ಶಿವಶರಣೆಯರ ಚರಿತ್ರೆಗಳಲ್ಲಿ ನಾವು ಕಾಣಬಹುದು.

ಹೀಗೆ ಮಹಾದೇವಿಯಕ್ಕನು ತನ್ನ ಪೂರ್ವ ವಯಸ್ಸಿನಲ್ಲಿ ಹೆಚ್ಚಿನ ತರದ ಧರ್ಮಜ್ಞಾನವನ್ನು ಹೊಂದಿದ್ದರಿಂದ ಅವಳು ತನ್ನ ಚಿಕ್ಕ ವಯಸ್ಸಿನ ಲ್ಲಿಯೇ ವೀರಶೈವ ಧರ್ಮಜ್ಞಾನ ಮಾತ್ರವಲ್ಲ, ಸಾಹಿತ್ಯ ಜ್ಞಾನವನ್ನು ಸಹ ಹೊಂದಿ ಶ್ರೇಷ್ಠ ತರಗತಿಯ ಶಿವಜ್ಞಾನಿಯೂ ವಚನಕಾರಳೂ ಆದಳೆಂದು ಊಹಿಸಲು ಯಾವ ಪ್ರತ್ಯವಾಯವೂ ಇರಲಾರದು.

ಮಹಾದೇವಿಯಕ್ಕನು ಚಿಕ್ಕಂದಿನಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆ ಗಳ ಜ್ಞಾನ ಮಾಡಿಕೊಂಡು ಪುರಾಣಾಗಮಗಳ ಅಭ್ಯಾಸವನ್ನು ಸಹ ಚನ್ನಾಗಿ ಮಾಡಿಕೊಂಡಿರಬೇಕೆಂದು ತೋರುತ್ತದೆ. ಶೈವ ಪುರಾಣಾದಿಗಳು ಅವಳಿಗೆ ಚನ್ನಾಗಿ ಪರಿಚಯವಾಗಿದ್ದವು. ಆದ್ದರಿಂದ ಅವಳು ತನ್ನ ವಚನಗಳಲ್ಲಿ ಶಿವನ ಸಭೆ, ಕೈಲಾಸ ಪರ್ವತ, ಶಿವನ ಪರಿವಾರ ದೇವತೆಗಳು ಇವುಗಳ ವರ್ಣನೆಯನ್ನು ಬಹಳ ಚನ್ನಾಗಿ ಮಾಡುತ್ತಾಳೆ. ಈ ಕಾಲದಲ್ಲಿ ಶ್ರೀಶೈಲ ಮಲ್ಲಿಕಾರ್ಜುನನ ಭಕ್ತಿಯು ಕರ್ನಾಟಕದಲ್ಲಿ ಎಲ್ಲ ಕಡೆಗೂ ಬಹಳ ಪಸ ರಿಸಿತ್ತೆಂದು ತೋರುತ್ತದೆ. ಸಿದ್ಧರಾಮೇಶ್ವರನು, ಕಕ್ಕಯ್ಯ ಮೊದಲಾದ ಅನೇಕ ಮಹತ್ವದ ಶಿವಶರಣರು ಶ್ರೀಶೈಲ ಮಲ್ಲಿಕಾರ್ಜುನನಿಗೋಸ್ಕರ ಬಹಳ ಭಕ್ತಿಯನ್ನು ವಹಿಸಿದವರಾಗಿದ್ದಾರೆ. ಉಡುತಡಿಯಲ್ಲಿ ಮಲ್ಲಿಕಾರ್ಜು ನನ ಒಂದು ದೇವಾಲಯವೂ ಉಂಟು. ಮಹಾದೇವಿಯಕ್ಕನು ಮಲ್ಲಿಕಾ ರ್ಜುನನ ಹೆಸರಿನಿಂದ ವಚನಗಳನ್ನು ರಚಿಸಿದ್ದರ ಮೇಲಿಂದ ಮಲ್ಲಿಕಾರ್ಜು ನನ ಬಗ್ಗೆ ಭಕ್ತಿಯು ಅವಳ ಚಿಕ್ಕ ವಯಸ್ಸಿನಲ್ಲಿಯೇ ಅವಳಲ್ಲಿ ಉಂಟಾ ಗಿರಬಹುದೆಂದು ನಾವು ಊಹಿಸಬಹುದಾಗಿದೆ. ಇದೇ ಕಾಲದಲ್ಲಿ ಬನವಾಸಿ ನಾಡಿನಲ್ಲಿ ರೇವಣಸಿದ್ಧ, ಸತ್ಯಕ್ಕ, ಅನುಮಿಷ ಮೊದಲಾದ ವಚನಕಾರರು ಉಂಟಾಗಿದ್ದರು. ಇವರು ಶ್ರೇಷ್ಠ ತರಗತಿಯ ಶಿವಾನುಭವಿಗಳು. ಇವರ ಶಿವಾನುಭವದ ವಿಚಾರಗಳು ನಾಡಿನಲ್ಲಿ ಕೆಲಮಟ್ಟಿಗಾದರೂ ಪಸರಿಸಿರಬಹುದು. ಅವು ಮಹಾದೇವಿಯಕ್ಕನನ್ನು ಆಕೆಯ ಸಣ್ಣ ವಯಸ್ಸಿನಲ್ಲಿ ಆಕರ್ಷಿಸಿರ ಬಹುದು. ಬಸವೇಶ್ವರನು ಐದಾರು ವರ್ಷ ಮಾತ್ರ ಕಲ್ಯಾಣ ಪಟ್ಟಣದಲ್ಲಿ ಮಂತ್ರಿಯಾಗಿದ್ದನು. ಇಷ್ಟು ಅಲ್ಪ ಕಾಲದಲ್ಲಿಯೇ ಮಹಾದೇವಿಯಕ್ಕನು

ಬಹು ಶ್ರುತಳೂ, ಅನುಭಾವದ ಪೂರ್ಣ ಸ್ಥಿತಿಯನ್ನು ಹೊಂದಿದವಳೂ ಆಗುವ ಸಂಭವವಿಲ್ಲ. ಅವಳಿಗೆ ಶಿವಾನುಭವದ ವ್ಯಾಸಂಗವು ಅವಳ ಚಿಕ್ಕ ವಯಸ್ಸಿನಲ್ಲಿಯೇ ಪ್ರಾರಂಭವಾಗಿರಬಹುದು. ಅದಕ್ಕೆ ಅನುಕೂಲವಾದ ಸನ್ನಿವೇಶಗಳು ಬನವಾಸಿ ನಾಡಿನಲ್ಲಿ ಈ ಕಾಲದಲ್ಲಿ ಉಂಟಾಗಿದ್ದವು. ಈ ಕಾರಣಕ್ಕೋಸ್ಕರ ಮಹಾದೇವಿಯಕ್ಕ ಮೊದಲ್ಗೊಂಡು ಬಹುಜನ ಶಿವ ಶರಣ ಶಿವಶರಣೆಯರು ಈ ಭಾಗದಲ್ಲಿ ಉಂಟಾಗಿದ್ದಾರೆ.

ಈ ಪ್ರಕಾರ ಮಹಾದೇವಿಯಕ್ಕನು ತನ್ನ ತಾಯಿತಂದೆಗಳ ಮತ್ತು ಕುಲಗುರುವಿನ ನಿದರ್ಶನದಲ್ಲಿ ಹೆಚ್ಚಿನ ತರಗತಿಯ ಶಿವಜ್ಞಾನವನ್ನು ಹೊಂದುತ್ತ ಬಂದಳು. ಆಕೆಗೆ ಒಬ್ಬ ಗುರುವು ಇದ್ದನೆಂಬುದು ತಿಳಿದುಬರುತ್ತಿದ್ದರೂ ಆತನ ವಿಷಯವಾಗಿ ನಮಗೆ ವಿವರಣೆಗಳು ಗೊತ್ತಾಗಿರುವದಿಲ್ಲ. ಆದರೆ ಅವನ ವಿಷಯವಾಗಿ ಆಕೆಯು ಅದರ ಭಾವವನ್ನು ತೋರಿಸುತ್ತಿರುವದರಿಂದ ಆತನು ಹೆಚ್ಚಿನ ತರಗತಿಯವನಿರಬೇಕೆಂದು ಮಾತ್ರ ನಾವು ಊಹಿಸುತ್ತೇವೆ. ಅವಳ ಗ್ರಂಥದಲ್ಲಿಯ ೨೯ ನೇ ವಚನದಲ್ಲಿ “ ಸಂಸಾರ ಸಾಗರದೊಳಗೆ ಬಿದ್ದೆ ನೋಡಾ ನಾನು. ಸಂಸಾರ ನಿಸ್ಸಾರವೆಂದು ತೋರಿದನೆನ್ನ ಗುರು. ಅಂಗ ವಿಕಾರದ ಸಂಗವನಿರಿಸಿ, ಲಿಂಗವನಂಗದ ಮೇಲೆ ಸ್ಥಾಪ್ಯವಮಾಡಿದ ನೆನ್ನ ಗುರು ” ಎಂದು ಮುಂತಾಗಿ ಹೇಳುತ್ತಾಳೆ. ಆದರೆ ಆ ಗುರುವಿನ ಹೆಸರನ್ನು ಅವಳು ಇಲ್ಲಿ ಹೇಳಿಲ್ಲ. ಒಂದು ವೇಳೆ ಹೇಳಿದ್ದರೆ ಅದು ಅವ ನಿಗೋಸ್ಕರ ಅನಾದರ ಭಾವವನ್ನು ತೋರಿಸಿದಂತಾಗುತ್ತದೆಂದು ಅವಳು ತಿಳಿದಿರಬಹುದು. ಹೀಗೆ ಗುರುವಿನ ಹೆಸರನ್ನು ಹೇಳುವ ಸಂಪ್ರದಾಯವೂ ನಾಡಿನಲ್ಲಿ ಇರುವದಿಲ್ಲ.

ಈ ಪ್ರಕಾರ ಮಹಾದೇವಿಯಕ್ಕನು ಉಡುತಡಿಯಲ್ಲಿ ಕಾಲಕಳೆಯುತ್ತಿರಲು ಅವಳ ಪ್ರಸಿದ್ಧಿಯು ಜನರಲ್ಲಿ ಸ್ವಾಭಾವಿಕವಾಗಿ ಪಸರಿಸಿರಬಹುದೆಂಬುದು ಸ್ಪಷ್ಟವಿದೆ. ಹೀಗಿರಲು ಕೆಲವೊಂದು ದಿವಸ ಕೌಶಿಕ ರಾಜನು ವೈಹಾಳಿಯಿಂದ ಬೀದಿಯಿಂದ ತಿರುಗಿ ಬರುತ್ತಿದ್ದನು. ಆಗ ಗಜ ಮಸ್ತಕದ ಮೇಲೆ ಅವನು ಪುಣ್ಯ ಪಾಠಕರ ಸಂದಣಿಯಲ್ಲಿರುವಾಗ ಮಹಾದೇವಿಯಕ್ಕನು ತನ್ನ ಮನೆಯ ಮುಂದೆ ನಿಂತದ್ದನ್ನು ಕಂಡನು. ಆಗ ಅವಳು ತನ್ನ ಎಳೆ ಯೌವ್ವನದಲ್ಲಿ ಸೌಂದರ್ಯವತಿಯಾಗಿ ಶೋಭಿಸುತ್ತಿದ್ದಳು. ಅರಸನು ಅವ ಳನ್ನು ನೋಡಿದ ಕೂಡಲೆ ಅವಳಲ್ಲಿ ಮೋಹ ಪರವಶನಾದನು. ಆಗ

ಅವನ ಮನಸ್ಸು ಚಂಚಲತೆಯನ್ನು ಹೊಂದಿತು. ಅವನು ತನ್ನ ಅರಮನೆಗೆ ಬಂದಬಳಿಕ ತನ್ನ ಮಂತ್ರಿಗಳನ್ನು ಕರೆಸಿ ತಾನು ಮಹಾದೇವಿಯಕ್ಕನನ್ನು ಲಗ್ನವಾಗುವೆನೆಂದು ತಿಳಿಸಿ ಅವಳನ್ನು ತನಗೆ ಕೊಡಲು ಅವಳ ತಾಯಿ ತಂದೆಗಳ ಸಮ್ಮತಿಯನ್ನು ತೆಗೆದುಕೊಂಡು ಬನ್ನಿರೆಂದು ಹೇಳಿ ಕಳುಹಿದನು. ಅಪ್ರಕಾರ ಅವರು ಮಹಾದೇವಿಯಕ್ಕನ ಮನೆಗೆ ಹೋಗಿ ಅವಳ ತಂದೆ ತಾಯಿಗಳಿಗೆ ಈ ವಿಷಯವನ್ನು ಕುರಿತು ಕೇಳಲಾಗಿ ಅವರು ಅತಿ ಸಂಕೋಚ ಭಾವದಿಂದ ಇದನ್ನು ಮಹಾದೇವಿಯಕ್ಕನಿಗೆ ತಿಳಿಸಿದರು. ಅದಕ್ಕೆ ಅವಳು ಕೋಪಿಸಿ ಕೌಶಿಕನು ಜೈನ ಧರ್ಮದವನಾಗಿದ್ದಾನೆ. ಅವನಲ್ಲಿ ಶಿವಭಕ್ತಿ ಎಂಬುದೇನೂ ಇಲ್ಲ, ಇಂಥವನನ್ನು ನಾನು ಹೇಗೆ ಲಗ್ನವಾಗಬಹುದೆಂದು ನುಡಿದು ಇದು ಭಕ್ತರ ಶೀಲವಲ್ಲೆಂದು ನುಡಿದಳು. ಆಗ ತಾಯಿತಂದೆಗಳ ಈ ಮಾತನ್ನು ಅರಸನಿಗೆ ತಿಳಿಸಿರೆಂದು ಮಂತ್ರಿಗಳ ಕೂಡ ಹೇಳಿ ಕಳಿಸಿದರು. ಮಂತ್ರಿಗಳು ಅರಸನಿಗೆ ಅಪ್ರಕಾರ ತಿಳಿಸಲಾಗಿ ಮಂತ್ರಿಗಳು ಅರಸನ ಅಭಿಪ್ರಾಯವನ್ನು ತಿಳಿದುಕೊಂಡು ಮಹಾದೇವಿಯಕ್ಕನ ಮನೆಗೆ ತಿರುಗಿಬಂದು ತಾಯಿತಂದೆಗಳಿಗೆ ಹೇಳಿದ್ದೇನಂದರೆ— ಅರಸನು ಕುಪಿತನಾಗಿದ್ದಾನೆ. ನಿಮಗೆ ದುರ್ಮರಣವಾಗುವದು ನಿಶ್ಚಯವು. ನೀವು ಮಹಾದೇವಿಯಕ್ಕನನ್ನು ಕೊಡದೆ ಹೋದರೆ ನಿಮಗೆ ಮರಣವು ನಿಶ್ಚಯವು. ಆದರೆ ಒಂದುವೇಳೆ ಕೊಟ್ಟರೆ ನೀವು ಸುಖಿಯಾಗಿ ಬಾಳುವಿರಿ, ಎಂದು ಹೇಳಿದರು. ಆಗ ತಾಯಿತಂದೆಗಳು ಮಹಾದೇವಿಯಕ್ಕನನ್ನು ಕಂಡು ಅರಸನ ಈ ಅಭಿಪ್ರಾಯವನ್ನು ಅವಳಿಗೆ ತಿಳಿಸಿ ಹೇಗೆ ಮೊದಲಿನ ಕಾಲದಲ್ಲಿ ಕಾಂಕಾಲಮ್ಮ, ವೈಜಕ್ಕವ್ವೆ, ಮಾಂಗಾಯಕ್ಕರಸಿ ಇವರು ಭವಿಗಳ ಕೂಡ ಇದ್ದರೂ ಅವರು ತಮ್ಮ ಶಿವಭಕ್ತಿಯನ್ನು ಬಿಡಲಿಲ್ಲವೋ ಹಾಗೆಯೇ ನೀನು ಆಚರಿಸಬೇಕೆಂದು ಅವರು ಅವಳಿಗೆ ಬೋಧಿಸಿದರು. ಮಹಾದೇವಿಯಕ್ಕನು ನಿಶ್ಚಲ ಹೃದಯಳು ಮತ್ತು ಸಂಪೂರ್ಣ ಶಿವಾನುಭವಿಯು. ಅವಳು ಅರಸನ ಅಪ್ಪಣೆಯನ್ನು ಕೇಳಿ ಜಾಣತನದಿಂದ ತನ್ನ ತಾಯಿತಂದೆಗಳನ್ನು ಸಂತೈಸುತ್ತ ತನ್ನ ಮುಂದೆ ಇದ್ದ ಮಂತ್ರಿಗಳಿಗೆ ಹೇಳಿದ್ದೇನಂದರೆ— ಅರಸನ ಅಭಿಪ್ರಾಯದಂತೆ ನಾನು ನಡೆಯುವೆನು. ಆದರೆ ಆತನು ನನ್ನ ಶಿವಭಕ್ತಿಗೆ ಹಾನಿಬಾರದಂತೆ ವರ್ತಿಸಬೇಕು. ಇದಕ್ಕೆ ಅವನ ಒಪ್ಪಿಗೆಯನ್ನು ಪಡೆಯಬೇಕು. ಅರಸನನ್ನು ಲಗ್ನವಾಗಲು ಇದೊಂದೇ ನನ್ನ ಶರ್ತು ಇದೆ, ಎಂದು ಹೇಳಿಕಳಿಸಿದಳು. ಮಂತ್ರಿಗಳು ಹಾಗೆಯೇ ಆಗಲೆಂದು ಅರಸನೆಡೆಗೆ ಹೋಗಿ

ಮಹಾದೇವಿಯಕ್ಕನ ಅಭಿಪ್ರಾಯವನ್ನು ಅವನಿಗೆ— ತಿಳಿಸಿ ಅವನ ಉತ್ತರ ವನ್ನು ಕೇಳಿಕೊಂಡು ತಿರುಗಿಬಂದು ಮಹಾದೇವಿಯಕ್ಕನಿಗೆ— ನಿನ್ನ ಶಿವ ಭಕ್ತಿಗೆ ಹಾನಿಬಾರದಂತೆ ಅರಸನು ವರ್ತಿಸುವನು. ಅದಕ್ಕೆ ಅವನು ಒಪ್ಪಿಗೆ ಇದೆ ಎಂದು ಹೇಳಿದರು. ಮಹಾದೇವಿಯಕ್ಕನು ಇದನ್ನು ಕೇಳಿ ಅರಸನ ಮಂದಿರಕ್ಕೆ ಹೋಗಲು ಸಿದ್ಧಳಾದಳು.

ಮೇಲಿನ ಸಂಗತಿಗಳನ್ನು ನಾವು ನಿರೀಕ್ಷಿಸಿದಲ್ಲಿ ಮಹಾದೇವಿಯಕ್ಕನ ಸ್ವಭಾವದ ಪರಿಚಯವು ನಮಗೆ ಚೆನ್ನಾಗಿ ಆಗುವಂತೆ ಇದೆ. ಅವಳಲ್ಲಿ ವೀರಶೈವ ಮತದ ಬಗ್ಗೆ ಉತ್ಕಟ ಅಭಿಮಾನವು ಉಂಟಾಗಿದ್ದಿತೆಂಬುದರಲ್ಲಿ ಏನೂ ಸಂದೇಹವಿಲ್ಲ. ಆದರೆ ಅವಳು ಅರಸನಲ್ಲಿದ್ದುಕೊಂಡು ವಿಷಯ ಲೋಲುಪಳಾಗಿ ವರ್ತಿಸಲಿಕ್ಕೆ ಅವಳು ಇಚ್ಛಿಸಲಿಲ್ಲ. ಅವಳು ವೀರಶೈವ ಮತ ತತ್ವಗಳ ವಿಷಯವಾಗಿ ಅಭಿಮಾನವುಳ್ಳವಳಾಗಿ ಅವುಗಳಂತೆ ತಾನು ನಡೆಯಲಿಕ್ಕೆ ಅರಸನು ಎಷ್ಟು ಮಾತ್ರವು ಆತಂಕ ತರಕೂಡದೆಂಬ ಕರಾ ರನ್ನು ಮಾತ್ರ ಅವನಿಗೆ ಹಾಕಿದಳು. ಈ ಕಾಲದಲ್ಲಿ ಕರ್ನಾಟಕದ ಮುಖ್ಯ ಸಮಾಜಗಳಾದ ಜೈನ, ಬ್ರಾಹ್ಮಣ, ವೀರಶೈವ, ಪಾಶುಪತ ಈ ಧರ್ಮಗಳ ಅನುಯಾಯಿಗಳು ಕರ್ನಾಟಕದಲ್ಲಿ ಬಹು ಜನರು ವಾಸಿಸುತ್ತಿದ್ದರು. ಅವರಲ್ಲಿ ಪರಸ್ಪರ ಧರ್ಮಾಂತರಗಳು ಸುಲಭವಾಗಿ ಈ ಕಾಲದಲ್ಲಿ ಆಗುತ್ತಿ ದ್ದವೆಂದು ಇತಿಹಾಸದಿಂದ ತಿಳಿದು ಬರುತ್ತದೆ. ಅವರಲ್ಲಿ ಪರಸ್ಪರ ಅನ್ನೋ ದಕ ವ್ಯವಹಾರಗಳೂ ಕೂಡ ಸರಳವಾಗಿ ನಡೆಯುತ್ತಿದ್ಧವು. ಆದ್ದರಿಂದ ಮಹಾದೇವಿಯಕ್ಕನು ಅರಸನಿಂದ ಯಾವ ಶರ್ತನ್ನು ತೆಗೆದು ಕೊಳ್ಳದೆ ಅವನ ಕಡೆಗೆ ಇರಲಿಕ್ಕೆ ಅವಳು ಹೋಗಬಹುದಾಗಿತ್ತು ಆಗ ಅವಳು ವೀರ ಶೈವ ಧರ್ಮಾಭಿಮಾನಿಯಾಗಿದ್ದರಿಂದ ಅವಳು ಹಾಗೆ ಮಾಡಲಿಲ್ಲ. ಅವಳು ಇಷ್ಟರಲ್ಲಿ ವಿದ್ವಾಂಸಳಾಗಿ ಬಹು ಶ್ರುತಳೂ ಆಗಿದ್ಧರಿಂದ ಅವಳಲ್ಲಿ ವಿಚಾರ ಸ್ವಾತಂತ್ರ್ಯವು ಉಂಟಾಗಿದ್ದಿತು. ಹಾಗೆಯೇ ಅವಳು ತನ್ನ ಶಿಕ್ಷಣಕ್ಕೆ ಅನುಕೂಲ ಮಾಡಿ ಕೊಟ್ಟಂಥ ತಂದೆ ತಾಯಿಗಳ ಹಿತ ಮತ್ತು ಕ್ಷೇಮವನ್ನು ಲಕ್ಷಕ್ಕೆ ತಾರುವದು ಅವಶ್ಯವಾಗಿತ್ತು. ಅವರು ಅರಸನ ಕೋಪಕ್ಕೆ ಗುರಿ ಯಾಗ ಬಾರದೆಂಬುದಕ್ಕೆ ಅವಳು ಬಹಳ ಲಕ್ಷವನ್ನು ಪೂರೈಸಿದ್ಧಾಳೆ. ಈ ಸಂಗತಿಗಳು ಈ ವರೆಗೆ ನಡೆದ ಘಟನೆಗಳಿಂದ ನಿಷ್ಪನ್ನವಾಗುತ್ತವೆ.

**ಲಗ್ನ ಮಾಡಿಕೊಳ್ಳದಿರಲು ಮಹಾದೇವಿಯಕ್ಕನ ನಿರ್ಧಾರ:—** ಮಹಾದೇವಿಯಕ್ಕನು ಅರಸನ ಗೃಹಕ್ಕೆ ಹೋದ ಬಳಿಕ ಅವಳಿಗೂ ಕೌಶಿಕರಾಜನಿಗೂ ಯಥಾವಿಧಿ ಲಗ್ನವಾಯಿತೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. ಬೇರೆ ಕೆಲವು ಗ್ರಂಥಗಳಲ್ಲಿ ಹಾಗೆ ಉಲ್ಲೇಖವಿಲ್ಲ. ಹರಿಹರ ಕವಿಯು ಆಕೆಗೆ ಸರಿಯಾಗಿ ಲಗ್ನವಾಯಿತೆಂತಲೂ ಉಭಯತರು ಸತಿ ಪತಿಗಳಂತೆ ಇದ್ದರೆಂತಲೂ ಸಹ ಹೇಳುತ್ತಾನೆ. ಆದರೆ ಈ ಕವಿಯು ಬರೆದ ಮಹಾದೇವಿಯಕ್ಕನ ಚಾರಿತ್ರ್ಯವನ್ನು ನೋಡಿದಲ್ಲಿ ಅವನಿಗೆ ಆಕೆಯ ಬಗ್ಗೆ ನಿಜವಾದ ಸಂಗತಿಗಳು ಗೊತ್ತಾಗಿದ್ದಿಲ್ಲೆಂದು ತೋರುತ್ತದೆ. ಅವನು ತನ್ನ ರಗಳೆಯಲ್ಲಿ ಮಹಾದೇವಿಯಕ್ಕನು ಕಲ್ಯಾಣಕ್ಕೆ ಹೋದದ್ದನ್ನೂ ಅವಳು ಅಲ್ಲಿ ಶಿವಾನುಭವ ಮಂಟಪದಲ್ಲಿ ಇದ್ದು ಬಸವಣ್ಣನ ಪರಿಚಯ ಮಾಡಿಕೊಂಡದ್ದನ್ನೂ ಅವನು ಎಷ್ಟು ಉಲ್ಲೇಖಿಸಿರುವದಿಲ್ಲ. ಅರಸನ ಗೃಹದಲ್ಲಿ ಅವಳು ವಿಷಯ ತೋಲುಪಳಾಗಿ ವಾಸ ಮಾಡಿದ್ದನ್ನು ಮಾತ್ರ ಸವಿಸ್ತಾರವಾಗಿ ಹೇಳುತ್ತಾನೆ. ಆದ್ದರಿಂದ ಮಹಾದೇವಿಯಕ್ಕನ ಬಗ್ಗೆ ಅವನು ಮಾಡಿದ ವಿವರಣೆಗಳು ನಂಬಲರ್ಹವಲ್ಲವೆಂದು ನಮಗೆ ತೋರುತ್ತದೆ.

ಮಹಾದೇವಿಯಕ್ಕನು ಕೌಶಿಕ ರಾಜನ ಅರಮನೆಗೆ ಹೋಗುವ ಪೂರ್ವ ದಲ್ಲಿ ಅವಳ ಮನದಲ್ಲಿ ಅನೇಕ ವಿಚಾರಗಳೂ ಯೋಚನೆಗಳೂ ಬಂದಿರ ಬಹುದು. ಅವಳು ಆಗ ಚನ್ನಾಗಿ ಶಿಕ್ಷಣ ಹೊಂದಿ ಅನುಭಾವಿಯಾಗಿದ್ದ ಳೆಂಬುದು ಅವಳ ವಚನಗಳಿಂದ ನಾವು ಅನುಮಾನ ಮಾಡಬಹುದಾಗಿದೆ. ಹಾಗೆಯೇ ಅವಳು ಶಿವಶರಣ ಶರಣೆಯರ ಚರಿತ್ರೆಗಳನ್ನೂ ಚನ್ನಾಗಿ ಓದಿ ದವಳಾಗಿದ್ದಳು. ಮಹಾದೇವಿಯಕ್ಕನು ತನ್ನ ಶಿವಾನುಭವ ವರ್ತನೆಯಲ್ಲಿ ಅರಸನು ಅಡ್ಡ ಬರಬಾರದೆಂದು ಅವನಿಂದ ವಚನ ತೆಗೆದುಕೊಂಡಿದ್ದಳು. ಆದರೆ ಮುಂದೆ ತಾನು ಭಕ್ತೆ ಅವನು ಭವಿ ಹೀಗೆ ಉಭಯತರು ಕೂಡಿ ಕೊಂಡು ಸಂಸಾರ ನಡಿಸುವದು ಕಠಿಣನೆಂಬ ವಿಚಾರಗಳು ಅವಳ ಮನ ದಲ್ಲಿ ಬಂದಿರಬಹುದು. ವೈಜವ್ವೆಯು ಶಿವಭಕ್ತೆಯುಳ್ಳವಳಾಗಿ ಜೈನನಾದ ಗಂಡನ ಕೂಡ ಆಚರಿಸುತ್ತಿರುವಾಗ ಜೈನ ಮುನಿಗಳಿಗೋಸ್ಕರ ತಾನು ಸಿದ್ಧ ಪಡಿಸಿದ ಆಹಾರ ಸಾಮಗ್ರಿಗಳನ್ನು ಅವಳು ಅಕಸ್ಮಾತ್ತಾಗಿ ಮನೆಗೆ ಜಂಗಮ ಅತಿಥಿಗಳು ಬರಲು ಅವರಿಗೆ ಅವುಗಳನ್ನು ಕೊಟ್ಟುಬಿಟ್ಟಳು. ಅದನ್ನು ಜೈನನಾದ ಆಕೆಯ ಪತಿಯು ಕಂಡು ಅತ್ಯಂತ ರೋಷತಾಳಿ ಅವಳನ್ನು

ಹೊಡೆದು ಬಡಿದು ಬಹಳ ಗಾಸಿ ಮಾಡಿದನು. ಆ ಪೆಟ್ಟುಗಳು ಗ್ರಾಮದಲ್ಲಿದ್ದ ಜೈನರಿಗೆ ತಾಕಿದವು. ಮರುದಿನ ಬಸದಿಯ ಬಾಗಿಲವು ಏನು ಮಾಡಿದರೂ ತೆರೆಯಲಿಲ್ಲ. ಇದು ವೈಜವ್ವೆಯನ್ನು ಬಡಿದದ್ದರ ಪರಿಣಾಮವೆಂದು ಜೈನರು ತಿಳಿದು ವೈಜವ್ವೆಯ ಕೈಯ್ಯಿಂದ ಬಾಗಿಲವನ್ನು ತೆರಿಸಲು ಒಳಗಿದ್ದ ಜೈನ ಮೂರ್ತಿಗಳು ಒಡೆದು ಹೋಗಿ ಅವು ಶಿವಲಿಂಗಗಳಾಗಿದ್ದವು. ಮುಖ್ಯ ಪೀಠದಲ್ಲಿ ಲಿಂಗವು ಉದ್ಭವಿಸಿತ್ತು. ಅದರಲ್ಲಿಯೇ ಅವಳು ಲಯವಾಗಿ ಹೋದಳು. ಆ ದೇವಾಲಯವು ಪರಳೀ ವೈಜನಾಥನೆಂದು ಈಗಲೂ ಪ್ರಸಿದ್ಧವಾಗಿದೆ. ಇದೇ ಪ್ರಕಾರ ಸೋಹಳಿಯ ಸೋಮವ್ವೆ, ಹೇರೂರ ಹೆಣ್ಣು ಇವರು ಭವಿಗಳನ್ನು ಲಗ್ನವಾಗಲಾಗಿ ಅವರಿಗೆ ತಮ್ಮ ಶಿವಾಚಾರದಂತೆ ನಡೆಯಲು ಸಾಧ್ಯವಾಗಲಿಲ್ಲ. ಆಗ ಅವರು ಹಾನಿಗೆ ಒಳಗಾಗಬೇಕಾಯಿತು. ಬಸವೇಶ್ವರನ ಕಾಲದಲ್ಲಿ ಬಹುಜನರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಆಗ ಶಿವಶರಣರು ವೀರಶೈವ ದೀಕ್ಷೆಯನ್ನು ಅವರಿಗೆ ಕೊಡುವಲ್ಲಿ ಅವರ ಹೆಂಡಂದಿರನ್ನು ಮೊದಲು ಬರಮಾಡಿಕೊಂಡು ಅವರನ್ನೊಡಗೊಂಡು ಅವರಿಗೆ ಲಿಂಗದೀಕ್ಷೆಯನ್ನು ಕೊಡುವ ಉಪಕ್ರಮವನ್ನು ಕೈಕೊಂಡರು. ಇದು ನನ್ನಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ. ಮಹಾದೇವಿಯಕ್ಕನಿಗೆ ಈ ಸಂಗತಿಗಳು ಲಕ್ಷಕ್ಕೆ ಬಂದು ಅವಳು ಆಗ ಕೆಲವೊಂದು ಅತ್ಯಂತ ಕಠಿಣವಾದ ಮತ್ತು ಕ್ರಾಂತಿಕಾರಕವಾದ ನಿರ್ಧಾರವನ್ನು ದೃಢಪಡಿಸಿಕೊಂಡು ರಾಜನ ಮನೆಗೆ ಹೊರಟಳು.

**ದಿಗಂಬರತ್ವವನ್ನು ನಿಶ್ಚಯಿಸಿದ್ದು:**— ಅವಳು ರಾಜನ ಅಂತಃಪುರವನ್ನು ಪ್ರವೇಶ ಮಾಡಿದ ಕೂಡಲೇ ಕೌಶಿಕರಾಜನು ಮಹಾದೇವಿಯಕ್ಕನ ಕೂಡ ಲಗ್ನಸಮಾರಂಭವನ್ನು ಜರುಗಿಸುವ ಪ್ರಸ್ತಾಪವನ್ನು ಪ್ರಾರಂಭಿಸಿದನು. ಆಗ ಮಹಾದೇವಿಯಕ್ಕನು ಕೌಶಿಕರಾಜನು ತನ್ನ ಜೈನಧರ್ಮವನ್ನು ಬಿಟ್ಟುಕೊಟ್ಟು ವೀರಶೈವ ಧರ್ಮವನ್ನು ಸ್ವೀಕರಿಸಿದರೆ ಮಾತ್ರ ತಾನು ಅವನನ್ನು ವರಿಸುವೆನು, ಇಲ್ಲದಿದ್ದರೆ ಇಲ್ಲ. ಇದಕ್ಕೆ ಅವನ ಅಭಿಪ್ರಾಯವೇನೆಂಬುದನ್ನು ತಿಳಿದುಕೊಂಡು ಬರಲು ಮಂತ್ರಿಗಳಿಗೆ ತಿಳಿಸಿದಳು. ಅದಕ್ಕೆ ಕೌಶಿಕರಾಜನು ತಾನು ಜೈನ ಧರ್ಮವನ್ನು ಬಿಡುವದಿಲ್ಲೆಂದು ಮಾರುತ್ತರ ಕಳಿಸಲು ಮಹಾದೇವಿಯಕ್ಕನು ಇನ್ನು ಮೇಲೆ ನಾನು ಯಾರನ್ನೂ ಲಗ್ನವಾಗುವದಿಲ್ಲ, ಹರನೇ ನನಗೆ ಗಂಡನು, ಉಳಿದ ಗಂಡರು ನನಗೆ ಬೇಡ, ಎಂದು ನುಡಿ

ಯುತ್ತ, ಇನ್ನು ಮೇಲೆ ನನಗೆ ಮಂಗಳವೇ ಮಜ್ಜನವು, ವಿಭೂತಿಯೇ ಒಳಗುಂದದ ಅರಿಸಿನವು, ರುದ್ರಾಕ್ಷಿಯೇ ವೈದೊಡಿಗೆ, ದಿಗಂಬರವೇ ದಿವ್ಯಾಂಬರವು ಎಂದು ಮಂತ್ರಿಗಳಿಗೆ ಹೇಳಿ ತಾನು ಧಾರಣಮಾಡಿದ್ದ ವಸ್ತ್ರಾಭರಣಗಳನ್ನೂ ಅಲಂಕಾರಗಳನ್ನೂ ತೆಗೆದಿಟ್ಟು, ತಾನುಟ್ಟುದನ್ನು ಕಳೆದು ಚೆಲ್ಲಿ, ಸಂಪೂರ್ಣ ದಿಗಂಬರಿಯಾದಳು. ಆಗ ಅವಳು ಇನ್ನು ಮೇಲೆ ನಾನು ಯಾರನ್ನೂ ಲಗ್ನವಾಗುವದಿಲ್ಲ, ಅಜನ್ಮ ವಿರಕ್ತೆಯಾಗಿ ಕನ್ನಿಕೆಯಾಗಿ ಉಳಿಯುವೆನು ಎಂದು ಪ್ರತಿಜ್ಞೆಯನ್ನು ಮಾಡಿ ರಾಜವೈಭವವನ್ನು ಬಿಟ್ಟು ಪಟ್ಟಣದ ಹೊರಕ್ಕೆ ಹೊರಟಳು.

**ವೀರಶೈವರಲ್ಲಿ ದಿಗಂಬರತ್ವವು. ೩**— ಈ ಕಾಲದಲ್ಲಿ ನಾಡಿನಲ್ಲಿ ಜೈನ ಸಂಸ್ಕೃತಿಯು ಪ್ರಬಲವಾಗಿತ್ತು. ಜೈನರಲ್ಲಿ ದಿಗಂಬರಿಗಳನೇಕರು ನಾಡಿನಲ್ಲಿ ಸಂಚರಿಸುತ್ತಿದ್ದರು. ಜನರಾದರೂ ಅವರ ತ್ಯಾಗವೃತ್ತಿಯನ್ನು ನೋಡಿ ಅವರನ್ನು ಸನ್ಮಾನಿಸುವರು. ಆದರೆ ಶಿವಶರಣರಲ್ಲಿ ದಿಗಂಬರತ್ವವಿಲ್ಲ. ಆದರೂ ಮಹಾದೇವಿ, ಗೊಗ್ಗವ್ವೆ ಬೊಂತಾದೇವಿ, ಇವರು ಕೆಲಕಾಲ ದಿಗಂಬರ ವೃತ್ತಿಯನ್ನು ತಾಳಿದರು. ಆದರೆ ಶಿವಶರಣರು ದೇಹವನ್ನು ಕ್ಲೇಶಿಸುವದು ಅನಾವಶ್ಯಕವೆಂಬ ತತ್ವವನ್ನು ಅನುಸರಿಸಿದವರಾದ್ದರಿಂದ ಈ ತರದ ಪದ್ಧತಿಯು ಕರ್ನಾಟಕದಲ್ಲಿ ಹೋಗಿ ಬಿಟ್ಟಿತು. ಆದರೆ ಇದಕ್ಕೆ ಅಪವಾದವಾಗಿ ಮಹಾದೇವಿಯಕ್ಕನಂಥ ಕೆಲವು ಉದಾಹರಣೆಗಳು ಮಾತ್ರ ಇರುವದು ಕಂಡು ಬರುತ್ತದೆ.

ಹರಿಹರ ಕವಿಯು ಮಹಾದೇವಿಯಕ್ಕನು ದಿಗಂಬರಿಯಾಗಿ ಉಳಿಯದೆ ಕೌಶಿಕನೊಡನೆ ಲಗ್ನವಾದಳೆಂದು ತನ್ನ ರಗಳೆಯಲ್ಲಿ ಹೇಳಿರುತ್ತಾನೆ. ಆದರೆ ಮಹಾದೇವಿಯಕ್ಕನು ತಾನು ರಚಿಸಿದ ವಚನದಲ್ಲಿ 'ದಿಗಂಬರವೇ ತನಗೆ ದಿವ್ಯಾಂಬರ'ವೆಂದು ಸ್ಪಷ್ಟವಾಗಿ ಹೇಳಿರುವದರಿಂದ ಅವಳು ದಿಗಂಬರಿಯಾಗಿ ಉಳಿದು ಲಗ್ನವನ್ನು ನಿರಾಕರಿಸಿ ಆಚರಿಸಿದಳೆಂದು ತೋರುತ್ತದೆ.

**ಗೃಹತ್ಯಾಗಃ**— ಮಹಾದೇವಿಯಕ್ಕನು ಅರಸನೊಡನೆ ಲಗ್ನವನ್ನು ನಿರಾಕರಿಸಿ, ದಿಗಂಬರಿಯಾಗಿ ಉಡುತಡಿಯಲ್ಲಿರುವದು ಅವಳಿಗೆ ಉಚಿತವೆಂದು ತೋರಲಿಲ್ಲ. ಇಂಥ ಸ್ಥಿತಿಯಲ್ಲಿ ಕೌಶಿಕರಾಜನಿದ್ದ ಊರಲ್ಲಿ ಅವಳು ಇರುವದು ಹೇಗೆ? ಮದಾಂಧನಾದ ಕೌಶಿಕನು ತನಗೆ ಹಾನಿ ತರಬಹುದೆಂಬ ಭೀತಿಯು ಅವಳಿಗಿತ್ತು. ಅವಳಿಗೆ ಪ್ರೀತ್ಯಾಸ್ಪದರಾದ ತಾಯಿ ತಂದೆಗಳ

ಸಮೀಪದಲ್ಲಿ ಇರುವದೂ ಕ್ಷೇಮಕ್ಕರವಲ್ಲೆಂದು ಅವಳಿಗೆ ತೋರಿತು. ಆದ್ದರಿಂದ ಅವಳು ಬಸವೇಶ್ವರನಿದ್ದಲ್ಲಿಗೆ ಹೊರಟಳು.

ಈ ಕಾಲದಲ್ಲಿ ಬಸವೇಶ್ವರನ ಪ್ರಭಾವವು ನಾಡಿನಲ್ಲಿ ಹೆಚ್ಚುತ್ತಲೇ ಇದ್ದಿತು. ಅವನು ವೀರರಿಗೆ ಸಹಾಯಕನಾಗಿ ವರ್ತಿಸುತ್ತಿದ್ದನು. ವರದಾನಿ ಗುಡ್ಡವ್ವೆಯು ಅವನ ಆಶ್ರಯದಲ್ಲಿದ್ದು ವಿಪನ್ನರಿಗೆ ಸಹಾಯಮಾಡುತ್ತ ಬಂದಳು. ಅನೇಕ ನಿರಾಶ್ರಿತ ಸ್ತ್ರೀಯರು ಬಸವೇಶ್ವರನ ಸಾನ್ನಿಧ್ಯದಲ್ಲಿ ಕಾಯಕಗಳನ್ನು ಮಾಡುತ್ತ ಉಪಜೀವಿಸುತ್ತಿದ್ದರು. ವೀರದೇವವ್ವನೆಂಬ ಶಿವಶರಣೆಯು ವಚನಶಾಸ್ತ್ರದಲ್ಲಿ ಪಾರಂಗತಳಾಗಿ ವಚನಗಳನ್ನು ದಿನಾಲು ಮೂರು ಸಾರೆ ಕೂಡಿದ ಜನರಲ್ಲಿ ಉಚ್ಚರಿಸುವಳು. ವಿಮಳಾದೇವಿಯು ಶಿವಾನುಭವದಲ್ಲಿ ಚೆನ್ನಾಗಿ ಜ್ಞಾನಸಂಪಾದನೆ ಮಾಡಿಕೊಂಡು ಸ್ತ್ರೀಯರಿಗೆ ಬೋಧೆ ಮಾಡುವ ಕಾಯಕವನ್ನು ಕೈಕೊಂಡಿದ್ದಳು. ಹೀಗೆಯೇ ಅನೇಕ ಸ್ತ್ರೀ ಪುರುಷರು ಬಸವೇಶ್ವರನ ಸನ್ನಿಧಿಯಲ್ಲಿ ಲಿಂಗಾನುಭವವನ್ನು ಹೊಂದಿ ಶಿವಜ್ಞಾನವನ್ನು ಬೋಧಿಸುವವರಾಗಿದ್ದರು. ಆದ್ದರಿಂದ ಮಹಾದೇವಿಯಕ್ಕನು ಸ್ವಾಭಾವಿಕವಾಗಿ ಅವನಿದ್ದೆಡೆಗೆ ಹೊರಡಲು ಉದ್ಯುಕ್ತಳಾದಳು.

**ಕಲ್ಯಾಣಕ್ಕೆ ಪ್ರಯಾಣ:—** ಆದರೆ ಉಡುತಡಿಯಿಂದ ಕಲ್ಯಾಣವು ಬಹು ದೂರದ ಹಾದಿಯು. ಅವಳು ಸೌಂದರ್ಯವತಿಯು ಮತ್ತು ಚಿಕ್ಕವಳು. ದಿಗಂಬರಿಯಾಗಿ ಕಲ್ಯಾಣದ ವರೆಗೆ ಅವಳು ಏಕಾಕಿಯಾಗಿ ಪ್ರವಾಸ ಮಾಡುವದು ಕಠಿಣವೇ ಸರಿ. ಆಗ ಪಟ್ಟಣದ ಜನರು ಹೀಗೆ ಪ್ರವಾಸ ಮಾಡದಿರಲು ಬೋಧಿಸಿದರು. ಇಷ್ಟೇ ಅಲ್ಲ, ಅವರು ಅವಳನ್ನು ಪ್ರತಿಬಂಧಿಸಿದ ಹಾಗೆಯೂ ತೋರುತ್ತದೆ. ಯಾಕಂದರೆ ಒಂದು ವಚನದಲ್ಲಿ ಅವಳು ಹೇಳುವದೇನಂದರೆ:—

"ಮುಡಿಬಿಟ್ಟು ಮೊಗಬಾಡಿ ತನುಕರಗಿದವಳ ಎನ್ನನೇಕೆ ನುಡಿಸುವಿರಿ, ಎಲೆ ಅಣ್ಣಗಳಿರಾ? ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ? ಬಲುಹಳಿದು ಭವಗೆಟ್ಟು ಛಲವಳಿದು ಭಕ್ತೆಯಾಗಿ ಚನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ?" ಈ ವಚನದಲ್ಲಿ ಮುಡಿಬಟ್ಟು ಮೊಗಬಾಡಿ ತನುಕರಗಿದಳೆಂದು ಅವಳು ತನ್ನ ಸ್ವರೂಪವನ್ನು ತಾನೇ ವರ್ಣನೆ ಮಾಡಿಕೊಂಡು ತನ್ನನ್ನು ಕಾಡಬೇಡಿರೆಂದು ಜನರಿಗೆ ಹೇಳಿದ್ದಾಳೆ. (ವಚನ ೬೩)

**ಯೋಗಸಾಧನೆಯ ಪ್ರಯತ್ನ:—** ಅವಳು ತನ್ನ ಪ್ರವಾಸದಲ್ಲಿ ಆತ್ಮ ಶುದ್ಧಿಯನ್ನು ಮಾಡಿಕೊಳ್ಳಬೇಕೆಂಬ ವಿಚಾರವು ಬರಲು ಅವಳು ಕೆಲಕಾಲ ಯೋಗಸಾಧನೆಗೆ ಸಹ ಲಕ್ಷ್ಯ ಕೊಟ್ಟಂತೆ ಕೆಳಗಿನ ವಚನದಿಂದ ತೋರುತ್ತಿದೆ. ಅವಳು ಷಟ್‌ಚಕ್ರಗಳನ್ನು ಸಾಧಿಸಲು ಯತ್ನಿಸಿದ್ದಾಳೆ. ಈ ವಚನದಲ್ಲಿ ಅವಳು ಹೇಳುವದೇನೆಂದರೆ:—

"ಮೂಲಾಧಾರದ ಬೇರ ಮೆಟ್ಟಿ ಭೂಮಂಡಲವನೇರಿದೆ, ಆಧಾರದ ಬೇರ ಹಿಡಿದು ಐಕ್ಯದ ತುದಿಯನೇರಿದೆ. ಕೈವಿಡಿದು ತೆಗೆದು ಕೊಳ್ಳಾ ಚನ್ನ ಮಲ್ಲಿಕಾರ್ಜುನಾ" (ವಚನ ೧೩೧,೧೩೨.) ಈ ಕಾಲಕ್ಕೆ ಕರ್ನಾಟಕದಲ್ಲಿ ಯೋಗಾಭ್ಯಾಸದಲ್ಲಿ ನಿಷ್ಣಾತರಾದವರು ಅನೇಕರಿದ್ದರು. ಮಹಾದೇವಿಯಕ್ಕನು ಶ್ರೀ ಪರ್ವತ ಅಂದರೆ ಯೋಗಸಾಧನೆಯ ಕಡೆಯ ಮೆಟ್ಟಲನ್ನು ಸಾಧಿಸಿರಬೇಕೆಂದು ಈ ವಚನದಿಂದ ತೋರುತ್ತದೆ. ಆದರೆ ಈ ಸಾಧನೆಯು ಶಿವಶರಣರ ಮಾರ್ಗವಲ್ಲ. ಇದನ್ನು ಮಹಾದೇವಿಯಕ್ಕನು ತಿಳಿದುಕೊಂಡು ಹೇಳುವದೇನಂದರೆ ತನ್ನನ್ನು ತಾನು ಅರಿಯುವದರಿಂದಲೇ ನಿಜವು ಸಾಧ್ಯವಾಗುವದೇ ಹೊರತು ಯೋಗ ಸಾಧನೆಯಿಂದ ಸಾಧ್ಯವಾಗದು ಎಂದು ನುಡಿದಿದ್ದಾಳೆ. ಈ ವಚನದಲ್ಲಿ ಮಹಾದೇವಿಯಕ್ಕನು ಅನ್ನುವದೇನಂದರೆ:—
"ಆಧಾರ, ಸ್ವಾಧಿಷ್ಠಾನ ಮಣಿಪೂರಕ, ಅನಾಹುತ, ವಿಶುದ್ಧಿ, ಆಜ್ಞೇಯ ಮಾತು ಹೇಳಿದೊಡೇನು? ಕೇಳಿದೊಡೇನು? ತನ್ನಲ್ಲಿದ್ದುದ ತಾನರಿಯದನ್ನಕ್ಕ ಹೇಳಿದೊಡೇನು? ಉನ್ಮನಿಯ ರಭಸದ ಪವನದಲ್ಲಿದ್ದು ಚನ್ನ ಮಲ್ಲಿಕಾರ್ಜುನಯ್ಯನ ಭೇದಿಸದನ್ನಕ್ಕರ?

ಮಹಾದೇವಿಯಕ್ಕನು ಈ ಪ್ರಕಾರ ತನ್ನ ಪ್ರವಾಸದಲ್ಲಿ ಯೋಗಾಭ್ಯಾಸದ ಕಠೀಣ ಮಾರ್ಗವನ್ನು ಕೆಲವು ಕಾಲ ಅನುಸರಿಸಿದರೂ ಅವಳು ಈ ಮಾರ್ಗವನ್ನು ಬಿಟ್ಟು ಕೊಟ್ಟು ಕಲ್ಯಾಣ ಪಟ್ಟಣದತ್ತ ಮಾರ್ಗಕ್ರಮಣ ಮಾಡುತ್ತ ಹೊರಡುವವಳಾದಳು.

**ಪ್ರವಾಸದಲ್ಲಾದ ಕಷ್ಟಗಳು:—** ಮಹಾದೇವಿಯಕ್ಕನು ಮಾರ್ಗಕ್ರಮಣ ಮಾಡುವ ಕಾಲದಲ್ಲಿ ಸ್ವಾಭಾವಿಕವಾಗಿ ಅವಳಿಗೆ ಅನೇಕ ತರದ ಜನರು ಭೆಟ್ಟಿಯಾಗುತ್ತಿದ್ದರು. ಅವರಲ್ಲಿ ಕೆಲವರು ಅವಳ ನಗ್ನ ಸ್ಥಿತಿಯನ್ನು ನೋಡಿ ನಿಂದಿಸುವರು. ಬೇರೆ ಕೆಲವರು ಅವಳನ್ನು ಸ್ತುತಿಸುವರು. ಮತ್ತಿನ್ನು ಕೆಲ ದುಷ್ಟ ಜನರು— ಆಕೆಯು ದಿಕ್ಕಿಲ್ಲದವಳೆಂದು ತಿಳಿದು



ಸಂಚಿಕೆ ೧೨ ಸಂಪುಟ ೩೨

# ಶಿವಾನುಭವ



ಸಂಪಾದಕರು

**ಡಾ. ರಾ. ಬ. ಫ. ಗು. ಹಳಕಟ್ಟಿ,**

ಬಿ. ಏ. ಎಲ್; ಎಲ್. ಬಿ.

**ವಿಜಾಪುರ.**



ವಾರ್ಷಿಕ ಚಂದಾ ೫ ರೂ. ೭೫ ನ.ಪೈ.

**ಡಿಶಂಬರ ೧೯೫೮.**

# ವಿಷಯಾನುಕ್ರಮಣಿಕೆ









ಶ್ರೀಮತಿ. ರಾಮವ್ವಗೌಡತಿ ನಿಂಗನಗೌಡ ಪಾಟೀಲ.
ಸಾಕೀನ ಕಾಖಂಡಕಿ, ತಾ:- ವಿಜಾಪೂರ.



# ದಾನಶೂರ ರಾಮವ್ವ ಗೌಡತಿ ಕಾಖಂಡಕಿ.

ವಿಜಾಪೂರ ಜಿಲ್ಲೆಯಲ್ಲಿ ಕಾಖಂಡಕಿಯ ಹತ್ತರ 'ಶೇಗುಣಶಿ' ಎಂಬ ಚಿಕ್ಕ ಗ್ರಾಮವಿದೆ. ಆ ಗ್ರಾಮದ ಗೌಡರಾದ ಕೈ. ವಾ. ಶ್ರೀ. ಭೀಮನ ಗೌಡರು ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಆದರ್ಶ ಕಾರ್ಯಕರ್ತರೆಂದು ಒಳ್ಳೇ ಪ್ರಖ್ಯಾತರಾಗಿದ್ದರು. ಅವರು ಈ ಪತ್ರಿಕಾಕರ್ತರ ಪರಮ ಮಿತ್ರರೂ, ಸಹಕಾರಿಗಳೂ ಆಗಿದ್ದರು. ಅವರ ಪ್ರೋತ್ಸಾಹನ ದಿಂದಲೇ ನಾವು ವಿಜಾಪೂರದಲ್ಲಿ ವಿದ್ಯಾವರ್ಧಕ ಸಂಸ್ಥೆಯನ್ನು ಸ್ಥಾಪಿಸಿ ದೆವು. ಆದಕ್ಕೆ ಅವರು ಒಂದು ಸಾವಿರ ರೂಪಾಯಿಗಳ ಪ್ರಥಮ ದೇಣಿಗೆ ಯನ್ನು ಸಲ್ಲಿಸಿದರು. ನಂತರ ಅವರ ಸಹಾಯದಿಂದಲೇ ವಿಜಾಪೂರದಲ್ಲಿ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಿದೇವು. ವಿದ್ಯಾರ್ಥಿವೇತನಗಳನ್ನು ನಿಯೋಜಿಸಿದೆವು. ಅಲ್ಲದೆ ಅವರಿಂದ ಅನೇಕ ಲೋಕೋಪಯೋಗಿ ಕಾರ್ಯ ಗಳಾಗಿರುತ್ತವೆ. ಆದರೆ ನಮ್ಮ ದುರ್ದೈವದಿಂದ ಅವರು ೧೯೩೮ರಲ್ಲಿ ಶಿವಾ ಧೀನರಾದರು. ಅವರು ಆಂಗ್ಲ ವಿದ್ಯಾಸಂಪನ್ನರಾಗಿದ್ದರು. ನೀತಿ ಕ್ರಿಯಾ ಚಾರ ಬಂಧುರರೂ ಧರ್ಮನಿಷ್ಠರೂ ಆಗಿದ್ದರು. ಅವರ ಪತ್ನಿಯವರಾದ ಶ್ರೀಮತಿ ಸುಂದ್ರವ್ವ ಗೌಡತಿಯವರು ಈಗಲೂ ಮನೆಯಲ್ಲಿ ದಾಸೋಹ ವನ್ನು ಸದಾ ನಡಿಸುತ್ತಿದ್ದಾರೆ.

ಈ ಸುಶೀಲ ದಂಪತಿಗಳಿಗೆ ಶ್ರೀರಾಮನ ಗೌಡಾ ಶ್ರೀ ಬಾಪುಗೌಡಾ ಎಂಬ ಇಬ್ಬರು ಗಂಡುಮಕ್ಕಳೂ, ಶ್ರೀಮತಿ ಜಿವುಬಾಯಿ ಗೌಡತಿ, ಶ್ರೀಮತಿ ಉಪ್ಪಮ್ಮವ್ವ ಗೌಡತಿ, ಶ್ರೀಮತಿ ರಾಮವ್ವ ಗೌಡತಿ, ಶ್ರೀಮತಿ ಭಾಗವ್ವಗೌಡತಿ ಹಾಗೂ ಶ್ರೀಮತಿ ಲಕ್ಷ್ಮವ್ವ ಗೌಡತಿಯೆಂಬ ಐವರು ಹೆಣ್ಣು ಮಕ್ಕಳೂ ಇದ್ದಾರೆ. ಇವರಲ್ಲಿ ಕೈ. ವಾ. ಬಾಪುಗೌಡರು ತಂದೆಯ ಗೌರವವನ್ನು ವಿಶೇಷವಾಗಿ ಬೆಳೆಯಿಸಿದರು. ಅವರು ಆಂಗ್ಲ ವಿದ್ಯಾವಂತರಾಗಿ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ರಾಜಕೀಯ ರಂಗಗಳಲ್ಲಿ ತನುಮನ ಧನಗಳಿಂದ ಒಳ್ಳೇ ಕಾರ್ಯಗಳನ್ನು ಮಾಡಿ ಎಲ್ಲರಿಗೂ ಚಿರಪರಿಚಿತರಾಗಿದ್ದರು. ತಂದೆಯ ತರುವಾಯ ಇವರೂ ಶಿರಸಂಗಿಯ ಫಂಡಿಗೆ ಟ್ರಸ್ಟಿಗಳಾಗಿದ್ದರು. ಹೀಗೆ ಇವರು ಮನೆತನದ ಕೀರ್ತಿಯನ್ನು ಎಲ್ಲ ರೀತಿಯಿಂದ ಹೆಚ್ಚಿಸಿದರು. ಅವರು ಜನಪ್ರಿಯರಾಗಿದ್ದರು. ಹಾಗೂ ನೀತಿ ಕ್ರಿಯಾಚಾರ ಸಂಪನ್ನರೂ, ಧರ್ಮನಿಷ್ಠರೂ ಆಗಿದ್ದರು. ಆದರೆ ನಮ್ಮೆಲ್ಲರ ದುರ್ದೈವದಿಂದ ಚಿಕ್ಕ ವಯಸ್ಸಿನಲ್ಲಿಯೇ ಅಂದರೆ ೧೯೪೨ ರಲ್ಲಿ ಅವರು ಶಿವಾಧೀನರಾದರು. ಈಗ ಶ್ರೀ ರಾಮನಗೌಡರೇ ಮನೆತನದ ಕೀರ್ತಿಯನ್ನು ಕಾಯ್ದು ಕೊಂಡಿದ್ದಾರೆ. ಹಾಗೂ ಇವರೂ ಈಗ ಸಿರಸಂಗಿ ಫಂಡಿಗೆ ಟ್ರಸ್ಟಿಗಳಾಗಿದ್ದಾರೆ.

ಐವರು ಹೆಣ್ಣು ಮಕ್ಕಳಲ್ಲಿ ಶ್ರೀಮತಿ ರಾಮವ್ವಗೌಡತಿಯವರು ತಮ್ಮ ತಂದೆ ಹಾಗೂ ಅಣ್ಣಂದಿರ ಯೋಗ್ಯ ಮಾರ್ಗದರ್ಶನದಿಂದ ಒಳ್ಳೇ ಸಂಸ್ಕಾರ ಸಂಪನ್ನರೂ ವಿದ್ಯಾವಂತರೂ ಆಗಿದ್ದಾರೆ. ತಂದೆ ಹಾಗೂ ಅಣ್ಣಂದಿರಂತೆ ಇವರೂ ಸಾಮಾಜಿಕ, ಧಾರ್ಮಿಕ, ಹಾಗೂ ಶೈಕ್ಷಣಿಕ ಕಾರ್ಯಗಳಲ್ಲಿ ತನುಮನ ಧನಗಳಿಂದ ಯೋಗ್ಯ ಸಹಾಯ ಸೇವೆಗಳನ್ನು ಸಲ್ಲಿಸುತ್ತಿದ್ದಾರೆ. ಹೊನ್ನುಟಗಿ ಶ್ರೀ ಬಸವಣ್ಣನ ಮಂದಿರಕ್ಕೆ ೨॥ ಸಾವಿರ ರೂ. ವಿಜಾಪೂರ ವಿಜಯಾಕಾಲೇಜಕ್ಕೆ ೨॥ ಸಾವಿರ ರೂ. ಉದಾರ ದೇಣಿಗೆಯನ್ನು ದಯಪಾಲಿಸಿದ್ದಾರೆ. ಮತ್ತು ಬಾಗೇವಾಡಿ ಬಸವಣ್ಣದೇವರ ಗುಡಿಗೂ ಧನಸಹಾಯ ಮಾಡಿದ್ದಾರೆ. ಶ್ರೀ ವೇ॥ ಮಲ್ಲಿಕಾರ್ಜುನ ಸ್ವಾಮಿಗಳು ಗದಗ ಇವರು ವಿಜಾಪೂರದಲ್ಲಿ ಸಿದ್ಧಾಂತ ಶಿಖಾಮಣಿಯ ಪ್ರವಚನವನ್ನು ನಡೆಯಿಸಿದಾಗ ಅದನ್ನು ಚನ್ನಾಗಿ ಬರೆದು ಕೊಂಡವರಿಗೆ ನೂರಾಹನ್ನೊಂದು ರೂಪಾಯಿ ಪ್ರಥಮ ಬಹುಮಾನವನ್ನು ಕೊಟ್ಟಿರಲ್ಲದೆ ಅಲ್ಲಿಯ ಅನುಭವ ಮಂಟಪವನ್ನು ಕಟ್ಟಿಸಲು ಮೊಟ್ಟ ಮೊದಲು ೩೦೧ ರೂ. ದೇಣಿಗೆ ಕೊಟ್ಟು ಅದನ್ನು

ಪ್ರಾರಂಭಿಸಿದರು. ವಿಜಾಪೂರದಲ್ಲಿ ೭೭೦ ಲಿಂಗ ಸ್ಥಾಪನೆಗಾಗಿ ೧೦೧ ರೂ. ಕೊಟ್ಟಿದ್ದಾರೆ. ಅದರಂತೆ ಈ ಶಿವಶರಣೆಯರ ಚರಿತ್ರಗಳ ಪ್ರಕಟನೆಗೂ ೩೦೧ ರೂ. ಸಲ್ಲಿಸಿದ್ದಾರೆ. ಹೀಗೆ ಅನೇಕ ಸಂಘ ಸಂಸ್ಥೆಗಳಿಗೆ ಪುರಾಣ ಪ್ರವಚನಗಳಿಗೆ ಚಿಕ್ಕ ದೇಣಿಗೆಗಳನ್ನು ಅವ್ಯಾಹತವಾಗಿ ಕೊಡುತ್ತ ಬಂದಿದ್ದಾರೆ. ಅದರಿಂದಲೇ ಇವರಿಗೆ ದಾನಶೂರ ರಾಮವ್ವ ಗೌಡತಿಯೆಂಬ ಹೆಸರು ಸಾರ್ಥಕವಾಗಿದೆ.

ಇವರ ಪತಿಗಳಾದ ಕಾಖಂಡಕಿಯ ನಿಂಗನಗೌಡರು ಚಿಕ್ಕ ವಯಸ್ಸಿನಲ್ಲಿಯೇ ಅಂದರೆ ೨೫ ವರ್ಷಗಳ ಹಿಂದೆಯೇ ಶಿವಾಧೀನರಾದರು. ಆಗ ಮನೆತನದ ಭಾರವೆಲ್ಲ ಇವರ ಮೇಲೆಯೇ ಬಿತ್ತು. ಇವರಿಗೆ ಶ್ರೀ ಕಟ್ಟೆಪ್ಪಗೌಡಾ, ಶ್ರೀ ಗದಿಗೆಪ್ಪಗೌಡಾ, ಶ್ರೀ. ಭೀಮನಗೌಡಾ ಎಂಬ ಮೂವರು ಗಂಡು ಮಕ್ಕಳೂ ಶ್ರೀ ಕು. ಸೌ. ಕುಸುಮವ್ವ ಗೌಡತಿಯೆಂಬ ಒಬ್ಬ ಹೆಣ್ಣು ಮಗಳೂ ಇದ್ದಾರೆ ಇವರೆಲ್ಲರ ಪಾಲನ ಪೋಷಣೆಯನ್ನೂ ಹಾಗು ಉಚ್ಚ ಶಿಕ್ಷಣ ಕಾರ್ಯಗಳನ್ನು ಯೋಗ್ಯ ರೀತಿಯಿಂದ ಸಾಗಿಸುತ್ತ ಬಂದಿದ್ದಾರೆ. ಇವರಿದ್ದ ಮನೆ ದಾಸೋಗ ಇದ್ದಂತೆ. ಯಾವಾಗಲೂ ಬರಹೋಗುವವರಿಗೆ ಅನ್ನಸಂತರ್ಪಣೆ ನಡೆದೇ ಇರುತ್ತದೆ. ಇವರು ಒಳ್ಳೇ ನೀತಿ ಕ್ರಿಯಾಚಾರ ಸಂಪನ್ನರೂ ಧರ್ಮನಿಷ್ಠರೂ ಆಗಿದ್ದಾರೆ. ಅಧ್ಯಾತ್ಮಿಕ ವಿಷಯದಲ್ಲಿ ವಿಶೇಷ ಆಸ್ಥೆಯುಳ್ಳವರಾಗಿ ನಿತ್ಯ ಅದರ ಶ್ರವಣ ಮನನಾದಿಗಳನ್ನು ಮಾಡುತ್ತಿದ್ದಾರೆ. ಧಾರ್ಮಿಕ ಕಾರ್ಯಕಲಾಪಗಳಿಗೂ ಲಕ್ಷಗೊಡುತಿದ್ದಾರೆ. ಹೀಗೆ ಮನೆತನದ ಗೌರವವನ್ನು ಚನ್ನಾಗಿ ಕಾಯ್ದುಕೊಂಡು ಬಂದಿದ್ದಾರೆ. ಈ ಕಾಲದಲ್ಲಿ ಇಂಥ ಆದರ್ಶ ಸ್ತ್ರೀಯರನ್ನು ಕಾಣುವದು ಅಪರೂಪ. ಇವರಿಗೆ ದೇವರ ಕೃಪೆಯಿಂದ ಈ ವರೆಗೂ ಮನೆತನದ ಭಾರವನ್ನು ವಹಿಸಿಕೊಂಡು ಸಾಗಿಸುತ್ತಿರುವ ಶ್ರೀಮತಿ ಭಾಗವ್ವ ಗೌಡತಿಯೆಂಬ ಅತ್ತೆಯವರೂ ಇದ್ದಾರೆ. ಇವರೆಲ್ಲರಿಗೆ ಪರಮಾತ್ಮನು ಆಯುರಾರೋಗ್ಯವನ್ನು ದಯಪಾಲಿಸಿ ಇವರ ಕಾರ್ಯಗಳಿಗೆ ಪ್ರೋತ್ಸಾಹನವನ್ನೀಯಲೆಂದು ನಾವು ದೇವರನ್ನು ಕುರಿತು ಬೇಡಿಕೊಳ್ಳುತ್ತೇವೆ.

ಈ ಪ್ರಕಾರ ಶೇಗುಣಸಿ ಗೌಡರ ಮನೆತನದಲ್ಲಿಯ ಹೆಣ್ಣು ಮಕ್ಕಳೂ, ಗಂಡು ಮಕ್ಕಳೂ, ವಿಜಾಪುರ ಜಿಲ್ಹೆಯಲ್ಲಿಯ ಮನೆತನಗಳಲ್ಲಿ ಆದರ್ಶರಾಗಿ ಹೆಸರು ವಾಸಿಗಳಾಗಿದ್ದಾರೆ. ಅವರು ಒಕ್ಕಲುತನ ಮತ್ತು ವ್ಯವಹಾರ ಇವುಗಳಲ್ಲಿ ಮೇಲಿನ ತರಗತಿಯನ್ನು ಹೊಂದಿದವರಾಗಿದ್ದಾರೆ. ಅವರು

ಕೇವಲ ಒಂದು ಹಳ್ಳಿಯಲ್ಲಿ ಸಾಮಾನ್ಯರಂತೆ ವೇಳೆಗಳೆದಿಲ್ಲ. ಔದ್ಯೋಗಿಕ ಕಾರ್ಯಗಳಲ್ಲಿಯೂ ಕೂಡ ಲಕ್ಷಹಾಕಿದ್ದಾರೆ. ವೀರಶೈವ ಸಮಾಜದಲ್ಲಿ ಅಗ್ರಸ್ಥಾನವನ್ನು ವಹಿಸಿದವರು, ಕೈ. ವಾ. ಲಿಂಗರಾಜ ದೇಸಾಯರು, ಶಿರಸಂಗಿ ಇವರು ಇದ್ದು ಇವರು ವೀರಶೈವ ಸಮಾಜವು ಕೇವಲ ಒಕ್ಕಲುತನ ಮಾತ್ರವಲ್ಲ, ಅದರೊಡನೆ ರಾಜಕೀಯ ಮತ್ತು ಧಾರ್ಮಿಕ ರಂಗಗಳಲ್ಲಿಯೂ, ಮುಂದುವರಿಯ ಬೇಕೆಂದು ಯಾವಾಗೂಲ ಇಚ್ಛಿಸುತ್ತಿದ್ದರು. ಆದ್ದರಿಂದ ಅವರು ತಮ್ಮ ಮನೆತನದವರೆಲ್ಲ ಶಹರವಾಸಿಗಳಾಗಿ ವಿದ್ಯಾ, ಬುದ್ಧಿಗಳಲ್ಲಿ ಮುಂದುವರಿಯ ಬೇಕೆಂದು ಅವರು ಇಚ್ಛಿಸುತ್ತಿದ್ದರು. ಇದನ್ನು ಲಕ್ಷಿಸಿದಲ್ಲಿ ಶೀಗುಣಸಿ ಮನೆತನದವರೆಲ್ಲ ಈ ಮಾದರಿಯಂತೆ ನಡೆದದ್ದು ಕಂಡು ಬರುತ್ತದೆ. ಇದಕ್ಕೋಸ್ಕರ ಅವರು ಸ್ತೋತ್ರಾರ್ಹರಾಗಿರುವರು.

## ಶ್ರೀಯುತ, ರಾ|| ರಾ|| ಬಿ. ಕೆ. ದಂಧರಗಿಯವರು.

ಶ್ರೀಯುತ, ದಂಧರಗಿಯವರು ಯಾವಾಗಲೂ ಯೋಗ್ಯ ಸಲಹೆಗಾರರೂ, ವಾಙ್ಮಯ ಕಾರ್ಯ ನಿಪುಣರೂ ಆಗಿರುವರು. ಅವರು ತಮ್ಮ ವರ್ತನೆಯಲ್ಲಿ ಸ್ಪಷ್ಟವಾದಿಗಳಾಗಿ ಯಾವಾಗಲೂ ಹಿತವಾದುದನ್ನೇ ಹೇಳುವರು. ಮತ್ತು ಅದರಂತೆ ತಾವೂ ಆಚರಿಸುವರು. ಅವರು ಕೆಲವು ಕಾಲ ಸರಕಾರಿ ಉದ್ಯೋಗದಲ್ಲಿ ಸೇರಿಕೊಂಡು ಕಾರ್ಯ ಮಾಡುತ್ತ ಬಂದಿದ್ದಾರೆ. ಇದರಿಂದ ಅವರು ಸಮಾಜದ ನಿಜ ಸ್ಥಿತಿಯನ್ನು ಚೆನ್ನಾಗಿ ಅರಿತವರಾಗಿರುತ್ತಾರೆ. ಅವರು ವೀರಶೈವ ಸಮಾಜದ ನಿಜಸ್ಥಿತಿಯನ್ನು ತಿಳಿದು ಕೊಂಡು ಕಾರ್ಯ ತತ್ಪರರಾಗಿ ದುಡಿಯುತ್ತಾರೆ. ಇದು ಅವರ ಸ್ವಭಾವವಾಗಿರುವದು. ಇದರಿಂದ ಅವರು ಸಾರ್ವಜನಿಕ ಕಾರ್ಯಗಳಲ್ಲಿ ಮುಂದಾಗಿ ಯಾವಾಗಲೂ ಪ್ರಯತ್ನಿಸುತ್ತಾ ಬರುತ್ತಾರೆ. ಅವರು ಶೀಗುಣಸಿ ಗೌಡರ ಮನೆತನದ ಹಿತೈಷಿಗಳಿದ್ದದರಿಂದ ಶರಣೆಯರ ಚರಿತ್ರೆ ಗ್ರಂಥ ಪ್ರಸಾರ ಮಾಡುವಲ್ಲಿ ಅವರು ಬಹಳ ಉಪಯುಕ್ತ ಕಾರ್ಯವನ್ನು ಮಾಡಲು ಶಕ್ತರಾದರು. ಅವರು ಮಾಡಿದ ಸಹಾಯಕ್ಕೋಸ್ಕರ ನಾವು ಅವರಿಗೆ ಬಹಳ ಆಭಾರಿಯಾಗಿದ್ದೇವೆ.

ಫ. ಗು. ಹಳಕಟ್ಟಿ.
ಗ್ರಂಥಕರ್ತ, ವಿಜಾಪೂರ.

ಅವಳಿಗೆ ಅನೇಕ ರೀತಿಯಿಂದ ತೊಂದರೆಪಡಿಸುವರು. ಆದರೆ ಯಾವ ಕಷ್ಟವು ಉಂಟಾದರೂ ಸಮಾಧಾನಿಯಾಗಿರಬೇಕೆಂದು ಅವಳು ತನ್ನ ಒಂದು ವಚನದಲ್ಲಿ ಹೇಳಿರುತ್ತಾಳೆ. " ಸಂತೆಯೊಳಗೆ ಮನೆ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ ? ಲೋಕದೊಳಗೆ ಹುಟ್ಟಿದ ಬಳಿಕ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕೆಂದು ಹೇಳುತ್ತಾಳೆ. ( ವಚನ ೪೯ ) ಕೆಲವು ಜನರು ಅವಳು ಪ್ರವಾಸ ಮಾಡುವ ಕಾಲದಲ್ಲಿ ಅವಳಿಗೆ ತೊಂದರೆ ಕೊಡಲು ಅದಕ್ಕೆ ಅವಳು " ಏನು ಮಾಡಿದಡೆಯೂ ನಾನಂಜುವಳಲ್ಲ. " ಎಂದು ಇಂಥವರನ್ನು ಉದ್ದೇಶಿಸಿ ಹೇಳಿದ್ದಾಳೆ. ಈ ಜನರು ನನಗೆ ಕೇಡು ಮಾಡಿದರೆ ನಾನು ನನ್ನ ಪ್ರಾಣವನ್ನು ಪರಮಾತ್ಮನಿಗೊಪ್ಪಿಸಿ ಶುದ್ಧಳಾಗುತ್ತೇನೆಂದು ಅಂದಿದ್ದಾಳೆ. ( ವಚನ ೧೦೭ ) ಇದರ ಮೇಲಿಂದ ಮಹಾದೇವಿಯಕ್ಕನು ಎಷ್ಟು ಗಟ್ಟಿಮನಸ್ಸಿನವಳಾಗಿದ್ದಳೆಂಬುದನ್ನು ನಾವು ಊಹಿಸಬಹುದು.

**ಮಾರ್ಗದಲ್ಲಿ ಆಯಾಸಗಳು:—** ಮಹಾದೇವಿಯಕ್ಕನು ಪ್ರವಾಸ ಮಾಡುವ ಕಾಲದಲ್ಲಿ ಅವಳಿಗೆ ಕೆಲವು ಪ್ರಸಂಗಗಳಲ್ಲಿ ವಾಸಿಸಲಿಕ್ಕೆ ಸಹ ಯಾರೂ ಆಶ್ರಯ ಕೊಡುತ್ತಿದ್ದಿಲ್ಲೆಂದು ತೋರುತ್ತದೆ. ಅವಳಿಗೆ ಹೊಟ್ಟೆಗೆ ಹಾಕುವದೊತ್ತಟ್ಟಿಗಿರಲಿ ಕುಡಿಯಲಿಕ್ಕೆ ನೀರು ಸಹ ಕೊಡುತ್ತಿದ್ದಿಲ್ಲೆಂದು ತಿಳಿಯುತ್ತದೆ. ಈ ಬಗ್ಗೆ ಅವಳು ಅನ್ನುವದೇನೆಂದರೆ:— ಕುಡಿಯಲಿಕ್ಕೆ ನನಗೆ ನೀರು ಕೊಡದಿದ್ದರೆ ನನಗೆ ಹಳ್ಳ ಬಾವಿಗಳಿವೆ, ಮಲಗಲಿಕ್ಕೆ ಸ್ಥಳ ಕೊಡದಿದ್ದರೆ ನಾನು ಹಾಳು ದೇಗುಲದಲ್ಲಿ ಮಲಗುವೆನು. ಹಸಿವಾದರೆ ಪುಣ್ಯಾತ್ಮರಾದ ಯಾರಾದರೊಬ್ಬರು ನನಗೆ ಭಿಕ್ಷೆ ಕೊಡುವರು, ಎಂದು ಧೈರ್ಯ ತಂದುಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಅವಳು ಹೊಟ್ಟೆಗಿಲ್ಲದೆ ಉಪವಾಸ ಬೀಳುವ ಪ್ರಸಂಗಗಳೂ ಬರುತ್ತಿದ್ದವು. ಆಗ ಧೃಢ ಮನಸ್ಸಿನವಳಾಗಿ ಮಹಾದೇವಿಯಕ್ಕನು ಅನ್ನುವದೇನಂದರೆ:— ನನಗೆ ಹಸಿವೆಯಾಗಿಲ್ಲ, ಹಸಿವೆಯು ದೂರಾಯಿತು ಎಂದು ಅನ್ನುವಳು. ಹೀಗೆ ಅಂದ ಕೂಡಲೆ ಅವಳಿಗೆ ಹಾಗೆಯೇ ಅನಿಸಹತ್ತುವದು. ಇಷ್ಟು ಮನಸ್ಸಿನ ದೃಢತೆಯನ್ನು ಮಹಾದೇವಿಯಕ್ಕನು ತಂದುಕೊಂಡವಳಾಗಿದ್ದಳು. ಈ ವಿಷಯವಾಗಿ ಅವಳು ಹೇಳಿದ ವಚನಗಳು ಬಹು ಅಲೌಕಿಕವೂ ಗಂಭೀರವೂ ಆಗಿವೆ. ಅವುಗಳಿಂದ ಮಹಾದೇವಿಯಕ್ಕನು ಎಷ್ಟು ಗಟ್ಟಿ ಮನಸ್ಸಿನವಳಾಗಿ

ದ್ದಳೆಂಬುದು ತಿಳಿದು ಬರುತ್ತದೆ. ಈ ಕಾಲದಲ್ಲಿ ಅವಳು ಇನ್ನೂ ಬಹು ಚಿಕ್ಕವಳು. ಆದರೂ ಅವಳು ಆರಂಭದಿಂದಲೂ ವಾಙ್ಮಯದ ಅಭ್ಯಾಸ, ಶಿವಾನುಭವದ ನಡೆ, ಯೌಗಿಕ ಸಾಮರ್ಥ್ಯ ಇವುಗಳ ಮೂಲಕ ಒಂದು ಮಹತ್ತರವಾದ ಮಾನಸ ಶಕ್ತಿಯನ್ನು ತಂದುಕೊಂಡು ಆಚರಿಸುವವಳಾಗಿದ್ದಳು. ಆ ವಚನಗಳು ಯಾವವೆಂದರೆ: —

(೧) ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ? ಸಮುದ್ರದ ತಡಿಯಲ್ಲಿ ಮನೆಯ ಮಾಡಿ ನೊರೆ ತೆರೆಗಳಿಗಂಜಿದೊಡೆಂತಯ್ಯ? ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ? ಮಲ್ಲಿಕಾರ್ಜುನದೇವ ಕೇಳಯ್ಯ, ಲೋಕದೊಳಗೆ ಹುಟ್ಟಿದ ಬಳಿಕ ಸ್ತುತಿ ನಿಂದೆಗಳು ಬಂದರೆ ಮನದಲ್ಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು.

(೨) ಆರೂ ಇಲ್ಲದವಳೆಂದು ಅಳಿಗೊಳಲು ಬೇಡ ಕಂಡಯ್ಯ, ಏನು ಮಾಡಿದಡೆಯೂ ನಾನಂಜುವಳಲ್ಲ. ತರಗೆಲೆಯ ಮೆದ್ದು ನಾನಿಹೆನು. ಸುರಗಿಯ ಮೇಲೊರಗಿ ನಾನಿಹೆನು. ಚನ್ನಮಲ್ಲಿಕಾರ್ಜುನಯ್ಯ ಕರಕೆಡೆ ನೋಡಿದೊಡೆ ಒಡಲನು ಪ್ರಾಣವನು ನಿನಗೊಪ್ಪಿಸಿ ಶುದ್ಧಳಹೆನು.

(೩) ಹಸಿವಾದೊಡೆ ಭಿಕ್ಷಾನ್ನಗಳುಂಟು. ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು. ಚನ್ನಮಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು.

(೪) ಕಿಡಿ ಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆ ಬೆನು. ಮುಗಿಲು ಹರಿದು ಬಿದ್ದಡೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿಯು ಮೇಲೆ ಬಿದ್ದಡೆ ಪ್ರಾಣ ನಿಮಗರ್ಪಿತವೆಂಬೆನು.

**ಮಹಾದೇವಿಯಕ್ಕನ ದೃಢ ಸಂಕಲ್ಪ.**:— ಮಹಾದೇವಿಯಕ್ಕನು ಕೆಲವೊಂದು ತತ್ವವನ್ನು ಪರಿಪಾಲಿಸ ಬೇಕೆಂದು ಸುಖ ಸೌಕರ್ಯಗಳನ್ನು ಬಿಟ್ಟು ಕೊಟ್ಟು ಕಷ್ಟದ ಮಾರ್ಗವನ್ನು ಕೈಕೊಂಡವಳಾಗಿದ್ದಳು. ಹೀಗೆ ಕೈಕೊಂಡ ಬಳಿಕ ಅದನ್ನು ಎಂದೂ ಬಿಡಕೂಡದೆಂಬ ದೃಢ ಸಂಕಲ್ಪವುಳ್ಳವಳಾಗಿದ್ದಳು. ಅವಳು ಒಂದು ವಚನದಲ್ಲಿ ಹೇಳುವದೇನೆಂದರೆ :—

ಚಂದನವ ಕಡಿದು ಕೊರೆದು ತೇದೊಡೆ ನೊಂದೆನೆಂದು ಕಂಪ ಬಿಟ್ಟಿತ್ತೆ?

ಸಂದು ಸಂದು ಕಡಿದು ಕಬ್ಬಿನವ ಗಾಣದಲಿಕ್ಕಿ ಬೆಂದು ಪಾಕಾಗುಳ್ಳ ಸಕ್ಕರೆಯಾಗಿ ನೊಂದೆನೆಂದು ಸವಿಯು ಬಿಟ್ಟಿತ್ತೆ? ಅಂದರೆ ಎಂಥ ಕಷ್ಟಗಳು ಬಂದರೂ ತಾನು ಕೈಕೊಂಡ ಧ್ಯೇಯಗಳನ್ನು ಬಿಡಕೂಡದೆಂದು ಅವಳ ಅಭಿಪ್ರಾಯವಾಗಿತ್ತು. ( ವಚನ ೧೦೯ )

ಮಹಾದೇವಿಯಕ್ಕನು ಸ್ವಗ್ರಾಮವನ್ನು ಬಿಟ್ಟಬಳಿಕ ಆವಳು ಪರಾವ ಲಂಬಿಯಾಗಿರುವ ಪ್ರಸಂಗವು ಬಂದಿತು. ಅವಳು ಅಶನಕ್ಕಾಗಿ ಎರಡನೆ ಯವರಿಂದ ಯಾಚನೆ ಮಾಡಿರಬಹುದು. ಒಂದು ವಚನದಲ್ಲಿ ಅವಳು ಅನ್ನುವದೇನೆಂದರೆಃ —

"ಮನೆ ಮನೆ ತಪ್ಪದೆ ಕೈಯ್ಯೊಡ್ಡಿ ಬೇಡುವಂತೆ ಮಾಡಯ್ಯ. ಬೇಡಿ ದೊಡೆ ಇಕ್ಕದಂತೆ ಮಾಡಯ್ಯ" ಎಂದು ಅನ್ನುತ್ತಾಳೆ. (ವಚನ. ೧೧೦.)

ಭಿಕ್ಷೆ ಬೇಡುವದು ಸರಿಯಲ್ಲವೆಂದು ಅವಳಿಗೆ ಎನಿಸಿ ಅವಳು ಕೂಡಲೆ ಬೇಡಿದೊಡೆ ಇಕ್ಕದಂತೆ ಮಾಡಯ್ಯ ಎಂದು ತತ್ಕ್ಷಣ ನುಡಿಯುತ್ತಾಳೆ. ಎಂದರೆ ಅವಳಿಗೆ ಈ ಕಾಲದಲ್ಲಿ ಸರಿಯಾದ ಮಾರ್ಗವು ಯಾವುದು ಮತ್ತು ಯಾವುದು ಯೋಗ್ಯವಲ್ಲ ಎಂಬ ವಿಚಾರಗಳು ಮನಸ್ಸಿನಲ್ಲಿ ಬಂದು ತಳಮಳಿ ಸುತ್ತಿರಬಹುದು. ಅಷ್ಟರಲ್ಲಿ ತನ್ನ ಕಾಯಕಕ್ಕೋಸ್ಕರ ಇಷ್ಟೇಕೆ ಚಿಂತೆ ಎಂಬ ವಿಚಾರವು ಬಂದು ತನ್ನ ತನಗೆಯೇ ಸಮಾಧಾನ ಹೇಳಿಕೊಳ್ಳುವ ದೇನೆಂದರೆಃ— "ಕಾಯ ಕರ್ರನೆ ಕಂದಿದರೇನು? ಕಾಯ ಮಿರ್ರನೆ ಮಿಂಚಿ ದರೇನು? ಅಂತರಂಗ ಶುದ್ಧವಾದ ಬಳಿಕ ಕಾಯವೇನಾದಡೇನಯ್ಯ?" (ವಚನ ೧೧೧) ಎಂಬ ವಿಚಾರವು ಅವಳ ಮನಸ್ಸಿನಲ್ಲಿ ಬರುತ್ತದೆ. ಆಗ ಅವಳು ಎಂಥ ತೊಂದರೆಗಳು ಬಂದರೂ ಅಂತರಂಗ ಶುದ್ಧವಾಗಿದ್ದರೆ ಸಾಕು, ಎಂಬ ವಿಚಾರವು ಬರುತ್ತದೆ. ಈ ಕಾಲದಲ್ಲಿ ಅವಳಿಗೆ ಅನೇಕ ಕಷ್ಟಗಳು ಸಂಭವಿಸಿರಬೇಕೆಂದು ತೋರುತ್ತದೆ. ಆದರೆ ಅವಳು ಅವುಗಳಿಗಾಗಿ ಧೈರ್ಯ ಗೆಡದೆ ಅನ್ನುವದೇನೆಂದರೆಃ— "ಒಡಲ ಕಳವಳಕ್ಕಾಗಿ ಅಡವಿಯ ಹೊಕ್ಕೆ. ಗಿಡುಗಿಡುದಪ್ಪದೆ ಬೇಡಿದೆನೆನ್ನಂಗಕ್ಕೆಂದು. ಅವು ನೀಡಿದವು ತಮ್ಮ ಲಿಂಗ ಕ್ಕೆಂದು. ಆನುಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದವು. ಇನ್ನು ಬೇಡಿದೆನಾದರೆ ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ" ಹೀಗೆ ಅವಳು ಧೈರ್ಯ ವನ್ನು ತಂದುಕೊಂಡು ಮಾರ್ಗಕ್ರಮಣ ಮಾಡುತ್ತ ಕಲ್ಯಾಣ ನಗರವನ್ನು ಪ್ರವೇಶಿಸುವವಳಾದಳು.

**ಕಲ್ಯಾಣಕ್ಕೆ ಆಗಮನ.—** ಅವಳು ಕಲ್ಯಾಣ ಪಟ್ಟಣವನ್ನು ಸಮೀಪಿಸಿದ ಹಾಗೆ ಅವಳ ಆನಂದಕ್ಕೆ ಪಾರಾವಾರವೇ ಇರಲಿಲ್ಲ. ಅವಳು ಈ ಕಾಲದಲ್ಲಿ ಅನ್ನುವದೇನಂದರೆ:— "ಅಯ್ಯಾ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯಾ. ಅಯ್ಯಾ ನಿಮ್ಮ ಶರಣರು ಇದ್ದ ಪುರವೇ ಕೈಲಾಸ ಪುರವಯ್ಯಾ. ಅಯ್ಯಾ ನಿಮ್ಮ ಶರಣರು ನಿಂದುದೇ ನಿಜ ನಿವಾಸವಯ್ಯಾ (ವಚನ ೯೧) ಎಂದು ನುಡಿಯುತ್ತಾಳೆ. ಈ ಕಾಲದಲ್ಲಿ ಅವಳಿಗೆ ಹರ್ಷವು ಉಕ್ಕೇರಿ ಬಂದು ಅವಳು ನುಡಿದ ಮಾತುಗಳು ಇವಾಗಿವೆ. ಕಲ್ಯಾಣ ಪಟ್ಟಣವು ಕೈಲಾಸ ಪುರವೆಂದು ಅವಳಿಗೆ ಭಾಸವಾಗುತ್ತದೆ.

**ಬಸವೇಶ್ವರನ ಅಂತಃಪುರದಲ್ಲಿ ವಾಸ. :—** ಮಹಾದೇವಿಯಕ್ಕನು ಕಲ್ಯಾಣ ಪಟ್ಟಣಕ್ಕೆ ಬಂದ ಬಳಿಕ ಅವಳ ಶ್ರೇಷ್ಠ ವೃತ್ತಿಯನ್ನು ನೋಡಿ ಬಸವೇಶ್ವರನೂ ಅವನ ಹೆಂಡತಿ ನೀಲಾಂಬಿಕೆಯೂ ಅವಳನ್ನು ತಮ್ಮ ಅರಮನೆಯಲ್ಲಿಯೇ ಇಟ್ಟು ಕೊಂಡಿರ ಬೇಕೆಂದು ತೋರುತ್ತವೆ. ಮಹಾದೇವಿಯಕ್ಕನು ಉಚ್ಚ ಪಾರಮಾರ್ಥಿಕ ವಿಚಾರವುಳ್ಳವಳು. ಬಸವೇಶ್ವರನೂ ನೀಲಾಂಬಿಕೆಯೂ ಅದೇ ಬಗೆಯ ಮನೋವೃತ್ತಿಯುಳ್ಳವರು. ಆದ್ದರಿಂದ ಅವರೆಲ್ಲರೂ ಒಂದೇ ಕಡೆಯಲ್ಲಿಯೇ ಇದ್ದಿರಬೇಕೆಂದು ತೋರುತ್ತದೆ. ಯಾಕಂದರೆ ಮಹಾದೇವಿಯಕ್ಕನು ತನ್ನ ಒಂದು ವಚನದಲ್ಲಿ "ಅವ್ವ ನೀಲಮ್ಮನ ಮೋಹದ ಮಗಳೇ, ಅಪ್ಪ ಬಸವಣ್ಣನ ಸುಚಿತ್ತದ ಪುತ್ಥಳಿಯೇ, ಎಂದು ತನ್ನನ್ನು ತಾನೇ ನಿರ್ದೇಶಿಸಿ ಕೊಂಡಿದ್ದಾಳೆ. ಇದು ಕೇವಲ ಕಾಲ್ಪನಿಕವಾಗಿಂದೆ ನಿಜ ಸ್ಥಿತಿಯನ್ನೇ ತೋರಿಸುತ್ತಿರಬಹುದು. ಇಲ್ಲಿ ಅವಳು ತಾನು ಬಸವೇಶ್ವರ ಮತ್ತು ನೀಲಾಂಬಿಕೆಯರ ಮಗಳೆಂದು ಹೇಳಿ ಕೊಳ್ಳುತ್ತಾಳೆ. ಇದು ಕೇವಲ ಔಪಚಾರಿಕವಾಗಿರಲಾರದೆಂದು ತೋರುತ್ತದೆ. (ವಚನ ೯೨,೧೦೦)

**ಬಸವೇಶ್ವರನು ಜ್ಞಾನ ದೀಕ್ಷೆ ಕೊಟ್ಟದ್ದು. :—** ಅವಳು ಬಸವೇಶ್ವರನಲ್ಲಿದ್ದಾಗ್ಗೆ ಬಸವೇಶ್ವರನು ಅವಳಿಗೆ ಲಿಂಗ ಜ್ಞಾನದ ಗೂಢ ತತ್ವಗಳನ್ನು ಅರುಹಿದ್ದಾನೆ. (ವಚನ ೩೦) ಅವಳು ತನ್ನ ತಾಯಿ ತಂದೆಗಳ ಮನೆಯಲ್ಲಿ ಇದ್ದಾಗ್ಗೆ ತನ್ನ ಮನೆ ಗುರುವಿನಿಂದ ದೀಕ್ಷೆಯನ್ನು ಹೊಂದಿ ಲಿಂಗಾಚಾರವನ್ನನುಸರಿಸಿ ಅವಳು ಆಚರಿಸುತ್ತ ಬಂದಿರ ಬಹುದು. ಆದರೆ ಕಲ್ಯಾಣದಲ್ಲಿ ಶಿವಶರಣರು ಈ ಜ್ಞಾನವನ್ನು ಮುಖ್ಯವಾಗಿ ತ್ರಿಲಿಂಗ

ಗಳ ರೀತಿ ನಡೆಗಳನ್ನು ವಿಸ್ತರಿಸುತ್ತ ಬಂದದ್ದು ತಿಳಿಯುತ್ತದೆ. ಈ ನಡೆಗಳು ಈ ಆರಂಭ ಕಾಲದಲ್ಲಿ ಜನರಿಗೆ ಅಪರಿಚಿತವಾದವುಗಳಾಗಿದ್ದವು. ಇವುಗಳು ಕಲ್ಯಾಣದ ಶಿವಾನುಭವ ಮಂಟಪದಲ್ಲಿ ವಿಸ್ತೃತವಾಗಿ ಚರ್ಚಿಸಲ್ಪಟ್ಟವು. ಅವುಗಳನ್ನು ಬಸವೇಶ್ವರನು ಮಹಾದೇವಿಯಕ್ಕನಿಗೆ ತಿಳಿಸಿ ಹೇಳಿದನೆಂಬುದು ಕೆಳಗಿನ ವಚನದಿಂದ ವ್ಯಕ್ತವಾಗುತ್ತದೆ. ಅವಳು ಈ ವಚನದಲ್ಲಿ ಹೇಳಿರುವದೇನಂದರೆ:—

"ಎನ್ನಂಗದಲ್ಲಿ ಆಚಾರವ ತೋರಿದನಯ್ಯಾ ಬಸವಣ್ಣನು, ಆಚಾರವೇ ಲಿಂಗವೆಂದರುಹಿದನಯ್ಯ ಬಸವಣ್ಣನು, ಎನ್ನ ಪ್ರಾಣದಲ್ಲಿ ಅರಿವ ತೋರಿದನಯ್ಯ ಬಸವಣ್ಣನು, ಅರಿಪೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು, ಅರಿವೇ ಜಂಗಮವೆಂದು ಅರುಹಿದನಯ್ಯ ಬಸವಣ್ಣನು, ಚನ್ನಮಲ್ಲಿಕಾರ್ಜುನಯ್ಯ ಎನ್ನ ಹೆತ್ತತಂದೆ ಸಂಗನಬಸವಣ್ಣ ಎನಗೀ ಕ್ರಮವನರುಹಿದನಯ್ಯ-' (ವಚನ ೯೨)

ತ್ರಿಲಿಂಗಸಾಧನೆ:— ಇಲ್ಲಿ ಮಹಾದೇವಿಯಕ್ಕನು ತ್ರಿಲಿಂಗಗಳನ್ನು ಗುರುಲಿಂಗಜಂಗಮುಗಳಿಂದ ಹೇಗೆ ಸಾಧಿಸಬೇಕೆಂಬುದನ್ನು ತಿಳಿಸಿದ್ದಾಳೆ. ಈ ತಿಳವಳಿಕೆಯು ತನಗೆ ಗುರುವಾದ ಬಸವಣ್ಣನಿಂದಬಂದಿತೆಂದು ಇಲ್ಲಿ ಹೇಳಿದ್ದಾಳೆ. ಇದೇ ಭಾವವನ್ನು ಅವಳು ಕೆಳಗಿನ ವಚನದಲ್ಲಿಯೂ ವ್ಯಕ್ತಪಡಿಸಿದ್ದಾಳೆ. ಅದು ಯಾವದೆಂದರೆ:—

"ಬಸವಣ್ಣ ನಿಮ್ಮಂಗದಾಚಾರವ ಕಂಡು ಎನಗೆ ಲಿಂಗ ಸಂಗವಾಯಿತ್ತು. ಆಯ್ಯ ಬಸವಣ್ಣ ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ ಬಸವಣ್ಣ. ನಿಮ್ಮ ಸದ್ಭಕ್ತಿಯ ತಿಳಿದು ಎನಗೆ ನಿಜವು ಸಾಧ್ಯವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯನ ಪೆಸರಿಟ್ಟ ಗುರು ನೀವಾದ ಕಾರಣ ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು" (ವಚನ ೯೩)

**ಸದ್ವೃತ್ತಿಯಿಂದ ನಡೆಯುವದು:—** ಮಹಾದೇವಿಯಕ್ಕನು ತಾನು ಭಕ್ತ್ಯಾಚಾರವನ್ನು ಹೊಂದಿದ ಬಳಿಕ ತಾನು ಹೇಗೆ ವರ್ತಿಸುವೆನೆಂಬುದನ್ನು ಕುರಿತು ಒಂದು ವಚನದಲ್ಲಿ ಸುಂದರವಾಗಿ ಹೇಳಿದ್ದಾಳೆ.' ಅದು ಯಾವದೆಂದರೆ:—

ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ, ಬೆಳೆದೆನು ಅಸಂಖ್ಯಾತರ ಕರುಣದೊಳಗೆ, ಭಾವವೆಂಬ ಹಾಲು ಸುಜ್ಞಾನವೆಂಬ ತುಪ್ಪ ಪರಮಾರ್ಥವೆಂಬ ಸಕ್ಕರೆಯ ನಿಕ್ಕಿದರು ನೋಡಾ. ಇಂತಿಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದರೆನ್ನ. ವಿವಾಹವ ಮಾಡಿದಿರಿ. ಸಯವಪ್ಪ ಗಂಡಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದುಬಂದಿರಿ. ಬಸವಣ್ಣ ಮೆಚ್ಚಲು ಒಗತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹುವ್ವ ತಾಹೆನಲ್ಲದೆ ಹುಲ್ಲು ತಾರೆನು. ಅವಧರಿಸಿ ನಿಮ್ಮಡಿಗಳೆಲ್ಲರು. ಮರಳಿ ಬಿಜಯಂಗೈವುದು. ಶರಣಾರ್ಥಿ. (ವಚನ ೪೬)

**ಶಿವಾನುಭವ ಮಂಟಪದಲ್ಲಿ ಪ್ರವೇಶ:** — ಶಿವದೀಕ್ಷೆಯಾದಬಳಿಕ ಭಕ್ತನು ಸದ್ವೃತ್ತಿಯಿಂದ ನಡೆಯ ಬೇಕೆಂದು ಮಹಾದೇವಿಯಕ್ಕನು ಇದರಲ್ಲಿ ಹೇಳಿದ್ದು ತಾನಾದರೂ ಹಾಗೆಯೇ ನಡೆಯುವೆನೆಂದು ಈ ವಚನದಲ್ಲಿ ಅವಳು ಹೇಳಿದ್ದಾಳೆ.

ಮಹಾದೇವಿಯಕ್ಕನು ಕಲ್ಯಾಣಕ್ಕೆ ಬರುವ ಪೂರ್ವದಲ್ಲಿಯೇ ಬಹು ಜನ ಶಿವಶರಣರು ಬಸವೇಶ್ವರನಲ್ಲಿ ಆಗಮಿಸಿದ್ದರು. ಅವರು ಅವನ ಸನ್ನಿಧಿಯಲ್ಲಿ ಶಿವಾನುಭವದ ಚರ್ಚೆಗಳಲ್ಲಿ ಅಂಗವಹಿಸುತ್ತಿದ್ದರು. ಮಹಾದೇವಿಯಕ್ಕನು ಆ ಚರ್ಚೆಗಳನ್ನು ಕೇಳಿ ಆನಂದಿಸುವೆನೆಂದು ಒಂದು ವಚನದಲ್ಲಿ ಹೇಳಿದ್ದಾಳೆ. ಆ ಚರ್ಚೆಗಳು ಇಷ್ಟು ಅವಳಿಗೆ ಆಕರ್ಷಕವಾಗಿದ್ದವು. ಅಲ್ಲಿ ನೆರೆದ ಶಿವಶರಣರು ತಮ್ಮ ತಮ್ಮ ವಿಶಿಷ್ಟ ಜ್ಞಾನವನ್ನು ಈ ಶಿವಾನುಭವದ ಕೂಟದಲ್ಲಿ ಪ್ರಕಟ ಮಾಡುತ್ತಿದ್ದರು. ಅದರಿಂದ ಅವರಲ್ಲಿದ್ದ ಶಿವಶರಣರ ಅನುಭವಗಳು ಮತ್ತು ವಿಚಾರಗಳು ಪ್ರಫುಲ್ಲಿತವಾಗುತ್ತಲೇ ಇದ್ದವು. ಅವಳು ಒಂದು ವಚನದಲ್ಲಿ ಅಂದಿರುವದೇನಂದರೆ?: —

“ಬಸವಣ್ಣನ ಭಕ್ತಿ, ಚನ್ನ ಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮ ಸ್ಥಲ. ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ, ಇಂತಿವರ ಕರುಣ ಪ್ರಸಾದವೆನಗಾಯಿತ್ತು ಚನ್ನಮಲ್ಲಿಕಾರ್ಜುನಯ್ಯಾ.” ಇವರೆಲ್ಲರೂ ವಚನಕಾರರಿದ್ದಾರೆ. ಅವರ ವಚನಗಳಲ್ಲಿ ಮಹಾದೇವಿಯಕ್ಕನು ಈ ವಚನಗಳಲ್ಲಿ ಹೇಳಿದ ಪ್ರಕಾರ ವಿಶಿಷ್ಟ ತರದ ವಿಚಾರಗಳಿದ್ದುದು ಕಂಡು ಬರುತ್ತದೆ. ಅವೆಲ್ಲವು ಗಳನ್ನು ಮಹಾದೇವಿಯಕ್ಕನು ಕೇಳಿಕೊಂಡು ಅವುಗಳಂತೆ ಅವಳು ಆಚರಿಸು

ವವಳಾಗಿದ್ದಳೆಂದು ಈ ವಚನದಿಂದ ತಿಳಿದು ಬರುತ್ತದೆ. ಇವೇ ವಿಚಾರಗಳನ್ನು ಅವಳು ಮುಂದುವರಿಸುತ್ತ ನುಡಿದ ನುಡಿಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ. ಅವು ಯಾವವೆಂದರೆ? :—

(೧) ಬಸವಣ್ಣ, ಎನ್ನ ಭಕ್ತಿಯೇ ನಿಮ್ಮ ಧರ್ಮ, ಎನ್ನ ಜ್ಞಾನವೇ ಪ್ರಭುದೇವರ ಧರ್ಮ, ಇಂತೀ ಮೂವರು ಒಂದೊಂದು ಕೊಟ್ಟಕಾರಣ ಎನಗೆ ಮೂರು ಭಾವವಾಗಿತ್ತು. ಆ ಮೂರು ಭಾವವ ನಿಮ್ಮಲ್ಲಿ ಸಮರ್ಪಿಸಿದ ಕಾರಣ ಚನ್ನಮಲ್ಲಿಕಾರ್ಜುನನ ನೆನಹು ಹೋದಲ್ಲಿಯೇ ನಿಮ್ಮ ಕರುಣದ ಕಂದನು ಕಾಣಾ ಸಂಗನಬಸವಣ್ಣ. (ವಚನ ೯೮)

(೨) ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿ ಪ್ರಸಾದ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶು ಮಗಳಾದ ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳಯ್ಯನ ಮಗಳಾದ ಕಾರಣ ನಿರ್ಮಲ ಪ್ರಸಾದವ ನಿಶ್ಚಯಿಸಿ ಕೊಟ್ಟನು. ಇಂತೀ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು. (ವಚನ ೯೯)

(೩) ಸಂಗನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ನಾಸ್ತಿಯಾಯಿತ್ತು. ಪ್ರಭುವೇ ನಿಮ್ಮ ಶ್ರೀಚರಣಕ್ಕೆ ಶರಣೆಂದೆನಾಗಿ ಎನಗೆ ಅರುಹು ಸ್ವಾಯತವಾಯಿತ್ತು. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣನ ಕರುಣವ ಪಡೆದೆನಾಗಿ ಎನಗಾವ ಜಂಜಡವಿಲ್ಲವಯ್ಯ ಪ್ರಭುವೇ. (ವಚನ ೧೦೦)

(೪) ಮಾಟಕೂಟ ಬಸವಣ್ಣಂಗಾಯಿತ್ತು. ನೋಟಕೂಟ ಪ್ರಭುದೇವರಿಗಾಯಿತ್ತು. ಭಾವಕೂಟ ಅಜಗಣ್ಣಂಗಾಯಿತ್ತು. ಸ್ನೇಹಕೂಟ ಬಾಚಿರಾಮಯ್ಯಂಗಾಯಿತ್ತು. ಇವರೆಲ್ಲರ ಕೂಟ ಚನ್ನಬಸವಣ್ಣಂಗಾಯಿತ್ತು. ಎನಗಿನ್ನಾವ ಕೂಟವಿಲ್ಲವಯ್ಯಾ ಚನ್ನಮಲ್ಲಿಕಾರ್ಜುನಯ್ಯ. (ವಚನ ೧೦೧)

ಮೇಲಿನ ವಚನಗಳ ಮೇಲಿಂದ ವಚನಕಾರರ ರೀತಿ ನಡೆಗಳೆಂತಹವು ಎಂಬುದನ್ನು ತಿಳಿದುಕೊಂಡು ಮಹಾದೇವಿಯಕ್ಕನು ಆಚರಿಸುತ್ತಿದ್ದಳೆಂಬುದು ವ್ಯಕ್ತವಾಗುತ್ತದೆ. ಶಿವಾನುಭವ ಮಂಟಪದಲ್ಲಿ ಭಿನ್ನ ಭಿನ್ನ ಆಚಾರಗಳುಳ್ಳ

ಶಿವಶರಣರಿದ್ದರೂ ಅವರು ಪರಸ್ಪರ ವಿಚಾರ ವಿನಿಮಯ ಮಾಡುತ್ತಿದ್ದುದರಿಂದ ಅವರು ತಮ್ಮ ವಿಚಾರಗಳನ್ನು ಸರಿಪಡಿಸಿಕೊಂಡು ಆಚರಿಸುವವರಾಗಿದ್ದರೆಂದು ಕಂಡುಬರುತ್ತದೆ. ಇದು ಅವರ ಪ್ರಗತಿ ಮಾರ್ಗದ ಕುರುಹಾಗಿದೆ.

**ಅನುಭಾವಿಯಾಗಿರುವದು:—** ಶಿವಶರಣರು ಅನುಭಾವಕ್ಕೆ ಬಹಳ ಮಹತ್ವ ಕೊಡುತ್ತಾರೆ. ಹೇಗೆ ಕ್ರೈಸ್ತರು ಪ್ರಾರ್ಥನೆಗೆ, ಇಸ್ಲಾಂ ಧರ್ಮೀಯರು ನಮಾಜಕ್ಕೆ ಮಹತ್ವ ಕೊಡುತ್ತಾರೋ ಹಾಗೆಯೇ ಶಿವಶರಣರು ಅನುಭಾವಕ್ಕೆ ಮಹತ್ವ ಕೊಡುತ್ತಾರೆ. ವಿಚಾರವಂತರು ಒಂದೆಡೆಗೆ ಸೇರಿ ವಿಚಾರ ವಿನಿಮಯ ಮಾಡುವದೇ ಅನುಭಾವವಾಗಿದೆ. ಇದನ್ನು ಶಿವಶರಣರು ನಿತ್ಯ ಪರಿಪಾಲಿಸತಕ್ಕದ್ದು. ಗುರುವು ಹೇಗೆ ನಿತ್ಯ ಉಪದೇಶ ಮಾಡುತ್ತಾನೋ ಹಾಗೆಯೇ ಅನುಭಾವವು ಕಾರ್ಯ ಮಾಡುತ್ತದೆ. ವೀರಶೈವರು ಗುರುವಿನ ವಿಷಯವಾಗಿ ಅಂಧ ಭಕ್ತಿಯನ್ನು ವಹಿಸುವದಕ್ಕಿಂತ ಅನುಭಾವವನ್ನು ಹೊಂದಿ ಆಚರಿಸುವದು ಪರಿಣಾಮಕಾರಿ ಎಂದು ಶಿವಶರಣರ ಮತವದೆ. ಈ ವಿಷಯವನ್ನು ಕೆಳಗಿನ ವಚನಗಳು ಬಹು ಚನ್ನಾಗಿ ವಿವರಿಸುತ್ತವೆ.

(೧) ಮರ ಮರ ಮಥನಿಸಿ, ಕಿಚ್ಚು ಹುಟ್ಟಿಸುತ್ತಣ ತರು ಮರಾದಿಗಳ ಸುಡಲಾಯಿತ್ತು. ಆತ್ಮಪಾತ್ಮ ಮಥನಿಸಿ ಅನುಭಾವ ಹುಟ್ಟಿ ತನುಗುಣಾದಿಗಳ ಸುಡಲಾಯಿತ್ತು. ಇದು ಕಾರಣ ನಿಮ್ಮ ಮಹಾನುಭಾವಿಗಳ ಅನುಭಾವ ತೋರಿ ಎನ್ನೊಡಲನುಳುಹಿ ಕೊಳ್ಳಾ, ಚನ್ನ ಮಲ್ಲಿಕಾರ್ಜುನಾ. ( ವಚನ ೭೭ )

(೨) ಅಯ್ಯಾ ನಿಮ್ಮನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು. ನಿಮ್ಮನುಭಾವಿಗಳ ಸಂಗದಿಂದ ಎನ್ನ ಮನಶುದ್ಧವಾಯಿತ್ತು ಅಯ್ಯ ನಿಮ್ಮನುಭಾವಿಗಳನೊರೆ ದೊರೆದು ಮಾಡಿದ ಕಾರಣ ಚನ್ನಮಲ್ಲಿಕಾರ್ಜುನ ನಿಮಗಾನು ಕೊಡುಗೆಯಾದೆನು. ( ವಚನ ೭೬ )

(೩) ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವ ಸುಖ ದೊರೆದು ಚನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮ ಶರಣರ ಅನುಭಾವ ಸಂಗದಿಂದಾನು ಪರಮ ಸುಖಿಯಾದೆನು. ( ವಚನ ೭೫ )

ಜೈನ ಧರ್ಮೀಯರೂ ಹಾಗೆಯೇ ಸನಾತನಿಗಳೂ ಕಾಯವು ಮನು ಷ್ಯನನ್ನು ಪಾಪಕ್ಕೆ ಎಳಸುವದೆಂದು ಭಾವಿಸಿ ಅದನ್ನು ಅವರು ಅನೇಕ ವಿಧವಾಗಿ ಕ್ಲೇಶಪಡಿಸಲು ಮುಂದಾಗುತ್ತಾರೆ. ಜೈನರು ದಿಗಂಬರತ್ವವನ್ನು ಸ್ವೀಕರಿಸುವ ಉದ್ದೇಶವಾದರೂ ಇದೇ ಇರುತ್ತದೆ. ಮಹಾದೇವಿಯಕ್ಕನು ದಿಗಂಬರಿಯಾಗಿ ಆಚರಿಸುತ್ತಿದ್ದರೂ ಅವಳು ಕಾಯವನ್ನು ಕಷ್ಟಪಡಿಸಬಾ ರದೆಂಬ ಅಭಿಪ್ರಾಯವುಳ್ಳವಳಾಗಿದ್ದುದು ಅವಳ ಕೆಳಗಿನ ವಚನದಿಂದ ಕಂಡು ಬರುತ್ತದೆ. ಅವಳು ಇದರಲ್ಲಿ ಅನ್ನುವದೇನಂದರೆ:—

"ಹಾವಿನ ಹಲ್ಲ ಕಳೆದು ಹಾವನಾಡಿಸಬಲ್ಲರೆ ಹಾವಿನ ಸಂಗವೇ ಲೇಸು ಕಂಡಯ್ಯಾ. ಕಾಯದ ಸಂಗವೇ ಲೇಸು ಕಂಡಯ್ಯಾ. ತಾಯಿ ರಕ್ಕಸಿಯಾ ದಂತೆ ಕಾಯವಿಕಾರವು ಚನ್ನಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯ ಗೊಂಡಿದ್ದರೆನಬೇಡ"

ಕಾಯವು ವಿಷಯ ಲೋಲುಪತೆಯಿಂದ ದೂರಾಗಿದ್ದಲ್ಲಿ ಕಾಯದೊ ಡನಿರುವದು ಹಾನಿಕರವಲ್ಲ, ಇಷ್ಟೇ ಅಲ್ಲ, ಅದರ ಸಂಗವು ಇಷ್ಟವಾದದ್ದೆಂದು ಮಹಾದೇವಿಯಕ್ಕನು ಈ ವಚನದಲ್ಲಿ ಅಭಿಪ್ರಾಯಪಟ್ಟಿದ್ದಾಳೆ. ಅಂದರೆ ಕಾಯದೊಡನಿದ್ದು ಅದರ ಮೂಲಕ ಮನುಷ್ಯನು ಅನುಭಾವದ ಶ್ರೇಷ್ಠ ಸ್ಥಿತಿಯನ್ನು ಹೊಂದಲು ಯಾವಾಗಲೂ ಪ್ರಯತ್ನಿಸುವದು ಮನುಷ್ಯನ ಕರ್ತ ವ್ಯವೆಂಬ ಭಾವವನ್ನು ಮಹಾದೇವಿಯಕ್ಕನು ಈ ವಚನದಲ್ಲಿ ಸೂಚಿಸಿದ್ದಾಳೆ. ಹಿಂದೂ ಧರ್ಮದಲ್ಲಿ ಶರೀರವು ತ್ಯಾಜ್ಯವಾದದ್ದು, ಸಂಸಾರವು ನಿಃಸ್ಸಾರವು ಎಂಬ ಅಭಿಪ್ರಾಯವುಳ್ಳ ನುಡಿಗಳು ಅಸಂಖ್ಯಾತವಾಗಿರುತ್ತವೆ. ಮನುಷ್ಯನು ಇವುಗಳಿಂದ ಪ್ರೇರಿತನಾಗಿ ಪ್ರಪಂಚವನ್ನು ಬಿಟ್ಟುಹೋದದ್ದರ ಉದಾಹರ ಣೆಗಳು ಅನೇಕವಾಗಿರುತ್ತವೆ. ಆದರೆ ಮಹಾದೇವಿಯಕ್ಕನು ಈ ವಿಚಾರ ಗಳನ್ನು ಪುರಸ್ಕರಿಸಿಲ್ಲವೆಂಬುದು ಮೇಲ್ಕಂಡ ವಚನದಿಂದ ಕಂಡುಬರುತ್ತದೆ.

ಮಹಾದೇವಿಯಕ್ಕನು ಪ್ರಮಥರ ಆಚರಣೆಯಂತೆ ಆಚರಿಸುತ್ತ ಷಟ್ ಸ್ಥಲಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಕಡೆಗೆ ಬಯಲು ಅಥವಾ ಶೂನ್ಯ ಸ್ಥಿತಿಯನ್ನು ಹೊಂದಿದ್ದು ಅವಳ ವಚನಗಳಿಂದ ಗೊತ್ತಾಗುತ್ತದೆ.

ಮಹಾದೇವಿಯಕ್ಕನು ಬಸವೇಶ್ವರನ ಸಾನ್ನಿಧ್ಯದಲ್ಲಿ ಷಟ್‌ಸ್ಥಲಾಚರ ಣೆಯನ್ನು ಚನ್ನಾಗಿ ತಿಳಿದುಕೊಂಡು ಅದನ್ನು ತನ್ನಲ್ಲಿ ಅಳವಡಿಸಿಕೊಂಡ ವಳಾಗಿದ್ದಳು. ಬಸವೇಶ್ವರನ ಆಚರಣೆಗಳನ್ನು ಅವಳು ಸೂಕ್ಷ್ಮವಾಗಿ ನಿರೀ

ಕ್ಷಿಸಿ ಅವುಗಳಲ್ಲಿ ಅವಳು ೫೨ ವಿಧಗಳನ್ನು ಕಲ್ಪಿಸಿದ್ದಾಳೆ. ಇವುಗಳೆನು ಅವಳು ತನ್ನ ೯೫ ನೇ ವಚನದಲ್ಲಿ ನಿರೂಪಿಸಿದ್ದಾಳೆ, ಈ ವಚನವು ಷಟ್ ಸ್ಥಲಸಿದ್ಧಾಂತದ ಸಂಕ್ಷಿಪ್ತ ವಿವರಣೆಯೇ ಆಗಿದೆ. ಆದರೂ ಕೂಡ ವಚನ ಶಾಸ್ತ್ರದಲ್ಲಿರುವ ತತ್ವಗಳ ವಿಸ್ತೃತ ನಿರೂಪಣೆಯಾಗಿದೆ. ಈ ವಚನವನ್ನು ವಾಚಕರು ಗ್ರಂಥದಲ್ಲಿಯೇ ಅವಲೋಕಿಸಬೇಕು. ವಿಸ್ತಾರ ಭಯಕ್ಕಾಗಿ ನಾವು ಅದನ್ನು ಇಲ್ಲಿ ಉದಹರಿಸಿಲ್ಲ. ವಚನಶಾಸ್ತ್ರವು ಕ್ಲಿಷ್ಟವಾದ ತತ್ವ ಗಳಿಂದ ಕೂಡಿಕೊಂಡಿರುತ್ತದೆ. ಆದರೂ ಕೂಡ ಮಹಾದೇವಿಯಕ್ಕನು ಅವುಗಳನ್ನೆಲ್ಲ ತಿಳಿಗನ್ನಡದಲ್ಲಿ ಭಾವಗರ್ಭಿತವಾಗಿ ನಿರೂಪಿಸಿದ್ದಾಳೆ. ಅನೇಕ ವಚನಕಾರರು ಮಹಾದೇವಿಯಕ್ಕನ ಈ ವಚನವನ್ನು ಆಯ್ದು ತನ್ನ ಉಕ್ತಿ ಗಳಲ್ಲಿ ಅದನ್ನು ಉದಹರಿಸಿದ್ದುದು ಕಂಡುಬರುತ್ತದೆ.

ಮಹಾದೇವಿಯಕ್ಕನು ತನ್ನ ೧೧೯ನೇ ವಚನದಲ್ಲಿ ಷಟ್‌ಸ್ಥಲ ಪ್ರೇಮಿ ಗಳು ಬರೀ ಆರು ಸ್ಥಲಗಳನ್ನು ಬಾಹ್ಯದಲ್ಲಿ ಹೇಳುವದರಲ್ಲಿ ಸಮಾಧಾನ ಹೊಂದದೆ ಅವುಗಳ ಸಕೀಲಸಂಬಂಧಗಳನ್ನು ಅರಿಯುವದು ಬಹು ಅವ ಶ್ಯವೆಂದು ಹೇಳಿದ್ದಾಳೆ. ಇಲ್ಲದಿದ್ದರೆ ಅವರು ಇಂದ್ರಿಯಗಳ ಲಂಪಟಗಳಲ್ಲಿ ಬೀಳದೆ ಇರಲಾರರೆಂದು ಎಚ್ಚರು ಕೊಟ್ಟಿದ್ದಾಳೆ. ಷಟ್‌ಸ್ಥಲಗಳಲ್ಲಿ ಸಕೀಲ ಸಂಬಂಧಗಳನ್ನು ಅರಿಯುವದು ಬಹು ಅವಶ್ಯವೆಂದು ಹೇಳಿದ್ದಾಳೆ. ಇಲ್ಲ ದಿದ್ದರೆ ಅವರು ಇಂದ್ರಿಯಗಳ ಲಂಪಟಗಳಲ್ಲಿ ಬೀಳದೆ ಇರಲಾರರೆಂದು ಎಚ್ಚರು ಕೊಟ್ಟಿದ್ದಾಳೆ. ಷಟ್‌ಸ್ಥಲ ಗಳಲ್ಲಿ ಸಕೀಲಗಳ ಪರಸ್ಪರ ಸಂಬಂಧ ವನ್ನು ಅರಿಯುವದು ಬಹು ಅವಶ್ಯವು. ಇವುಗಳ ಜ್ಞಾನವಿರದಿದ್ದರೆ ಮನುಷ್ಯನು ಅವುಗಳನ್ನು ಬರೀ ಯಾಂತ್ರಿಕ ರೀತಿಯಿಂದ ಮಾಡುತ್ತ ಹೋಗುತ್ತಾನೆ. ಹೀಗೆ ಆಚರಿಸುವದು ನಿಷ್ಪ್ರಯೋಜಕವೆಂದು ಮಹಾದೇವಿ ಯಕ್ಕನ ಅಭಿಪ್ರಾಯವಿದೆ.

ಮಹಾದೇವಿಯಕ್ಕನು ವಚನಶಾಸ್ತ್ರದಲ್ಲಿ ಚೆನ್ನಾಗಿ ಬಲ್ಲವಳಾಗಿ ಅವಳು ಪಾದೋದಕ ಪ್ರಸಾದಗಳಿಗೆ ಉಚ್ಚ ಸ್ಥಾನವನ್ನು ಕೊಟ್ಟಿದ್ದಾಳೆ. ಅವಳು ಈ ವಿಷಯಗಳನ್ನು ಕುರಿತು ತನ್ನ ವಚನಗಳಲ್ಲಿ ವಿಸ್ತಾರವಾಗಿ ಬೋಧಿಸಿ ದ್ದಾಳೆ- ಈ ಬಗ್ಗೆ ಅವಳ ವಚನಗಳು ೧೧೫, ೧೧೬ ಮತ್ತು ೧೨೦ ಇವುಗ ಳನ್ನು ನೋಡಿರಿ. ಗುರು ಲಿಂಗ ಜಂಗಮಗಳ ಬಗೆಯನ್ನು ಅವಳು ಅರಿತವ ಳಾಗಿ ಇವುಗಳ ಆಚರಣೆಯನ್ನು ಕುರಿತು ಈ ವಚನಗಳಲ್ಲಿ ಅವಳು ಹೇಳಿ

ರುವಳು. ಇವುಗಳ ರೀತಿಯನ್ನು ತಿಳಿಯಬೇಕಾದರೆ ಬಾಹ್ಯದ ಇಂದ್ರಿಯ ಗಳನ್ನು ಅಂತರಿಂದ್ರಿಯಗಳಿಗೆ ಸಂಬಂಧಿಸಿ ಆಚರಿಸಬೇಕಾಗುತ್ತದೆ. ಇದು ಎಲ್ಲ ಶಿವಶರಣರ ವೈಶಿಷ್ಟ್ಯವಾಗಿರುತ್ತದೆ. ಈ ಪ್ರಕಾರದ ಆಚರಣೆಯಿಂದ ಬಾಹ್ಯ ಇಂದ್ರಿಯಗಳ ಕಡೆಗೆ ಮನುಷ್ಯನಲ್ಲಿರುವ ಲೋಲುಪತೆಯು ಹೊರಟು ಹೋಗಿ ಕ್ರಮೇಣ ಅಂತರಿಂದ್ರಿಯಗಳು ಬಲಪಡುವವು. ಮತ್ತು ಅವುಗಳ ಸಹಾಯದಿಂದಲೇ ಮನುಷ್ಯನು ಲಿಂಗಾಂಗ ಸಾಮರಸ್ಯವನ್ನು ಹೊಂದಲು ಶಕ್ತನಾಗುತ್ತಾನೆ. ಶಿವಶರಣರು ಈ ತೆರದ ಆಚರಣೆಗೆ ತಮ್ಮ ಶಿವಾನುಭವದ ನಡೆಯಲ್ಲಿ ಮಹತ್ವವನ್ನು ಕೊಟ್ಟಿದ್ದಾರೆ. ಈ ಸಂಗತಿಯನ್ನು ನಾವು ಮಹಾದೇವಿಯಕ್ಕನ ವಚನಗಳು ಮಾತ್ರವಲ್ಲದೆ ಎಲ್ಲ ಶಿವಶರಣರ ಉಕ್ತಿಗಳಲ್ಲಿಯೂ ಕಾಣಬಹುದು. ಇದರಿಂದ ಮನುಷ್ಯನ ಮೇಲೆ ಕ್ರಿಯೆಗಳು ಪರಿಣಾಮ ಮಾಡಲಾರವು. ಈ ಸ್ಥಿತಿಯು ಒದಗಿದ ಕೂಡಲೆ ಜನನ ಮರಣಗಳು ಲಯವಾಗುತ್ತವೆ ಮತ್ತು ಬಯಲು ಸ್ಥಿತಿಯು ಪ್ರಾಪ್ತವಾಗುತ್ತದೆ. ಸಾಮರಸ್ಯ ಸ್ಥಿತಿಯನ್ನು ಕುರಿತು ಅವಳು ಒಂದು ವಚನದಲ್ಲಿ ಹೇಳಿರುವದೇನೆಂದರೆ:—

"ಕ್ರಿಯೆಗಳು ಮುಟ್ಟಲರಿಯವು. ನಿಮ್ಮನೆಂತು ಪೂಜಿಸುವೆ? ನಾದ ಬಿಂದುಗಳು ಮುಟ್ಟಲರಿಯವು. ನಿಮ್ಮನೆಂತು ಹಾಡುವೆ? ಕಾಯಮುಟ್ಟುವಡೆ ಕಾಣಬಾರದ ಘನವು- ನಿಮ್ಮನೆಂತು ಕರಸ್ಥಲದಲ್ಲಿ ಧರಿಸುವೆ? ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನೋಡಿ ನೋಡಿ ಸೈವೆರಗಾಗುತಿರ್ದೆನು"

ಈ ಸ್ಥಿತಿಯು ಪ್ರಾಪ್ತವಾಗಲು ಮನುಷ್ಯನು ಈ ಜಗತ್ತಿನಲ್ಲಿ ಇದ್ದರೂ ಅವನು ಅದರಲ್ಲಿ ಇಲ್ಲದಂತೆ ಇರುತ್ತಾನೆ. ಈತನು ನಿರ್ಮುಕ್ತನು, ಶರಣನು ಎಂದು ವಚನಕಾರರು ಹೇಳುತ್ತಾರೆ.

ಮಹಾದೇವಿಯಕ್ಕನು ಬಸವೇಶ್ವರನ ಮಂದಿರದಲ್ಲಿ ಇದ್ದಾಗ್ಗೆ ತಾನು ಹೇಗೆ ವೇಳೆಗಳೆಯುತ್ತಿದ್ದೆನೆಂಬುದನ್ನು ಕುರಿತು ಅವಳು ಕೆಲವು ಸುಂದರವಾದ ವಚನಗಳನ್ನು ರಚಿಸಿದ್ದಾಳೆ. ಅವುಗಳಲ್ಲಿ ಅವಳು ಹೇಳುವದೇನೆಂದರೆ:—

(೧) ಉದಯದಲೆದ್ದು ನಿಮ್ಮ ನೆನೆವೆನಯ್ಯ. ನಿಮ್ಮ ಬರವ ಹಾರುತಿರ್ಪೆನಯ್ಯ. ಹಸೆ ಹಂದರವನಿಕ್ಕಿ ನಿಮ್ಮಡಿಗಳಿಗೆಡೆಮಾಡಿಕೊಂಡಿಪ್ಪೆನಯ್ಯಾ, ಚನ್ನಮಲ್ಲಿಕಾರ್ಜುನಾ ನೀನಾವಾಗ ಬಂದಿಹೆ ಎಂದು.

(೨) ಹಗಲು ನಾಲ್ಕು ಜಾವ ನಿಮ್ಮ ಕಳವಳದಲ್ಲಿಪ್ಪೆ ನೋಡಯ್ಯ; ಇರುಳು ನಾಲ್ಕು ಜಾವ ನಿಮ್ಮ ವಿಕಳಾವಸ್ಥೆಯಲ್ಲಿಪ್ಪೆ ನೋಡಯ್ಯ. ಇರುಳು ಹಗಲು ನಿಮ್ಮ ಕಳವಳದಲ್ಲಿ ಮರೆದೊರಗಿದೆನಯ್ಯ ಚನ್ನಮಲ್ಲಿಕಾರ್ಜುನ ನಿಮ್ಮೊಲುಮೆ ನಟ್ಟು ಹಸಿವು ತೃಷೆ ನಿದ್ರೆಯ ಮರೆತೆನು.

ಈ ಪ್ರಕಾರ ಅವಳು ಲಿಂಗಸಂಧಾನದಲ್ಲಿರುತ್ತೇನೆಂದು ತನ್ನ ಈ ವಚನಗಳಲ್ಲಿ ಹೇಳಿದ್ದಾಳೆ. ಇದರಿಂದ ಅವಳು ಮಾನಸಿಕ ಉಚ್ಚ ಸ್ಥಿತಿಯ ಮೇಲ್ಮಟ್ಟನ್ನು ಹೊಂದಿದ್ದಳೆಂದು ತೋರಿಬರುತ್ತದೆ.

ಈ ಭಾವನೆಯನ್ನಿಟ್ಟುಕೊಂಡು ಅವಳು ತನ್ನ ಇಷ್ಟಲಿಂಗದಲ್ಲಿ ಲೋಲುಪಳಾಗುತ್ತಾಳೆ. ಇಷ್ಟಲಿಂಗದ ಧ್ಯಾನವಿಲ್ಲದೆ ಪ್ರಾಣಲಿಂಗ, ಭಾವಲಿಂಗಗಳು ಸಾಧಿಸಲಾರವೆಂದು ಶಿವಶರಣರ ವಿಚಾರಗಳಿರುತ್ತವೆ. ಮಹಾದೇವಿಯಕ್ಕನು ಈ ತತ್ವದಂತೆಯೇ ವರ್ತಿಸುತ್ತಾಳೆ. ಅವಳು ತನ್ನ ೧೫೩ನೇ ವಚನದಲ್ಲಿ ಹೇಳುವದೇನೆಂದರೆ:—,

"ಅಯ್ಯಾ, ದೂರದಲಿರ್ದಿಹೆ ಎಂದು ಬಾಯಾರಿ ಬಳಲುತ್ತಿರ್ದೆನಯ್ಯ ನಾನು. ಅಯ್ಯಾ ಸಾರಿ ಬಂದು ನೀನೆನ್ನ ಕರಸ್ಥಲದಲ್ಲಿ ಮೂರ್ತಿಗೊಂಡರೆ ಇನ್ನಾರತಿ ಎಲ್ಲವೂ ಲಿಂಗ. ಅಲಿ ನಿಮ್ಮಲ್ಲಿ ನಟ್ಟವು ನೋಡಯ್ಯ. ಚನ್ನಮಲ್ಲಿಕಾರ್ಜುನಯ್ಯ. ನಿಮ್ಮನೆನ್ನ ಕರಸ್ಥಲದಲ್ಲಿ ನೋಡಿ ನೋಡಿ ಕಂಗಳೇ ಪ್ರಾಣವಾಗಿರ್ದೆನಯ್ಯ.

ಇಷ್ಟಲಿಂಗದಲ್ಲಿ ಧ್ಯಾನಾಸಕ್ತನಾದಲ್ಲಿ ಪ್ರಾಣಲಿಂಗದಲ್ಲಿ ಹೇಗೆ ಅದು ರೂಪುಗೊಳ್ಳುತ್ತದೆಂಬುದನ್ನು ಮಹಾದೇವಿಯಕ್ಕನು ಇಲ್ಲಿ ಹೇಳಿದ್ದಾಳೆ. ಮುಂದೆ ಅವಳು ಪುನಃ ಹೇಳುವದೇನೆಂದರೆ:—

ಸೆಜ್ಜೆಯುಪ್ಪರಿಸಿ ಶಿವಲಿಂಗ ನೀನೆನ್ನ ಕರಸ್ಥಲಕ್ಕೆ ಬರೆ ಪ್ರಜ್ವಲಿಸಿ ತೊಳ ತೊಳಗಿದೆ. ಬೆಳಗುತ್ತಿಹ ಕಾಂತಿಯಲ್ಲಿ ಜಜ್ಝರಿಸಿ, ತನುಮನ ದೃಷ್ಟಿ ನಟ್ಟು ಲಿಂಗದಲ್ಲಿ ಜಜ್ಝರಿಸಿ ಸುರಿವ ಶಿವಸುಖ ರತಿಯೊಳೋಲಾಡುತ್ತ ಸಜ್ಜನ ಸದ್ಭಕ್ತಿ ರತಿಯೊಡನೆ ಕೂಡಿಯಾಡಿ ಲಜ್ಜೆಗೆಟ್ಟು ನಿಮ್ಮ ನೆರೆವೆ ಚನ್ನಮಲ್ಲಿಕಾರ್ಜುನ.

ಇಷ್ಟಲಿಂಗದಲ್ಲಿ ಧ್ಯಾನವನ್ನಿಟ್ಟಲ್ಲಿ ಮನಸ್ಸಿನಲ್ಲಿ ಯಾವ ಹೊಳಹು ಉಂಟಾಗುತ್ತದೆಂಬುದನ್ನು ಮಹಾದೇವಿಯಕ್ಕನು ತನ್ನ ಅನುಭವದಿಂದ ಇಲ್ಲಿ

ಹೇಳಿದ್ದಾಳೆ. ಭಕ್ತರು ಇದರ ರೀತಿಯನ್ನು ಸ್ವತಃ ಪ್ರಯೋಗದಲ್ಲಿ ಕಂಡು ಕಾಣಬೇಕು, ಎಂದು ನಾವು ಹೇಳದಿರಲಾರೆವು. ಇದರಿಂದ ಯಾವ ಪರಿಣಾಮವಾಗುವದೆಂಬುದನ್ನು ಮಹಾದೇವಿಯಕ್ಕನು ಕೆಳಗಿನ ವಚನಗಳಲ್ಲಿ ಹೇಳಿದ್ದಾಳೆ. ಅವಳು ಒಂದು ವಚನದಲ್ಲಿ ಹೇಳುವದೇನೆಂದರೆ:—

ಗಿರಿಯೊಳು ವನದೊಳು ಗಿಡಗಿಡದತ್ತದೇವ, ಎನ್ನ ದೇವ ಬಾರಯ್ಯ. ತೋರಯ್ಯ ನಿಮ್ಮ ಕರುಣವನೆಂದು ನಾನು ಅರಸುತ್ತ ಅಳಲುತ್ತ ಕಾಣದೆ ಸುಳಿದುಬಂದು ಕಂಡೆ ಶರಣರ ಸಂಗದಿಂದ. ಅರಸಿ ಹಿಡಿದಿಹೆನೆಂದು ನೀನಡಗುವ ಠಾವ ಹೇಳಾ ಚನ್ನಮಲ್ಲಿಕಾರ್ಜುನ. (ವಚನ ೧೪೯.)

ಮಹಾದೇವಿಯಕ್ಕನು ತನ್ನ ಪ್ರಾಣಲಿಂಗಾನುಸಂಧಾನದಿಂದ ಜಗತ್ತಿನಲಿ ಪರಮಾತ್ಮನು ತುಂಬಿಕೊಂಡಿರುವನೆಂದು ಭಾವವುಳ್ಳವಳಾಗಿ ತಾನು ನೋಡಿದ ವೃಕ್ಷ, ಪಶು, ಪಕ್ಷ್ಯಾದಿಗಳನ್ನು ದೇವರು ಎಲ್ಲಿದ್ದಾನೆಂಬುದನ್ನು ಅವಳು ಅವುಗಳಿಗೆ ಕೇಳುತ್ತಾಳೆ. ಇದು ಕೇವಲ ಕಾಲ್ಪನಿಕವಾದ ಸಂಗತಿಯಲ್ಲ, ಇದು ಅವಳಿಗೆ ಹಾಗೆ ನಿಜವಾಗಿ ತೋರುತ್ತಿದ್ದುದರಿಂದ ಅವಳು ಈ ರೀತಿ ಅವುಗಳಿಗೆ ಪ್ರಶ್ನೆಯನ್ನು ಮಾಡುತ್ತ ಸಂಚರಿಸುತ್ತಾಳೆ.

ಅವಳು ಒಂದು ಕಡೆಗೆ ಗಿಳಿಗಳ ಹಿಂಡನ್ನು ನೋಡುತ್ತಾಳೆ. ಮಾವಿನ ಮರ, ಕೋಗಿಲೆಗಳನ್ನು ನೋಡುತ್ತಾಳೆ. ಚೆಲುವಾದ ಬೆಳದಿಂಗಳನ್ನು ನೋಡುತ್ತಾಳೆ. ಅವುಗಳಲ್ಲಿರುವ ಸೌಂದರ್ಯವು ಪರಮಾತ್ಮನೆಂದು ಅವಳಿಗೆ ಭಾಸವಾಗಿ ಚನ್ನಮಲ್ಲಿಕಾರ್ಜುನನು ಎಲ್ಲಿದ್ದಾನೆಂದು ಅವುಗಳಿಗೆ ಅವಳು ಪ್ರಶ್ನೆ ಮಾಡುತ್ತಾಳೆ. ಅದು ಹೇಗೆಂದರೆ:—

ಅಳಿ ಸಂಕುಲವೇ, ಮಾಮರವೇ, ಬೆಳದಿಂಗಳೇ, ಕೋಗಿಲೆಯೇ ನಿಮ್ಮ ನಿಮ್ಮನೆಲ್ಲರನು ಒಂದ ಬೇಡುವೆನು, ಎನ್ನೊಡೆಯ ಚನ್ನಮಲ್ಲಿಕಾರ್ಜುನದೇವರ ಕಂಡರೆ ಕರೆದು ತೋರಿರೇ. (ವಚನ ೧೪೨).

ಚಿಲಿಮಿಲಿ ಎಂದೋದುವ ಗಿಳಿಗಳಿರಾ. ನೀವು ಕಾಣಿರೆ. ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ ನೀವು ಕಾಣಿರೆ. ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ, ನೀವು ಕಾಣಿರೆ, ಕೊಳನ ತಡಿಯೊಳಾಡುವ ಹಂಸೆಗಳಿರಾ ನೀವು ಕಾಣಿರೆ, ನೀವು ಕಾಣಿರೆ, ಗಿರಿಗಂಹರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ, ನೀವು ಕಾಣಿರೆ, ಚನ್ನಮಲ್ಲಿಕಾರ್ಜುನನೆಲ್ಲಿಹನೆಂದು ನೀವು ಹೇಳಿರೆ.

ಈ ಪ್ರಕಾರ ಮಹಾದೇವಿಯಕ್ಕನು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತ ಅವಳು ಒಂದು ವಚನದಲ್ಲಿ ನುಡಿದುದು ಏನೆಂದರೆ:— ಪರಮಾತ್ಮನಿಗೆ ಪ್ರಿಯಕರವಾದದ್ದೇ ಸುಖವು. ಅವನಿಗೆ ಬೇಡಾದದ್ದೇ ದುಃಖವು ಎಂದು ಹೇಳುತ್ತಾಳೆ. ಪರಮಾತ್ಮನಿಗೆ ಒಂದು ವೇಳೆ ನರಕವನ್ನು ಕಾಂಕ್ಷಿಸಿದರೆ, ಅದು ನರಕವಲ್ಲ, ಅದು ಮೋಕ್ಷವೆಂದು ಹೇಳುತ್ತಾಳೆ. ಒಂದು ವೇಳೆ ಮುಕ್ತಿಯೆಂಬಲ್ಲಿ ಪರಮಾತ್ಮನ ಜ್ಞಾನವಿರದಿದ್ದರೆ ಅದು ನರಕವೆಂದು ಹೇಳುತ್ತಾಳೆ. ಅವಳು ಸುಖ, ದುಃಖ, ನರಕ, ಮೋಕ್ಷ ಇವುಗಳ ವ್ಯಾಖ್ಯೆಯನ್ನು ಮಾಡಲಿಕ್ಕೆ ಹೋಗುವದಿಲ್ಲ. ಸದ್ಗುಣಿಯಾದ ಮತ್ತು ಶೀಲವಂತನಾದ ಮನುಷ್ಯನಿಗೆ ಸುಖದುಃಖಾದಿಗಳ ಸ್ಥಿತಿಯು ಸಹಜವಾಗಿ ಸ್ವಾಭಾವಿಕವಾಗಿ ತೋರಹತ್ತುತ್ತದೆ. ಯಾವುದು ಯೋಗ್ಯ, ಯಾವುದು ಅಯೋಗ್ಯ, ಎಂಬುದರ ತಿಳಿವಳಿಕೆಯು ಅವನಿಗೆ ಸ್ವಯಂ ಸ್ಫೂರ್ತಿಯಾಗಿ ಆಗಹತ್ತುತ್ತದೆ. ಅದಕ್ಕನುಗುಣವಾಗಿ ಅವನು ಆಚರಿಸುತ್ತಾನೆ. ಈ ಬಗ್ಗೆ ಇರುವ ಒಂದು ವಚನವು ಆವುದೆಂದರೆ:—

ನಿನ್ನರಿಕೆಯ ನರಕವೇ ಮೋಕ್ಷ ನೋಡಯ್ಯ. ನಿನ್ನನರಿಯದ ಮುಕ್ತಿಯೇ ನರಕ ಕಂಡಯ್ಯ. ನೀನೊಲ್ಲದ ದುಃಖವೇ ದುಃಖ ಕಂಡಯ್ಯ. ನೀನೊಲಿದ ದುಃಖವೇ ಪರಮ ಸುಖವು ಕಂಡಯ್ಯ. ಚನ್ನಮಲ್ಲಿಕಾರ್ಜುನಯ್ಯ ನೀ ಕಟ್ಟಿ ಕೆಡಹಿದ ಬಂಧನವೇ ನಿರ್ಬಂಧನವೆಂದಿಪ್ಪನು. (ವಚನ ೧೫೭)

ಈ ವರೆಗೆ ನಾವು ಮಹಾದೇವಿಯಕ್ಕನು ಚಿಕ್ಕಂದಿನಿಂದ ಹಿಡಿದು ಮಧ್ಯವಯಸ್ಕಳಾಗುವ ವರೆಗೆ ನಡೆದ ಸಂಗತಿಗಳನ್ನು ವಿವರಿಸಿದೆವು. ಇದರ ಮೇಲಿಂದ ಮಹಾದೇವಿಯಕ್ಕನು ಒಬ್ಬ ಉಚ್ಚ ತರಗತಿಯ ಶಿವಶರಣೆಯಾಗಿ ಪರಮಾತ್ಮನನ್ನು ಪ್ರಸನ್ನ ಮಾಡಿಕೊಂಡು ಅವನ ಪ್ರಕಾಶದಲ್ಲಿ ವರ್ತಿಸುವವಳಿದ್ದಾಳೆಂಬುದು ವಾಚಕರಿಗೆ ಗೋಚರವಾಗದೆ ಇರದು. ಆದರೆ ಅವಳು ತನಗೆ ಉಂಟಾದ ಜ್ಞಾನವನ್ನು ಅರಿಯದವರು ಸಹ ಅರಿಯಬೇಕೆಂದು ಇಚ್ಛಿಸಿ, ಸುಂದರವಾದ ನುಡಿಗಳಲ್ಲಿ ತನ್ನ ಅನುಭವವನ್ನು ಯಾವಾಗಲೂ ಹೇಳುತ್ತಾಳೆ. ಈ ಪ್ರಕಾರ ಕಾರ್ಯ ಮಾಡಿದ ಹೆಂಗಳೆಯರ ಸಂಖ್ಯೆಯು ನಾಡಿನಲ್ಲಿ ಅತ್ಯಲ್ಪವಾದುದೆಂದು ಹೇಳಬಹುದು. ಇದರಿಂದ ಮಹಾದೇವಿಯಕ್ಕನು ಶರಣ ಶರಣೆಯರೆಂಬ ನಭೋಮಂಡಳದಲ್ಲಿ ಪ್ರಕಾಶಿಸುತ್ತ ತನ್ನ ಪ್ರಕಾಶವನ್ನು ಪೃಥ್ವಿಯಲ್ಲೆಲ್ಲ ಹರಹುತ್ತ ತನ್ನ ಕಾಲಕ್ಕೆ ಮಾತ್ರವಲ್ಲ, ಶಾಶ್ವತ

ವಾಗಿ ನಾಡಿನಲ್ಲಿ ಬೆಳಗುತ್ತಿದ್ದಾಳೆ. ಆಕೆಯ ನುಡಿಗಳನ್ನು ಆಸ್ವಾದಿಸು ವವರು ಧನ್ಯರೆಂದು ತಿಳಿಯಲು ಯಾವ ಸಂದೇಹವೂ ಇರಲಾರದು.

ಈ ಪ್ರಕಾರ ಮಹಾದೇವಿಯಕ್ಕನು ವಚನಗಳನ್ನು ಮಾತ್ರವಲ್ಲದೆ ಸ್ವತಂತ್ರ ವಿಷಯಗಳ ಬಗ್ಗೆಯೂ ಕೂಡ ತನ್ನ ವಿಚಾರಗಳನ್ನು ಪ್ರಕಟ ಮಾಡಿದ್ದಾಳೆ. ಅವಳು ಸೃಷ್ಟಿಯ ನಿರ್ಮಾಣ ಮತ್ತು ಅದರ ಸ್ವರೂಪದ ಬಗ್ಗೆ ಒಂದು ದೀರ್ಘ ವಚನವನ್ನು ಹೇಳಿದ್ದಾಳೆ. ಮಹಾದೇವಿಯಕ್ಕನ "ಸೃಷ್ಟಿಯ ವಚನ" ವೆಂದು ಅದು ನಾಡಿನಲ್ಲಿ ಪ್ರಸಿದ್ಧವಾಗಿದೆ. ಈ ವಚ ನವನ್ನು ನಾವು ವಚನಶಾಸ್ತ್ರಸಾರ ಭಾಗ ೨. ಈ ಗ್ರಂಥದಲ್ಲಿ ಪ್ರಕಟ ಮಾಡಿದ್ದೇವೆ.

ಮಹಾದೇವಿಯಕ್ಕನು ಶಿವಶರಣೆಯರಲ್ಲಿ ಉಚ್ಚ ಸ್ಥಾನವನ್ನು ಹೊಂದಿ ಅವಳನ್ನು ಕುರಿತು ಮಾಡಿದ ಸ್ತೋತ್ರಗಳನ್ನು ವೀರಶೈವ ವಾಙ್ಮಯದಲ್ಲಿ ಅನೇಕವುಗಳನ್ನು ಕಾಣಬಹುದು. ಆಕೆಯ ವಿಷಯವಾಗಿ ಒಂದು ಸಾಂಗ ತ್ಯವೂ ಇದೆ. ಅದು ಲಲಿತವೂ ಸುಲಭವೂ ಇದ್ದು, ಅತ್ಯಂತ ಆದರ ಣೀಯವಾಗಿರುತ್ತದೆ.

ಈ ಪ್ರಕಾರ ಮಹಾದೇವಿಯಕ್ಕನು ಬಸವೇಶ್ವರನ ಗೃಹದಲ್ಲಿ ಕಾಲ ಕಳೆಯುತ್ತಿರಲು ಹರಳಯ್ಯ ಮಧುವಯ್ಯಗಳ ಪ್ರಸಂಗವು ಕಲ್ಯಾಣದಲ್ಲಿ ಒದಗಿ ಬಂದಿತು. ಅವರು ಅಂತರ್ಜಾತೀಯ ವಿವಾಹ ಜರುಗಿಸಿದ್ದರಿಂದ ಅವರು ಎಳೆಹೂಟೆ ಶಿಕ್ಷೆಯಿಂದ ಕ್ರೂರತನದಿಂದ ಕೊಲ್ಲಿಸಲ್ಪಟ್ಟರು. ಹೀಗೆ ಇಬ್ಬರು ಶಿವಶರಣರು ಬಿಜ್ಜಳನಿಂದ ಘಾತಿಸಲ್ಪಡಲಾಗಿ ಪುರಾಣ ಮತ ವಾದಿಗಳು ಸಂತೋಷಬಟ್ಟರು. ಶಿವಾನುಭವವನ್ನು ಹೀಯಾಳಿಸುತ್ತಿದ್ದ ಅನೇಕ ಧರ್ಮೀಯರು ಒಮ್ಮುಖವಾಗಿ ಶಿವಶರಣ ಶರಣೆಯರನ್ನು ಹಿಂಸಿ ಸುವ ಕಾರ್ಯಗಳನ್ನು ಪ್ರಾರಂಭಿಸಿದರು. ಇದರಿಂದ ಕಲ್ಯಾಣ ಪಟ್ಟಣದಲ್ಲಿ ಶಾಂತ ವಾತಾವರಣವು ಉಳಿಯದಂತೆ ಆಯಿತು. ಈ ಸ್ಥಿತಿಯುಂಟಾಗಲು ಶಿವಶರಣರು ತಮ್ಮ ಶಿವಾನುಭವದ ನಡೆಯಂತೆ ನಡೆಯುವದು ಮತ್ತು ಬಿಜ್ಜಳನ ರಾಜ್ಯದಲ್ಲಿ ತಾವು ಸುರಕ್ಷಿತವಾಗಿ ಇರುವದು ಅಶಕ್ಯವೆಂದು ಅವರಿಗೆ ತೋರಿತು. ಆದ್ದರಿಂದ ಬಸವೇಶ್ವರನು ಶಿವಶರಣರು ಕಲ್ಯಾಣ ದಲ್ಲಿ ಇರದೆ ತಮಗೆ ಯೋಗ್ಯ ಕಂಡ ಸುರಕ್ಷಿತ ಸ್ಥಳಗಳಿಗೆ ಹೋಗಿ ಗುಪ್ತವಾಗಿ ಅಥವಾ ಪ್ರಕಟವಾಗಿ ತಮ್ಮ ತಮ್ಮ ಆಚರಣೆಗಳನ್ನು ಅನು

ಸರಿಸಬೇಕೆಂದು ಸಾರಿದನು. ಹೀಗೆ ಸಾರಿ ತಾನು ಕಲ್ಯಾಣ ಪಟ್ಟಣವನ್ನು ಬಿಟ್ಟು ಕೃಷ್ಣಾ ಮತ್ತು ಮಲಾಪಹಾರೀ ನದಿಗಳು ಕೂಡಿದ ಕೂಡಲ ಸಂಗಮ ಕ್ಷೇತ್ರಕ್ಕೆ ತೆರಳಿ ಅಲ್ಲಿಯೇ ಇರಹತ್ತಿದನು.

ಹೀಗಾಗಲು ಕಲ್ಯಾಣದ ರಾಜ್ಯದಲ್ಲಿ ಭೀಕರ ಕದನಗಳು ನಡೆಯಹತ್ತಿದವು. ಕಲ್ಯಾಣದಲ್ಲಿದ್ದ ಶಿವಶರಣರು ತಮಗೆ ತಿಳಿದತ್ತ ಹೊರಟುಹೋಗಹತ್ತಿದರು. ಅಲ್ಲಿ ಉಳಿದ ಕೆಲವು ಶಿವಶರಣರು ಭದ್ರವಾದ ಸ್ಥಳದಲ್ಲಿದ್ದುಕೊಂಡು ಆತ್ಮಸಂರಕ್ಷಣೆಯಲ್ಲಿ ತೊಡಗಿದರು. ಈ ಕಾಲಕ್ಕೆ ಶಿವಶರಣರ ವಿರೋಧಿಗಳು ಬಹುಸಂಖ್ಯಾಕರಾಗಿದ್ದರು. ಅವರಿಗೆ ರಾಜನ ಬೆಂಬಲವಿದ್ದದರಿಂದ ಶಿವಶರಣರನ್ನು ಹಿಂಸಿಸುತ್ತ ಅವರು ನಾಡಿನಲ್ಲಿ ಸಂಚರಿಸಹತ್ತಿದರು.

ಈ ಸ್ಥಿತಿಯಲ್ಲಿ ಅಬಲೆಯಾದ ಮಹಾದೇವಿಯಕ್ಕನು ಯಾವ ಮಾರ್ಗವನ್ನು ಸ್ವೀಕರಿಸಬೇಕೆಂಬುದು ಅವಳಿಗೆ ತಿಳಿಯದಾಯಿತು. ಅವಳು ತನ್ನ ತಾಯಿ ತಂದೆಗಳ ಗ್ರಾಮವಾದ ಬನವಾಸಿಗೆ ತಿರುಗಿ ಹೋಗುವದು ಶಕ್ಯವಿರಲಿಲ್ಲ. ಅವಳಂಥ ಪ್ರಸಿದ್ಧಿಗೆ ಬಂದ ಶರಣೆಯು ಕಲ್ಯಾಣದಲ್ಲಿ ಸುರಕ್ಷಿತವಾಗಿ ಇರುವ ಸಂಭವವೂ ಇದ್ದಿದ್ದಿಲ್ಲ. ಆದ್ದರಿಂದ ಅವಳು ಬಸವೇಶ್ವರನಂತೆ ದೇಶ ತ್ಯಾಗಮಾಡಬೇಕೆಂದು ನಿಶ್ಚಯಿಸಿದಳು.

ಈ ಕಾಲದಲ್ಲಿ ಕಲ್ಯಾಣ ಪಟ್ಟಣದ ಸುತ್ತಲೂ ಅರಣ್ಯಗಳೂ, ಗುಹೆಗಳೂ ಹೇರಳವಾಗಿ ಪಸರಿಸಿದ್ದವು. ಅಲ್ಲಿಗೆ ಬಹುಜನರು ಹೋಗಿ ಅವಿತುಕೊಂಡು ಕಾಲಕಳೆಯಹತ್ತಿದರು. ಅವುಗಿ ದೇವಯ್ಯನು ಭೀಮಾತೀರದಲ್ಲಿ ಇರುವ ಈಗಿನ ಪ.ಳುಜ ಗ್ರಾಮಕ್ಕೆ ತೆರಳಿದನು. ಹೀಗೆ ಬಹುಜನರು ತಮ್ಮ ತಮ್ಮ ಪರಿಚಿತ ಸ್ಥಳಗಳಿಗೆ ಹೋಗಿ ಗುಪ್ತವಾಗಿ ವಾಸಮಾಡಹತ್ತಿದರು. ಕೂಡಲ ಸಂಗಮ ಕ್ಷೇತ್ರವು ಒಂದು ಪುಣ್ಯಸ್ಥಳವು. ಇಂಥ ಸ್ಥಳದಲ್ಲಿ ಹೋದರೆ ತಮಗೆ ಹಿಂಸೆಯಾಗಲಾರವೆಂದು ಬಹುಜನರು ತಿಳಿದು ದೇವಾಲಯಗಳಿದ್ದ ಸ್ಥಳಗಳಿಗೆ ತೆರಳಿದರು. ಚನ್ನ ಬಸವೇಶ್ವರ, ನೀಲಾಂಬಿಕೆ, ನಾಗಲಾಂಬಿಕೆ, ಮಹಾದೇವಿಯಕ್ಕಗಳು ಬಸವೇಶ್ವರನು ಇರುತ್ತಿದ್ದ ಮಂದಿರವು ಭದ್ರವಾದದ್ದೆಂದು ತಿಳಿದು ಅಲ್ಲಿಯೇ ಇರಹತ್ತಿದರು. ಆದರೆ ಇದು ಬಹಳ ದಿವಸ ನಡೆಯಲಿಲ್ಲ. ಬೇರೆ ಕೆಲವರು ಬಹುದೂರವಿರುವ ಅರಣ್ಯ ಪ್ರದೇಶಗಳಿಗೆ ಹೊರಟು ಹೋಗಹತ್ತಿದರು. ಶ್ರೀಶೈಲ

ಪ್ರಾಂತವು ಕಲ್ಯಾಣದಿಂದ ಬಹುದೂರದಲ್ಲಿದ್ದು ಅದು ಪರರಾಜರ ಅಧೀನ ದಲ್ಲಿತ್ತು. ಆದ್ದರಿಂದ ಸಾವಿರಾರು ಜನ ಶಿವಶರಣರು ತಮ್ಮ ಸುರಕ್ಷಿತೆ ಗೋಸ್ಕರ ಈ ಪ್ರಾಂತದ ಕಡೆಗೆ ಹೋಗಿ ವಾಸಮಾಡಹತ್ತಿದರು. ಇಲ್ಲಿ ಒಂದು ಪುರಾತನ ಸಿಂಹಾಸನ ಮಠವು ಇದ್ದು, ಇದರ ಆಶ್ರಯದಲ್ಲಿ ಇರತೊಡಗಿದರು. ಅಲ್ಲಿ ಇದ್ದವರು ಶಸ್ತ್ರಾಸ್ತ್ರಗಳಿಂದ ಸುಸಜ್ಜಿತರಾಗಿ ಸುಸಂಘಟಿತರಾಗಿ ಆತ್ಮಸಂರಕ್ಷಣೆಯಲ್ಲಿ ತೊಡಗಿದವರಾಗಿದ್ದರು. ಆದ್ದರಿಂದ ಬಹುಜನ ಶಿವಶರಣರು ಈ ಸ್ಥಾನಕ್ಕೆಯೇ ಬರುವವರಾದರು.

ಅಲ್ಲಮಪ್ರಭುವು ಒಬ್ಬ ಪ್ರಸಿದ್ಧ ವ್ಯಕ್ತಿಯು. ಅವನೂ ಮಹಾದೇವಿ ಯಕ್ಕನೂ ಇಲ್ಲಿಗೆ ಬಂದು ದೇವಸ್ಥಾನಕ್ಕೆ ಸಮೀಪವಾಗಿ ಕೆಳಗಡೆ ಕೃಷ್ಣಾ ನದಿಯು ಹರಿಯುತ್ತಿದ್ದು ಅಲ್ಲಿ ಅದು ಬಹಳ ಆಳವಾಗಿದೆ. ಅದರ ಆಚೆಯ ದಂಡೆಯಲ್ಲಿ ಕದಳೀ ಬನವೆಂದು ಒಂದು ನಿಬಿಡವಾದ ಅರಣ್ಯಪ್ರದೇಶವಿದೆ. ಈ ಸ್ಥಾನವು ಸುರಕ್ಷಿತಕ್ಕೋಸ್ಕರ ಮಾತ್ರವಲ್ಲ, ತಮ್ಮ ಶಿವಾನುಭವ ಆಚರ ಣೆಗೋಸ್ಕರ ಬಹಳ ಅನುಕೂಲವೆಂದು ಅಲ್ಲಮಪ್ರಭು ಮಹಾದೇವಿಯಕ್ಕಗ ಳಿಗೆ ತೋರಿತು. ಆದ್ದರಿಂದ ಅವರಿಬ್ಬರು ಈ ವನವನ್ನು ಪ್ರವೇಶ ಮಾಡಿ ಅಲ್ಲಿ ಇರತೊಡಗಿದರು. ಅವರು ಅಲ್ಲಿ ಎಷ್ಟು ದಿನ ಕಾಲಕಳೆದರೆಂಬುದು ಗೊತ್ತಾಗಿರುವದಿಲ್ಲ. ಆದರೆ ಅಲ್ಲಿಗೆ ಹೋದಬಳಿಕ ಅವರು ಎಂದೂ ಹಿಂದಿರುಗಿ ಬರಲಿಲ್ಲೆಂಬುದು ನಿಶ್ಚಯವು. ಅವರು ಅಲ್ಲಿಯೇ ಸಮಾಧಿಸ್ಥ ರಾದರೆಂದು ನಮಗೆ ತೋರುತ್ತದೆ.

ಈ ಪ್ರಕಾರ ಮಹಾದೇವಿಯಕ್ಕನ ಚರಿತ್ರೆ ಇರುತ್ತದೆ. ಅವಳು ಅತ್ಯಂತ ಪವಿತ್ರ ಜೀವಿಯಾಗಿದ್ದಾಳೆ. ಅವಳು ತನ್ನ ಜೀವಿತಾವಧಿಯಲ್ಲಿ ಉಚ್ಚ ಶಿವಾನುಭವಿ ಎಂದೆನಿಸಿಕೊಂಡು ಕಾಲಕಳೆದಳು. ಆಕೆಯ ಚರಿತ್ರೆಯು ಬಹುಜನರ ಲಕ್ಷ್ಯವನ್ನು ಸ್ವಾಭಾವಿಕವಾಗಿ ಎಳೆದಿರುತ್ತದೆ. ಅವಳ ವಚನ ಗಳು ಆಕೆಯ ಹೆಸರನ್ನು ನಿರಂತರವಾಗಿ ಉಳಿಸಿರುತ್ತವೆ. ಆಕೆಯು ಒಬ್ಬ ಳಾದರೆ ಸ್ತ್ರೀಯಳೆಂದೆನಿಸಿಕೊಂಡು ವೈರಾಗ್ಯಮೂರ್ತಿಯಾಗಿ ಶಿವಶರಣರಲ್ಲಿ ಹೆಸರುವಾಸಿಯಾಗಿದ್ದಾಳೆ.

————

## ೩೧. ಶಂಕಿತೊಂಡಿ

ಶಂಕಿತೊಂಡಿಯು ದನಗಳನ್ನು ಕಾಯುವ ಕಾಯಕವನ್ನು ಮಾಡುತ್ತಿದ್ದನು. ಅವನು ಪಟ್ಟಣದಲ್ಲಿಯ ದನಗಳನ್ನು ಕೂಲಿಗೆ ತೆಗೆದುಕೊಂಡು ಅಡವಿಗೆ ಹೋಗುವನು. ಇದರಿಂದ ಬಂದ ಕೂಲಿಯ ಮೇಲೆ ಅವನು ತನ್ನ ಉಪಜೀವನವನ್ನು ಸಾಗಿಸುತ್ತಿದ್ದನು. ಅವನು ಇನ್ನೂ ಬಾಲಕನು. ಅವನು ಅಡವಿಯಲ್ಲಿದ್ದಾಗ್ಗೆ ಅವನೂ ದನ ಕಾಯುವ ಬೇರೆ ಬಾಲಕರೂ ಗುಂಪಾಗಿ ಕೂಡಿಕೊಂಡು ಚಂಡು ಫಣಿ ಮೊದಲಾದ ಆಟಗಳನ್ನು ಆಡುತ್ತ ವೇಳೆಗಳೆಯುವರು. ಹೀಗಿರಲು ಒಂದು ದಿನ ಅವರೆಲ್ಲರು 'ಶಂಕರಲಿಂಗನ ಆಟ' ವನ್ನಾಡಬೇಕೆಂದು ಗೊತ್ತುಪಡಿಸಿಕೊಂಡು ಒಂದು ಗುಡಿಯನ್ನು ಕಟ್ಟಲುದ್ಯೋಗಿಸಿದರು. ಅವರು ಅಲ್ಲಲ್ಲಿ ಬಿದ್ದಿದ್ದ ಕಾಡುಗಲ್ಲುಗಳನ್ನು ಕೂಡಿಸಿ ಅವುಗಳಿಂದ ಒಂದು ಚಿಕ್ಕ ಗುಡಿಯನ್ನು ಕಟ್ಟಿದರು. ಒಂದು ಮಾಟವಾದ ಕಲ್ಲನ್ನು ತಂದು ಅದು 'ಶಂಕರಲಿಂಗ' ಗುಡಿಯಲ್ಲಿ ಪ್ರತಿಷ್ಠಾಪಿಸಿದರು. ಆ ಮೇಲೆ ಅವರು ಅದಕ್ಕೆ ಮಜ್ಜನಕ್ಕೆರೆದರು. ಸೇಡಿಗಲ್ಲನ್ನು ತಂದು ಅದನ್ನು ಪುಡಿಮಾಡಿ ಸೋಸಿ ಅದು ಭಸಿತವೆಂದು ದೇವರಿಗೆ ಹೂಸಿದರು. ತಾವೂ ಹೂಸಿಕೊಂಡರು. ಕಾಡ ಪತ್ರಿಗಳನ್ನೂ ಹೂವುಗಳನ್ನೂ ತಂದು ದೇವರಿಗೆ ಏರಿಸಿದರು. ತಾವು ಮನೆಯಿಂದ ತಂದಿದ್ದ ಕಜ್ಜಾಯಗಳನ್ನು ಲಿಂಗಕ್ಕೆ ಅರ್ಪಿಸಿ ಅವುಗಳನ್ನು ಪ್ರಸಾದವೆಂದು ಭುಂಜಿಸಿದರು. ಹೀಗೆ ಅವರು ಅತ್ಯಂತ ಭಕ್ತಿಭಾವವುಳ್ಳವರಾಗಿ ತಮ್ಮ ಪೂಜೆಯನ್ನು ಮುಗಿಸುವಷ್ಟರಲ್ಲಿ ಅವರು ಕಾಯುತ್ತಿದ್ದ ದನಗಳಾವವೂ ಅಡವಿಯಲ್ಲಿ ಕಾಣದಾದವು. ಅವು ಎಲ್ಲಿಯೋ ಹೋಗಿಬಿಟ್ಟಿದ್ದವು. ಆಗ ಅವರು ಬಹಳ ಗಾಬರಿಯಾದರು. ನಾಲ್ಕೂ ದಿಕ್ಕಿಗೆ ಹೋಗಿ ಅವುಗಳನ್ನು ಹುಡುಕಾಡಹತ್ತಿದರು. ಆದರೆ ಅವು ಎಲ್ಲಿಯೂ ಸಿಕ್ಕಲಿಲ್ಲ. ಹೀಗೆ ಬಾಲಕರೆಲ್ಲ ಹತ್ತು ತಾಸುಗಳ ವರೆಗೆ ಅಡವಿಯಲ್ಲೆಲ್ಲ ಅವುಗಳನ್ನು ಹುಡಿಕಿ ದಣಿದರು. ಆಗ ಅವರು ದನಗಳನ್ನು ಯಾರೋ ಚೋರರು ಒಯ್ದರೆಂದು ತಿಳಿದು ಅತ್ಯಂತ ದುಃಖದಲ್ಲಿ ಮುಳುಗಿ ರೋದನ ಮಾಡಹತ್ತಿದರು. ತಮ್ಮ ತಾಯಿತಂದೆಗಳೂ ದನಗಳ ಒಡೆಯರೂ ಬಹಳ ರೋಷವುಳ್ಳವರಾಗುವರೆಂದು ಭಯಭೀತರಾದರು. ಆಗ ಅವರೆಲ್ಲರೂ ಆಲೋಚಿಸಿ ತಮ್ಮನ್ನು ಕಾಯಬೇಕೆಂದು ದೇವರಿಗೆ ಮೊರೆಹೋಗಬೇಕೆಂದು ಗೊತ್ತುಪಡಿಸಿಕೊಂಡರು.

ಆಗ ಅವರು ತಾವು ಪ್ರತಿಷ್ಠಿಸಿದ ಶಂಕರಲಿಂಗನ ಮುಂದೆ ಬಂದು ನಿಂತು ದೇವರಿಗೆ ಅಡ್ಡ ಬಿದ್ದು— ದೇವರೇ, ಪಶುಗಳು ನಮಗೆ ದೊರೆತರೆ ನಾವು ನಿನಗೆ ಹಾಲು, ಮೊಸರು, ಬೆಣ್ಣೆಗಳನ್ನು ಅರ್ಪಿಸುವೆವು, ಎಂದು ಬೇಡಿ ಕೊಂಡರು. ಆದರೆ ತೊಂಡಿಯು ದೇವರಿಗೆ ನಾನು ಬಡವನು. ನಾನೇನು ನಿನಗೆ ಕೊಡಲಿ? ನನಗೆ ಗೋವುಗಳಿಲ್ಲ. ಗೋವುಗಳಿದ್ದವರು ಬೆಣ್ಣೆಯನ್ನು ಅರ್ಪಿಸುವೆವೆಂದು ಹೇಳಿದರು ಹೀಗೆ ಅನ್ನುವಷ್ಟರಲ್ಲಿ ಅವನಿಗೆ ಒಂದು ಯೋಚನೆಯು ಬಂದು- ದೇವರೇ, ನಾನು ನಿನ್ನಗುಡಿಯ ಸಲುವಾಗಿ ದಿನಾಲು ಮೂರು ಕಲ್ಲುಗಳನ್ನು ತಂದು ನಿನಗರ್ಪಿಸುವೆನು. ಇದೇ ನನ್ನ ವ್ರತವು ಎಂದು ಹೇಳಿಕೊಂಡನು. ಆಮೇಲೆ ಬಾಲಕರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು. ಬಾಲಕರ ಈ ಮೊರೆಯು ಪರಮಾತ್ಮನಿಗೆ ಕೇಳಿಸಿತು. ಯಾಕಂದರೆ ಅವರು ಮನೆ ಮುಟ್ಟುವಷ್ಟರಲ್ಲಿಯೇ ಕಳೆದು ಹೋಗಿದ್ದ ದನ ಕರುಗಳೆಲ್ಲವು ತಮ್ಮ ತಮ್ಮ ಮನೆಗಳಿಗೆ ಬಂದು ಮುಟ್ಟಿದ್ದವು. ಆಗ ಅವರು ಹರುಷ ಪಟ್ಟಿದ್ದಕ್ಕೆ ಎಣೆ ಇಲ್ಲ. ಅವರು ಮರುದಿನ ತಾವು ದೇವರಿಗೆ ಬೇಡಿ ಕೊಂಡಂತೆ ಶಂಕರಲಿಂಗನ ಗುಡಿಗೆ ಬಂದು ತುಪ್ಪ, ಬೆಣ್ಣೆ, ಹಾಲನ್ನು ಅರ್ಪಿಸಿ ನೈವೇದ್ಯವನ್ನು ಮಾಡಿದರು.

ಆದರೆ ಆ ದಿನ ಶಂಕಿ ತೊಂಡಿಗೆ ಅವರೊಂದಿಗೆ ಗುಡಿಗೆ ಹೋಗು ವದು ಆಗಲಿಲ್ಲ. ಅವನಿಗೆ ಜ್ವರಗಳು ಬಂದಿದ್ದರಿಂದ ಅವನು ಹೋಗ ಲಿಲ್ಲ. ಅವು ಚಳಿ ಜ್ವರಗಳಿದ್ದದರಿಂದ ಎರಡು ತಿಂಗಳವರೆಗೆ ಹಾಗೆಯೇ ತನ್ನ ಮನೆಯಲ್ಲಿ ಮಲಗಿ ಬಿಟ್ಟನು. ಮುಂದೆ ಜ್ವರಗಳು ನಿಂತ ಬಳಿಕ ಅವನು ತನ್ನ ದನ ಕರುಗಳನ್ನು ಹೊಡೆದುಕೊಂಡು ಅಡವಿಯಲ್ಲಿ ಬರುವಾಗ- ನಾನು ಎಂಥ ಪಾಪಿಷ್ಟನು! ನಾನು ಬೇಡಿ ಕೊಂಡಂತೆ ದೇವರಿಗೆ ಕಲ್ಲುಗ ಳನ್ನು ಅರ್ಪಿಸುವದು ನನ್ನಿಂದ ಆಗಲಿಲ್ಲ. ನನ್ನ ವ್ರತವು ತಪ್ಪಿತು, ಎಂದು ದುಃಖಿಸಹತ್ತಿದನು. ಆಗ ಅವನಲ್ಲಿ ಒಂದು ಯೋಚನೆಯು ಬಂದು— ನಾನು ದಿನಾಲು ಮೂರು ಕಲ್ಲುಗಳನ್ನು ಆಯಬೇಕಾಗಿದ್ದದರಿಂದ ಎರಡು ತಿಂಗಳವರೆಗೆ ಕೂಡಿಸಬೇಕಾದವುಗಳನ್ನೆಲ್ಲ ಈ ದಿನವೇ ನಾನು ಒಟ್ಟಾಗಿ ಸೇರಿಸಿ ಅವುಗಳನ್ನು ದೇವರಿಗೆ ಅರ್ಪಿಸುವೆನು ಎಂದು ನಿಶ್ಚಯಿಸಿ ಪರಮಾ ತ್ಮನಿಗೆ ಅರ್ಪಣವೆಂಬ ಭಾವವು ತನ್ನಲ್ಲಿ ಒಲಿದಿರಲಾಗಿ ಒಂದೊಂದು ಕಲ್ಲನ್ನು ಅವನು ಆಯುತ್ತ ಮೂರು - ಅರವತ್ತು ಅಂದರೆ ೧೮೦ ಕಲ್ಲುಗ ಳನ್ನು ಕೂಡಿಸಿದನು. ಆ ಮೇಲೆ ಅವನು ಅವುಗಳನ್ನು ಒಂದು ಬಂಡಿ

ಯಲ್ಲಿ ಹೇರಿಕೊಂಡು ಆ ಬಂಡಿಯನ್ನು ಶಂಕರಲಿಂಗನ ಗುಡಿಯ ಮುಂದೆ ತಂದು ನಿಲ್ಲಿಸಿದನು. ಆ ಮೇಲೆ ಅವನು ಒಂದೊಂದು ಕಲ್ಲನ್ನು ಎಣಿಸುತ್ತ ಅವುಗಳನ್ನು ಗುಡಿಯ ಬದಿಯಲ್ಲಿ ಒಟ್ಟಿ ಹತ್ತಿದನು. ಆದರೆ ಅವುಗಳನ್ನು ಎಣಿಸುವಲ್ಲಿ ಒಂದು ಕಲ್ಲು ಕಡಿಮೆಯಾಗಿದ್ದು ತೋರಿ ಬಂದಿತು. ಆಗ ಶಂಕಿ ತೊಂಡಿಯು ಮನದಲ್ಲಿ—ನಾನು ಏನು ಮಾಡಲಿ? ಪರಮಾತ್ಮನಿಗೋಸ್ಕರ ಕಾಯ್ದಿಟ್ಟ ಒಂದು ಕಲ್ಲು ಕಳೆದು ಹೋಯಿತು. ನಾನು ಮಾಡಬೇಕಾಗಿದ್ದ ದೇವರ ವ್ರತವು ತಪ್ಪಿತು, ಏನು ಮಾಡಲಿ ಎಂದು ಅನ್ನುತ್ತಿರಲು ಕಡಿಮೆ ಬಿದ್ದ ಈ ಕಲ್ಲಿನ ಬದಲು ನನ್ನ ಶಿರಸ್ಸನ್ನೇ ಕತ್ತರಿಸಿ ಪರಮಾತ್ಮನಿಗೆ ಅರ್ಪಣ ಮಾಡಬೇಕೆಂಬ ಯೋಚನೆಯು ಅವನಲ್ಲಿ ಬಂದು ತನ್ನ ಕತ್ತನ್ನು ಕತ್ತರಿಸಲು ಸಿದ್ಧನಾದನು! ಕತ್ತರಿಸುವಷ್ಟರಲ್ಲಿಯೇ ಪರಮಾತ್ಮನು ಅವನ ನಿಚ್ಚಟವಾದ ಭಕ್ತಿಭಾವಕ್ಕೆ ಮೆಚ್ಚಿ ಅವನಿಗೆ ಪ್ರತ್ಯಕ್ಷನಾದನು. ಮತ್ತು ಶಂಕಿ ತೊಂಡಿಗೆ- 'ಎಲೋ ನಿಲ್ಲು, ನಿಲ್ಲು, ನಿನ್ನ ಕತ್ತನ್ನು ಕತ್ತರಿಸಬೇಡ. ನಿನ್ನ ಕಲ್ಲು ದಾರಿಯಲ್ಲಿಯೇ ಮಲೆಯೊಳಗೆ ಬಿದ್ದಿದೆ. ಅದು ಕಳೆದಿಲ್ಲ. ನಿನ್ನ ಭಕ್ತಿಗೆ ಮೆಚ್ಚಿದೆನು.' ಎಂದು ಹೇಳಿದನು. ಹೀಗೆ ಹೇಳಹೇಳುತ್ತಿರುವಷ್ಟರಲ್ಲಿ ಶಂಕಿ ತೊಂಡಿಯು ತನ್ನೆದುರಿಗೆ ನಿಂತ ಪರಮಾತ್ಮನಲ್ಲಿಯೇ ಲಯವಾಗಿ ಹೋದನು. ಪರಮಾತ್ಮನು ಜಗತ್ತಿನಲ್ಲೆಲ್ಲ ವ್ಯಾಪಿಸಿರುತ್ತಾನೆಂದು ಶಿವಾನುಭವವು ಹೇಳುತ್ತದೆ. ಆದ್ದರಿಂದ ಅವನನ್ನು ನಂಬಿ ಜನರು ಎಲ್ಲಿ ಪೂಜಿಸುತ್ತಾರೋ ಅಲ್ಲಿಯೇ ಅವನು ತಲೆದೋರುತ್ತಾನೆ. ಚಿಕ್ಕ ಮಕ್ಕಳಲ್ಲಿ ವಿಶ್ವಾಸವಿರುತ್ತದೆ. ಅವು ತಮ್ಮ ಆಟಿಕೆಯ ಬೊಂಬೆಗಳು ನಿಜವಾದವುಗಳೆಂತಲೇ ಭಾವಿಸಿ ಅವುಗಳೊಡನೆ ವರ್ತಿಸುತ್ತವೆ. ಆದ್ದರಿಂದ ಕೋಲಂಬೆಯ ಹುಲ್ಲು ಗುಡಿಸಲು ಅವಳಿಗೆ ನಿಜವಾದ ದೇವಾಲಯವಾಯಿತು. ದನ ಕಾಯುವ ಹುಡುಗರು ಸ್ಥಾಪಿಸಿದ ಲಿಂಗವು ಅವರಿಗೆ ಅದೇ ನಿಜವಾದ ಲಿಂಗವಾಯಿತು. ಇಂಥ ದೇವಾಲಯಕ್ಕೋಸ್ಕರ ಕೂಡಿಸಿದ ಕಲ್ಲುಗಳು ಶಂಕಿ ತೊಂಡಿಗೆ ಪವಿತ್ರವೆನಿಸಿದವು. ಅದರಲ್ಲೊಂದು ಕಳೆದು ಹೋಗಲು ಅದರ ಸ್ಥಳದಲ್ಲಿ ಅಲ್ಲಿಯೇ ಬಿದ್ದ ಇನ್ನೊಂದು ಕಲ್ಲನ್ನು ಆರಿಸಿ ಅವನು ತೆಗೆದು ಕೊಳ್ಳಲಿಲ್ಲ. ಅವನು ತನ್ನ ಕತ್ತನ್ನು ಕೊಡಲು ಸಿದ್ಧನಾದನು. ಈ ಚಿಕ್ಕ ಮಕ್ಕಳು ಹೀಗೆ ವಿಶ್ವಾಸ ಬಲಿದವರಾಗಿ ವರ್ತಿಸಿದ್ದರಿಂದ ಪರಮಾತ್ಮನು ಅವರ ಮನದಂತೆ ಅವರಿಗೆ ತಲೆದೋ

ರೀನು. ಮಕ್ಕಳಲ್ಲಿರುವ ಇಂಥ ವಿಶ್ವಾಸವು ಬಹು ಅಗಾಧವಾದದ್ದು. ದೊಡ್ಡವರಾದರೂ ಕೂಡ ಮಕ್ಕಳಂತೆಯೇ ಪರಮಾತ್ಮನಿಗೋಸ್ಕರ ಪೂರ್ಣ ವಿಶ್ವಾಸವನ್ನು ತಾಳಿದಲ್ಲಿ ಅದು ಉಚ್ಚ ತರದ ಭಕ್ತಿ ಎನಿಸುತ್ತದೆ. ಇದು ಕೋಲಂಬೆಯು ಮತ್ತು ಶಂಕಿ ತೊಂಡಿಯು ಕಥೆಗಳಿಂದ ಚನ್ನಾಗಿ ವ್ಯಕ್ತವಾಗುತ್ತದೆ.

---

## ೩೨. ಕಲಾವತಿ.

ಕಾಶೀಕ್ಷೇತ್ರವು ವಿಶ್ವೇಶ್ವರನ ಸ್ಥಾನವಾಗಿದ್ದು ಅಲ್ಲಿ ಶಿವಭಕ್ತಿಯುತರಾದ ಅನೇಕ ಶಿವಶರಣರು ಯಾವಾಗಲೂ ವಾಸಮಾಡುತ್ತಿದ್ದರು. ಕಾಶೀರಾಜನಾದರೂ ಶಿವಭಕ್ತಿಯುಳ್ಳವನಾಗಿ ಧರ್ಮದಿಂದ ರಾಜ್ಯಪರಿಪಾಲನೆ ಮಾಡುವವನಾಗಿದ್ದನು. ಶಿವಶರಣರಲ್ಲಿ ಅನೇಕರು ಕಾಶೀಪಟ್ಟಣದಲ್ಲಿ ಅಭ್ಯಾಸ ಮಾಡಿ ಶಿವಾನುಭವ ಜ್ಞಾನವನ್ನು ಚನ್ನಾಗಿ ಹೊಂದಿದ್ದು ತಿಳಿದುಬರುತ್ತದೆ. ಅವರಲ್ಲಿ ಹಲವರು ದಕ್ಷಿಣ ದೇಶಕ್ಕೆ ಬಂದು ಹೆಸರುವಾಸಿಗಳಾದದ್ದು ಕಂಡು ಬರುತ್ತದೆ.

ಈ ಕಾಲದಲ್ಲಿ ಕಾಶೀರಾಜನ ಮಗಳು ಕಲಾವತಿ ಎಂಬ ಹೆಸರಿನವಳಿದ್ದು ಅವಳಾದರೂ ತಂದೆಯಂತೆ ಶಿವಭಕ್ತಿಯುಳ್ಳವಳಾಗಿದ್ದಳು. ಅವಳು ಒಬ್ಬ ಶಿವಾನುಭವಿಯಿಂದ ಪಂಚಾಕ್ಷರೀ ಮಂತ್ರದ ಉಪದೇಶವನ್ನು ಹೊಂದಿ ಅದರ ಪ್ರಭಾವದಿಂದ ಆಚರಿಸುವವಳಾಗಿದ್ದಳು.

ಹೀಗಿರುವಲ್ಲಿ ದಕ್ಷಿಣದೇಶದಲ್ಲಿ ಶಿವಭಕ್ತರಾದ ಪಾಂಡ್ಯ ವಂಶದ ರಾಜರು ರಾಜ್ಯನಾಳುತ್ತಿದ್ದರು. ಅವರಲ್ಲಿ ದಾಶೋಹರಾಯನು ಈ ಕಾಲದಲ್ಲಿ ಆಳುತ್ತಿದ್ದು ಅವನಿಗೆ ಕಾಶೀರಾಜನು ತನ್ನ ಮಗಳಾದ ಕಲಾವತಿಯನ್ನು ಕೊಟ್ಟು ಲಗ್ನ ಮಾಡಿದನು.

ಲಗ್ನವಾದ ಬಳಿಕ ಉಭಯ ಸತಿಪತಿಗಳು ಏಕಾಂತದಲ್ಲಿರುವಾಗ ಕಲಾವತಿಯು ಗಂಡನನ್ನು ಬಿಟ್ಟು ಬೇರೆ ಕಡೆಗೆ ಮಲಗಲಾಗಿ ಹೀಗೇಕೆಂದು ಅವನು ಅವಳಿಗೆ ಕೇಳಲು ಕಲಾವತಿಯು ನಿನಗೆ ಪಂಚಾಕ್ಷರೀ ಮಂತ್ರೋಪ

ದೇಶವಿಲ್ಲ. ನಾನು ಈ ಮಹಾಮಂತ್ರದ ಉಪದೇಶವನ್ನು ಹೊಂದಿದ್ದೇನೆ. ಆದ್ದರಿಂದ ನಾನು ಇತರರನ್ನು ಸ್ಪರ್ಶಿಸ ಕೂಡದೆಂಬ ನಿಯಮವಿದೆ ಎಂದೆನ್ನಲು, ರಾಜನು ಬಲಾತ್ಕಾರದಿಂದ ಅವಳನ್ನು ಸ್ಪರ್ಶಿಸಿದನು. ಆಗ ಅವಳ ದೇಹವು ಅವನಿಗೆ ಕಾದ ಕಬ್ಬಿಣದಂತೆ ಭಾಸವಾಯಿತು. ಹೀಗಾಗಲು ಅರಸನು ಅಂಜಿ ಅವಳಿಗೆ ನಿನ್ನ ಶರೀರವು ಬಹು ಮೃದುವಾದುದು, ಆದರೆ ನಿನ್ನ ದೇಹದಲ್ಲಿ ಹೀಗೆ ಜ್ವಾಲೆಯಂತೇ ಕಾಯಿತೆನಲು ಅವಳು ರೋಗಿಯು, ಸೂತಕಿಯು, ಗರ್ಭಿಣಿಯು, ವ್ರತಸ್ತ್ರೀಯು ಇವರನ್ನು ಮುಟ್ಟಬಾರದೆಂಬ ಶಾಸ್ತ್ರವಿದೆ. ನಾನು ಪಂಚಾಕ್ಷರೀ ಮಂತ್ರದಿಂದ ಪುನೀತಳಾಗಿದ್ದೇನೆ. ಆದ್ದರಿಂದ ಆ ಮಂತ್ರವು ನಿನ್ನನ್ನು ಸುಟ್ಟಿತು, ಎಂದು ಹೇಳಿದಳು. ಆಗ ದಾಸೋಹರಾಯನು ಆಶ್ಚರ್ಯಬಟ್ಟು ಮಂತ್ರದ ಮಹಿಮೆಯು ಇಷ್ಟು ಅಗಾಧವಾದುದೇ ಎಂದು ನುಡಿದು ಇನ್ನುಮೇಲೆ ನಾನೂ ನಿನ್ನಂತೆ ಉಪದೇಶವನ್ನು ಹೊಂದುವೆನೆಂದು ಹೇಳಿ ಅಲ್ಲಿಂದ ಅನ್ಯಶಿವಾನುಭವಿಯ ಕಡೆಗೆ ಹೋಗಿ ಅವನಿಂದ ಮಂತ್ರೋಪದೇಶವನ್ನು ಹೊಂದಿದನು. ಹೀಗೆ ಉಪದೇಶಹೊಂದಲಾಗಿ ಅವನಲ್ಲಿದ್ದ ಪಾಪಗಳು ಸುಟ್ಟುಹೋದವು. ಅಂದಿನಿಂದ ಅವನ ದೇಹವು ಅರಿಶುದ್ಧವೂ ಪವಿತ್ರವೂ ಆಯಿತು. ಹೀಗಾಗಲು ಅವನು ತನ್ನ ಹೆಂಡತಿಗೆ— ನೀನು ನನಗೆ ಧರ್ಮಾಚರಣೆಯನ್ನು ಹೇಳಿಕೊಟ್ಟು ಪುನೀತನನ್ನಾಗಿ ಮಾಡಿದೆ ಎಂದು ಅವಳನ್ನು ಸ್ತುತಿಸುವವನಾದನು. ಮುಂದೆ ಉಭಯತರು ಪಂಚಕ್ಷರೀ ಮಂತ್ರ ಸ್ಮರಣೆಯಿಂದ ಪರಿಶುದ್ಧರಾಗಿ ಅದಕ್ಕನುಸರಿಸಿ ಆಚರಿಸುತ್ತ ಕೈಲಾಸಕ್ಕೆ ಹೋದರು. ಇದರಿಂದ ಕಲಾವತಿಯು ಮಧುರಾ ಪಟ್ಟಣ ಮತ್ತು ಕಾಶೀಕ್ಷೇತ್ರಗಳಲ್ಲಿ ಬಹು ಶ್ರೇಷ್ಠ ಶಿವಶರಣೆ ಎಂದು ಪ್ರಸಿದ್ಧಳಾಗಿದ್ದಾಳೆ.

———

# ೩೩. ಸೋಮವ್ವೆ

## ಜಗದೇವ ಮಲ್ಲಿ ಬೊಮ್ಮಣ್ಣಗಳು

ಹರಳಯ್ಯ ಮಧುವಯ್ಯಗಳನ್ನು ಎಳೆಹೂಟೆಯಿಂದ ಬಿಜ್ಜಳನು ಎಳೆಸುತ್ತಿರುವಾಗ ಅಸಂಖ್ಯ ಜನರು ಅಲ್ಲಿ ನಿಂತು ನೋಡುತ್ತಾ ಇದ್ದರು. ಅವರಲ್ಲಿ ಜಗದೇವ ಮತ್ತು ಮಲ್ಲಿ ಬೊಮ್ಮಣ್ಣಗಳೆಂಬ ಇಬ್ಬರು ಸಹೋದರರು ಇದ್ದರು. ಎಳಹೂಟೆಯು ಮುಗಿದು ಈ ಇಬ್ಬರೂ ಮರಣ ಹೊಂದಿದ ಬಳಿಕ ಈ ಅಣ್ಣ ತಮ್ಮಂದಿರು ಮನೆಗೆ ಬರಲು, ಇಷ್ಟು ತಡವೇಕೆಂದು ಅವರಿಗೆ ತಾಯಿಯಾದ ಸೋಮವ್ವೆಯು ಕೇಳಲು ಅವರು ಬಿಜ್ಜಳನು ಕಡು ಘಾತಕನು, ಅವನು ಇಬ್ಬರನ್ನು ಎಳೆಹೂಟೆಯಲ್ಲಿ ಎಳಸಿಕೊಂಡದ್ದನ್ನು ನಾವು ನೋಡಿದೆವು, ಎಂದು ಅಂದರು. ಆಗ ಸೋಮವ್ವೆಯು ಅವರು ಭಕ್ತರೋ ಭವಿಗಳೋ ಎಂದು ಕೇಳಲಾಗಿ- ಅವರು ಆ ಉಭಯತರು, ಬಸವೇಶ್ವರನ ಮೋಹದ ಸತ್ಯ ಶರಣರು, ಎಂದು ನುಡಿದು ಆದ ಸಂಗತಿಗಳನ್ನೆಲ್ಲ ಸವಿಸ್ತಾರವಾಗಿ ಹೇಳಿದರು. ಆಗ ಸೋಮವ್ವೆಯು ಸಿಟ್ಟಿನಿಂದ ಅಬ್ಬರಿಸುತ್ತ ಹರ ಹರಾ, ಇಂದು ನಾನು ಭಕ್ತ ದ್ರೋಹವನ್ನು ಕೇಳಿದೆನು. ನೀವು ಉಭಯತರು ಸಮರ್ಥರು, ಬಲಾಢ್ಯರು. ನೀವು ಹೀಗೆ ಇದ್ದರೂ ಅವರಿಗೆ ಹೀಗೆ ಘೋರ ಹಿಂಸೆಯಾದದ್ದನ್ನು ಸುಮ್ಮನೆ ನೀವು ನೋಡುತ್ತಾ ನಿಂತಿರಾ? ಭಕ್ತರನ್ನು ನೋಯಿಸಿದ ಬಿಜ್ಜಳನನ್ನು ನೀವು ಕೊಲ್ಲುವ ವರೆಗೆ ನಾನು ನಿಮ್ಮ ಅನ್ನವನ್ನು ನೆಲದ ಮೇಲೆ ಚೆಲ್ಲುವೆನು. ಅಲ್ಲಿಂದಲೇ ನೀವು ಅದನ್ನು ನಾಯಿಗಳಂತೆ ನೆಲಕ್ಕೆ ಮುಖಹಚ್ಚಿ ತಿನ್ನಿರಿ ಎಂದು ನುಡಿದಳು. ಆಗ ಅವರೀರ್ವರು ನಮ್ಮ ತಾಯಿಯು ನಮಗೆ ಲೇಸಾದ ವ್ರತವನ್ನು ಹಾಕಿಕೊಟ್ಟಳು. ಬಿಜ್ಜಳನನ್ನು ಕೊಂದುಹಾಕುವವರೆಗೆ ನಾವು ಹೀಗೆಯೇ ಉಣ್ಣುವೆವು ಎಂದು ಪ್ರತಿಜ್ಞೆ ಮಾಡಿದರು. ಮುಂದೆ ಅವರು ಕಡೆಯವರೆಗೂ ಹಾಗೆಯೇ ನಡೆದರು.

# ೩೪. ನೀಲಾಂಬಿಕೆ.

ನೀಲಾಂಬಿಕೆಯು ಬಸವೇಶ್ವರನ ಹೆಂಡತಿಯಾಗಿದ್ದಾಳೆ. ಬಸವೇಶ್ವರನಿಗೆ ಗಂಗಾಂಬಿಕೆ ಎಂಬ ಇನ್ನೊಬ್ಬ ಹೆಂಡತಿಯು ಇದ್ದಳು. ಬಸವೇಶ್ವರನ ತಾಯಿಯ ಹೆಸರು ಮಾದಲಾಂಬಿಕೆಯು. ಇವಳಿಗೆ ಬಲದೇವ ಮತ್ತು ಸಿದ್ದಣ್ಣ ಎಂಬ ಇಬ್ಬರು ಸಹೋದರರಿದ್ದರುಂ ಇವರು ಚಾಲುಕ್ಯರಾಜ್ಯದಲ್ಲಿ ಮಂತ್ರಿಗಳಾಗಿ ಇಲ್ಲವೆ ಸೇನಾಪತಿಗಳಾಗಿ ಉಚ್ಚಪದವಿಯಲ್ಲಿದ್ದರು.

ಕಲಚೂರ್ಯ ವಂಶದ ರಾಜರು ಚಾಲುಕ್ಯರಿಗೆ ಮಾಂಡಲಿಕರಾಗಿ ಮಂಗಳವಾಡದಲ್ಲಿ ಅನೇಕ ವರ್ಷ ರಾಜ್ಯವಾಳಿದರು. ಇವರು ತರ್ದವಾಡಿ ನಾಡು ಎಂದರೆ ಈಗಿನ ವಿಜಾಪುರ ಜಿಲ್ಲೆಯ ಉತ್ತರ ಭಾಗವಾದ ಕೃಷ್ಣಾ ಮತ್ತು ಭೀಮಾ ನದಿಗಳ ಮಧ್ಯಪ್ರದೇಶ ಮತ್ತು ಇದರ ಸುತ್ತಮುತ್ತಲಿನ ಭೂಪ್ರದೇಶಗಳಲ್ಲಿ ಬಿಜ್ಜಳರಾಜನ ಪೂರ್ವದಲ್ಲಿಯೇ ರಾಜ್ಯಸ್ಥಾಪನೆ ಮಾಡಿಕೊಂಡಿದ್ದರು. ಆದರೆ ಇವರು ಚಾಲುಕ್ಯರೊಡನೆ ಶರೀರ ಸಂಬಂಧವನ್ನು ಮಾಡಿಕೊಂಡು ಅವರೊಡನೆ ಹಿತವಾಗಿದ್ದರು.

ಈ ಕಲಚೂರ್ಯ ವಂಶದ ರಾಜರಲ್ಲಿ ಬಹು ವಿಖ್ಯಾತಿಯನ್ನು ಹೊಂದಿದವನು ಜೋಗಮನು. ಅವನು ಸುಮಾರು ಕ್ರಿ. ಶ. ೧೦೮೦ ರಲ್ಲಿ ಈ ಭಾಗದಲ್ಲಿ ರಾಜ್ಯವಾಳುತ್ತಿದ್ದನು. ಅವನ ತರುವಾಯ ಪೆರ್ಮಾಡಿಯು ರಾಜ್ಯವಾಳಿದನು ಅವನು ೧೧೧೮ ರಿಂದೆ ೧೧೪೦ ರವರೆಗೆ ಚಾಲುಕ್ಯರಿಗೆ ಅಂಕಿತನಾಗಿ ರಾಜ್ಯವಾಳಿದನು ಈತನ ಸಹೋದರಿಯಾದ ಸಾವಳದೇವಿಯು ಚಾಲುಕ್ಯರ ಪ್ರಸಿದ್ಧ ಚಕ್ರವರ್ತಿಯಾದ ೬ನೇ ವಿಕ್ರಮಾದಿತ್ಯನ ಹೆಂಡತಿಯು. ಪೆರ್ಮಾಡಿಯ ಮಗನೇ ಬಿಜ್ಜಳನು. ಇವನು ಮೊದಲು ಅನೇಕ ವರ್ಷ ಬನವಾಸಿ ನಾಡನ್ನು ಚಾಲುಕ್ಯರಿಗೆ ಮಾಂಡಲಿಕನಾಗಿ ಆಳುತ್ತ ಕಡೆಗೆ ೧೧೫೫ ರಲ್ಲಿ ಚಾಲುಕ್ಯ ರಾಜ್ಯವನ್ನು ಆಕ್ರಮಿಸಿ ಅದರ ಸರ್ವಾಧಿಪತಿಯಾಗಿಯೂ ೧೧೬೨ ರಲ್ಲಿ ಅದರ ಚಕ್ರವರ್ತಿಯಾಗಿಯೂ ಕಲ್ಯಾಣದಲ್ಲಿ ರಾಜ್ಯವಾಳಿದನು. ಬಸವೇಶ್ವರನೇ ಈತನಿಗೆ ಮುಖ್ಯ ಮಂತ್ರಿಯಾಗಿದ್ದನು.

ಬಿಜ್ಜಳನು ಚಕ್ರಾಧಿಪತ್ಯವನ್ನು ವಹಿಸುವ ಪೂರ್ವದಲ್ಲಿ ಅವನ ತಂದೆಯಾದ ಪೆರ್ಮಾಡಿಯು ಮಂಗಳವಾಡದಲ್ಲಿ ರಾಜ್ಯವಾಳುತ್ತಿದ್ದಾಗ್ಗೆ ಸಿದ್ಧಣ್ಣ ಮಂತ್ರಿಯು ಅಂದರೆ ಬಸವೇಶ್ವರನ ಸೋದರಮಾವನು ಅವನಲ್ಲಿ ದಂಡಾಧಿಪನಾಗಿ ಕೆಲಸಮಾಡುತ್ತಿದ್ದನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿವೆ.

